

ವರ್ಷ ೨೨ ]　　　　ಜಾನೇವರಿ ೧೯೬೮　　　　[ ಸಂಚಿಕೆ

## ಅನುಕ್ರಮಣಿಕೆ.


| ವಿಷಯಗಳು. | ಪುಟ |
| --- | --- |
| ೧. ಕದಳೀ ಬನದ ಬಟ್ಟೆ— ಶ್ರೀ ಲಕ್ಷ್ಮಣರಾವ ಜಮಖಂಡಿ ಮು. ಗದಗ | ೧ |
| ೨. ಜಗತ್ತು ಬಸವಣ್ಣನ ಸೇವಾಧರ್ಮ ಸಾಧಿಸಲಿ! ಶಾಂತಿ ಪಡೆಯಲಿ! — ಶ್ರೀ ಅನ್ನದಾನೀಶ್ವರ ವಿರಕ್ತಮಠ | ೧೪ |
| ೩. ವಚನಶಾಸ್ತ್ರಸಾರ–ಭಾಗ ೩ ಉತ್ತರಾರ್ಧ— ರಾ॥ ಬ॥ ಫ. ಗು. ಹಳಕಟ್ಟಿ | ೧೭–೩. |

# ಶಿವಶರಣರ ಚರಿತ್ರೆಗಳು.

## ಭಾಗ ೨

( ಪುಟಗಳು ೪೫೮ ಬೆಲೆ ೬-೪-೦ )

ಈ ಭಾಗವು ಪುಸ್ತಕ ರೂಪದಿಂದ ಈಗ ಪ್ರಸಿದ್ಧವಾಗಿದ್ದು ಇದರಲ್ಲಿ ಜನ ಶಿವಶರಣ, ಶರಣೆಯರ ಚರಿತ್ರೆಗಳು ಬಂದಿವೆ. ಇವರಲ್ಲಿ ೩೪ ಜನ ನಕಾರರಿದ್ದಾರೆ. ಅವರ ಚರಿತ್ರೆಗಳನ್ನು ಐತಿಹಾಸಿಕ ದೃಷ್ಟಿಯಿಂದ ಶೋಧಿಸಿ ಗ್ರಂಥವನ್ನು ಸಿದ್ಧಪಡಿಸಿದ್ದಾಗಿದೆ. ಇಂಥ ಪ್ರಯತ್ನವು ಈ ವರೆಗೆ ಇದೇ ಮೊದಲನೆಯದೆಂದು ಹೇಳಬಹುದು. ಈ ಚರಿತ್ರೆಗಳಿಂದ ವ ಧರ್ಮ ಪ್ರಸಾರ ಕಾರ್ಯಗಳು ಆರಂಭದಲ್ಲಿ ಹೇಗೆ ನಡೆದವೆಂ ನ್ನು ವಾಚಕರು ಸ್ಪಷ್ಟವಾಗಿ ಅರಿಯಬಹುದಾಗಿದೆ. ಇದರ ವಿವರಣೆ ಪ್ರಸ್ತಾವನೆಯಲ್ಲಿ ಬಹು ವಿಸ್ತಾರವಾಗಿ ನಿರೂಪಿಸಲ್ಪಟ್ಟಿವೆ. ಪ್ರಸ್ತಾವ ೮೮ ಪುಟವುಳ್ಳದಾಗಿದೆ. ಗ್ರಂಥದ ಪ್ರತಿಗಳ ಸಂಖ್ಯೆಯು ಬಹಳ ಇದ್ದು ಗ್ರಾಹಕರು ಇದನ್ನು ಅವಶ್ಯವಾಗಿ ಸಂಗ್ರಹಿಸಬೇಕೆಂದು ನಮ್ಮ ನೆ ಇದೆ.

ಹಿತಚಿಂತಕ ಪ್ರಿಂಟಿಂಗ ಪ್ರೆಸ್,

ವಿಜಾಪುರ.

# ಶಿವಾನುಭವ


| ವರ್ಷ ೨೨ | ನವ್ಹಂಬರ ೧೯೪೭ | ಸಂಚಿಕೆ ೨ |
|---|---|---|


## ಶರಣರಿಗೆ ಸರ್ವಾಂಗದಲ್ಲಿಯೂ ಮಹಾಲಿಂಗ


(ಲೇಖಕ- ಶ್ರೀ. ಮಠದ ಬಸಯ್ಯ ಪುಣಬಗಟ್ಟಿ ಜಿ. ಬಳ್ಳಾರಿ)


ಸುಮಾರು ೧೯೪೩ನೇ ಇಸ್ವಿ ಡಿಶೆಂಬರ ತಿಂಗಳು ಶಿವಾನುಭವ ಸಂಚಿಕೆಯು ನನ್ನ ಕೈಗೆ ಬಂದಿತು. ಆವಾಗ್ಗೆ ಅಷ್ಟಾವರಣ, ಪಂಚಾಚಾರ, ಷಟ್‌ಸ್ಥಲಗಳ ಹೆಸರೇ ನನಗೆ ಗೊತ್ತಿರಲಿಲ್ಲ. ಆದ್ದರಿಂದ ಸುಮಾರು ಐದುವರ್ಷಗಳಲ್ಲಿ ವಿಜಾಪೂರದ ಶಿವಾನುಭ ಆಫೀಸಿನ ಮಾಸಪತ್ರಿಕೆಯೂ ವಚನಶಾಸ್ತ್ರಗಳೂ ಈ ಕೆಳಗಿನ ಲೇಖನದ ಅನುಭವವನ್ನು ನನ್ನ ಹತ್ತಿರಕ್ಕೆ ದಯಮಾಡಿಸಿ ಮನಸ್ಸಿಗೆ ನಿವೇದಿಸಿರುತ್ತವೆ. ಆ ಫಲಿತಾಂಶವಿದು.

### ಶರಣರಿಗೆ ಸರ್ವಾಂಗದಲ್ಲಿ ಮಹಾಲಿಂಗ

ಈ ಚೇತನ ಮತ್ತು ಅಚೇತನವಾದ ಪ್ರಪಂಚವು ಮೊದಲು ಯಾವ ವಸ್ತುವಿನ ಆಧಾರದಿಂದ ಸೃಷ್ಟಿಯನ್ನು ಹೊಂದಿರುವುದೋ, ಪುನಃ ಈ ಸ್ಥಿತಿಯು ಯಾವ ತತ್ವದಲ್ಲ ಲಯವನ್ನು ಹೊಂದುವುದೋ ಅದೇ ಶರಣರ ದೃಷ್ಟಿಯಲ್ಲಿ ಮಹಾಲಿಂಗವು. ಸಾಮಾನ್ಯ ಜನರಂತೆ ಶರಣರ ಮಹಾದೇವನಿಗೆ ಪಂಚಮುಖಗಳೂ ತ್ರಿಣೇತ್ರಗಳೂ ರುಂಡಮಾಲೆಗಳೂ ಸರ್ಪನ ಆಭರಣಗಳೂ ಗಂಗೆ ಗೌರಿಯರೆಂಬ ಹೆಂಡತಿಯರೂ ಜಡೆಯಲ್ಲಿ ಚಂದ್ರನೂ ಏರುವುದಕ್ಕೆ ಎತ್ತೂ ಇವೆಲ್ಲ ಅವರಿಗೆ ಹೊರತಾದವುಗಳು. ಏಕೆಂದರೆ ಮಹಾಲಿಂಗನು ನಿರಾಕಾರನೆಂದೇ

ಅವರ ಅಭಿಪ್ರಾಯವು. ಇದಕ್ಕೆ ಪ್ರಭುದೇವರ ವಚನಾಧಾರ— ಆಯ್ಯಾ ನಾಟಕನಲ್ಲ ಬೂಟಕನಲ್ಲ ಶೀಲಿಗನಲ್ಲ ಕಪಟನಾಟಕನಲ್ಲ ರುಂಡಮಾಲೆ ಪುಲಿಚರ್ಮ ಗಜಚರ್ಮಧರನಲ್ಲ ದಕ್ಷಧ್ವರನಲ್ಲ ತ್ರಿಪುರಾರಿಯಲ್ಲ ನಂದಿ ವಾಹನನಲ್ಲ. ಸರ್ಪಧರ ಚಂದ್ರಶೇಖರನಲ್ಲ. ಗಂಗಾಧರ ಗೌರೀವರನಲ್ಲ. ಪಾರ್ವತೀಪತಿಯಲ್ಲ. ಯೋಗಿ ಜೋಗಿಯಲ್ಲ. ಶ್ರವಣ ಸನ್ಯಾಸಿಯಲ್ಲ. ಕಾಳಾ ಮುಖಿಯಲ್ಲ. ಪಾಶು ಪತಿಯಲ್ಲ ನೋಡಾ ನಿರವಯ ಶೂನ್ಯ ಲಿಂಗಮೂರ್ತಿ ಗುಹೇಶ್ವರ ಲಿಂಗವು.

ಇಂಥಾ ಮಹಾಲಿಂಗನು ಸೃಷ್ಟಿಯ ರಚನೆಯನ್ನು ಮಾಡಿ ಆ ಸೃಷ್ಟಿಯಲ್ಲಿ ಆಜ್ಞೇಯನಾಗಿ ಅಜ್ಞೇಯನಾದರೂ ವಿಶ್ವವ್ಯಾಪಿಯಾಗಿ ಜಗತ್ತಿಗೆ ಆಧಾರ ಭೂತನಾಗಿ ಅದರ ಉತ್ಪತ್ತಿಸ್ಥಿತಿಲಯಕ್ಕೆ ಕಾರಣನಾಗಿ ಎಲ್ಲಕ್ಕೂ ಶ್ರೇಷ್ಠನಾಗಿ ಹುಟ್ಟು ಸಾವುಗಳಿಗೆ ಮೀರಿ ನಿತ್ಯನಾಗಿ ಸಕಲ ಪದಾರ್ಥ ಗಳಲ್ಲಿ ಗೋಪ್ಯನಾಗಿದ್ದರೂ ಸಕಲವಸ್ತುಗಳಲ್ಲಿ ಚೈತನ್ಯನಾಗಿದ್ದು ವಿಶ್ವದ ಗುಣಗಳನ್ನು ಹೊದ್ದದಂತೆ ವಿಶ್ವಮಯನಾಗಿ ವಿಶ್ವವೇ ತನ್ನ ಸ್ವರೂ ಪಾಗದೆ ಪವಿತ್ರಾತ್ಮ ಹೃದಯರ ಸರ್ವ ಕಡೆಯಲ್ಲಿಯೂ ಪ್ರಕಾಶಿಸು ತ್ತಾನೆ. ಶರಣರು ಕಾಯ ವಾಚ ಮನಸ್ಸು ಇಂದ್ರಿಯಗಳ ಪರಿ ಶುದ್ಧತೆಯಿಂದ ಸರ್ವಾಂಗದಲ್ಲಿ ಮಹಾಲಿಂಗವನ್ನು ಅನುಭವದಿಂದ ಧರಿಸಿದ್ದರು. ಆಕ್ರಮವೆಂತೆಂದರೆ—ಸ್ಥೂಲ ಸೂಕ್ಷ್ಮ ಕಾರಣ ಶರೀರ ಗಳಲ್ಲಿ ಪರಿಪಡಿಯಿಂದ ಇಷ್ಟಲಿಂಗವೆಂಬ ಮಹಾಲಿಂಗ, ಪ್ರಾಣಲಿಂಗ ವೆಂಬ ಮಹಾಲಿಂಗ, ಭಾವಲಿಂಗವೆಂಬ ಮಹಾಲಿಂಗ. ಇಷ್ಟಲಿಂಗ ವನ್ನು ದೃಷ್ಟಿಯಿಂದ ಪ್ರಾಣಲಿಂಗವನ್ನು ಮನಜ್ಞಾನದಿಂದ ಭಾವಲಿಂಗ ವನ್ನು ತೃಪ್ತಿಯಿಂದ ಗ್ರಹಿಸುತ್ತಿದ್ದರು. ಇನ್ನು ಜ್ಞಾನೇಂದ್ರಿಯಗಳನ್ನು ಕುರಿತು ಮಹಾಲಿಂಗವನ್ನು ಆರು ತೆರನಾಗಿ ಅಳವಡಿಸಿ ಕೊಂಡಿದ್ದರು. ಅದು ಹೇಗೆಂದರೆ—ನಾಸಿಕದಲ್ಲಿ ಆಚಾರವೆಂಬ ಮಹಾಲಿಂಗ ಜಿಹ್ವೆ ಯಲ್ಲಿ ಗುರುಲಿಂಗವೆಂಬ ಮಹಾಲಿಂಗ ನೇತ್ರದಲ್ಲಿ ಶಿವಲಿಂಗವೆಂಬ ಮಹಾಲಿಂಗ ತ್ವಕ್ಕಿನಲ್ಲಿ ಜಂಗಮಲಿಂಗ ವೆಂಬ ಮಹಾಲಿಂಗ ಶ್ರೋತ್ರದಲ್ಲಿ ಪ್ರಸಾದ ಲಿಂಗವೆಂಬ ಮಹಾಲಿಂಗ ಹೃದಯದಲ್ಲಿ ಮಹಾ ಲಿಂಗ ಈ ರೀತಿಯಾಗಿ ಸ್ಥಾಪಿಸಿ ಮತ್ತು ಷಡುಧಾತುವಿನಲ್ಲಿ ಮಹಾ ಲಿಂಗವನ್ನೇ ಷಡಕ್ಷರ ಸ್ವರೂಪಿನಿಂದ ಷಡುಲಿಂಗವಾಗಿ ಸ್ಥಾಪಿಸಿದ್ದರು. ಅದು ಹೇಗೆಂದರೆ—ರುಧಿರದಲ್ಲಿ ನಕಾರವೆಂಬ ಮಹಾಲಿಂಗ ಮಾಂಸ

ದಲ್ಲಿ ಮಕಾರವೆಂಬ ಮಹಾಲಿಂಗ ಮೇದಸ್ಸಿನಲ್ಲಿ ಶಿಕಾರವೆಂಬ ಮಹಾಲಿಂಗ ಅಸ್ಥಿಯಲ್ಲಿ ವಕಾರವೆಂಬ ಮಹಾಲಿಂಗ ಮಜ್ಜೆಯಲ್ಲಿ ಯಕಾರವೆಂಬ ಮಹಾಲಿಂಗ ಶುಕ್ಲದಲ್ಲಿ ಓಂಕಾರವೆಂಬ ಮಹಾಲಿಂಗ, ಈ ರೀತಿಯಾಗಿ ಅಳವಡಿಸಿಕೊಂಡು ಪರಿವಿಡಿಯಿಂದ ಇಷ್ಟಲಿಂಗಕ್ಕೆ ರೂಪು, ಪ್ರಾಣಲಿಂಗಕ್ಕೆ ರುಚಿ, ಭಾವಲಿಂಗಕ್ಕೆ ತೃಪ್ತಿ, ಆಚಾರ ಲಿಂಗಕ್ಕೆ ಗಂಧ, ಗುರುಲಿಂಗಕ್ಕೆ ರಸ, ಶಿವಲಿಂಗಕ್ಕೆ ರೂಪು, ಜಂಗಮಲಿಂಗಕ್ಕೆ ಸ್ಪರ್ಶ, ಪ್ರಸಾದಲಿಂಗಕ್ಕೆ ಶಬ್ದ, ಮಹಾಲಿಂಗಕ್ಕೆ ತೃಪ್ತಿ, ಈ ರೀತಿಯಲ್ಲಿ ಮಹಾಲಿಂಗವನ್ನು ಸ್ಥಾಪಿಸಿ, ಅಂಗೇಂದ್ರಿಯಗಳನ್ನೆಲ್ಲ ಮಹಾಲಿಂಗೇಂದ್ರಿಯಗಳನ್ನಾಗಿ ಮಾಡಿ ಲಿಂಗವ್ಯವಹಾರಿಗಳಾಗಿ ಲಿಂಗಾನಂದದಲ್ಲಿಯೇ ತಲ್ಲೀನರಾಗಿದ್ದರು. ಇದಕ್ಕೆ ಮೊಗ್ಗೆಯ ಮಾಯಿದೇವರು---ನುಡಿವೆಡೆಯಲ್ಲಿ ನೋಡು ವೆಡೆಯಲ್ಲಿ ರವಿಪ್ಪೆಡೆಯಲ್ಲಿ, ವಸ್ತುವಂ ಪಿಡಿವೆಡೆಯಲ್ಲಿ ಸುಖಂ ಪಡೆವೆಡೆಯಲ್ಲಿ ಭೋಗಿಪೆಡೆಯಲ್ಲಿ ದೇಹವಂ ಬಿಡುವೆಡೆಯಲ್ಲಿ ಲಿಂಗ ಕಳೆ ಲಿಂಗಗುಣಂ ಘನಲಿಂಗ ಯೋಗವಾದೊಡೆ ಬಳಿಕಾ ಮಹಾತ್ಮನನದೇನೆನಬರ್ಪುದದಂ ಶಿವಾಧವಾ ಎಂದು ಸರ್ವಾಂಗ ಲಿಂಗಿಯ ಕಳೆಯನ್ನು ವ್ಯಕ್ತಪಡಿಸಿದರು.

ಇಂಥಾ ಅಮೋಘವಾದ ಮಾರ್ಗದಲ್ಲಿ ಸದ್ಯದ ವೀರಶೈವ ಸಮಾಜವು ಸ್ವಲ್ಪಭಾಗ ಬಿಟ್ಟು ಬಹುತರ ಅನೇಕರು ಅದೇಕೆ ನೂರಕ್ಕೆ ೯೯ ಜನರು ನಮಗೆ ಒಳಗೆ ಲಿಂಗವಿದೆ ಎಂದು ಇಷ್ಟಲಿಂಗವೆಂಬ ಮಹಾಲಿಂಗವನ್ನು ತಿರಸ್ಕರಿಸಲಿಕ್ಕೆ ಹತ್ತಿರುವರು. ಒಳಗಿದೆ ಎನ್ನುವವರಿಗೆ ಶರಣರು ಅಪ್ಪಣೆ ಕೊಡಿಸುವುದೇನಂದರೆ-ಪ್ರಣವ ಮಂತ್ರವ ಕರ್ಣದಲ್ಲಿ ಹೇಳಿ ಶ್ರೀಗುರುವು ಅಂಗದ ಮೇಲೆ ಲಿಂಗಸ್ಥಾಪಿಸಿದ ಬಳಿಕ ಒಳಗೆ ಲಿಂಗವಿಪ್ಪುದೆಂಬ ಪಂಚ ಮಹಾಪಾತಕರ ನುಡಿಯ ಕೇಳಲಾಗದು. ಒಳಗಿಪ್ಪನೇ? ಲಿಂಗದೇವನು, ಮಲ ಮೂತ್ರದ ಮಾಂಸದ ಹೇಸಿಕೆಯೊಳಗೆ ಪ್ರಾಣವಿಪ್ಪುದಲ್ಲದೆ ಲಿಂಗ ವಿಪ್ಪುದೆ? ಆ ಪ್ರಾಣವ ತಂದು ತನ್ನ ಇಷ್ಟಲಿಂಗದಲ್ಲಿ ನೆರೆಯ ಬಲ್ಲಾತನೇ ಪ್ರಾಣಲಿಂಗ ಸಂಬಂಧಿ. ತನ್ನ ಇಷ್ಟಲಿಂಗದಲ್ಲಿ ದಾಸೋಹವ ಮಾಡಲರಿಯದೆ ಹಲವು ಬಳಕೆಯ ಬಳಸುವ ಮಿಟ್ಟೆಯ ಭಂಡರನೆನಗೊಮ್ಮೆ ತೋರದಿರಾ ಕೂಡಲ ಚನ್ನಸಂಗಮದೇವಾ, ಎಂದು ಚನ್ನಬಸಣ್ಣನವರು ನಿರೂಪಿಸಿರುವರು.

ಇನ್ನು ಅಂತರಂಗವನ್ನು ತಿಳಿಯದೆ ಬರೇ ಬಹಿರಂಗದಲ್ಲಿ ಯಾಂತ್ರಿಕವಾಗಿ ಪೂಜಿಸುವವರಿಗೆ ಪ್ರಭುದೇವರು ಅಪ್ಪಣೆ ಕೊಡಿಸಿರುವುದೇನಂದರೆ—

ಸೃಷ್ಟಿಗೆ ಹುಟ್ಟಿದ ಶಿಲೆ, ಕಲ್ಲುಕುಟಿಗಂಗೆ ಹುಟ್ಟಿದ ಮೂರುತಿ, ಮಂತ್ರಕ್ಕೆ ಲಿಂಗವಾಯಿತ್ತಲ್ಲಾ! ಈ ಮೂವರಿಗೆ ಹುಟ್ಟಿದ ಮಗನ ಲಿಂಗವೆಂದು ಪೂಜಿಸುವ ಅಚ್ಚ ವ್ರತಗೇಡಿಗಳ ನೇನೆಂಬೆ ಗುಹೇಶ್ವರಾ?

ಇನ್ನೂ ಇಷ್ಟಲಿಂಗ ಪ್ರಾಣಲಿಂಗಗಳಲ್ಲಿ ಭೇದ ಭಾವನೆ ಗಳನ್ನು ತೋರಿಸುವವರಿಗೆ ಚನ್ನಬಸವಣ್ಣನವರು ಈ ರೀತಿ ಅಪ್ಪಣೆ ಕೊಡಿಸಿರುವರು. ಅದಿದು:—ಇಷ್ಟಲಿಂಗ ಒಂದು, ಪ್ರಾಣಲಿಂಗ ಒಂದು, ಎಂಬ ಮಿಟ್ಟಿಯ ಭಂಡರ ಮಾತ ಕೇಳಲಾಗುವದು. ಅದೆಂತೆಂದರೆ. ಅಂಗಳದೊಳಗೊಬ್ಬ ಗಂಡ, ಮನೆಯೊಳಗೊಬ್ಬ ಗಂಡ, ಹಿತ್ತಿಲೊಳಗೊಬ್ಬ ಗಂಡನೆಂಬ ಸತಿಯರ ಲೋಕದ ಮಾನವರು ಮೆಟ್ಟಿ ಮೂಗಕೊಯ್ಯದೆ ಮಾಣ್ಬರೇ ಅಯ್ಯಾ? ಲಿಂಗತ್ರಯುವೆಂದು ತೋರಿದರಾರು? ಲಿಂಗಮೇಕಂ ಪರಂ ನಾಸ್ತಿ, ಎಂದು ಸದ್ಗುರುಸ್ವಾಮಿ ಅರುಹಿವನಾಗಿ ಷಟ್‌ತ್ರಿಂಶತ್ ತತ್ವಕ್ಕೆ ಆಲಯವಾದಂಥಾ ಮಹಾಲಿಂಗದ ಬೆಳಗು ಕರಸ್ಥಲದಲ್ಲಿ ಮನಸ್ಥಲದಲ್ಲಿ ವೇದ್ಯವಾದ ಬಳಿಕ ಸರ್ವಾಂಗಲಿಂಗ ಕೂಡಲ ಚನ್ನಸಂಗಾ ನಿಮ್ಮ ಶರಣಂಗೆ.

ಇನ್ನು ಸರ್ವಾಂಗದಲ್ಲಿ ಮಹಾಲಿಂಗವು ಸ್ಥಾಪನೆಯಾದ ವಿಚಾರವನ್ನು ಅನುಭವವೆಂಬ ಗುರುಮುಖದಿಂದ ತಿಳಿದ ಸಂಸ್ಕಾರಿಯು (ಭಕ್ತನು) ಸದಾ ಕಾಲದಲ್ಲಿ ಗೋಕ್ಯದಿಂದ ಮಹಾಲಿಂಗಕ್ಕೆ ಸದಾ ಸಕಲ ಪದಾರ್ಥಗಳು ತಾವಾಗಿಯೇ ಅರ್ಪಿತ ವಾಗುತ್ತಿರುತ್ತವೆ. ಆ ವಿಚಾರವನ್ನು ಉರಿಲಿಂಗ ಪೆದ್ದಿ ತಂದೆಗಳು ಅಪ್ಪಣೆ ಕೊಡಿಸುವುದೇನಂದರೆಃ— ಎನ್ನ ಕರಸ್ಥಲದಲ್ಲಿ ಲಿಂಗಕ್ಕೆ ಬಂದ ಪದಾರ್ಥಗಳನ್ನು ಅರ್ಪಿಸುವೆನೇ? ಅರ್ಪಿಸಲಮ್ಮೆ.ಅದೇನು ಕಾರಣವೆಂದರೆ, ಎನ್ನ ಕಂಗಳು ಕಂಡವಾಗಿ ಎನ್ನ ಶ್ರೋತ್ರಗಳು ಕೇಳಿದವಾಗಿ ಎನ್ನ ಜಿಹ್ವೆ ರುಚಿಸಿತ್ತಾಗಿ ಎನ್ನ ನಾಸಿಕ ವಾಸಿಸಿತ್ತಾಗಿ ಎನ್ನ ಕೈಗಳು ಮುಟ್ಟಿದವಾಗಿ ಇಂತಪ್ಪ ಅಂಜಿಕೆಯ ನಿಮ್ಮ ಶರಣರು ಬಿಡಿಸಿದರಾಗಿ, ಅದೆಂತೆಂದರೆ ಎನ್ನ ನಾಸಿಕದಲ್ಲಿ ನಿಮ್ಮ ಸಾಹಿತ್ಯವ ಮಾಡಿದರಾಗಿ, ಎನ್ನ ಜಿಹ್ವೆಯಲ್ಲಿ ನಿಮ್ಮ ಸಾಹಿತ್ಯವ ಮಾಡಿದರಾಗಿ, ಎನ್ನ ನೇತ್ರದಲ್ಲಿ ನಿಮ್ಮ ಸಾಹಿತ್ಯವ ಮಾಡಿದರಾಗಿ,

ಎನ್ನ ತ್ವಕ್ಕಿನಲ್ಲಿ ನಿಮ್ಮ ಸಾಹಿತ್ಯವ ಮಾಡಿದರಾಗಿ, ಎನ್ನ ಶ್ರೋತ್ರದಲ್ಲಿ ನಿಮ್ಮ ಸಾಹಿತ್ಯವ ಮಾಡಿದರಾಗಿ ಇದು ಕಾರಣ ಅಲ್ಲಲ್ಲಿಂಗೆ ಅರ್ಪಿತಂಗಳಾಗುತ್ತಿರ್ದವಾಗಿ, ಇನ್ನಂಜೆನಂಜೆನುರಿಲಿಂಗಪೆದ್ದಿಪ್ರಿಯ ವಿಶ್ವೇಶ್ವರಾ.

ಈ ರೀತಿಯಾಗಿ ಶಿವಶರಣರು ಸ್ವಾರ್ಥಿಗಳಾಗದೆ ಸಕಲ ಮಾನವರ ಜನನ ಮರಣವೆಂಬ ಭವರೋಗದ ಬಿಡುಗಡೆಗಾಗಿ ತಮ್ಮಗಳ ಅನುಭವವನ್ನು ಬಿಚ್ಚಿ ಬೈಲಿಗಿಟ್ಟಿರುವರು. ಆ ಅನುಭವವನ್ನು ಫ. ಗು. ಹಳಕಟ್ಟಿಯವರು ನಮ್ಮೆಲ್ಲರಿಗೂ ಶಿವಾನುಭವ ಗ್ರಂಥಮಾಲೆಯಲ್ಲಿ ಪ್ರಕಟಿಸಿ ಬೈಲಿಗೆ ಬಿಚ್ಚಿಟ್ಟು ವೀರಶೈವರ ಮೇಲೆ ಬಹಳ ಉಪಕಾರ ಮಾಡಿರುವರು ಆದರೆ ಸಮಾಜವು ಅವುಗಳನ್ನೇ ಕಣ್ತೆರೆದು ನೋಡಿರುವುದಿಲ್ಲ. ಇದು ಅವರವರ ದುರ್ದೈವ. ಇದಕ್ಕೆ ಶರಣರ ಉತ್ತರವೇನೆಂದರೆ:—

ಬಟ್ಟಬಯಲೆಲ್ಲ ಗಟ್ಟಿಗೊಂಡರೆ ಸ್ವರ್ಗ ಮರ್ತ್ಯ ಪಾತಾಳಕ್ಕೆ ಠಾವಿನ್ನೆಲ್ಲಿಯದೋ? ಮೇಘದ ಜಲವೆಲ್ಲ ನಿರ್ಮಳ ಮುತ್ತಾದರೆ ಸಪ್ತಸಾಗರಕ್ಕೆ ಉದಕವಿನ್ನೆಲ್ಲಿಯದಯ್ಯ? ಇದು ಕಾರಣ ಲೋಕದ ಮಾನವರೆಲ್ಲ ಶಿವಜ್ಞಾನಿಗಳಾದರೆ ಭವದ ಬೆಳೆ ಇನ್ನೆಲ್ಲಿದಯ್ಯ? ಇದು ಕಾರಣ ಸಾವಿರಕೊಬ್ಬ ಸತ್ಯ, ಲಕ್ಷಕ್ಕೊಬ್ಬ ಭಕ್ತ, ಕೋಟಿಗೊಬ್ಬ ಶರಣ.

ಆದುದುರಿಂದ ಶಿವಶರಣರಿಗೆ—ಸರ್ವಾಂಗವೂ ಮಹಾಲಿಂಗವಾಗಿ ಪ್ರಕಾಶಿಸಿದ್ದು ಹೇಗೆಂದರೆ ಹರಿವ ನದಿಗೆ ಮೈಯ್ಯೆಲ್ಲಾ ಕಾಲು, ಉರಿವಗ್ನಿಗೆ ಮೈಯ್ಯೆಲ್ಲಾ ನಾಲಿಗೆ, ಬೀಸುವ ಗಾಳಿಗೆ ಮೈಯಲ್ಲಾ ಕೈ, ಗುಹೇಶ್ವರಾ ನಿಮ್ಮ ಶರಣಂಗೆ ಸರ್ವಾಂಗಲಿಂಗ. ಈ ಪ್ರಕಾರ ಅಲ್ಲಮಪ್ರಭುದೇವರು ಅಪ್ಪಣೆ ಕೊಡಿಸಿದ್ದಾರೆ.

---

# ಪರುಷ.

ಲೇಖಕಃ—ಸಿಂಪಿ ಲಿಂಗಣ್ಣ. ಮು. ಹಲಸಂಗಿ—ತಾ॥ ಇಂಡಿ.

ಆದಿ ಅನಾದಿಯಲಿ
ಜನನದ ಈಚೆಯಲಿ
ಮರಣದ ಆಚೆಯಲಿ
ಎಂದೋ ಮುಟ್ಟಿದೆ ಪರುಷವು
ಈ ತನುಮನದೊಳಹೊರಗನ್ನು ॥ ೧ ॥

ಮಣ್ಣಿನ ಮೈ ಹೊನ್ನು
ಪ್ರಾಣದ ಬಲ ಬೆನ್ನು
ಮನ ದಿವ್ಯದ ಕಣ್ಣು
ಎಂದೋ ಮುಟ್ಟಲು ಪುರುಷವು
ತನುಮನ ತಳೆದಿವೆ ಮೆರುಗನ್ನು ॥ ೨ ॥

ಮುಗಿಲಿನ ಬೆಳಕಿನಲಿ
ನೀಲಿಯು ತಳಕಿನಲಿ
ದೃಶ್ಯದ ಒಳಕಿನಲಿ
ನಿಂತಿಹೆ ಪರುಷವೆ ಲೀಲೆಗೆ—
ದಿವ್ಯತೆ ತೋಳೆದಂತಿಹೆ ನಿನ್ನೂ ॥ ೩ ॥

ಮನಸಿನ ಮೊನೆಯಲ್ಲಿ
ನೆನಸಿನ ತೆನೆಯಲ್ಲಿ
ಕನಸಿನ ಕೆನೆಯಲ್ಲಿ
ಕಂಡಾಕ್ಷಣವೇ ಹಿಂದಿನ ಸ್ಪರ್ಶದ
ನೆನಹಾಗುವದೆನ್ನು ॥ ೪ ॥

ಇರುಳಿನ ಹಗೆಯಲ್ಲು
ಹಗಲಿನ ನಗೆಯಲ್ಲು
ಸಂಜೆಯು ಹೊಗೆಯಲ್ಲು
ನಿತ್ಯ ನಿರಂತರ ಹತ್ತಿರವಿರು ನಾ
ಬೇಡಲಿಯಿನ್ನೇನು ? ॥ ೫ ॥

ತಂಗಾಳಿಗು ತಣುವು
ತಿಂಗಳನಿಗು ಅನುವು
ಮಂಗಳಕರ ದಣುವು
ಅಂತೇ ಹಾರೈಸುವೆನೌ ಪರುಷವೆ
ನಿಶಿದಿನ ನಿನ್ನನ್ನು ॥ ೬ ॥

ಬಂದೊಮ್ಮೆ ನೋಡು
ತಂದೊಮ್ಮೆ ಹಾಡು
ಹಿಂದಿನದು ದೂಡು
ಹೆಚ್ಚಿನ ಸಿರಿ ನಾ ಬೇಡೆನು ಪರುಷವೆ
ನೀನೊಂದೇ ಹೊನ್ನು ॥ ೭ ॥

ಒಂದನ್ನೇ ಬಯಸಿ
ಒಂದಕ್ಕೇ ಎಳಸಿ
ಒಂದೆಂದೇ ಬಳಸಿ
ನಾ ಬಾಳುವ ತೆರ ನಡಿಸೌ—
ಪರುಷವೆ ಮರಸು ಸಮಸ್ತವನು ॥ ೮ ॥

---

# ವೀರಶೈವ ರಸಯುಕ್ತ ಪ್ರಪಂಚದ ಹೆದ್ದಾರಿ.

(ಲೇಖಕಃ – ಶ್ರೀಯುತ ಶಾಂತವೀರ ಮುಮ್ಮಿಗಟ್ಟಿ ಧಾರವಾಡ.)

---

ಯಾವುದಾದರೊಂದು ಸಮಾಜದ ಏಳ್ಗೆಯ ಬಗ್ಗೆ ಕೂಲಂಕಷವಾಗಿ ವಿಚಾರ ಮಾಡಬೇಕಾದರೆ ಅದರ ಏಳ್ಗೆಯಕ್ಕಿಂತಲೂ ಕುಂದು ಕೊರತೆಗಳನ್ನು ಮೊದಲು ವಿಚಾರಮಾಡಬೇಕಾಗುವದು. ಇದೇ ಮಹತ್ವವುಳ್ಳದ್ದು. ಬಕವು ಹಾಲಿನಿಂದ ನೀರನ್ನು ಬೇರ್ಪಡಿಸುವದಲ್ಲವೇ? ಆ ವಿಶಿಷ್ಟ ಗುಣವನ್ನು ಪ್ರತಿಯೊಬ್ಬರು ಸಂಪಾದಿಸಬೇಕಾಗುವದು. ಆ ಸಾಮರ್ಥ್ಯದಿಂದ ಸಮಾಜದಲ್ಲಿಯ ಕುಂದುಕೊರತೆಗಳನ್ನು ಬೇರ್ಪಡಿಸಿ ಅವುಗಳ ಏಳ್ಗೆಗೆ ಪ್ರಯತ್ನ ಪಡಬೇಕಾಗುವದು. ಇಂದು ಕಾಣುವ ಸಣ್ಣಪುಟ್ಟ ಕೊರತೆಗಳು ನಾಳೆ ಗುಡ್ಡದಂತೆ ಭೀಕರವಾಗಿ ಪರಿಣಮಿಸಬಹುದು. ಆದ್ದರಿಂದ ಬೂದಿ ಮುಚ್ಚಿದ ಕೆಂಡದಂತೆ ಇರುವ ಅವುಗಳನ್ನು ಹೊರಗೆ ಕೆಡಹಬೇಕಾಗುವದು. ಇದುವೆ ಏಳ್ಗೆಯ ಮೂಲವು.

ಇದರ ಜೊತೆಗೆ ಪ್ರತಿಯೊಂದು ಸಮಾಜದಲ್ಲಿ ಒಕ್ಕಟ್ಟು ಬಹಳೇ ಮಹತ್ವದ್ದಾಗಿರುವದು. ಒಕ್ಕಟ್ಟಿನ ಪ್ರತಿಭೆಯು ಸಣ್ಣ ಕ್ರಿಮಿಕೀಟಗಳಲ್ಲಿ ಸಹ ಒಡೆದು ಕಾಣುತ್ತಿದೆ. ಜೇನು ಹುಳಗಳು ಜೇನು ತುಪ್ಪವನ್ನು ಕೂಡಿ ಹಾಕುವವು. ಜೇನು ಹುಟ್ಟು ಕಟ್ಟುವವು. ನೋಟಕ್ಕೆ ಅವು ತೀರ ಸಣ್ಣವು. ಮತ್ತು ಅವು ತರುವ ಮಕರಂದವೂ ತೀರ ತುಸು. ಅಷ್ಟು ದೊಡ್ಡ ಹುಟ್ಟನ್ನು ಕಟ್ಟಲು ಒಂದು ಹುಳದಿಂದ ಅಸಾಧ್ಯ! ಎಲ್ಲವೂ ಹನಿಗೆ ಹನಿ ಕೂಡಿಸಿ ಜೇನು ತುಪ್ಪದ ಹಳ್ಳವನ್ನೇ ಮಾಡಿಬಿಡುತ್ತಿವೆ. ಇದು ಒಕ್ಕಟ್ಟಿನ ಫಲವು. ಇದರಲ್ಲಿ ಸ್ವಪ್ರಯತ್ನ, ಸತತ ದುಡಿತ, ಅದರ

ಜೊತೆಗೆ ಪರಸ್ಪರ ಸ್ನೇಹ, ಈ ವಿಶಿಷ್ಟ ಗುಣಗಳು ತೀರ ಅರ್ಹವಾದವು ಗಳು. ಜೇನು ಹುಳಗಳಿಗೆ ಯಾವುದಾದರೂ ಗಂಡಾಂತರವು ಬಂದರೆ ಅವು ಪರಸ್ಪರ ಹೆಮ್ಮೆ, ಬಾಂಧವ್ಯ, ಸ್ನೇಹಗಳಿಂದ ಮಿಲನವಾಗಿ ವೈರಿಯು ಮೇಲೆ ಹಲ್ಲೆ ಮಾಡಲು ಪ್ರಯತ್ನಪಡುವವು. ಆ ವೇಳೆಯಲ್ಲಿ ಕಷ್ಟ ಸಹಿಷ್ಣುತೆ, ಸಹಾಯ ಸಹಕಾರ ಇವು ಅತ್ಯಗತ್ಯವಾದವುಗಳು. ಇದ ರಂತೆಯೇ ಈ ಪ್ರಾಣಿಕೋಟಿಯ ಪ್ರಪಂಚದಲ್ಲೆಲ್ಲ ಈ ತೆರದ ಒಗ್ಗಟ್ಟು ಕಂಡುಬರುತ್ತದೆ.

ಇನ್ನು ಪ್ರಾಣಿಕೋಟಿಯಲ್ಲಿ ಈ ಗುಣವು ಇದ್ದ ಮೇಲೆ, ಪ್ರಾಣಿ ಕೋಟಿಗೆ ಅತಿಶ್ರೇಷ್ಠನೆನ್ನಿಸಿಕೊಂಡ ಮಾನವನಲ್ಲಿ ಈ ಗುಣ ಇರುವದು ಸಹಜವಲ್ಲವೇ ? ಇದು ಸಹಜವಾದರೂ ಕೆಲವೆಡೆಗಳಲ್ಲಿ, ಕೆಲ ಸಮಾಜ ಗಳಲ್ಲಿ ಮಾತ್ರವೇ ಕಂಡುಬರುವದು. ಈ ಸ್ಥಿತಿಯು ಇರುವಂತಹದು ಮಾನವನ ಬುದ್ಧಿಗೆ ಒಂದು ಕಲಂಕವು. ಒಬ್ಬನೇ ಒಬ್ಬನಿಂದ ಯಾವ ಕೆಲಸವೂ ಸುಖವಾಗಿ ಸಾಗಲಾರದು. ಆದ್ದರಿಂದಲೇ ಪರಮಾತ್ಮನು ವಿಶ್ವದಲ್ಲಿ ಪತಿಪತ್ನಿಯ ಜೋಡು ಮಾಡಿರುವ ಹಾಗೆ ತೋರುತ್ತದೆ. ತಾನೊಬ್ಬನಿಂದ ಮುಕ್ತಿ ಸಿಗಲಾರದು. ಮುಕ್ತಿಯು ಸಹಾಯಾರ್ಥವಾ ಗಿಯೇ ಜೋಡಿ ಇದೆ. ಮಾನವನ ಪ್ರತಿಯೊಂದು ಅವಯವವನ್ನು ಸಾಧಾರಣ ಪರೀಕ್ಷಿಸಿದರೆ ಎಲ್ಲವೂ ಜೋಡಿ ಇರುವವು. ಕೈ, ಕಾಲು, ಕಣ್ಣು, ಕಿವಿ ಮುಂತಾದವುಗಳು ಜೋಡಿಯಾಗಿರುವವು. ಪ್ರತಿ ಹಸ್ತಕ್ಕೂ ಐದೈದು ಬೆರಳುಗಳು ಇವೆ. ಒಂದು ಬೆರಳು ಹೋದರೆ ಆ ಹಸ್ತದ ಕಾರ್ಯವು ತಟಸ್ಥವಾಗಿ ಬಿಡುವದು ಸಹಜವು. ಇದರಂತೆ ಸಮಾಜದ ಸ್ಥಿತಿಯು ಇರುವದು. ಎಲ್ಲರೂ ಪರಸ್ಪರ ಸಹಾಯವನ್ನೀಡಿದರೆ ಸರ್ವ ಕಾರ್ಯಗಳೂ ಸಿದ್ಧಿಯಾಗುವವು. ಒಕ್ಕಟ್ಟಿನ ಮಹತ್ವ ಎಷ್ಟಿದೆಯೆಂಬುದು ತಿಳಿಯಬಹುದು.

ಇದರಂತೆ ನವೀನ ವೀರಶೈವ ಸಮಾಜದಲ್ಲಿ ಅನೇಕ ಕುಂದುಗ ಳಿವೆ. ಅದು ಏಳ್ಗೆಯ ದಾರಿಯನ್ನು ತುಳಿಯಹತ್ತಿದೆ, ಮುನ್ನೋಡು ತ್ತಿದೆ. ಆದರೂ ಕೊರತೆಗಳನ್ನು ಪೂರೈಸಿಕೊಳ್ಳುವದು ಸಮಾಜ ಸಹಾ ಯಾರ್ಥವಾಗಿದೆ.

ಸದ್ಯಕ್ಕೆ ಉದರನಿರ್ವಾಹದ ಚಿಂತೆಯು ಪ್ರತಿಯೊಬ್ಬರನ್ನು ಚೆನ್ನಾಗಿ ಬಾಧಿಸುತ್ತಿರುವದು. ಮೊದಲು ಅನ್ನ. ಮುಂದೆ ಎರಡನೆಯ [illegible].

'ಅನ್ನದೇವರ ಮುಂದೆ ಇನ್ನು ದೇವರುಂಟೆ' ಎಂಬುದು ತೀರ ಸತ್ಯವು. ಹೊಟ್ಟೆಯು ಚೀಲ ತುಂಬಿದರೆ ಮುಂದೆ ದೇವನ ಕಡೆಗೆ ದೃಷ್ಟಿಕೋನ ವನ್ನು ಹೊರಳಿಸುವದು ಸಾಧ್ಯ! ಏಳ್ಗೆಯು, ಉನ್ನತಿಯು ಎಲ್ಲವೂ ಅನ್ನದ ಮೇಲೆ ಅವಲಂಬಿಸುವದು. ಈ ಚಿಂತೆ ಬಯಲಾಗಬೇಕಾದರೆ ಹಣದ ಚಿಂತೆ ಬಯಲಾಗಬೇಕು. ಹಣದ ಚಿಂತೆ ಬಯಲಾಗಬೇಕಾ ದರೆ ವಿದ್ಯೆ ಬೇಕು. ವಿದ್ಯೆಯಿದ್ದರೆ ಯಾವುದಾದರೂ ರೀತಿಯಿಂದ ಮೇಲಿನ ಚಿಂತೆಗಳನ್ನು ಬಯಲುಮಾಡಿಕೊಳ್ಳಬಹುದು. ಈ ಉನ್ನತಿಯೇ ಜೀವ ನದ ಉನ್ನತಿ. ವಿದ್ಯೆ ಮತ್ತು ಸಂಸ್ಕೃತಿ ಇದರ ಬಗ್ಗೆ ಕೊರತೆ ನಮ್ಮ ಸಮಾಜದಲ್ಲಿ ಬಹಳವಿದೆ. ಜನರು 'ಕಣ್ಣಿದ್ದೂ ಕುರುಡ'ರಂತೆ ಇರು ವರು. ಬೆಳ್ಳಗಿದ್ದುದನ್ನೆಲ್ಲ ಹಾಲು ಎಂದೇ ತಿಳಿದುಕೊಳ್ಳುವವರೇ ಹೊರತು ತಮ್ಮ ವಿಚಾರವನ್ನು ಉಪಯೋಗಿಸಿಕೊಳ್ಳುವವರು ವಿರಳ. ಆದಾಗ್ಯೂ ಈಗ ಅನೇಕ ಸಾಧನಗಳಿಂದ ಈ ಕೊರತೆಗಳು ಮಾಯವಾಗಹತ್ತಿವೆ.

ವೀರಶೈವ ಸಮಾಜದಲ್ಲಿ ವಚನ ಸಾಹಿತ್ಯವು ಹಿರಿದಾಗಿರುವದು. ಮತ್ತು ಅದರ ತಳಹದಿಯೇ ವೀರಶೈವರ ಏಳ್ಗೆಯ ಮೂಲವಾಗಿರುವ ದೆಂದು ಧಾರಾಳವಾಗಿ ಹೇಳಬಹುದು. ಓದುಬರೆಹ ಬಾರದೇ ಇದ್ದರೆ ಆ ವಚನಾಮೃತದ ಸವಿಯನ್ನು ಉಣ್ಣುವ ಬಗೆ ಹೇಗೆ? ಆ ಅಮೃತ ವನ್ನು ಸೇವಿಸದ ನರರು ಅಮರರಾಗುವ ಬಗೆಯೆಂತು? ನಮ್ಮೆದುರಿಗೆ ಉದಾತ್ತ ವಿಚಾರಗಳಿಂದ ಕೂಡಿದ ಯಾವದೇ ವಸ್ತುವಿದ್ದರೂ ಅದನ್ನು ಓದಿ, ತಿಳಿದು, ಜೀರ್ಣಿಸಲು ಸಾಮರ್ಥ್ಯವಿಲ್ಲವಾದರೆ ಅದರ ಪ್ರಯೋ ಜನವೇನು? ಕಣ್ಣಿದ್ದೂ ಕುರುಡರೆಂಬುದು ಸಹಜವಾಗಬಹುದಲ್ಲವೇ? ಆದುದರಿಂದ ಶಿಕ್ಷಣಕಾರ್ಯವು ಅತಿ ಮಹತ್ವದ್ದು.

ಸ್ತ್ರೀಯರಿಗೋಸ್ಕರ ಹೀಯಾಳಿಕೆಯು ನಮ್ಮಲ್ಲಿ ಬಹಳವಿದೆ. ಆದರೆ ಇದು ತೀರ ತಪ್ಪು. ಪುರುಷರಿಗೂ ಸಹ ಸಾಧ್ಯವಾಗದ ಕೃತ್ಯಗಳನ್ನು ಮಾಡಿದ ಸ್ತ್ರೀಯರ ಅನೇಕ ಉದಾಹರಣೆಗಳು ವೀರಶೈವರಲ್ಲಿ ಸಿಕ್ಕು ವವು. ಸ್ತ್ರೀ ಸಮಾಜಕ್ಕೆಯೇ ಅಪ್ರತಿಮ ಸ್ವರ್ಣ ಪುತ್ಥಳಿಯಂತೆ ಕಂಗೊ ಳಿಸಿದಳು ಆ ತಾಯಿ ಅಕ್ಕಾ ಮಹಾದೇವಿ! ಅನೇಕ ಶಿವಶರಣೆಯರೂ ವಚನಕಾರ್ತಿಯರೂ ನಮ್ಮ ಸಮಾಜದಲ್ಲಿ ಜನಿಸಿ ಹೋದರು. ಕೆಲ ಕೆಲವರ ಪ್ರಭಾವಗಳು ಪುರುಷರು ಬೊಟ್ಟುಕಚ್ಚಿಕೊಳ್ಳುಂಥವಿವೆ.

ಇದೆಲ್ಲ ಸಾಧ್ಯವಾಗಬೇಕಾದರೆ ಸ್ತ್ರೀ ಶಿಕ್ಷಣವು ಅತ್ಯವಶ್ಯಕವು. ಭವಿಷ್ಯಕಾಲದ ಯೋಗ್ಯ ನಾಗರಿಕರೆನ್ನಿಸಿಕೊಳ್ಳುವ ಚಿಕ್ಕಮಕ್ಕಳ ಯೋಗ್ಯ ಬೆಳವಣಿಗೆಯಾಗಬೇಕಾದರೆ ಅದು ಸ್ತ್ರೀಯಿಂದಲೇ ಸಾಧ್ಯ. ಅವರ ವಿದ್ಯಾಭ್ಯಾಸ ಭಯಭಕ್ತಿ ಯೋಗ್ಯ ಕಾಳಜಿ ತೆಗೆದುಕೊಳ್ಳುವದು ಪ್ರತಿ ಸ್ತ್ರೀಯ ಕರ್ತವ್ಯವಾಗಿರುವದು. ಚಿಕ್ಕಬಾಲಕರ ಮಿದುಳು ಸೂಜಿಗಲ್ಲಿ ನಂತೆ ಸರ್ವವನ್ನೂ ಆಕರ್ಷಿಸಿ ಮನನಮಾಡಿಕೊಳ್ಳುವ ಸ್ಥಿತಿಯಲ್ಲಿ ಇರುವದು. ತಾಯಿಯು ಅವರಿಗೆ ವೀರಪುರುಷರ ಧರ್ಮವಂತರ ಬಸ ವಣ್ಣನವರಂಥ ಮಹಾವ್ಯಕ್ತಿಗಳ ವಿಶಾಲ ದೃಷ್ಟಿ ಇವುಗಳ ಬಗ್ಗೆ ಚಿಕ್ಕ ಕಥೆಗಳನ್ನು ಹೇಳಿದರೆ ಅವು ಅವರಲ್ಲಿ ಚೆನ್ನಾಗಿ ನಟ್ಟು ಅವರನ್ನು ಆ ಪ್ರಕಾರ ಚೇತನಗೊಳಿಸಲು ಸಾಧ್ಯವಾಗುವದು. ಪ್ರತಿಯೊಬ್ಬ ಬಾಲ ಕನು ಬಸವಣ್ಣನಂತೆ ಪರಿವರ್ತಿಸಲು ಪ್ರಯತ್ನಿಸಬಹುದು.

ಇನ್ನು ಪ್ರತಿಯೊಬ್ಬ ವೀರಶೈವನು ವಿದ್ಯಾಶಿಕ್ಷಣದ ಜೊತೆಗೆ ಶಾರೀರಿಕ ಸಂಪತ್ತಿಯನ್ನು ಹೊಂದಿರುವದು ಅವಶ್ಯಕವು. ಆ ಬಲದ ಎದುರಿಗೆ ಮತ್ತಾವ ಬಲವೂ ಇಲ್ಲ ಪರರು ನಮ್ಮ ಸಮಾಜಕ್ಕೆ ಬಹಿಷ್ಕಾರ ಹಾಕ ಬಹುದು. ಆದರೆ ಎಲ್ಲರೂ ಒಕ್ಕಟ್ಟಿನಿಂದ ಅವರನ್ನು ಹೊಡೆದೋಡಿಸಲಿಕ್ಕೆ ಸಿದ್ಧರಾಗಬೇಕಾಗುವದು. ಆದ್ದರಿಂದ ಅಲ್ಲಲ್ಲಿ ಒಳ್ಳೆಯ ಶಾರೀರಿಕ ಶಿಕ್ಷಣ ಶಾಲೆಗಳನ್ನು ಸ್ಥಾಪಿಸುವದು ಅವಶ್ಯವಿದೆ. ಮೈಬಲವಿದ್ದರೆ ಪ್ರತಿಯೊಬ್ಬನು ಯಾವಾಗಲೂ ಆನಂದ ಮನಸ್ಕನಾಗಿ ದೇವನ ವಿಷಯದಲ್ಲಿ ಮನವೊಲಿಸಲು ಸಾಧ್ಯವಾಗುವದು. ರೋಗದ ಸುಳಿವು ಅವನ ಎದುರಿಗೆ ಸುಳಿಯಲಾರದು. ! !

ಇನ್ನು ಜೀವನದ ರಸನಿಮಿಷಗಳನ್ನು ಪರೀಕ್ಷಿಸಬೇಕು. ಈ ಪ್ರಪಂಚದಲ್ಲಿ ಮಾನವ ಜೀವನದಲ್ಲಿ "ತಿಪ್ಪೆಯು ಹೋಗಿ ಉಪ್ಪರಿ ಗೆಯು ಆಗಬಹುದು; ಉಪ್ಪರಿಗೆ ಹೋಗಿ ತಿಪ್ಪೆಯೂ ಆಗಬಹುದು" ಸುಖದುಃಖಗಳು ಜೀವನದಲ್ಲಿ ಇದ್ದೇ ಇರುವವು. ಆದರೆ ಅವೆಲ್ಲವು ಗಳಿಗೆ ಎಡೆಗೊಡದೆಯೇ ಅವುಗಳನ್ನು ಸಹಿಸಿ ಏಕನಿಷ್ಠೆಯಿಂದ ಆ ಮಹಾ ಲಿಂಗವನ್ನು ಪೂಜಿಸಿ ಅದರಲ್ಲಿಯೇ ತನ್ನ ದೇಹವನ್ನು ತ್ಯಜಿಸುವವನೇ ನಿಜವಾದ ಮಾನವನೂ ಭಕ್ತನೂ ಎನ್ನಿಸಿಗೊಳ್ಳುವನು. ಏರು ಇದ್ದಲ್ಲಿ ಇಳಿವು ಇದ್ದೇ ಇದೆ ಎಂಬುದನ್ನು ಮಾತ್ರ ಯಾರೂ ಮರೆ

ಯಕೂಡದು. ಏರಿಳಿವುಗಳು ಕಾಲಕ್ರಮದಿಂದ ನಡೆದೆಯೇ ಇರುವವು. ಇವೆಲ್ಲವುಗಳಿಗೆ ಎದೆಗೊಟ್ಟು ಕ್ಷಣಮಾತ್ರವೂ ಲಿಂಗದಲ್ಲಿ ಏಕನಿಷ್ಠೆಯುಳ್ಳವನಾದರೆ ಆ ಮಾನವನ ಜನ್ಮ ನಿಜವಾಗಿಯೂ ಸಾರ್ಥಕ್ಯವಾಗುವದರಲ್ಲಿ ಸಂದೇಹವಿಲ್ಲ.

ಈ ಜೀವನವು ಕನ್ನಡಿಯ ಹಾಗೆ ಇದೆ. ಅನೇಕ ಬಣ್ಣಗಳಿಂದ ಕೂಡಿದ ಗುಮಟದಂತಿದೆ. ನಾವು ನಕ್ಕರೆ ಪ್ರಪಂಚವೂ ನಗುವದು. ನಾವು ದುಃಖಿಸಿದರೆ ಅದೂ ದುಃಖಿಸುವದು. ನಾವು ನಿರಸರಾದರೆ ಅದೂ ನಿರಸವು ಆಗುವದು. ಮಾನವನು ಅದನ್ನು ಯಾವ ಬಣ್ಣದಲ್ಲಿಯಾದರೂ ಕಾಣಬಹುದು. ಅದು ಅವನಿಗೆ ಒಮ್ಮೆ ಕೆಂಪು ಬಣ್ಣದಂತೆ ಭೀಕರವಾಗಿಯೂ ಒಮ್ಮೆ ನೀಲಿಯ ಬಣ್ಣದಂತೆ ಸೌಮ್ಯವಾಗಿಯೂ ಕಂಡುಬರುವದು. ಒಟ್ಟಿನಲ್ಲಿ ತನ್ನ ಪರಿಸ್ಥಿತಿಯಂತೆ ಈ ಪ್ರಪಂಚವನ್ನು ಕಂಡುಕೊಳ್ಳಬಹುದು. ಆದರೆ ಪ್ರಪಂಚವು ಮಾತ್ರ ತಾನೇ ಯಾವ ರೀತಿಯನ್ನು ಹೊಂದಲಾರದು. ಎಲ್ಲವೂ ಅದನ್ನು ಅನುಭವಿಸುವ ಮಾನವನ ಮೇಲೆ ಅವಲಂಬಿಸಿರುವದು ಸಹಜ.

ಇದರಂತೆ ಜೀವನದಲ್ಲಿ ನಾವು ಭಕ್ತಿ ವೈರಾಗ್ಯಗಳಿಂದ ಆ ಮಹಾಲಿಂಗವನ್ನು ಪೂಜಿಸಿ ಒಳ್ಳೆಯ ಪರಮಾನಂದದಲ್ಲಿ ಲೋಲಾಡಿದರೆ ಜೀವನವು ರಸವುಳ್ಳದ್ದೂ, ರುಚಿಕರವಾದದ್ದೂ ಭೋಗಕ್ಕೆ ಉತ್ತಮವಾದದ್ದೂ ಎಂದು ಕಂಡುಕೊಳ್ಳಬಹುದು. ಆದರೆ ಮಹಾಲಿಂಗವನ್ನು ಮರೆತು ಹೇಡಿಯಾಗಿ ಉಳಿದು ಕೇವಲ ತುತ್ತಿನ ಚೀಲವನ್ನು ತುಂಬಿಕೊಂಡು ಕಡೆಗೊಮ್ಮೆ ಮಣ್ಣುಪಾಲಾಗಿ ಹೋದಲ್ಲಿ ಮಾನವನು ಪಶುವಿಗೆ ಸಮಾನನಾಗುವನು. ಅವನಿಗೆ ಜೀವನವು ನಿರಸವೂ ದುಃಖದಾಯಕವೂ ಆದುದು ಕಂಡುಬರುವದು ಮತ್ತು ಇಲ್ಲದ ಸಲ್ಲದ ವಿಚಾರಗಳನ್ನು ತಂದೊಡ್ಡಿಕೊಂಡು ತಲೆಕೆಡೆಸಿಕೊಂಡು ಜೀವನವನ್ನು ತೊರೆದು ಬೈರಾಗಿಯಾಗಬಹುದು. ಆದರೆ ಇದು ಮಾನವನ ರೀತಿಯಲ್ಲ ಜೀವನವು ನೀರುಗುಳ್ಳೆಯೆಂದು ಅವನು ಅನ್ನಬಹುದು. ಆದರೆ ಜೀವನದಲ್ಲಿಯೇ ಲೋಲಾಡಿ ಅದರಲ್ಲಿ ಸುಖದುಃಖಗಳಿಗೆ ಬಲಿಬಿದ್ದು ಪಾರಾಗಿ ತನ್ನ ಕೀರ್ತಿಯನ್ನು ಬೆಳಸಿದರಿಯೇ ಅವನು ನಿಜಮಾನವನು. ಮೋಕ್ಷಕ್ಕೆ ಹೆದ್ದಾರಿಯಾದ ಈ ಪ್ರಪಂಚವನ್ನು ಯಾರೂ ತ್ಯಜಿಸಕೂಡದು. ಇದೇ

ತತ್ವವನ್ನು ಮಹಾಂತ ಶಿವಯೋಗಿಗಳು ಬೋಧಿಸಿರುವರು. ಸೃಷ್ಟಿಯು ನಿಯಮಿಸಿದ ಜೀವನವನ್ನು ತೊರೆಯದೆ ಅದರಲ್ಲಿಯೇ ಭಕ್ತಿಮಾರ್ಗ ಸಂಪನ್ನನಾಗಬೇಕೆಂದು ಸ್ಪಷ್ಟವಾಗುತ್ತಿದೆ. ಬಸವಣ್ಣನವರೂ ಸಹ ಪ್ರಪಂಚವನ್ನು ಬಿಟ್ಟಿಲ್ಲ. ಅದನ್ನು ಸುತ್ತುಹಾಕಿಕೊಂಡೇ ಅವರು ಕೀರ್ತಿ ಶಾಲಿಗಳಾದರು. ಅವರು ಬೋಧಿಸುವ ತತ್ವಗಳು ಕೇವಲ ಜೀವನ ಸಂಪ್ರದಾಯಕರ ನೀತಿಗಳನ್ನೇ ಬೋಧಿಸುತ್ತಿವೆ. ದೇವರದಾಸಿಮಯ್ಯ ನಂತಹ ಮಹಾ ವ್ಯಕ್ತಿಗಳು ಸಹ ಜೀವನದಲ್ಲಿ ಬರುವ ವಸ್ತುಗಳ ಉದಾಹರಣೆಗಳಿಂದಲೇ ನೀತಿಯನ್ನು ಬೋಧಿಸಲು ತಮ್ಮ ವಚನಗಳಲ್ಲಿ ಮಹಾಪ್ರಯತ್ನ ಮಾಡಿರುವರು. ಮತ್ತು ಅದರಂತೆ ತಮ್ಮ ಪ್ರಯತ್ನ ವನ್ನು ಸಾಧಿಸಿರುವರು. ದೇವರದಾಸಿಮಯ್ಯ ನೈಯ್ಗೆಯ ಕಾಯಕವನ್ನು ಕೈಕೊಂಡು ನೇಯ್ಗೆಯ ಉಪಕರಣಗಳನ್ನು ಪೂಜೆಗೆ ಬೇಕಾಗುವ ವಸ್ತು ಗಳಿಗೆ ಹೋಲಿಸಿ ಅವುಗಳಿಂದಲೇ ನೀತಿಯನ್ನು ಬೋಧಿಸಲು ಸಾಧಿಸಿ ದ್ದಾನೆ! ಇವು ಅತ್ಯಂತ ಆಕರ್ಷಕವಾಗಿವೆ. ಹೀಗೆಯೇ ಪ್ರಪಂಚವನ್ನು ತ್ಯಜಿಸಲು ಬೋಧಿಸುವ ತತ್ವಗಳು ನಮಗೆ ಹಿತಕರವಾಗಿ ತೋರಿಬರು ವದಿಲ್ಲ. ಜೀವನವು ಮಾನವನ ಸುಖಕ್ಕಾಗಿ ಮುಡಿಪಿಟ್ಟ ವಸ್ತುವಾಗಿ ರುವದು.

ಈ ಬಾಳ್ವೆ ಮೂರು ದಿನದ ಸಂತೆ ಎಂದು ಕೆಲವು ನಿರಾಶಾ ವಾದಿಗಳು ಹೇಳುತ್ತಿರಬಹುದು. ಆದರೆ ಆ ಮೂರು ದಿನಗಳಲ್ಲಿಯೇ ನೂರು ದಿನದ ಸುಖವನ್ನು ಹೊಂದಬಹುದು. ಇದು ಸಾಧ್ಯವಿದೆ. ನೀತಿ ಮಾರ್ಗದಿಂದ ನಡೆದುಕೊಂಡರೆ ಇದು ಸಾಧ್ಯ. ಸರ್ವರೂ ಶಿವಾನು ಭವವನ್ನು 'ಶಿವಾನುಭವ'ದ ಮುಖಾಂತರ ಅರಿತು ಶಿವಾನುಭವಿಗಳಾ ಗುವದು ಅಗತ್ಯವು. ತನ್ನ ಬಂಧು ಬಳಗ ಆಪ್ತೇಷ್ಟರುಗಳನ್ನು ನಿಷ್ಕ ಪಟತನದಿಂದ ಪ್ರೀತಿಸುವದೇ ದೇವರ ಮೇಲಿನ ಪ್ರೀತಿಯೆಂದೆನಿಸಿಕೊ ಳ್ಳುವದು- ಪ್ರತಿಯೊಬ್ಬ ವೀರಶೈವರು ಪರಸ್ಪರ ದ್ವೇಷ, ಅಸೂಯೆಗ ಗಳನ್ನು ತೊರೆದು ಒಕ್ಕಟ್ಟಿನಿಂದ ಸಹಾಯ ನಿರತರಾಗಬೇಕೆಂಬುದು ಎಲ್ಲರ ಆಶೆ!! ನಮ್ಮ ಪೂರ್ವಿಕರು ಒಂದು ವೇಳೆ ದೃಢತರವಾದ ಸಮಾಜ ವನ್ನು ಕಟ್ಟಲು ಶಕ್ತರಾಗಿರದಿದ್ದರೆ, ಲೋಕೋದ್ಧಾರಕ ಬಸವಣ್ಣನ ವರು ಇಷ್ಟು ದೃಢತರವಾದ ಸಮಾಜವನ್ನು ಕಟ್ಟಲು ಶಕ್ತರಾಗುತಿ ದ್ದರೇ? ಇಲ್ಲವೆಂದು ಕೈ ಎತ್ತಿ ಹೇಳಬಹುದು. ಜೀವನದಲ್ಲಿ ಸದಿಚ್ಛೆ

ಗಳನ್ನು ಇಟ್ಟುಕೊಂಡು ಸಹಾಯ ಸಹಕಾರಗಳನ್ನು ನೀಡಿಕೊಂಡು ನಡೆದುದಾದರೆ ನಮ್ಮ ಸಮಾಜವು ಇನ್ನೂ ಮುಂದಕ್ಕೆ ಸಾಗಬಹು ದೆಂದು ಹೇಳಬಹುದು.

ಕಡೆಯದಾಗಿ ಈಗಿನ ಪರಿಸ್ಥಿತಿಯನ್ನು ಸುಧಾರಿಸಲು ಆ ಮಹಾತ್ಮಾ ಬಸವೇಶ್ವರರು ಇನ್ನೊಮ್ಮೆ ಜನಿಸಿ ಬಂದರೆ ಹೇಗಾಗಬಹುದು? ಇದೂ ಊಹಾಸಾಮ್ರಾಜ್ಯದ ಎಲ್ಲೆ ಮೀರುವಂತಹದು. ಬಸವಣ್ಣನವರಂಥ ಅನೇಕ ಮುತ್ತುಗಳು ನಮ್ಮ ಸಮಾಜದಲ್ಲಿ ಜನಿಸಿರುತ್ತವೆ ಮತ್ತು ಪ್ರಕಾಶಹೊಂದುತ್ತಲಿವೆ. ಸಣ್ಣ ನಕ್ಷತ್ರಗಳಂತೆ ಕಂಗೊಳಿಸುತ್ತವೆ. ನಕ್ಷತ್ರಗಳಿಗೆ ಸೂರ್ಯನ ಪ್ರಕಾಶದ ಸಹಾಯವಿದೆಯಲ್ಲವೇ? ಅದರಂತೆ ಇವಕ್ಕೆ ಆವ ಪ್ರಕಾಶ? ಅದು ಬಸವೇಶ್ವರನ ಪ್ರಕಾಶ!!

ಇನ್ನೊಮ್ಮೆ ಬಸವಣ್ಣನಂಥವರು ಉದ್ಭವಿಸಬೇಕು. ಅವರ ಹಿರಿ ಮಹಿಮೆ ಇನ್ನೊಮ್ಮೆ ಬೆಳಗಬೇಕು. ಸರ್ವರಿಗೂ ಚಿರಶಾಂತಿಯನ್ನು ಈಯಬೇಕು. ಈ ಆಸೆ ಪೂರ್ತಿಗೊಳಿಸಲು ಬಸವಣ್ಣನವರನ್ನು ಪ್ರಾರ್ಥಿ ಸುವೆ.

ಹಾ! ಬಸವಣ್ಣಾ, ಜಗದಣ್ಣಾ!<br>
ಅಣ್ಣಾ ಬಾರಣ್ಣಾ, ಏ ಸವಿ ಹಣ್ಣಾ!!<br>
ತೆರೆಯಲಾರೆಯಾ ನಿನ ಕಣ್ಣಾ?<br>
ದಯದೋರಲಾರೆಯಾ ಅಣ್ಣಾ??...ಹೇ ಅಣ್ಣಾ.



# ಪ್ರಭುಲಿಂಗ ಲೀಲೆಯಲ್ಲಿ ಚಾಮರಸನು ತೋರಿಸಿರುವ ಪಾತ್ರರಚನಾ ಕೌಶಲ.

(ಲೇಖಕಃ—ರಾ॥ ರಾ॥ ಸಣ್ಣಪ್ಪನಾಯಕ ಬಿ. ಎ. [ಎಸ್. ಟಿ. ಸಿ.]
ರಾಣೀಬೆನ್ನೂರ.)

---

ಚಾಮರಸನು ವೀರಶೈವ ಕವಿಗಳಲ್ಲಿ ಅತಿ ಉನ್ನತ ಸ್ಥಾನವನ್ನು ಪಡೆದಿರುವನೆಂಬುವದಕ್ಕೆ ಅವನ ಕೃತಿರತ್ನವಾದ ಪ್ರಭುಲಿಂಗ ಲೀಲೆಯೇ ಸಾಕ್ಷಿಯಾಗಿದೆ. ಅವನ ಪಾತ್ರರಚನಾ ಕೌಶಲ್ಯವೇ ಅವನ ಕೀರ್ತಿ ಕಳಶಕ್ಕೆ ಸುವರ್ಣದ ಮೆರುಗನ್ನು ಕೊಟ್ಟಿದೆ. ಭೀಮನನ್ನು ಮತ್ತು ದುರ್ಯೋಧನನನ್ನು ವಿಶಿಷ್ಟವಾದ ಒಂದು ಮನಮೋಹಕವಾದ ಶೈಲಿಯಲ್ಲಿ ವರ್ಣಿಸಿ ಕನ್ನಡ ಸಾಹಿತ್ಯದಲ್ಲಿಯ ಒಂದು ಅಮೋಘವಾದ ರತ್ನದಂತಿರುವ ಗದಾಯುದ್ಧ ಕಾವ್ಯವನ್ನು ನಮಗೆ ಕೊಟ್ಟ ರನ್ನ ಮಹಾಕವಿಯನ್ನು ನಾವೆಂದಿಗೂ ಮರೆಯುವಂತಿಲ್ಲ. ಅದೇ ರೀತಿಯಲ್ಲಿ ಅಲ್ಲಮಪ್ರಭುಗಳ ಗುಣಶೀಲಗಳನ್ನು ಚೆನ್ನಾಗಿ ಗ್ರಹಿಸಿ ಮನೋಜ್ಞವಾಗಿ ಬಣ್ಣಿಸಿದ್ದಾನೆ. ಗದಾಯುದ್ಧದಲ್ಲಿರುವಂತೆ ಈ ಕಾವ್ಯದಲ್ಲಿಯೂ ರಸಭರಿತವಾದ ಸಂಭಾಷಣೆ ಇದೆ. ರನ್ನ ಮಹಾಕವಿಯಲ್ಲಿದ್ದ ನಾಟಕೀಯ ಕೌಶಲ್ಯವನ್ನು ನಾವು ಈ ಕಾವ್ಯದಲ್ಲಿಯೂ ಕಾಣದಿರಲಾರೆವು. ಇಷ್ಟೊಂದು ಮಾತ್ರ ಹೇಳಬಹುದು. ಮಹಾಭಾರತದ ದುರ್ಯೋಧನನು ದುರ್ಗುಣಗಳ ಆಗರವಾಗಿದ್ದು ರನ್ನನು ಅವನನ್ನು 'ಮಹಾನುಭಾವನನ್ನಾಗಿ ಮಾಡಿದ್ದಾನೆ. ಆದರೆ ಚಾಮರಸನು ದೇವತ್ವದ ಸಿದ್ಧಿಯನ್ನು ಪಡೆದಿದ್ದ ಅಲ್ಲಮಪ್ರಭುಗಳಲ್ಲಿ ಮಾನವೀಯತೆಯ ರಸವನ್ನು ತುಂಬಿ ರಸಭರಿತ ಕಾವ್ಯವನ್ನು ನಿರ್ಮಿಸಿದ್ದಾನೆ. ಒಂದರಲ್ಲಿ ಮಾನವನು ಹೋಗಿ ದೇವನಾಗಿದ್ದಾನೆ; ಮತ್ತೊಂದರಲ್ಲಿ ಅಂದರೆ ಪ್ರಭುಲಿಂಗ ಲೀಲೆಯಲ್ಲಿ ದೇವನು ಹೋಗಿ ಮಾನವನಾಗಿದ್ದಾನೆ.

ಪ್ರಭುವು ಬಹಳ ವೈರಾಗ್ಯಪರನಾದರೂ ಲೋಕಕಲ್ಯಾಣದ ಕಾರ್ಯದಲ್ಲಿಯೇ ಅವರಿಗೆ ಸಂತಸವಾಗುತ್ತಿತ್ತೆಂದು ಸಿದ್ಧರಾಮ, ಬಸವೇಶ್ವರ, ಗೊಗ್ಗಯ್ಯ ಮತ್ತು ಮುಕ್ತಾಯಕ್ಕ ಮೊದಲಾದವರೊಡನೆ ಆದ ಜ್ಞಾನಯುಕ್ತ ಸಂಬಂಧದಿಂದ ನಮಗೆ ತಿಳಿಯುವದು. ಪ್ರಭುಗಳಲ್ಲಿ ಸಂಕುಚಿತ ದೃಷ್ಟಿಯಿಲ್ಲದೆ ಅವರು ವಿಶ್ವಬಂಧುತ್ವದ ಸಾಕಾರ ಮೂರ್ತಿಗ

ಳಾಗಿದ್ದರೆಂಬುದು ಅವನ ಕೆಳಗಿನ ಒಂದು ವಚನದಿಂದಲೇ ಹೊಳೆಯುವದು. "ಕಾಮನ ಸುಟ್ಟು ಹೋಮವನುರುಹಿ, ತ್ರಿಪುರಸಂಹಾರದ ಕೀಲನರಿಯಬಲ್ಲರೆ, ಯೋಗಿಯಾದಡೇನು? ಭೋಗಿಯಾದಡೇನು?" ಅಶನವ ತೊರೆದಾತ ಶೈವನಾದಡೇನು? ಸನ್ಯಾಸಿಯಾದಡೇನು? ವ್ಯಸನವ ಮರೆದಾತ, ಗುಹೇಶ್ವರಲಿಂಗದಲ್ಲಿ ಅವರ ಹಿರಿಯರೆಂಬೆನು."

ಅಲ್ಲಮಪ್ರಭುಗಳು ಪ್ರಾರಂಭದಿಂದ ಕೊನೆಯ ತನಕ ನಮ್ಮ ಲಕ್ಷ್ಯವನ್ನೆಳೆಯುತ್ತಿದ್ದು ಅವರ ಸದ್ಗುಣಗಳಿಂದ ನಾವು ಮುಗ್ಧರಾದ ಕಾರಣ ಅವರೇ ಈ ಕಾವ್ಯದ ನಾಯಕರೆನ್ನುವದು ಚರ್ಚಾಸ್ಪದವಾದ ಮಾತಲ್ಲ. ಭೀಮ, ಕರ್ಣ, ದ್ರೋಣ ಮತ್ತು ಭೀಷ್ಮರ ಸ್ವಭಾವಗಳಿಗೆ ಹೋಲಿಸಿ ದುರ್ಯೋಧನನ ಸ್ವಭಾವವನ್ನು ಕಾಂತಿಯುಕ್ತವನ್ನಾಗಿ ಪಂಪ ರನ್ನರು ಮಾಡಿದಂತೆ ಬಸವೇಶ್ವರ, ಸಿದ್ಧರಾಮ ಮತ್ತು ಅಕ್ಕಮಹಾದೇವಿ ಮೊದಲಾದ ಶಿವಶರಣ ಶರಣೆಯರ ಜೊತೆಗೆ ಅವರನ್ನು ಹೋಲಿಸಿ ಅವರ ಅಸಾಮಾನ್ಯ ಗುಣಗಳನ್ನು ಪ್ರತ್ಯಕ್ಷವಾಗಿಯೂ ಅಪ್ರತ್ಯಕ್ಷವಾಗಿಯೂ ಕವಿಯು ಹೊಗಳಿದ್ದಾನೆ. ಆವರೆ ದುರ್ಯೋಧನನ ದೋಷಗಳು ದುರ್ಯೋಧನನಿಗೇ ಇರುವವಲ್ಲದೇ ನಾವು ಅಲ್ಲಮಪ್ರಭುಗಳಲ್ಲಿ ಅವುಗಳನ್ನು ಕಾಣುವದು ಸಾಧ್ಯವಿದೆಯೇ? ಬೆಳ್ದಿಂಗಳಿಗೆ ಕತ್ತಲೆಯ ಭಯವೇ? ಜಲನಿಧಿಗೆ ಸಿಡಿಲು ಗುಡುಗಿನ ಭಯವೇ? ಪ್ರಭುಗಳು ಬರುವ ಪೂರ್ವದಲ್ಲಿ ಬೆಳಕು ಬಂದಾಗ ಬೆಳಕು, ಹೊರಟಾಗ ಬೆಳಕು ಮತ್ತು ಹೊರಟ ಮೇಲೆ ಬೆಳಕು. ಅವರು ಬೆಳಕೇ ಬೆಳಕಾಗಿದ್ದರು. ಕನ್ನಡನಾಡಿನ ಜ್ಞಾನಚಕ್ಷುಗಳು. ಅವರ ಈ ಘನವಾದ ಹಿರಿಮೆಯನ್ನು ಕಾವ್ಯದ ಪ್ರತಿಯೊಂದು ಸನ್ನಿವೇಶದಲ್ಲಿ ಹೃದಯಂಗಮವಾಗಿ ಚಿತ್ರಿಸಿದ ಚಾಮರಸನ ಕವಿತಾಶಕ್ತಿಯು ಪಾತ್ರರಚನಾ ಜಾಣ್ಮೆಯೂ ಎಂತಹದಿರಬೇಕು! ಗುರುಗಳ ಗುರುತ್ವವನ್ನು ಚತುರತೆಯಿಂದ ತೋರಿಸಿ ನಮ್ಮ ಮನವನ್ನೆಳೆದುಕೊಂಡ ಮಹಾನುಭಾವ! ವಿಶ್ವಮೋಹಿನಿಯಾದ ಮತ್ತು ಜಗಜ್ಜೇತಳಾದ ಮಾಯೆಯನ್ನು ಪ್ರಭುಗಳು ಆಕರ್ಷಿಸಬೇಕಾದರೆ ಅವರ ಸೌಂದರ್ಯವೆಂತಹದಿರಬೇಕು! "ಬಿರುದಿನ ಬಿಂಕಕಾರರ ವಾಸಿಗರನಲ್ಲೆನಿಸುವಲ್ಲಮನೆಂಬ ಪೆಸರೆನಗೆ" ಎಂದು ತಮ್ಮ ಹೆಸರು ಅವರು ಹೇಳಿದಾಗ ಅವರ ಸ್ವಭಾವವನ್ನೇ ಅವರ ಬಾಯಿಯಿಂದಲೇ ಚಿತ್ರಿಸಿದ್ದಾನೆ ಜಾಣನಾದ ಕವಿ.

ಪ್ರಭುಲಿಂಗಲೀಲೆಯು ಸಂಭಾಷಣೆಗಳಿಂದ ತುಂಬಿರುವದರಿಂದ ಅದನ್ನು ನಾಟಕರೂಪಕ್ಕೆ ಪರಿವರ್ತಿಸಬಹುದು. ಒಂದೊಂದು ಸನ್ನಿವೇಶ ಒಂದೊಂದು ದೃಶ್ಯವಾಗುವದು. ಸಕಳೆ ಮತ್ತು ಮೋಹಿನೀದೇವಿಯವರ ಸಂಭಾಷಣೆಯಿಂದ ಸಕಳೆಯ ವಾಕ್‌ಚಾತುರ್ಯವೂ ಮತ್ತು ಮೋಹಿನೀದೇವಿಯರ ಚಿಂತೆಯೂ ನಮಗೆ ಹೊಳೆಯುವದು. ಎಷ್ಟೆಂದರೂ ಹೆತ್ತ ತಾಯಿಯ ಕರುಳಲ್ಲವೇ ಅದು! 'ಅರಸನರಿಯದ ತೆರದಲಿದನಾಚರಿಸುವದು" ಎಂದು ಹೇಳಿದ ಕವಿಯ ವಾಕ್ಯದಿಂದ ಕವಿಯ ಜಾಣತನವೂ ತಾಯಿಯ ಬುದ್ಧಿವಂತಿಕೆಯೂ ಈ ಎರಡೂ ಹೊರಬೀಳುವವು. ಇನ್ನು ವಿಮಳೆಯ ವಿಚಾರ. ವಿಮಳೆಯು ಒಬ್ಬ ವಿವೇಕಿಯಾದ ವಿಚಾರಿಯಾದ ಮತ್ತು ಪ್ರಸಂಗಾವಧಾನಿಯಾದ ಸ್ತ್ರೀಯಾಗಿದ್ದಾಳೆ. ಸ್ತ್ರೀಯರಲ್ಲಿಯ ಬುದ್ಧಿವಂತಿಕೆಯನ್ನು ಚಿತ್ರಿಸುವದರಲ್ಲಿಯೂ ಮತ್ತು ಅವರ ಶೃಂಗಾರಯುಕ್ತವಾದ ವರ್ಣನೆ ಮಾಡುವದರಲ್ಲಿಯೂ ಚಾಮರಸನ ಕೈ ಬಹು ಮೇಲಾಗಿದೆ. ಸ್ತ್ರೀಯರ ದೋಷಗಳನ್ನು ಚಿತ್ರಿಸುವದರಲ್ಲಿ ಕೂಡ ಅಷ್ಟೇ ಚಾಣಾಕ್ಷನಾಗಿದ್ದನೆಂಬುದು ಮುಕ್ತಾಯಕ್ಕನ ಉದಾಹರಣೆಯಿಂದ ತಿಳಿಯುವದು. ಮಹದೇವಿಯಕ್ಕನವರ ಪಾತ್ರ ರಚನೆಯ ಪ್ರಸಂಗದಲ್ಲಿ ಕವಿಯು ಅತ್ಯಂತ ಜಾಣ್ಮೆಯನ್ನು ತೋರಿಸಿದ್ದಾನೆ. "ನೀನು ಸಲೆ ಶಿವಭಕ್ತನಾದಡೆ ಕೂಡುವೆನು ನಿನ್ನ, ನೀನು ಭವಿಯಾಗಿರ್ದಡೊಲ್ಲೆನು" ಎಂಬ ಅವಳ ಛಲದ ಮಾತಿನಿಂದ ಎಂತಹ ದೃಢಸಿಶ್ಚಯವು ವ್ಯಕ್ತವಾಗುವದು! "ಭಕ್ತಿಯ ಗೂಡಃ ತಾನೆಂಬಂತೆ ಕಾಣಿಸಿದಳು ಮಹಾದೇವಿ" ಎಂಬ ಹೇಳಿಕೆಯಿಂದ ಅವಳ ಭಕ್ತಿಯೂ "ನಿರುತ ನಿರಹಂಕಾರವಿಲ್ಲದೆ ಹಿರಿಯತನ ಮಹದೇವಿಗಾಯಿತ್ತೆಂದುದ ಭವಗಣ" ಎಂಬ ಹೇಳಿಕೆಯಿಂಧ ಅವಳ ಜ್ಞಾನವೂ ಬಹಳ ಚೆನ್ನಾಗಿ ಚಿತ್ರಿತವಾಗಿವೆ.

ಇನ್ನು ಕೊನೆಯದಾಗಿ ಬಸವಣ್ಣನವರ ವಿಚಾರ. ಚಾಮರಸನು ಬಸವಣ್ಣನವರಲ್ಲಿಯ ಸರಳತೆ, ಸಾತ್ವಿಕತೆ, ಭಕ್ತಿ ನಿರಹಂಕಾರ ಮತ್ತು ಸಮತೆ ಮೊದಲಾದ ಅನೇಕ ಶಿವಶರಣರ ಗುಣಗಳನ್ನು ಚೆನ್ನಾಗಿ ಚಿತ್ರಿಸಿದ್ದಾನೆ. ಶಿವಶರಣರೆಂದರೆ ಬಸವಣ್ಣನಂಥವರು ಮತ್ತು ಅವರಿಂದಲೇ ನಾವು ನಮ್ಮ ಗುಣಗಳನ್ನು ಬೆಳಿಸಿಕೊಳ್ಳಬೇಕೆಂಬ ಉಪದೇಶ ಮಾಡಿದ ಹಾಗಿದೆ. ಬಸವಣ್ಣನವರದು ಭಕ್ತಿಮಾರ್ಗ, ಸಿದ್ಧರಾಮರದು

ಕರ್ಮಮಾರ್ಗ ಮತ್ತು ಅಲ್ಲಮ ಪ್ರಭುಗಳದು ಜ್ಞಾನಮಾರ್ಗ ಎಂಬು ದನ್ನು ಕಾಲೋಚಿತ ವರ್ಣನೆಗಳಿಂದ ಕವಿಯು ಅವರ ಸ್ವಭಾವವನ್ನು ನಮ್ಮೆದುರಿಗೆ ಇಟ್ಟಿದ್ದಾನೆ. ವೀರಶೈವ ಧರ್ಮದಲ್ಲಿ ಭಕ್ತಿ ಜ್ಞಾನಗಳೆರ ಡಕ್ಕೂ ಪ್ರಾಧಾನ್ಯವಿದೆ ಎಂಬುದನ್ನು ಬಸವಣ್ಣನವರು ಮತ್ತು ಸಿದ್ಧ ರಾಮರ ಮುಖಾಂತರವಾಗಿ ನಮಗೆ ಗುರುಸ್ವರೂಪಿಗಳಾದ ಅಲ್ಲಮ ಪ್ರಭುಗಳು ಉಪದೇಶಿಸಿದ್ದಾರೆ. ಅಕ್ಕಮಹಾದೇವಿಯನ್ನು ಮಾತ್ರ ಶ್ರೀಶೈಲ ಪರ್ವತಕ್ಕೆ ಕಳಿಸಿದುದರಲ್ಲಿ ಎಂತಹ ಔಚಿತ್ಯವಿದೆ!

ಷಟ್‌ಸ್ಥಲ ಸಾಧನೆಯಿಂದ ಜೀವನ್ಮುಕ್ತನಾದವನು ಗುರುವಾಗಿ ಲೋಕ ಕಲ್ಯಾಣ ಹೇಗೆ ಮಾಡಬಹುದೆಂಬುದನ್ನು ಅಲ್ಲಮ ಪ್ರಭುಗಳ ಉದಾಹರಣೆಯಿಂದ ಕವಿಯು ತೋರಿಸಿದ್ದಾನೆ. ಗುರುವಿನ ಮಾರ್ಗವು ನಿವೃತ್ತಿಪರವಿದ್ದರೂ ಪ್ರವೃತ್ತಿ ಮಾರ್ಗವನ್ನು ಅವನನ್ನು ಬಿಡುವಂತಿಲ್ಲ. "ದೇಶ ಸೇವೆಯೇ ಈಶ ಸೇವೆ"ಯೆಂಬುದನ್ನು ಪ್ರಭುಗಳಿಂದ ಕಲಿಯು ಬೇಕಾಗಿದೆ ದಯೆ, ಶಾಂತಿ, ಸಮತೆ ಮತ್ತು ತ್ಯಾಗ ಮೊದಲಾದ ಸದ್ಗುಣಗಳಿಂದ ಪ್ರಭುಗಳು ಹೇಗೆ ಲೋಕಪೂಜ್ಯರೂ ಲೋಕಗುರು ಗಳೂ ಆದರೆಂದು ಬಹಳ ಸರಸವಾಗಿ ಕವಿಯು ಚಿತ್ರಿಸಿದ್ದಾನೆ. ಅಲ್ಲಮ ಪ್ರಭುಗಳು ಮಾಯೆಯನ್ನು ಗೆದ್ದ ಮಹಾವೀರರು; ಜ್ಞಾನವನ್ನು ಉಪ ದೇಶಿಸಿದ ಸದ್ಗುರುಗಳು; ಭಕ್ತಿಯ ಬೆಳಕನ್ನು ವರ್ಧಿಸಿದ ಮಹಾ ಜ್ಯೋತಿ. ಇಷ್ಟು ದೈವಿಕ ಗುಣಗಳಿದ್ದರೂ ಅವರಲ್ಲಿಯ ಮಾನವ ತೆಯ ಚಿತ್ರವನ್ನು ಚಿತ್ರಿಸುವದರಲ್ಲಿಯೇ ಕವಿಯ ಜಾಣ್ಮೆ ಇದೆ. ಕೈಲಾಸ ದಲ್ಲಿಯ ಪಾರ್ವತೀಪರಮೇಶ್ವರರ ವರ್ಣನೆ ಇದೆ. ಮನುಷ್ಯ ಲೋಕ ದಲ್ಲಿಯ ಅರಸು ಅರಸಿಯರ ಸ್ವಭಾವ ಚಿತ್ರವಿದೆ. ದಾಸ ದಾಸಿಯರ ವರ್ಣನೆ ಇದೆ. ಸಾಮಾನ್ಯ ಜನರ ಸ್ವಭಾವದ ವರ್ಣನೆಯೂ ಇದೆ. ಸಂಸಾರಿಗಳ, ಕರ್ಮ ಮಾರ್ಗಿಗಳ, ವಿರಕ್ತರ, ಜ್ಞಾನ ಮಾರ್ಗಿಗಳ ಮತ್ತು ಮಹಾ ಗುರುಗಳ ಸ್ವಭಾವವು ಕೂಡ ಸುಲಲಿತವಾದ ಶೈಲಿ ಯಲ್ಲಿ ಚಿತ್ರಿತವಾಗಿದೆ. ರನ್ನನ ಹಾಗೆ ಪಂಪನ ಹಾಗೆ ಚಾಮರಸನ ಪಾತ್ರರಚನಾ ಕೌಶಲ್ಯವು ಅದ್ವಿತೀಯವಾಗಿದೆ.

---

# ಮಹಾತ್ಮ ಬಸವೇಶ್ವರರು.

(ಲೇಖಕರು:- ಶ್ರೀಮಾನ್ ಉಪಾಧ್ಯಾಯ ಮ. ಮಲ್ಲಪ್ಪ 'ಕನ್ನಡ ಜಾಣ'
"ಜನತಾ ಜ್ಞಾನಪ್ರಚಾರಕ" ದಾಸೋಹಮಠ,
ಹಲಗೂರು. )

---

ಜೀವನಾಗಿ ಜನಿಸಿ ಶಿವನಾಗಲು, ಜನವಾಗಿ ಜನ್ಮತಾಳಿ ಜನಾರ್ದನನಾಗಲು, ಭವರೋಗಿಯಾಗಿ ಬಂದು ಭವರೋಗ ವೈದ್ಯನಾಗಲು ಯತ್ನಿಸಿ ಮಾನವೀಯತೆಯಿಂದ ದೈವಿಕೆಗೆ ಸೇರಿ ಅಮರೀಯ ಗುಣಗಳಿಂದ ಜ್ವಲಿತನಾಗಿ ಜನಾಂಗವನ್ನು ಸುಧಾರಿಸಿದ ವ್ಯಕ್ತಿಯೇ ಮಹಾತ್ಮನು. ಈಗ್ಗೆ ೮೦೦ ವರ್ಷಗಳ ಹಿಂದೆ ಎಂದರೆ ೧೨ನೆಯ ಶತಮಾನದಲ್ಲಿ ಕನ್ನಡ ನಾಡು ಗೊಂದಲೆ ಕೋಟಲೆಗಳಿಗೆ ಸಿಕ್ಕಿತ್ತು. ಜನತೆಯುನ್ನು ಉದ್ಧರಿಸಲು, ಜನರ ರೀತಿ ನೀತಿಗಳನ್ನು ಧರ್ಮಕರ್ಮಗಳನ್ನು ತಿದ್ದಿತಿರುಪಿ ಉನ್ನತಗತಿಗೆ ತರಲು, ವೇದಾಗಮೋಪನಿಷತ್ತುಗಳ ಸಾರಸಿದ್ಧಾಂತವನ್ನು ಕನ್ನಡ ನುಡಿಯಲ್ಲಿ ಪ್ರಸರಿಸಿದ ಮಹಾವಿಭೂತಿ ಬಸವೇಶ್ವರರು. ಕರ್ನಾಟಕದಲ್ಲಿ ಧಾರ್ಮಿಕ ಕ್ರಾಂತಿ ಪುರುಷನಾಗಿ ಮೆರೆದು ಇಡೀ ಜಗತ್ತಿನ ಇತಿಹಾಸದಲ್ಲಿ ಅಜರಾಮರನಾಗಿ, ಮಾನವಕುಲೋದ್ಧಾರಕನಾಗಿ ಯಶವೆತ್ತ ಮಹಾತ್ಮನು ಬಸವೇಶ್ವರರು. ಕನ್ನಡ ನಾಡು ನುಡಿಗಳಲ್ಲಿ ವೈಶಿಷ್ಟ್ಯಕ್ರಾಂತಿಯನ್ನು ಮಾಡಿ, ಜನತೆಯನ್ನು ತೀಡಿ, ತಾವು ತತ್ವಜೀವಿಗಳಾಗಿ ಜೀವಿಸಿ, ತಮ್ಮಂತೆಯೇ ಜನಾಂಗವು ನಡೆಯಲಿ ಎಂಬ ಅಭಿಮಾನ ಆಕಾಂಕ್ಷೆಯಿಂದ ಸಮಾಜಸೇವೆ ಮಾಡಿದ ಆಣಿ ಮುತ್ತು ಬಸವೇಶ್ವರರು. ಸಕಲ ಲೋಕಗಳಲ್ಲಿಯೂ, ಸರ್ವದೇಶಗಳಲ್ಲಿಯೂ ಮತಬೋಧಕರು ಭಗವಂತನೆಂಬ ದೀವಟಿಗೆಯಿಂದ ಬೆಳಕನ್ನು ಪಡೆದುಕೊಂಡು, ಅದರ ಪ್ರಭೆಯನ್ನು ಪ್ರಪಂಚದಲ್ಲೆಲ್ಲೂ ಹರಡುವಂತೆ ಮಾಡುವರು. ಇಂತಹ ಬೆಳಕನ್ನು ಪಡೆದ ಬಸವೇಶ್ವರರು ಪ್ರಪಂಚದಲ್ಲಿ ಅವತರಿಸಿದ ಧರ್ಮಾತ್ಮರ ಸಾಲಿನಲ್ಲಿ ಧ್ರುವತಾರೆಯಂತೆ ಬೆಳಗುತ್ತಿದ್ದಾರೆ. ಭರತಖಂಡದ ಜೀವಜ್ಯೋತಿ, ಕರ್ನಾಟಕದ ಭಕ್ತಿಯ ಬೆಳಗು, ಜಗತ್ತಿನ ಧರ್ಮತತ್ವಜ್ಞಾನಿಯು.

ಮಾನವ ಕುಲದ ಮೂಲಭೂತದ ಮುಖ್ಯ ತತ್ವಗಳನ್ನು ಪ್ರಪಂಚವು ಮರೆತು ಮೆರೆಯುತ್ತಿತ್ತು. ಭರತಖಂಡದಲ್ಲಿ ಹಿಂದೂ ಧರ್ಮದಲ್ಲಿ ಹಿಂದೆ ಎಂದೂ ಇಲ್ಲದ ಹಲವು ಮತಾಂತರ ಗಲಭೆಗಳು, ಹೋರಾಟಗಳು ಜನಿಸಿ ಹಿಂದೂ ಧರ್ಮದ ಸ್ವರೂಪವು ಹಾಳಾಗಿ ಹೋಗುವ ಸಂಭವವು ಒದಗಿತ್ತು. ಕರ್ನಾಟಕದಲ್ಲಿ ಅರಸು ತಲೆಮಾರುಗಳು ಮುಳುಗಿ ಹೋಗುತ್ತಿದ್ದವು. ನೂತನ ಅರಸು ತಲೆಮಾರುಗಳು ಆವಿರ್ಭವಿಸುತ್ತಿದ್ದವು. ಹೊರಜಗತ್ತಿನಲ್ಲಿ ಶಾಂತಿಸಮಾಧಾನಗಳಿಲ್ಲದೆ ಭೀಕರ ಭೀಷಣ ವಾತಾವರಣವು ಕಾಣುತ್ತಿತ್ತು. ರಾಜಕೀಯ ಗೊಂದಲವೇ ಅಲ್ಲದೆ ಧಾರ್ಮಿಕ ಜಿಜ್ಞಾಸೆಯು ನಡೆಯುತ್ತಲಿತ್ತು. ಒಕ್ಕಡೆ ಶಂಕರಾಚಾರ್ಯರ ಅದ್ವೈತದ ಕಾವುನೋವೂ, ಮತ್ತೊಂದು ಕಡೆ ರಾಮಾನುಜಾಚಾರ್ಯರ ವಿಶಿಷ್ಟಾದ್ವೈತದ ಬಿಸಿದಸಿಯೂ, ಮಗದೊಂದು ಕಡೆ ಜಿನ ಧರ್ಮದ ಉರಿಚುರುಕೂ ಇದ್ದಿತು. ಅಂದಿನ ಸಮಾಜದಲ್ಲಿ ಓಬಿರಾಯನ ಪದ್ಧತಿಗಳೂ, ದುರಾಚಾರಗಳೂ, ವಾಮಾಚಾರಗಳೂ, ಕುರುಡು ನಂಬಿಗೆಯೂ, ಶುಷ್ಕ ಸಿದ್ಧಾಂತಗಳೂ, ಅರ್ಥವಿಲ್ಲದ ವಾದಪ್ರವಾದಗಳೂ, ಜಾತಿ ಮತ ದ್ವೇಷಗಳೂ ತಲೆಹಾಕಿ, ಸಮಾಜ ಮನ್ನಣೆಯಲ್ಲಿ, ಸಮಾಜ ನೀತಿಯಲ್ಲಿ, ಇಳಿಮಾರು ಕಾಣಬರುತ್ತಿತ್ತು. ಈ ತೆರನ ಪರಿಸ್ಥಿತಿಯಿಂದ ಸಮಾಜದ ಚೆನ್ನು ಅಳಿಸಿಹೋಗುತ್ತಲಿತ್ತು. ನಮ್ಮ ನಾಡು ಮಹತ್ವಪೂರಿತವಾದ ಕಾಮೋರ್ಡದಿಂದ ಕೂಡಿಕೊಂಡಿತ್ತು. ಇಂತಹ ದಗ್ಧ ಪ್ರಸಂಗದಲ್ಲಿ ಧರ್ಮದ ಸಾರಸರ್ವಸ್ವವಾದ ಭಾನುವೊಂದು ವೀರಶೈವ ತಾರಾಮಂಡಲದಲ್ಲಿ ಉದಯವಾಯಿತು. ಈ ಭಾನೇ ಬಸವೇಶ್ವರರು. ಬಿಜಾಪುರ ಜಿಲ್ಲೆಯಲ್ಲಿನ ಬಾಗೇವಾಡಿಯಲ್ಲಿ ಬಸವನ ಜನನ. ತಂದೆ ಮಾದಿರಾಜ, ತಾಯಿ ಮಾದಲಾಂಬಿಕೆ, ಅಕ್ಕ ಕಪ್ಪಡಿಯ ಸಂಗಮದ ಶಿವಸ್ವಾಮಿಯ ಸತಿಯಾದ ನಾಗಲಾಂಬಿಕೆಯು, ಸೋದರಳಿಯ ಅಕ್ಕನ ಮಗ, ಚೆನ್ನಬಸವೇಶ್ವರರು. ಬಸವಣ್ಣನು ಜನ್ಮತಃ ಆರಾಧ್ಯ ಬ್ರಾಹ್ಮಣನು. ಆರಾಧ್ಯ ಬ್ರಾಹ್ಮಣರು ವೈದಿಕ ತಂತ್ರಾವಲಂಬಿಗಳು. ಪಾರ್ಥಿವ ಲಿಂಗಪೂಜೆಗೆ ಹೆಚ್ಚಿಗೆ ಪ್ರಾಶಸ್ತ್ಯವನ್ನು ಕೊಟ್ಟವರು. ಬಸವನು ತನ್ನ ಬಾಲ್ಯದಲ್ಲಿಯೇ ಸಂಪ್ರದಾಯದ ಕಟ್ಟನ್ನು ಹರಿದು ಹಂಚಿಹಾಕಲು ವೀರಯೋಧನಂತೆ ಸ್ಥಿರಮನಸ್ಸಿನಿಂದ ನಿಂತನು. ಈತನು ಸಮಾರು ತನ್ನ ೧೫—೧೬ನೆಯ ವಯಸ್ಸಿನಲ್ಲಿ ಬಾಗೇವಾ

ಡಿಯನ್ನು ಬಿಟ್ಟು, ಸಮೀಪದಲ್ಲಿ ಕೃಷ್ಣಾ, ಮಲಾಪಹಾರಿ ನದಿಗಳ ಸಂಗಮಸ್ಥಳವಾದ ಕಪ್ಪಡಿಗೆ ಪಯಣವೆಳಸಿದನು ಅಲ್ಲಿನ ಮಹಾಧ್ಯಕ್ಷರಾಗಿದ್ದ ಜಾತವೇದಮುನಿಗಳಲ್ಲಿ ವಿದ್ಯಾಭ್ಯಾಸ ಮಾಡಿದರು. ಮನೋಹರವಾದ ಪ್ರಕೃತಿ ಸೌಂದರ್ಯ, ನಿರ್ಮಲವಾದ ವಾತಾವರಣವಿದ್ದ ಈ ಪುಣ್ಯಭೂಮಿಯಲ್ಲಿ ಜೀವಪರಮಾತ್ಮಗಳ ಸಂಬಂಧವನ್ನು ಗುರು ಸನ್ನಿಧಿಯಲ್ಲಿ ಅರಿತುಕೊಂಡರು. ಇವರು ಇಲ್ಲಿ ಸಂಜೀವನವನ್ನು ಗಳಿಸಿ, ಅಂತರ್ವಾಣಿಯನ್ನು ಆಲಿಸಿ ಮಹಾಜೀವನದ ಬಳಕೆಗಾಗಿ ಕಲ್ಯಾಣಕ್ಕೆ ಹೊರಟರು. ಇವರ ಆತ್ಮದೃಷ್ಟಿಯಿಂದ ಬಿಜ್ಜಳರಾಯನಲ್ಲಿ ಕರಣಿಕ ಸ್ಥಾನವು ಇವರಿಗೆ ಸಿಕ್ಕಿತು. ಇವರ ಸೋದರ ಮಾವನಾದ ಬಲದೇವನ ಸಹಾಯದಿಂದ ಮಂತ್ರಿಪದವಿಗೆ ಏರಿದರು. ಇವರ ಪತ್ನಿಯು ಬಲದೇವನ ಮಗಳಾದ ಗಂಗಾಂಬಿಕೆಯು. ಇವರ ಸಾಂಸಾರಿಕ ಜೀವನಕ್ಕಿಂತ ಸಾರ್ವಜನಿಕ ಜೀವನವು ಹೆಚ್ಚು ಗುರುತರವಾದದ್ದು. ಇವರು ಪರಿಶುದ್ಧವಾದ ಸಮಾಜ ರಚನೆಯನ್ನು ಮಾಡಿ ಜಗನ್ಮಾನ್ಯತೆಯನ್ನು ಪಡೆದು ಜನತೆಯ ಸೇವೆಯೇ ಜನಾರ್ಧನ ಸೇವೆ ಎಂಬ ಆದರ್ಶಕ್ಕೆ ಸ್ಥಳ ಕೊಟ್ಟರು. ಅರಸನಿಗೂ, ಮಂತ್ರಿಗೂ ಕಾರಣಾಂತರಗಳಿಂದ ವೈಮನಸ್ಸವು ಹುಟ್ಟಿ ದೊಡ್ಡ ದೊಡ್ಡ ರಾಜಕೀಯ ಆಂದೋಳನವೇ ಒದಗಿತ್ತು. ಶರಣರಿಗೆ ತೊಂದರೆ ಉಂಟಾಯಿತು. ಕೊನೆಗೆ ಅರಸ ಬಿಜ್ಜಳನ ಕೊಲೆಯಾಯಿತು. ಅನಂತರ ಅರಸನ ಮಗ ರಾಯಮುರಾರಿ ಸೋಮಿಯು ಇವರ ಮೇಲೆ ದಂಡೆತ್ತಿ ಬಂದು ಇವರನ್ನು ಕೊಲೆ ಮಾಡಲು ಉದ್ಯುಕ್ತನಾದನು. ಈ ಅಶಾಂತಿ ಮತ್ತು ಅಸುಖವನ್ನು ಸಹಿಸಲಾರದೆ ಕಪ್ಪಡಿಗೆ ಹೋಗಿ ಲಿಂಗೈಕ್ಯರಾದರು. ಇವರ ಜೀವನ ಕಾಲ ಕ್ರಿ ಶ ೧೧೩೨-೧೧೬೮. ಇವರು ಚತುರ್ಯುಗಗಳಲ್ಲಿ ಅವತರಿಸಿದವರು. ಕೃತಯುಗದಲ್ಲಿ ಸ್ಥೂಲಕಾಯನಾಗಿಯೂ, ತ್ರೇತಾಯುಗದಲ್ಲಿ ಶೂನ್ಯಕಾಯನಾಗಿಯೂ, ದ್ವಾಪರದಲ್ಲಿ ಅನಿಮಿಷನಾಗಿಯೂ, ಕಲಿಯುಗದಲ್ಲಿ ಬಸವನಾಗಿಯೂ ಉದ್ಭವಿಸಿ ಜಂಗಮನಾಗಿ ಲಿಂಗಾರ್ಚನೆ ಮಾಡಿ ಲೋಕಕಲ್ಯಾಣವನ್ನು ಮಾಡಿದ ಮಹಾವ್ಯಕ್ತಿ. ಇವರ ಬಗ್ಗೆ ಕನ್ನಡ, ತೆಲುಗು, ತಮಿಳು, ಸಂಸ್ಕೃತ ಮತ್ತು ಮರಾಠಿ ಭಾಷೆಗಳಲ್ಲಿ ಮಹಾಕವಿಗಳು ಬರೆದಿರುವ ಗ್ರಂಥಗಳು ಇವರ ಪ್ರತಿಭೆ ಮತ್ತು ಮಹಿಮೆಗೆ ಸಾಕ್ಷಿಯು. ಈಗೀಗ ಹಿಂದಿ, ಇಂಗ್ಲೀಷ, ಭಾಷೆ

ಗಳಲ್ಲಿ ಗ್ರಂಥಗಳು ಹೊರಡುತ್ತಿವೆ. ಇವರ ಮಹತ್ಕಾರ್ಯಗಳು ಜನಾಂಗದಿಂದ ಗೌರವವನ್ನು ಪಡೆದಿವೆ. ಅಗಾಧಪ್ರಾಜ್ಞರೂ ಕೂಡ ಈ ಪ್ರಾಚೀನಾಚಾರ್ಯರ ವಿಚಾರವಾಹಿನಿಗೆ ತಲೆದೂಗಬೇಕು. ಇವರ ಆಶಿಷವು ನಮ್ಮ ಮೇಲಿದ್ದು ನಮ್ಮನ್ನು ಕರ್ತವ್ಯಮಾರ್ಗದಲ್ಲಿ ನಡೆಯಿಸಲಿ.

ವೈಶಾಖ ಶುದ್ಧ ಬಿದಿಗೆ ಬಂದರೆ ಸಾಕು. ಬಸವನ ಭಕ್ತರಿಗೆ ಕನ್ನಡ ಕುಲಜರಿಗೆ ಸಂಭ್ರಮವೋ ಸಂಭ್ರಮವು ಎಂದು ಜನಿಸಿದ ಮಹಾತ್ಮನ ಸ್ಮರಣೆಯು ಅಂದು. ಆತನ ಉಪದೇಶ ವಾಣಿಗಳು ಇಂದಿನ ಜೀವನಕ್ಕೆ ಶಕ್ತಿವರ್ಧಕ ಜೀವನದ ಸಕಲ ವಿಧದ ಚಟುವಟಿಕೆ – ಆಧ್ಯಾತ್ಮಿಕ, ಸಾಂಘಿಕ, ಸಾಮಾಜಿಕ, ವ್ಯವಹಾರಿಕ, ಆರ್ಥಿಕ ಭಾಗಗಳಲ್ಲಿ ಇವರ ಮುದ್ರೆಯು ಹೆಚ್ಚಾಗಿ ಬೇಕು. "ಬಸವರಾಜನು ಪುಟ್ಟಿ । ಬಸವ ತತ್ವವು ಬೀರಿ । ಬಸವನಾ ಮುದ್ರೆ ಮೆರೆದಾವು । ಧರೆಯು ವಗೆ ವಶವಾಗದಿಹುದೇ ಸರ್ವಜ್ಞ ॥ ಎಂಬ ಕವಿವಾಣಿಯು ದಿಟವಾಗಲಿ. ಇಂದಿನ ಜಗತ್ತಿಗೆ ಅಹಿಂಸಾತ್ಮಕ ಸಮತಾವಾದದ ತತ್ವವು ಅಗತ್ಯವು. ದೇಹದಂಡಿಸಿ, ಸೋಮಾರಿತನವನ್ನು ದೂಡಿ, ಉದ್ಯೋಗಿಯಾಗಿರಬೇಕೆಂಬುದು ಪ್ರಸರವಾಗುತ್ತಲಿದೆ. ಕಾಯಕವೇ ಕೈಲಾಸವಯ್ಯ ಎಂಬ ಬಸವಣ್ಣನವರ ನುಡಿ ಜನತೆಯನ್ನು ಜಾಗ್ರತಗೊಳಿಸುತ್ತಿದೆ. ವಿಶ್ವಶಾಂತಿಗೆ ಇಂದಿನವರು ಹಾತೊರೆಯುತ್ತಿದ್ದಾರೆ. "ಸರ್ವ ಪ್ರಾಣಿ ಸುಖಿನೋ ಭವಂತು, ದಯವಿಲ್ಲದ ಧರ್ಮವಾವುದಯ್ಯಾ" ಎಂಬ ನುಡಿಗಳನ್ನು ಇಂದಿನ ಜನತೆಗೆ ನೀಡಿದ್ದಾರೆ. ಅಯ್ಯಾ ಎಂದೊಡೆ ಸ್ವರ್ಗ......ಸತ್ಯವ ನ ಡಿವುದೇ ದೇವಲೋಕ..... ಆಚಾರವೇ ಸ್ವರ್ಗ ಎಂಬ ನುಡಿಯನ್ನು ಅನುಷ್ಠಾನರೂಪಕ್ಕೆ ತಂದರೆ ನಾವಿದ್ದ ಭೂಮಿಯೇ ನಾಕವಾಗುವುದು. ಭಕ್ತಿಭಾಂಡಾರಿ, ಭಕ್ತರಾಜ, ಜ್ಞಾನಕರ್ಮಯೋಗಿ, ಮಹಾನುಭಾವಿ, ಸತ್ಯಸಾಮ್ರಾಜ್ಯದ ಸಾರ್ವಭೌಮನು, ಶರಣಶ್ರೇಷ್ಠ, ಕಡುತ್ಯಾಗಿ, ಸಾಹಿತ್ಯ ಜಗದ್ಗುರುವಾಗಿರುವ ಬಸವನ ಬಹು ನಾಮ ಸ್ಮರಣೆಯು ಸರ್ವರಿಗೂ ಅಗತ್ಯವು.

ನಡೆಯಿಂದ ಜನಿಸಿರುವ ನುಡಿಗಟ್ಟು ಇವರ ಕೃತಿಯು. ಅನುಭವಾಬ್ಧಿಯಲ್ಲಿ ನನೆ ಕೊನೆಯೇರಿ ಸೊಂಪಾದ ಕಲ್ಪವೃಕ್ಷವು. ಕನ್ನಡಿಗನ ಜೀವನ ತತ್ವಗಳ ಸಾರವು. ಮಾನವನು ತನ್ನ ಭೌತಿಕೋನ್ನತಿಯು

ಹಾದಿಯನ್ನು ಸುಗಮವಾಗಿ ನಡೆಯಿಸಿಕೊಂಡು ಹೋಗಲು ಇದು ಸಹಕಾರಿಯು. ಧರ್ಮಪ್ರಸಾರಕರಿಗೆ ಒಂದು ನಿಧಿ; ಸಮಾಜ ಸುಧಾರಕರಿಗೆ ಒಂದು ಪ್ರಯೋಗ ಶಾಲೆಯು. ಮುಮುಕ್ಷುಗಳಿಗೆ ಕೈಪಿಡಿಯು. ಸಹೃದಯಿಗಳಿಗೆ ಕೈದೀವಿಗೆಯು. ಲಿಂಗಧ್ಯಾನನಿರತರಿಗೆ ಅತುಲ ಸೌಂದರ್ಯ ಸುಧೆಯು. ಉತ್ಕಟಪರಿಸ್ಥಿತಿಯಲ್ಲಿ ಹಾಯ್ದು ಹೋಗುವವರಿಗೆ ಊರಿಗೋಲು. ಉದ್ಯೋಗ ಶೀಲರಿಗೆ ಉಪಯುಕ್ತ ಉಪಕರಣ. ಸೋಮಾರಿಗೆ, ನಾಸ್ತಿಕರಿಗೆ ಶೂಲ. ಕನ್ನಡನಾಡಿನ ಉನ್ನತಿಯ ತೋರುವ ಮಂಜುಳಮಣಿ. ಸತ್ಯಶರಣರಿಗೆ ಸಿಹಿ ಶಾವಿಗೆಯು.

ಸಮಾಜ ಸುಧಾರಕರಲ್ಲಿ ಭಕ್ತಯೋಗಿ ಬಸವಣ್ಣನವರು ಸಮಾಜ ಸುಧಾರಣೆಗೆ ಇಂದಿನ ಸಾಹಿತ್ಯಸೇವಕರು ಹೆಚ್ಚು ಹೆಚ್ಚು ಗಮನ ಕೊಡುತ್ತಿದ್ದಾರೆ. ಅಂದು ಉಚಿತ ಹಾದಿಯಲ್ಲಿ ತಮ್ಮ ತಮ್ಮ ಅಭಿರುಚಿ ಆಕಾಂಕ್ಷೆಗಳಿಗೆ ಅನುಸಾರವಾಗಿ ತಮ್ಮನ್ನು ಕರೆದುಕೊಂಡು ಹೋಗುವಂತಹ ಮುಂದಾಳುಗಳಿಗಾಗಿ ಸಮಾಜವು ಹಾತೊರೆಯುತ್ತಿದ್ದಿತು. ಬಸವಣ್ಣನವರಿಗೆ ವಿದ್ಯೆ, ಅಧಿಕಾರಗಳ ಜೊತೆಗೆ ಸಾಂಸ್ಕೃತಿಕ ಸಂಪತ್ತು ತುಂಬಿದ್ದಿತು. ಅದರ ಫಲವಾಗಿ ಇವರು ಅಂದಿನ ಸಾಮಾಜಿಕ ಕ್ಷೇತ್ರದ ಮೇಲೆ ತಮ್ಮ ವೈಯ್ಯಕ್ತಿಕ ಪ್ರಭಾವವನ್ನು ಬೀರುವಂತಿದ್ದರು. ಅಂದಿನ ವಿದ್ಯಮಾನಗಳು ಚೆನ್ನಾಗಿ ಇವರ ಮನಕ್ಕೆ ತಗಲಿದ್ದವು. ಆಗಿನ ಸಮಾಜದ ದುರವಸ್ಥೆಯನ್ನು ಬಸವೇಶ್ವರರು ಕಂಡು ಮರುಗಿದ್ದಾರೆ. ಕಣ್ಣೀರಿಟ್ಟಿದ್ದಾರೆ. ನೊಂದ ಮನಸ್ಸಿಗೆ ಧರ್ಮಹಿತವಾಗುವಷ್ಟುಮಟ್ಟಿಗೆ ನೋಯದ ಮನಸ್ಸಿಗೆ ಧರ್ಮಹಿತವಾಗುವುದಿಲ್ಲ. ಧಾರ್ಮಿಕ ಬೀಜಾವಾಪನಕ್ಕೆ ಯೋಗ್ಯ ಕ್ಷೇತ್ರವು ನೊಂದ ಹೃದಯವು. ಇವರು ಅಂದಿನ ಸಮಾಜದ ಅಭಿರುಚಿ ಆಕಾಂಕ್ಷೆಯನ್ನು ಅರಿತುಕೊಂಡು ನೂತನ ದಾರಿಯನ್ನು ಜನಾಂಗಕ್ಕೆ ತೋರಿಸಿದರು. ಜಾತಿ ಕುಲ, ಕೀಳು ಮೇಲೆಂಬಭಾವನೆಗಳನ್ನು ಬಡಿದೋಡಿಸಿ ಅಧ್ಯಾತ್ಮಿಕ ಸಿದ್ಧಾಂತವನ್ನು ಬೆಳೆಯಿಸಿ ಜನತೆಯನ್ನು ಎಚ್ಚರಿಸಿದರು. "ಕೊಲ್ಲುವನೇ ಮಾದಿಗನು; ಹೊಲಸು ತಿಂಬುವನೇ ಹೊಲೆಯ. ಕುಲವೇನೋ? ಅವಂದಿರ ಕುಲವೇನೋ? ಸಕಲ ಜೀವಾತ್ಮರಿಗೆ ಲೇಸನೆ ಬಯಸುವ ನಮ್ಮ ಕೂಡಲಸಂಗನ ಶರಣರೇ ಕುಲಜರು." ಸಮಾಜದಲ್ಲಿ ಹಲವಾರು ಮೌಢ್ಯಭಾವನೆಗಳು ಜನಿಸಿ, ಜನರು ಹದಗೆಟ್ಟು, ನೀತಿಗೆಟ್ಟು ದುರ್ಮಾರ್ಗದಲ್ಲಿ ನಿರತರಾಗಿದ್ದರು.

ಬಸವೇಶ್ವರರು ಅವರ ಮೌಢ್ಯವನ್ನು ಕಿತ್ತುಹಾಕಿ ಅವರನ್ನು ಉದ್ಧಾರ ಮಾಡಲು ಕಂಕಣಕೊಟ್ಟು, ನೋಂಪಿಯುನ್ನು ಕೈಗೊಂಡು ನಿಂತ ಅಭೂತ ಪೂರ್ವ ವ್ಯಕ್ತಿಯು. "ಮಾರಿಮಸಣಿ ಎಂಬಿವು ಬೇರಿಲ್ಲ ಕಾಣಿರೋ. ಮಾರಿ ಎಂಬುದೇನು? ಕಂಗಳು ತಪ್ಪಿ ನೋಡಿದರೆ ಮಾರಿ; ನಾಲಿಗೆ ತಪ್ಪಿ ನೋಡಿದರೆ ಮಾರಿ. ನಮ್ಮ ಕೂಡಲಸಂಗಯ್ಯನ ನೆನಹು ಮರೆದರೆ ಮಾರಿ. ಬಸವಣ್ಣನವರು ಸುಧಾರಿಸಿದ ಸಮಾಜವು ಒಂದು ಉಚ್ಛತಮ ಸಮಾಜವಾಯಿತು. ಬರೀ ತತ್ವಗಳನ್ನು ಹೇಳಿ ಉಪದೇಶಿಸಿ ತೆಪ್ಪ ನಿರದೆ ವೀರಶೈವ ಭಕ್ತಿಮಾರ್ಗವನ್ನು ಚನ್ನಾಗಿ ವಿಚಾರಿಸಿ ನೋಡಿ ಸಮಾನತೆ ಬಾಂಧವ್ಯವನ್ನೇ ಆಧಾರವಾಗಿರುವಂತೆ ಮಾಡಿದರು. ಹಿಂದೂ ಧರ್ಮವನ್ನು ಚೇತನಗೊಳಿಸಿ, ಭದ್ರವಾದ ತಳಹದಿಯ ಮೇಲೆ ಸರ್ವಾಂಗ ನೂತನ ಸಮಾಜ ಮಂದಿರವನ್ನು ನಿರ್ಮಿಸಿದರು. ಶಿವಧೋ! ಶಿವಧೋ! ಎಂದು ಸಾರಿದವರಿಗೆ ಮೋಕ್ಷ ಸಿಕ್ಕುತ್ತದೆ ಎಂದು ಘೋಷಿಸಿದರು. ಉಪನಿಷತ್ಕಾಲದಲ್ಲಿ ಸ್ತ್ರೀಯರಿಗಿದ್ದ ಗೌರವಪದವಿಯು ಇಂದು ಸಿಕ್ಕಿತು. ಈ ಭವ್ಯ ಸಮಾಜದಲ್ಲಿ ಸತ್ಯ, ಅಹಿಂಸೆ, ಅಸ್ತೇಯಗಳೆಂಬ ವ್ರತತ್ರಯ ಗಳು ಉಂಟಾದವು ಉದರಪೋಷಣೆಗಾಗಿ ಭಿಕ್ಷೆ ಬೇಡುವುದನ್ನು ಖಂಡಿಸಿದರು.

ಭಗವದ್ಗೀತೆಯಲ್ಲಿ ಸಾರುತ್ತಿರುವ ಗಹನಗಂಭೀರ ತತ್ವಗಳು ಜನ ತೆಯ ಅನುಷ್ಠಾನಕ್ಕೆ ಬಾರದಿದ್ದುದರಿಂದ ಸಕಲ ಕಡೆಯಲ್ಲಿಯೂ ಅವ್ಯ ವಸ್ಥೆಯು ನಿಂತು ಮಾನವ ಜೀವನವು ನೀತಿಯ ಹಾದಿಯನ್ನೂ, ಸತ್ಯದ ದಾರಿಯನ್ನೂ ಬಿಟ್ಟಿದ್ದ ಸಮಯದಲ್ಲಿ ಅಜ್ಞಾನಲತೆಯನ್ನು ಕಿತ್ತು, ಬಿಸಾಡಿ ಜ್ಞಾನಾಂಕುರವನ್ನು ಒಡಮೂಡಿಸಿದ ಮಹಾವಿಭೂತಿ ಬಸ ವಣ್ಣನೇ ಧನ್ಯನು. ಇವರ ಭಕ್ತಿತತ್ವವು ಪ್ರೇಮಪೂರಿತ ಮತ್ತು ನಿಷ್ಕಾಮವಾದುದು. ಇದರ ಧ್ಯೇಯವು ಆತ್ಮಾರ್ಪಣೆಯೇ ಹೊರತು ಆತ್ಮಸಾಧನೆಯಲ್ಲವು. ತತ್ವಜ್ಞಾನ, ಧರ್ಮಾಚಾರ, ನೀತಿಮಾರ್ಗ ಇವು ಗಳಿಗಿಂತ ಮಿಗಿಲಾಗಿ ಸಮಾಜ ಸುಧಾರಣೆಯಲ್ಲಿ ಆತ್ಮವಿಶ್ವಾಸವನ್ನೂ, ದೂರದೃಷ್ಟಿಯನ್ನೂ ಇಟ್ಟಿದ್ದರು. ಜ್ಞಾನ, ಭಕ್ತಿ, ಕರ್ಮಗಳ ತ್ರಿವೇಣಿ ಸಂಗಮವನ್ನು ವ್ಯಕ್ತಗೊಳಿಸಿದರು. ಈ ಮನುಷ್ಯನ ದೇಹದಲ್ಲಿ ಅಡಗಿ ರುವ ಹಲವು ಕರ್ಮ ಬಂಧನಗಳಿಂದ ಬಿಗಿದಿರುವ ಹಲವು ನಿಶ್ಶಕ್ತಿ ಗಳಿಂದ ತಗ್ಗಿಹೋಗಿರುವ ಅಂತರಾತ್ಮನನ್ನು ಬಿಡುಗಡೆ ಮಾಡಿ, ಅಂತ

ರಾತ್ಮನು ಸ್ವಯಂಪ್ರಕಾಶಕನು ಎಂಬುದನ್ನು ಜನಗಳಿಗೆ ಗೋಚರವಾಗುವಂತೆ ಮಾಡಿದರು. "ವೀರಶೈವನಾದವನು ಆಗಮೋಕ್ತ ಧರ್ಮದಂತೆ, ಪುರಾತನರ ನುಡಿಯಂತೆ ತ್ರಿಕರಣಪರಿಶುದ್ಧನಾಗಿ ಶಿವಾರ್ಪಿತ ಭಾವವುಳ್ಳವನಾಗಿರಬೇಕು. ಜಗದೀಶ್ವರನನ್ನು ಲಿಂಗರೂಪಿಯನ್ನಾಗಿ ಭಾವಿಸಿ ಪೂಜಿಸಿ ಧನ್ಯರಾಗಬೇಕು. ಪ್ರಾಣಿ ಹಿಂಸೆಯು ಕೂಡದು. ಧರ್ಮಪ್ರಚಾರವನ್ನು ಜನರಿಗೆ ತಿಳಿಯುವ ಭಾಷೆಯಲ್ಲಿ ಮಾಡಬೇಕು" ಎಂಬುದೇ ಬಸವೇಶ್ವರರ ಉಪದೇಶಸುಧಾಬಿಂದು. ಬಸವಣ್ಣನವರ ಸಂದೇಶವು ವಿಶ್ವಸಂದೇಶವು. ಬಸವಸಾಹಿತ್ಯವು ಆಂಧ್ರ ಕರ್ನಾಟಕದ ಸಂಸ್ಕೃತಿ ಮಹಾಸಾಗರಗಳ ಸೇತು ಬಂಧನವು. ಪ್ರಾಪಂಚಿಕ ಜೀವನದಿಂದಲೇ ದಿವ್ಯಾನುಭವವನ್ನು ಪಡೆದು ಪರಿಪಕ್ವವಾದ ಹೃದಯಿಯು ಬಸವೇಶ್ವರರು. ಆಧ್ಯಾತ್ಮಿಕ ಸಂಸ್ಥೆಯಾದ ಅನುಭವಮಂಟಪದ ಸ್ಥಾಪಕರು ಬಸವಣ್ಣನವರು. ಇವರು ಧರ್ಮಯಜ್ಞದ ಮಹಾಪುರುಷರು. ಇವರು ನವನವ್ಯ ಕನ್ನಡ ಧವಳಗಿರಿಯಲ್ಲಿನ ಮಂದಿರದ ಭವ್ಯನಿರ್ಮಾಪಕರು. ನೂತನ ಮತಪ್ರವಾದಿಯು, ದಾರ್ಶನಿಕ, ಮಹಾಕವಿ, ರಾಜನೀತಿಜ್ಞ, ಧರ್ಮವನ್ನು ಸಮಾಜದ ದಿನಚರ್ಯೆಗಳ ಸಂಗಡ ಮಿಲನಮಾಡಿ ಬೆಳೆಸಿದ ಮಹಾವಿಭೂತಿಯು. ಬಸವಣ್ಣನವರು ಎಲ್ಲರ ಹೃದಯ ಮಂದಿರದಲ್ಲಿ ಓಡಾಡಲಿ. ಅದ್ಭುತ ಮೂರ್ತಿಸ್ವರೂಪಿಗಳೂ, ದಿವ್ಯತೇಜಸ್ವಿಗಳೂ ಘನಶಿವಾನುಭವಿಗಳೂ ಆದ ಜಗಜ್ಯೋತಿ ಬಸವಣ್ಣನವರಿಂದ ಪುನೀತವಾದ ಜನಾಂಗವೇ ಧನ್ಯ ಜನಾಂಗವು. ಈ ಮಹಾತ್ಮರು ಜನಿಸಿದ ನಾಡಿನಲ್ಲಿ ಉದಯಿಸಿದ ನಾವೇ ಪುಣ್ಯಶೀಲರು. ಈ ಮಹಾವಿಭೂಯು ಮಾತನಾಡುತ್ತಿದ್ದ ಸವಿಗನ್ನಡವೇ ನಮ್ಮ ತಾಯಿ ಭಾಷೆಯಾಗಿರುವುದು ನಮ್ಮ ಪುರಾಕೃತ ಪುಣ್ಯವು. ಈ ಪ್ರಭಾವಶಾಲಿಯು ಆಚರಿಸಿದ ಧರ್ಮವನ್ನೇ ಆಚರಿಸುತ್ತಿರುವ ಜನರು ಪಾವನಾತ್ಮರು. ಇಂತಹ ಮಹಾನುಭಾವನನ್ನು ಪಡೆದ ಕನ್ನಡ ನಾಡು ನಿಜವಾಗಿಯೂ ಧನ್ಯ ಹಾಗೂ ಮಾನ್ಯ.

# ವೀರಶೈವ ಸಂಸ್ಕೃತಿ.

(ಲೇ:-ಶ್ರೀ. ಶ್ಚಿ. ಸಿ. ಯಗಟಿ, ಬಿ. ಎ. ಎಲ್ ಎಲ್. ಬಿ. ಹಾವೇರಿ.)



ಸಂಸ್ಕೃತಿಯು ಮನುಷ್ಯನಲ್ಲಿರುವ ಶ್ರೇಷ್ಠವಾದ ಗುಣಗಳ ಸಂಗ್ರಹವು. ಅದು ಮನುಷ್ಯನಲ್ಲಿ ಗುಪ್ತವಾಗಿ ನೆಲೆಸಿರುವ ಮಾನಸಿಕ, ನೈತಿಕ ಮತ್ತು ಪಾರಮಾರ್ಥಿಕ ಶಕ್ತಿಗಳ ವ್ಯಕ್ತಸ್ವರೂಪವು. ಯಾವನೊಬ್ಬ ವ್ಯಕ್ತಿಯಾಗಲಿ, ಸಮಾಜವಾಗಲಿ ಅಥವಾ ಒಂದು ಜನಾಂಗವಾಗಲಿ ಕಾಲಾಂತರದಲ್ಲಿ ಸಂಪಾದಿಸಿಕೊಂಡ ಉನ್ನತಿಯ ತಿರುಳನ್ನು ಸಂಸ್ಕೃತಿಯು ತನ್ನಲ್ಲಿ ಹುದುಗಿಸಿಕೊಂಡಿರುತ್ತದೆ. ಸಂಸ್ಕೃತಿಯಲ್ಲಿ ಉತ್ತಮ ಕಲೆಗಳಾದ ಸಾಹಿತ್ಯ, ಗಾಯನ, ಶಿಲ್ಪಕಲೆ, ವಿಜ್ಞಾನ, ತತ್ವಜ್ಞಾನ ಮತ್ತು ಯಾಂತ್ರಿಕ ಮೊದಲಾದ ಕಲೆಗಳ ಮೇಲಿನ ಪ್ರೇಮ ಮತ್ತು ಪರಿಶ್ರಮಗಳು ಸಮಾವೇಶವಾಗುತ್ತವೆ. ಉತ್ತಮ ಕಲೆಗಳಲ್ಲಿ ಮನಸ್ಸು ಮಗ್ನವಾಗಬೇಕಾದರೆ ಮನುಷ್ಯನ ಆಚಾರ, ವಿಚಾರಗಳು ಉತ್ತಮ ತರಗತಿಗೆ ಮುಟ್ಟಬೇಕಾಗುವದು. ಕಲಾಚಾತುರ್ಯದಿಂದ ಪರಿಣಮಿಸುವ ಆನಂದವು ದುಡ್ಡಿನ ಲಾಭದಿಂದ ಇಲ್ಲವೆ ಕಾಮವಾಸನೆಯಿಂದ ಹುಟ್ಟಿದ ರತಿ ಸುಖಗಳನ್ನು ಮೀರಿಸುವದು. ಕಲಾಪ್ರೇಮದಿಂದುಂಟಾದ ಆನಂದವು ಶಾಶ್ವತವೂ, ಪ್ರಿಯವಾದದ್ದೂ, ಹಿತವಾದದ್ದೂ ಆಗಿದೆ. ಉಳಿದ ಇಂದ್ರಿಯ ಸುಖಗಳು ಕ್ಷಣಿಕವಾಗಿಯೂ ಪರಿಣಾಮದಲ್ಲಿ ದುಃಖಮಯವಾಗಿಯೂ ಇರುವವು. ಯಾವನೊಬ್ಬ ವ್ಯಕ್ತಿಯ ಇಲ್ಲವೆ ಒಂದು ಜನಾಂಗದ ಉನ್ನತಿಯನ್ನು ಗೊತ್ತುಹಚ್ಚಬೇಕಾದರೆ ಸಂಸ್ಕೃತಿಯು ಒರೆಗಲ್ಲಿನಂತಿರುವದು. ಯಾವದೊಂದು ಸಂಸ್ಕೃತಿಯ ಬೆಲೆಯು ಅದು ಬಹು ಪೂರ್ವಕಾಲದ್ದೆಂದು ಹೇಳುವದರ ಮೇಲಾಗಲಿ ಅಥವಾ ಅದು ಅತಿ ಅರ್ವಾಚೀನವೆಂದು ಹೇಳುವದರ ಮೇಲಾಗಲಿ ಅವಲಂಬಿಸಿರದೆ ಅದರ ಸ್ವಂತ ಪ್ರಭಾವವನ್ನೇ ಅವಲಂಬಿಸಿರುತ್ತದೆ.

ವೀರಶೈವದಲ್ಲಿ ಇಂತಹ ಸಂಸ್ಕೃತಿಯ ಅಂಶಗಳಾವವೆಂಬದನ್ನು ಇಲ್ಲಿ ವಿಚಾರಿಸುವ. ವೀರಶೈವ ಧರ್ಮಗ್ರಂಥಗಳಾದ ಆಗಮಗಳು ಕ್ರಿಸ್ತಶಕದ ಪೂರ್ವದಲ್ಲಿ ರಚಿಸಲ್ಪಟ್ಟವುಗಳಾಗಿವೆ. ಅವು ವೀರಶೈವ ಧರ್ಮವನ್ನು ಹಾಗು ಉಳಿದ ಆರು ಶೈವಪಂಥಗಳ ಧರ್ಮವನ್ನು ವಿವರಿಸು

ತ್ತವೆ. ಆಗಮಗಳು ವೀರಶೈವವು ಏಳು ಶೈವಪಂಥಗಳಲ್ಲಿ ಶ್ರೇಷ್ಠವಾ ದದ್ದೆಂದು ಹೇಳುತ್ತವೆ. (ತತ್ರ ಸಪ್ತವಿಧೇಷ್ವೇಷು ವೀರಶೈವಂ ಮಹತ್ತರಮ್. ಪಾರಮೇಶ್ವರಾಗಮ, ಪ. ೧ ಶ್ಲೋ. ೧೦೨). ಕ್ರಿಸ್ತಪೂರ್ವ ೨ನೆಯ ಶತಮಾನದಲ್ಲಿದ್ದ ಪಾಶುಪತಪಂಥದಿಂದಲೇ ವೀರಶೈವವು ಉಗಮವಾಗಿ ಮುಂದೆ ತನ್ನದೊಂದು ವಿಶಿಷ್ಟ ಧರ್ಮವನ್ನು ಸ್ಥಾಪಿಸಿಕೊಂಡಿತು. ಪಾಶುಪತದ ಸ್ಥಾಪಕನಾದ ಲಕುಲೀಶನು ಮೊಟ್ಟಮೊದಲು ದೇಹದ ಮೇಲೆ ಲಿಂಗಧರಿಸುವ ಪದ್ಧತಿಯನ್ನು ಪ್ರಾರಂಭಿಸಿದನು. ವೀರಶೈವದ ಪರ್ಯಾಯ ನಾಮಗಳಲ್ಲಿ ಪಾಶುಪತವೂ ಸಹ ಒಂದಾಗಿದೆಯೆಂದು ಪಾರಮೇಶ್ವರಾಗಮದ ೧೧ನೇ ಪಟಲದ ೬೬ನೇ ಶ್ಲೋಕದಲ್ಲಿ ಹೇಳಿದೆ. ಇದಲ್ಲದೆ ಎಳಂದೂರ ಹರೀಶ್ವರ ಕವಿಯು ತನ್ನ ಪ್ರಭು ಪುರಾಣದಲ್ಲಿ ಲಕುಲೀಶನನ್ನು ಗೌರವಿಸಿದ್ದಾನೆ. ಹರೀಶ್ವರ ಕವಿಯ ಕಾಲವು ಕ್ರಿ. ಶ. ೧೪೪೦. ಈ ವಿಷಯಕ್ಕೆ ಅನೇಕ ಕಾರಣಗಳಿದ್ದು ಅದನ್ನು ಪ್ರತ್ಯೇಕ ಲೇಖದಲ್ಲಿ ವಿವೇಚಿಸುವದು ಹಿತವಾದದ್ದು.

ಆಗಮಗಳು ಬೋಧಿಸಿದ ವಿಶಿಷ್ಟ ಸಂಗತಿಯೇನೆಂದರೆ ದೇವತೆಗಳನ್ನು ತೃಪ್ತಿಪಡಿಸಲು ಮಾಡತಕ್ಕ ಹಿಂಸಾತ್ಮಕ ಯಜ್ಞಗಳನ್ನು ನಿರಾಕರಿಸಿದುದು. ಯಜ್ಞಗಳು ಸ್ವಾರ್ಥಮಯವಾದವುಗಳೆಂತಲೂ ಪ್ರಾಣಹಿಂಸೆಯನ್ನೊಳಕೊಂಡವುಗಳೆಂತಲೂ ಅವುಗಳನ್ನು ಆಗಮಗಳು ತಿರಸ್ಕಾರ ಮಾಡಿದವು. ವೇದ ಧರ್ಮದಲ್ಲಿದ್ದ ಈ ಮೊದಲನೆಯ ದೋಷವನ್ನು ತೆಗೆದುಹಾಕಿದುದು ಆಗಮಧರ್ಮದ ಹಾಗು ವೀರಶೈವದ ಸಂಸ್ಕೃತಿಯ ಮೊದಲನೆಯ ಮೆಟ್ಟಲೆಂದು ಇದನ್ನು ಕರೆಯಬಹುದಾಗಿದೆ. ಆಗಮಧರ್ಮದ ಎರಡನೆಯ ಸಂಸ್ಕೃತಿಯ ಸೋಪಾನವೆಂದರೆ ವರ್ಣಾಶ್ರಮ ಧರ್ಮವನ್ನು ಕಿತ್ತುಹಾಕಿದುದು. ವೀರಶೈವದಲ್ಲಿ ಜಾತಿಭೇದವಿಲ್ಲವೆಂತಲೂ, ಬ್ರಾಹ್ಮಣನಾಗಲಿ, ಕ್ಷತ್ರಿಯನಾಗಲಿ, ವೈಶ್ಯನಾಗಲಿ, ಶೂದ್ರನಾಗಲಿ ಲಿಂಗದೀಕ್ಷೆಯನ್ನು ಹೊಂದಿದನೆಂದರೆ ಅವನ ಪೂರ್ವ ಜಾತಿಯು ನಷ್ಟವಾಗಿ ಕೇವಲ ಶಿವಸ್ವರೂಪನಾಗುವನು. "ಗತಂ ಶೂದ್ರಸ್ಯ ಶೂದ್ರತ್ವಂ ದ್ವಿಜತ್ವಂ ಬ್ರಾಹ್ಮಣಸ್ಯ ತು । ಶಿವಸಂಸ್ಕಾರ ಸಂಪನ್ನೇ ಜಾತಿಭೇದೋ ನ ವಿದ್ಯತೇ ॥ (ಸೂಕ್ಷ್ಮಾಗಮ). ಈ ಬೋಧೆಯಿಂದ ಮಾನವ ವರ್ಗದಲ್ಲಿ ಉಂಟಾದ ಕೃತ್ರಿಮ ಭೇದವು ನಾಶವಾಗಿ ವಿಶ್ವಬಂಧುತ್ವವು ನೆಲೆಗೊಂಡಿತು. ಮಹತ್ವವಾದ ಮೂರನೆಯ ಕ್ರಾಂತಿಯೇನೆಂದರೆ

ವೀರಶೈವವು ಮೂರ್ತಿಪೂಜೆಯನ್ನು ನಿರಾಕರಿಸಿದುದು. "ಸ್ಥಿರಲಿಂಗಾರ್ಚಕೌ ಲೋಕೇ ನ ಶುದ್ಧಾಃಪಂಕ್ತಿಕರ್ಮಸು ॥ ಪಾರಮೇಶ್ವರ, ಪ. ೨ ಶ್ಲೋ. ೨೫. ದೇಹದಮೇಲೆ ಧರಿಸುವ ಇಷ್ಟಲಿಂಗವು ಮೂರ್ತಿಯಾಗಿರದೆ ಶಿವನ ಕುರುಹು ಮಾತ್ರವಾಗಿದೆ. "ಲಿಂಗಂ ಬ್ರಹ್ಮೈವ ಕೇವಲಂ" ಎಂದು ಲಿಂಗ ಪುರಾಣವೂ, "ಲಿಂಗಂ ಶೂನ್ಯಂ ನಿರಾಕಾರಮನಾಮಯಂ" ಎಂದು ಪಾರಮೇಶ್ವರ ಪ ೧೪ ಶ್ಲೋ ೭ನೇದ್ದರಲ್ಲಿ ಹೇಳಿದೆ. ಹೀಗೆ ಪ್ರತಿಯೊಬ್ಬನ ದೇಹವು ದೇವಸ್ಥಾನವಾಯಿತು. ನಿರರ್ಥಕವಾದ ಹೋಮ ನಿಯಮಗಳನ್ನು ಬಿಟ್ಟು ಶುದ್ಧ ವಿಚಾರ ಆಚಾರಗಳಿಗೆ ಪ್ರಾಮುಖ್ಯತೆಯನ್ನು ಕೊಟ್ಟದ್ದು ಧರ್ಮಕ್ಕೆ ಹೊಸ ಕಳೆಯನ್ನು ತಂದುಕೊಟ್ಟಿತು. ಸಿಪ್ಪೆಯನ್ನು ತೆಗೆದುಹಾಕಿ ಸತ್ವವನ್ನು ಹುಡುಕಿಕೊಂಡಂತಾಯಿತು. ಕರ್ಮಠತನವನ್ನು ಬಿಟ್ಟು, ಸತ್ಯ, ಪ್ರೇಮ ದಯೆಗಳನ್ನು ಅನುಸರಿಸುವದರಲ್ಲಿ ಬಂದಿತು. ಉದ್ಯೋಗಗಳಲ್ಲಿ ಕೀಳು ಮೇಲೆಂದು ಭಾವಿಸದೆ ಪ್ರತಿಯೊಂದನ್ನು ಗೌರವದಿಂದ ಅನುಸರಿಸಲಾಯಿತು. ಇದರಿಂದ ಅವರು ಸ್ವಾವಲಂಬಿಗಳೂ ಆತ್ಮತೃಪ್ತರೂ ಆದರು. ನುಲಿಯ ಚಂದಯ್ಯ ಮೋಳಿಗೆಯ ಮಾರಯ್ಯ ಮುಂತಾದ ಹೆಸರಾದ ಶರಣರು ಹಗ್ಗ, ಕಟ್ಟಿಗೆ ಕಾಯಕಗಳನ್ನು ಅನುಸರಿಸಿ 'ಕಾಯಕವೇ ಕೈಲಾಸ'ವೆಂದು ಸಾರಿದರು.

ಸಾಹಿತ್ಯಕ್ಷೇತ್ರದಲ್ಲಿ ವೀರಶೈವರು ಶ್ರೇಷ್ಠವಾದ ಕೃತಿಯನ್ನು ತೋರಿಸಿದ್ದಾರೆ. ಸಂಸ್ಕೃತ, ಕನ್ನಡ, ತೆಲುಗು ಭಾಷೆಗಳಲ್ಲಿ ಪ್ರಸಿದ್ಧವಾದ ಕಾವ್ಯ, ನಾಟಕ, ಧರ್ಮಗ್ರಂಥ, ತತ್ವವಿವೇಚನೆಯ ಗ್ರಂಥಗಳನ್ನು ರಚಿಸಿದ್ದಾರೆ. ಶಿವಲೆಂಕಮಂಚಣ್ಣ, ಮಲ್ಲಿಕಾರ್ಜುನ ಪಂಡಿತ ಮತ್ತು ಶ್ರೀಪತಿಪಂಡಿತ ಈ ಮೂವರು ವೀರಶೈವರಲ್ಲಿ ಹೆಸರುವಾಸಿಗಳಾದ ಪಂಡಿತರಾಗಿ ಹೋಗಿದ್ದಾರೆ. ಕ್ರಿ. ಶ. ೧೦೯೫ ರಲ್ಲಿದ್ದ ಶ್ರೀಪತಿಪಂಡಿತನು ಬಿಝವಾಡದಲ್ಲಿ ಆಳುತ್ತಿದ್ದ ಅನಂತಭೂಪಾಲನಿಗೆ ಗುರುವಾಗಿದ್ದನು. ಈತನು ವ್ಯಾಸ ಋಷಿಯ ಬ್ರಹ್ಮಸೂತ್ರಗಳಿಗೆ ವೀರಶೈವಪರವಾದ ಭಾಷ್ಯವನ್ನು ಬರೆದಿದ್ದಾನೆ. ಭಾಷ್ಯ ಬರೆಯುವದು ಪಾಂಡಿತ್ಯದ ವೈಖರಿಯೆಂದು ಗಣಿಸಲ್ಪಟ್ಟದೆ. ಈ ಭಾಷ್ಯದಲ್ಲಿ ಶ್ರೀಪತಿಯು ಅನೇಕ ಗ್ರಂಥಗಳ ಆಧಾರವನ್ನು ಉದಾಹರಿಸಿ ತನ್ನ ಅಪಾರ ಜ್ಞಾನವನ್ನು ತೋರಿಸಿರುವದಲ್ಲದೆ ಬ್ರಹ್ಮಸೂತ್ರಗಳು ಲಿಂಗಧಾರಣವನ್ನು ಬೋಧಿಸುತ್ತವೆಂಬದನ್ನು ಸಿದ್ಧಮಾಡಲು

ತನ್ನ ಜ್ಞಾನಶಕ್ತಿಯನ್ನೂ ತರ್ಕಚಾತುರ್ಯವನ್ನೂ ತೋರಿಸಿರುವನು ವೀರಶೈವದ ಶ್ರೇಷ್ಠತ್ವವನ್ನು ಸಿದ್ಧಮಾಡುವದರಲ್ಲಿ ತೋರಿಸಲ್ಪಟ್ಟ ಇವನ ಸಾಹಸ, ಅಭಿಮಾನಗಳಿಗೆ ಮತ್ತಾವ ವೀರಶೈವ ಗ್ರಂಥಕಾರನ ಸಾಹಸಾಭಿಮಾನಗಳು ಸರಿಬರಲಾರವೆಂದು ಧೈರ್ಯದಿಂದ ಹೇಳಬಹುದು. ಈ ಭಾಷ್ಯವು ವೀರಶೈವಪರವಲ್ಲವೆಂದು ಕೆಲವರು ಪಕ್ಷದೋಷದಿಂದ ಹೇಳಿದ್ದಾರೆ. ಇದನ್ನು ಖಂಡಿಸಲು ಇದು ಸ್ಥಳವಲ್ಲದ್ದರಿಂದ ಅದಕ್ಕೆ ಬೇರೊಂದು ಲೇಖವೇ ಯೋಗ್ಯವು.

ಪಾಲ್ಕುರಿಕೆ ಸೋಮೇಶ್ವರನು ತೆಲುಗಿನಲ್ಲಿ ಬಸವ ಪುರಾಣವನ್ನು ಬರೆದು ಪ್ರಸಿದ್ಧನಾದ ಪಂಡಿತನಾಗಿ ಹೋಗಿದ್ದಾನೆ. ಇದನ್ನೇ ಭೀಮ ಕವಿಯು ಕನ್ನಡಕ್ಕೆ ಪರಿವರ್ತನೆ ಮಾಡಿದ್ದಾನೆ. ಈ ಗ್ರಂಥವು ಬಸವನ ಜೀವನ ಚರಿತ್ರೆಯನ್ನಷ್ಟೇ ಹೇಳುವದಲ್ಲದೆ ಬಸವನಿಗಿಂತ ಮೊದಲು ಇದ್ದ ವೀರಶೈವರ ಚರಿತ್ರೆಯನ್ನು ಸಹ ವಿವರಿಸುತ್ತದೆ. ಇದರಂತೆ ಹರಿಹರ, ರಾಘವಾಂಕ, ಚಾಮರಸ, ವಿರುಪಾಕ್ಷಪಂಡಿತ, ಷಡಕ್ಷರಿ, ಮೊಗ್ಗೆಯಮಾಯಿದೇವ, ಗುಬ್ಬಿಯ ಮಲ್ಲಣಾಚಾರ್ಯ, ಬಸವಪ್ಪಶಾಸ್ತ್ರಿ ಮುಂತಾದ ನೂರಾರು ಶ್ರೇಷ್ಠ ಕವಿಗಳು ಕನ್ನಡ ಸಾಹಿತ್ಯಕ್ಕೆ ತಮ್ಮ ಶ್ರೇಷ್ಠ ಕೃತಿಗಳನ್ನು ಸಲ್ಲಿಸಿದ್ದಾರೆ. ಬಸವಣ್ಣನವರನ್ನು ವೀರಶೈವ ಸಂಸ್ಕೃತಿಯ ಅವತಾರವೆಂದೇ ಕರೆಯಬಹುದು. ಅವರು ಆಗಮ ಧರ್ಮದ ಬೋಧೆಗಳನ್ನು ಪ್ರತ್ಯಕ್ಷವಾಗಿ ಆಚರಣೆಯಲ್ಲಿ ತಂದರು. ಸಾಮಾಜಿಕ ಸುಧಾರಣೆಗಳಲ್ಲಿ ಇವರು ಒಂದು ನವಯುಗವನ್ನೇ ಸ್ಥಾಪಿಸಿದರು. ವರ್ಣಾಶ್ರಮಗಳನ್ನು ಕಿತ್ತೊಗೆಯಲು, ಯಜ್ಞಗಳಲ್ಲಿ ಅಡಕವಾದ ಹಿಂಸೆಯನ್ನು ಹಳಿಯಲು, ಮಾನವವರ್ಗದಲ್ಲಿಯ ಕೀಳು ಮೇಲುಗಳನ್ನು ಕಳೆಯಲು ಸಾಧನವಾಗಿ ಅವರು ಕನ್ನಡದಲ್ಲಿ ವಚನವೆಂಬ ಸರಳ ಸಾಹಿತ್ಯವನ್ನು ಪ್ರಾರಂಭಿಸಿ ವಚನಸಾಹಿತ್ಯದ ಜನಕರಾದರು. ವಚನಗಳು ಕೇವಲ ಧರ್ಮವನ್ನಷ್ಟೇ ಬೋಧಿಸದೆ ಎಲ್ಲ ಜನರಿಗೂ ಮಾನ್ಯವಾದ ನೀತಿ ಮತ್ತು ತತ್ವಜ್ಞಾನಗಳನ್ನು ಬೋಧಿಸುತ್ತವೆ. ಈ ಕಾರಣದಿಂದಲೇ ಮಾನ್ಯ ಶ್ರೀ. ಜೆ. ಎನ್. ಫಾರ್ಕುಹಾರರು ರಾ॥ ಬ॥ ಹಳಕಟ್ಟಿಯವರು ಇಂಗ್ಲೀಷಿನಲ್ಲಿ ಪರಿವರ್ತಿಸಿದ ವಚನಗಳಲ್ಲನೇಕವುಗಳನ್ನು ಕ್ರಿ. ಶ. ೧೯೨೦ರಲ್ಲಿ 'ಇಂಡಿಯನ್ ಆ್ಯಂಟಿಕ್ವೆರಿ' ಎಂಬ ಮಾಸಪತ್ರಿಕೆಯಲ್ಲಿ

ಪ್ರಸಿದ್ಧಿಸಿದರು. ಬಸವನಂತೆ ಚನ್ನಬಸವ, ಅಲ್ಲಮ, ದೇವರದಾಸಿಮಯ್ಯ, ಸಿದ್ಧರಾಮ, ಮಹಾದೇವಿಯಕ್ಕ ಮುಂತಾದ ಅನೇಕ ಶರಣರು ಶ್ರೇಷ್ಠತರವಾದ ವಚನಗಳನ್ನು ಬರೆದಿರುವದಲ್ಲದೆ ತಮ್ಮ ಪವಿತ್ರವಾದ ಆಚರಣೆಯಿಂದ ಜನಸಮೂಹಕ್ಕೆ ಆದರ್ಶರಾಗಿದ್ದಾರೆ.

ವೀರಶೈವವು ಪರಧರ್ಮ ಸಹಿಷ್ಣುತೆಯನ್ನು ಬೋಧಿಸುತ್ತದೆ. 'ನ ದ್ವೇಷಂ ನ ಚ ಹಿಂಸಾಂ ಕುರ್ವೀತ ಲಿಂಗೀಯತ್ನೇನ ವಿಮತೇಷ್ವಪಿ ಲಿಂಗಿಷು" ಪಾರಮೇಶ್ವರ ಪ ೭ ಶ್ಲೋ. ೪೩- ಬಸವ ಪುರಾಣವನ್ನು ಓದಿದಲ್ಲಿ ಪರಧರ್ಮೀಯರು ಏಕಾಂತರಾಮಯ್ಯ, ಕೋಹೂರ ಬೊಮ್ಮಯ್ಯ, ಕೆಂಭಾವಿಭೋಗಣ್ಣ, ಗೊಬ್ಬೂರ ಬಾಚಯ್ಯ ಮುಂತಾದ ಶರಣರಿಗೆ ತೊಂದರೆ ಕೊಟ್ಟ ಸಂಗತಿಯು ತಿಳಿದುಬರುತ್ತದೆ. ಗುಜರಾಥದಿಂದ ವ್ಯಾಪಾರಕ್ಕಾಗಿ ಕರ್ನಾಟಕಕ್ಕೆ ಕ್ರಿ. ಶ. ೭೫೫ ರಲ್ಲಿ ಬಂದು ಲಕ್ಷ್ಮೇಶ್ವರದಲ್ಲಿ ವಾಸವಾಗಿದ್ದ ಆದಿಶೆಟ್ಟಿಯು ವೀರಶೈವನಿದ್ದುದರಿಂದ ಅವನನ್ನು ಜೈನರು ಹಿಂಸೆಪಡಿಸಿದರು. ಅವನು ಒಂದು ತಿಂಗಳು ಉಪವಾಸವಿದ್ದು ಗುಜರಾಥದಿಂದ ಸೋಮನಾಥ ಲಿಂಗವನ್ನು ತಂದು ಲಕ್ಷ್ಮೇಶ್ವರದ ಜೈನ ಬಸದಿಯಲ್ಲಿ ಸ್ಥಾಪಿಸಿ ತನ್ನ ತೊಂದರೆಯನ್ನು ನಿವಾರಣೆ ಮಾಡಿಕೊಂಡನೆಂದು ರಾಘವಾಂಕ ಕವಿಯು ಸೋಮನಾಥ ಪುರಾಣದಲ್ಲಿ ವರ್ಣಿಸಿದ್ದಾನೆ. ವೀರಶೈವರಲ್ಲಿ ಮಾಂಸಭಕ್ಷಣ, ಮದ್ಯಪಾನಗಳು ನಿಷಿದ್ಧವಾಗಿವೆ. "ನ ಮಾಂಸಂ ಭಕ್ಷಯೇಲ್ಲಿಂಗೀ ನಾಪ್ಯಪೇಯಂ ಪಿಬೇತ್ಕಚಿತ್" ಪಾರಮೇಶ್ವರ ಪ ೭ ಶ್ಲೋ ೪೦. ಮನುಷ್ಯನು ನಿರ್ಮಲನೂ, ವಿವೇಕಿಯೂ, ಸೌಮ್ಯನೂ, ಸುಖಿಯೂ ಇರಬೇಕಾದರೆ ಮದ್ಯ ಮಾಂಸಗಳನ್ನು ತೊರೆಯುವದು ಸಂಸ್ಕೃತಿಯ ಲಕ್ಷಣವು.

ಕ್ರಿ. ಶ. ೧೨ನೆಯ ಶತಮಾನದಲ್ಲಿ ಬಸವಣ್ಣನವರು ಸ್ಥಾಪಿಸಿದ ಅನುಭವಮಂಟಪವು ವೀರಶೈವ ಸಂಸ್ಕೃತಿಯ ಶಿಖರಪ್ರಾಯವಾಗಿದೆ. ಅದರಲ್ಲಿ ನೂರಾರು ಜ್ಞಾನಿಗಳಾದ ಶರಣರು ಸೇರಿ ತತ್ವ ಚರ್ಚೆಯನ್ನು ಮಾಡುತ್ತಿದ್ದರು. ಅದರ ಪರಿಣಾಮವಾಗಿ ಅವರು ತಮ್ಮ ಉದಾತ್ತ ತತ್ವಗಳನ್ನು ಹೊರಗೆಡಹಿದರು. ಅವರು ತತ್ವ ಮಾರ್ಗಕ್ಕೆ ಜ್ಞಾನ, ಭಕ್ತಿ, ಕ್ರಿಯೆಗಳು ಸಮವಾಗಿಯೇ ಅವಶ್ಯವೆಂದು ಹೇಳಿದರು. ಷಟ್ಸ್ಥಲಗಳು ಪರಮಾತ್ಮನನ್ನು ಹೊಂದುವದಕ್ಕೆ ಆರು ಸೋಪಾನಗಳಾಗಿದ್ದವು.

ಇಷ್ಟಲಿಂಗವು ಪರಮಾತ್ಮನ ಸಾಕ್ಷಾತ್ಕಾರಕ್ಕೆ ಮುಖ್ಯ ಸಾಧನವಾಗಿತ್ತು. ವೀರಶೈವರಲ್ಲಿ ದ್ವೈತಾದ್ವೈತಗಳ ಸಮನ್ವಯವಿದೆ 'ಸಂಸಾರ ದಶಾಯಾಂ ಭೇದಃ ಮೋಕ್ಷ ದಶಾಯಾಮಭೇದಃ' ಕೇವಲ ದ್ವೈತ ಅಥವಾ ಕೇವಲ ಅದ್ವೈತ ಸಿದ್ಧಾಂತಗಳು ವ್ಯವಹಾರಕ್ಕೆ ವಿರೋಧವಾಗಿದ್ದು ಅನೇಕರಿಗೆ ಗ್ರಾಹ್ಯವಾಗಿಲ್ಲ. ಇವೆರಡರ ಸಮನ್ವಯವನ್ನೊಳಕೊಂಡದ್ದು ವೀರಶೈವ ವಿಶೇಷಾದ್ವೈತವು. ಈ ಸಿದ್ಧಾಂತವೇ ಅನುಭವಮಂಟಪದಲ್ಲಿ ಚರ್ಚೆಯಾಗಿ ಪುಷ್ಟಿಯನ್ನು ಹೊಂದಿತು. ಶೂನ್ಯಸಂಪಾದನೆಯೆಂಬ ಗ್ರಂಥವು ಈ ಸಿದ್ಧಾಂತವನ್ನು ಬೋಧಿಸುವದು. ಶರಣರ ಶ್ರೇಷ್ಠ ವಿಚಾರಗಳೇ ಇದರಲ್ಲಿ ಕನ್ನಡಿಯೊಳಗಿನ ಪ್ರತಿಬಿಂಬಗಳಂತೆ ಒಡಮೂಡಿವೆ. ಶೂನ್ಯಸಂಪಾದನೆಯು ವೀರಶೈವ ಸಂಸ್ಕೃತಿಯ ಸರ್ವಸ್ವವನ್ನು ವರ್ಣಿಸುವ ಗ್ರಂಥವೆಂದು ಹೇಳಿದರೆ ಅತಿಶಯೋಕ್ತಿಯಾಗಲಾರದು.

---

## ಅರ್ಜುನವಾಡದ ಶಿಲಾಶಾಸನದಲ್ಲಿರುವ

# ಶ್ರೀ ಬಸವೇಶ್ವರನ ವಂಶಜರ ವಿಚಾರವು.

(ಲೇಖಕರುಃ— ಶ್ರೀ ಬಿ. ಎನ್. ಮಲ್ಲಪ್ಪ, ಬಿ. ಎ. ಎಲ್. ಎಲ್. ಬಿ.
ಡಿಸ್ಟ್ರಿಕ್ಟ ಜಡ್ಜ, ಬೆಂಗಳೂರು.)

ಶ್ರೀ ಬಸವೇಶ್ವರನ ಮತ್ತು ಅವರ ವಂಶಜರ ವಿಷಯದಲ್ಲಿ ಬೆಳಕನ್ನು ಬೀರುವ ಅರ್ಜುನವಾಡದ ಶಿಲಾಶಾಸನವನ್ನು ವಿಮರ್ಶಕರ ಅವಗಾಹನೆಗೆ ತರಲು ಶ್ರಮವಹಿಸಿದವರು ರಾ॥ ಬ॥ ಹಳಕಟ್ಟಿಯವರು ಶ್ರೀಮಾನ್ ಚನಮಲ್ಲಪ್ಪನವರು ಮತ್ತು ಡಾ॥ನಂದೀಮಠರವರು ಇವರಲ್ಲಿ ಶ್ರೀಮಾನ್ ಚನಮಲ್ಲಪ್ಪನವರುಮತ್ತು ಡಾ॥ ನಂದೀಮಠರವರು ಅರ್ಜುನವಾಡಕ್ಕೆ ಹೋಗಿ ಶಾಸನದ ಅಚ್ಚನ್ನು ತೆಗೆದುಕೊಂಡರು. ಇದನ್ನು ಓದಿದ ಪರಿಶ್ರಮ ಚನಮಲ್ಲಪ್ಪನವರದು. ರಾ॥ ಬ॥ ಹಳಕಟ್ಟಿಯವರ ಶಿವಾನುಭವ ತ್ರೈಮಾಸಿಕ ಸಂಚಿಕೆಯಲ್ಲಿ ಈ ಶಿಲಾಲೇಖವು ಅಚ್ಚುಹಾಕಲ್ಪಟ್ಟು ವಿಮರ್ಶೆಗೊಳಗಾಗಿದೆ. ರಾ॥ ಬ॥ ಹಳಕಟ್ಟಿಯವರಿಂದ ೧೯೩೦ನೆಯ ಇಸವಿಯಲ್ಲಿ ಪ್ರಸಿದ್ಧಿಸಲ್ಪಟ್ಟ "ಬಸವೇಶ್ವರನ ವಚನಗಳು" ಎಂಬ ಗ್ರಂಥದ ದ್ವಿತೀಯ ಮುದ್ರಣದ ೧ನೇ ಪರಿಶಿಷ್ಟದಲ್ಲಿ ವಿಮರ್ಶಾ

ತ್ಮಕವಾದ ಶಿಲಾಲೇಖವಿದು ಮುದ್ರಿಸಲ್ಪಟ್ಟಿದೆ. ೧೯೩೪ನೆಯ ಇಸವಿಯಲ್ಲಿ ಶ್ರೀ ಶಿವಮೂರ್ತಿಗಳ ಶರಣಸಾಹಿತ್ಯ ಪತ್ರಿಕೆಯಲ್ಲಿ ಅವರು ಪ್ರಸಿದ್ಧ ಮಾಡಿರುವ "ಬಸವೇಶ್ವರ ಚರಿತ್ರೆ'ಯೆಂಬ ಲೇಖನದಲ್ಲಿ ಈ ಶಾಸನದ ವಿಚಾರವು ಬಂದಿದೆ. " ಭಕ್ತಿ ಭಂಡಾರಿ ಬಸವಣ್ಣನವರು ಎಂಬ ಗ್ರಂಥದಲ್ಲಿ ಈ ಶಿಲಾಶಾಸನವು ಪ್ರಕಟಿಸಲ್ಪಟ್ಟಿದ್ದರೂ, ಅಲ್ಲಿ ಅದರ ವಿಮರ್ಶೆಯಾಗಿಲ್ಲ. ಅರ್ಜುನವಾಡದ ಶಿಲಾಶಾಸನವು ಶ್ರೀ ಬಸವಣ್ಣನವರ ವಿಷಯವಾಗಿಯೂ, ಅವರ ವಂಶದ ವಿಷಯವಾಗಿಯೂ, ಬಹಳ ಬೆಳಕನ್ನು ಬೀರುವುದೆಂದು ಮೊದಲಿನಿಂದಲೂ ವಿಮರ್ಶಕರಿಗೆ ಮನವರಿಕೆಯಾದ ವಿಷಯವಾದರೂ, ಇದು ಹೆಚ್ಚು ವಿಮರ್ಶೆಗೆ ಬರದಿರುವುದು ದುರ್ದೈವವಾಗಿದೆ. ಹೀಗಿರುವಲ್ಲಿ, ವಿಚಾರಪರರಾದ ಶ್ರೀ ಕಪಟರಾಳ ಕೃಷ್ಣರಾಯರು ಈ ಶಾಸನವನ್ನು ವಿಚಾರರಂಗಕ್ಕೆಳೆದು ಉಪಕಾರ ಮಾಡಿದ್ದಾರೆ. ಪುನರ್ವಿಮರ್ಶೆಯ ದೃಷ್ಟಿಯಿಂದ ವಿಚಾರರಂಗದಲ್ಲಿ ಅವರ ಪಾತ್ರವು ಎಲ್ಲರ ಮೆಚ್ಚುಗೆಗೆ ಅರ್ಹವಾಗಿದೆ; ಅಲ್ಲದೆ ಅವರ ವಿಮರ್ಶೆಯು ಹೆಚ್ಚು ಪರಾಮರ್ಶೆಗೆ ಪ್ರಚೋದನಕಾರಿಯೂ ಆಗಿದೆ. ಶಿಲಾಲೇಖದಲ್ಲಿ ಸವೆದು ಹೋದ ಅಕ್ಷರಗಳು ಯಾವುವೆಂಬುದನ್ನು ಸೂಚಿಸಿದ ನಂತರ ಅದೇ ಸರಿಯೆಂದು ಸಾಧಿಸದೆ " ನಾನು ಸೂಚಿಸಿದ ಅಕ್ಷರಗಳು ತಪ್ಪಿರಬಹುದು. ವಿದ್ವಾಂಸರೂ, ಕವಿಗಳೂ, ತಿದ್ದಿಕೊಳ್ಳುವುದು" ಎಂದು ಹೇಳಿದ ಅವರ ನಮ್ರತೆಯು ಮಾರ್ಗದರ್ಶಕವಾಗಿದೆ. ವಿಮರ್ಶಕರ ಕೆಲಸವು ಅವರ ಪ್ರತಿಭೆಯನ್ನು ಇತರರಿಗೆ ತೋರಿಸುವುದರಲ್ಲಿ ಮುಕ್ತಾಯವಾಗಬಾರದು. ವಿಮರ್ಶೆಯಿಂದ ವಿಚಾರತರಂಗವೆದ್ದು ನಿಜಾಂಶವು ಹೊರಬಿದ್ದು ಉಪಕಾರವಾಗುವುದು ಮುಖ್ಯ. ರಾಯರ ಅಭಿಪ್ರಾಯಗಳಿಗೆ ವಿರುದ್ಧವಾದ ಅಭಿಪ್ರಾಯಗಳು ನನ್ನ ವಿಮರ್ಶೆಯಿಂದ ಹೊರಹೊಮ್ಮುವುದಾದರೂ, ಈ ಲೇಖನದ ವಿಷಯ ವಿಚಾರವಿನಿಮಯದಿಂದ ವಿದ್ವಾಂಸರೂ, ಕವಿಗಳೂ ಈ ಶಿಲಾಲೇಖ ವಿಷಯದಲ್ಲಿ ಸೂಚಿಸಿರುವುದಕ್ಕಿಂತಲೂ ಉತ್ತಮವಾದ ನಿರ್ಧಾರಗಳನ್ನು ಹೊರಗೆಡವಲು ಅವಕಾಶವುಂಟಾಗಲೆಂಬುದೇ ಈ ಲೇಖನದ ಉದ್ದೇಶ.

ಶಿಲಾಲೇಖನದಲ್ಲಿ ಶ್ರೀ ಬಸವೇಶ್ವರನ ಮತ್ತು ಅವನ ವಂಶಜರ ವಿಷಯದಲ್ಲಿ ಕೆಳಗೆ ಕಂಡ ಮೂರು ಕಂದ ಪದ್ಯಗಳೂ, ವಚನಭಾಗವೂ ಇವೆ.

[ಶ್ರೀ] ಮತ್ತರದವಾಡಿ ಮಧ್ಯಗ್ರಾಮ ಬಾಗೇವಾಡಿ ಪುರವರಾಧೀಶ್ವರ ಮಾದಿರಾಜನ ತನೂಜಂ ಬಸವರಾಜನ ಮಹಿಮೆಯೆಂತೆಂದಡೆ॥

ಮಂಗಳ ಕೀರ್ತಿ ಪುರಾತನ ।
ಜಂಗಮ - ಲಿಂಗೈಕಭಕ್ತಿ ನಿರ್ಭರ ಲೀಲಾ ॥
ಸಂಗಂ ಸಂಗನ ಬಸವಂ ।
ಸಂಗತಿಯುಂ ಮಾಳ್ಕೆ ಭಕ್ತಿಯೊಳಗನವರತಂ ॥

ಸಂಗನ ಬಸವನ ಅಘ್ರ... !
......ಗ್ರೈಕಂದೇವರಾಜ ಮುನಿಪನ ತನಯಂ ॥
ಜಂಗಮ ಪರುಸಂ...... ರ ।
ಸಂಗಂ ಪ್ರಿಯಸುತನೆನಿಪ್ಪ ಕಲಿದೇವರಸಂ ॥

ಕಲಿದೇವ ಮುನಿಪನಾತ್ಮಜ ।
ಸಲೆ ಮೂಜಗದೊಳಗೆ ಮೆರೆವ ಮಾನವದೇವಂ ॥
ಗೆಲಿದಂ ಆಸನ ಬೆಸನವಂ ।
ಛಲರಧಿಕಂ ಹಾಲಬಸವಿದೇವ ಮುನೀಸಂ ॥

ಸ್ವಸ್ತಿ ಸಮಸ್ತ ಭುವನಾಸ್ರೆಯಂ ಮಹಾಮಹೇಸ್ವರಂ ಕವಿಳಾಸ ಪುರವರಾಧೀಸ್ವರರುಂ ಸುವರ್ಣ್ನ ವಿಷಭಧ್ವಜಂ ತೇಸಶ್ತಿ ಪುರಾಥಪಾದಾರ್ಚ್ಚ ಕರುಂ ಮಹಾಲಿಂಗ ಜಂಗಮ ಪ್ರಸಾದ ನಿಯತರುಂ ಭಕ್ತಿ ಸಂಪನ್ನ ಶ್ರೀ ಬಸವರಾಜನಂ ನ್ವಯರುಮಪ್ಪ ಕಪಚಕ್ರ[ವ]ರ್ತ್ತಿ ವೀರ ವ್ರತಿ ಹಾಲಬಸವಿದೇವಂ ॥

ಮೇಲಿನ ಶಿಲಾಲೇಖನದ ಭಾಗದ ವಿಷಯದಲ್ಲಿ ರಾ॥ ಬ॥ ಹಳಕಟ್ಟಿಯವರ ಲೇಖನದ ಭಾಗದ ಸಂಗ್ರಹವು ಕೆಳಗಿನಂತಿದೆ.

ಈ ಶಾಸನದಿಂದ ಬಸವೇಶ್ವರನಿಗೆ ವಂಶಜರು ಇದ್ದರೆಂಬ ಸಂಗತಿಯು ಸ್ಪಷ್ಟವಾಗುತ್ತದೆ....... ಈ ಶಿಲಾಶಾಸನದ ಅಚ್ಚಿನಲ್ಲಿ ಈ ಹೆಸರುಗಳಿದ್ದ ಕಲ್ಲಿನ ಭಾಗದಲ್ಲಿ ತೂತುಗಳು ಬಿದ್ದುದರಿಂದ ಬಸವೇಶ್ವರ ವಂಶಜರಲ್ಲಿ ಈರ್ವರ ಹೆಸರುಗಳ ಗೊತ್ತಾಗವೆ ಉಳಿದಿವೆ. ಈ ಶಬ್ದಗಳು 'ಸಂಗನ ಬಸವನ ಅಗ್ರಜ' ಎಂದು ಇರಬಹುದು. ಅಗ್ರಜನೆಂದರೆ ಹಿರಿಯಮಗನೆಂಬ ಒಂದು ಅರ್ಥವು. ಆದ್ದರಿಂದ ಬಸವೇ

ಶ್ವರನಿಗೆ ಒಬ್ಬನಿಗಿಂತಲೂ ಹೆಚ್ಚಿಗೆ ಮಕ್ಕಳು ಇರಬಹುದೆಂಬ ಊಹೆಗೆ ಆಸ್ಪದವಿದೆ. ಬಸವೇಶ್ವರನ ಹಿರಿಯಮಗನ ಮಗನು ಅಂದರೆ ಮೊಮ್ಮಗನ ಹೆಸರು ದೇವರಾಜನೆಂದು ಇದ್ದುದಾಗಿ ಗೊತ್ತಾಗುತ್ತದೆ.......... ಈ ದೇವರಾಜನ ಮಗನ ಹೆಸರು ಶಿಲಾಲೇಖನದಲ್ಲಿ ಅಳಿಸಿ ಹೋಗಿದೆ. ಆದರೆ ಆತನು 'ಜಂಗಮ ಪರುಷ' ಅಂದರೆ ಶ್ರೇಷ್ಠನಾದ ಜಂಗಮನೆಂದು ವರ್ಣಿಸಲ್ಪಟ್ಟಿದ್ದಾನೆ. ಈತನ ಪ್ರಿಯಸುತನು ಕಲಿದೇವ ಅರಸನೆಂದು ಇಲ್ಲಿ ಹೇಳಲ್ಪಟ್ಟಿದೆ. ಈತನ ವರ್ಣನಾತ್ಮಕ ಭಾಗವಾದರೂ ಶಾಸನದಲ್ಲಿ ಹೊರಟು ಹೋಗಿದೆ. ಈ ಕಲಿದೇವ ಮಗನ ಹೆಸರು ಹಾಲಬಸವಿದೇವ ಮುನೀಶ್ವರನು."

ಮೇಲ್ಕಂಡ ರಾ॥ ಬ॥ ಹಳಕಟ್ಟಿಯವರ ವಿಮರ್ಶೆಯ ಸಂಗ್ರಹವನ್ನು ಕೊಟ್ಟು, ಶ್ರೀಯುತ ಕೃಷ್ಣರಾಯರು ಹೇಗೆ ರಾ. ಬ. ಹಳಕಟ್ಟಿಯವರ ಅಭಿಪ್ರಾಯ ಪ್ರಕಾರ ಹಾಲಬಸವಿದೇವನು ಶ್ರೀ ಬಸವೇಶ್ವರ ಮೊದಲುಗೊಂಡು ಮುಂದೆ ಆರನೆಯ ತಲೆಯವನಾಗುವನು ಎಂಬುದನ್ನು ತೋರಿಸಿರುವರು. ದೇವರಾಜ ಮುನಿಪನು ಸಂಗನಬಸವನ ಮೊಮ್ಮಗನು; ಹಾಲಬಸವಿದೇವನು ಕಲಿದೇವರಸನ ಮಗನೆಂಬುದು ರಾ. ಬ. ಹಳಕಟ್ಟಿಯವರ ಅಭಿಪ್ರಾಯ. ಅವರು ಅಗ್ರಜನೆಂಬ ಪದಕ್ಕೆ ಹಿರಿಯಮಗನೆಂದು ಅರ್ಥಮಾಡಿದ್ದಾರೆ. ಆದರೆ ಶ್ರೀಯುತ ಕೃಷ್ಣರಾಯರು ಹೇಳುವಂತೆ ಅಗ್ರಜನೆಂಬ ಪದಕ್ಕೆ ಅಣ್ಣನೆಂಬುದು ರೂಢಿಯಲ್ಲಿರುವ ಅರ್ಥವು. ಅಗ್ರಜನೆಂದರೆ ಮೊದಲು ಹುಟ್ಟಿದವನೆಂದರ್ಥವಾಗುವುದು ನಿಜ. ಆದರೆ ಇದರಿಂದ ಅಗ್ರಜನೆಂದರೆ ಹಿರಿಯ ಮಗನೆಂದು ಅರ್ಥವಾಗುವುದಿಲ್ಲವೇ? ಎಂಬ ಪ್ರಶ್ನೆಯು ಏಳುವುದಿಲ್ಲ. ಏಕೆಂದರೆ, "ರೂಢಿರ್ಯೋಗಮಪಹರತಿ" ಎಂಬ ಆಧಾರವಿರುವುದರಿಂದ ರೂಢಿಯ ಅರ್ಥವನ್ನು ಬಿಟ್ಟು, ವಂಶವನ್ನು ಹೇಳುವ ಈ ಶಾಸನ ಭಾಗದಲ್ಲಿ ಬೇರೆ ಅರ್ಥದಲ್ಲಿ ಈ ಪದವು ಉಪಯೋಗಿಸಲ್ಪಟ್ಟಿದೆಯೆನ್ನಲಾಗುವುದಿಲ್ಲ. ಈ ವಿಷಯದಲ್ಲಿ ಶ್ರೀಯುತ ಕೃಷ್ಣರಾಯರ ಅಭಿಪ್ರಾಯವು ಮಾನನೀಯವಾದರೂ ಅವರು ಹೇಳುವ ಇತರ ವಿಷಯಗಳು ಇಷ್ಟು ಸುಲಭವಾಗಿ ಒಪ್ಪತಕ್ಕುವಲ್ಲ.

ಶಿಲಾಲೇಖನಗಳಲ್ಲಿ ಸವೆದುಹೋದ ಅಕ್ಷರಗಳು ಯಾವುವು ಎಂಬುದನ್ನು ತಿಳಿಯುವ ಮೊದಲು ಎಷ್ಟು ಅಕ್ಷರಗಳಷ್ಟು ಜಾಗಾದಲ್ಲಿ ಅಕ್ಷರ

ಗಳು ಸವೆದು ಹೋಗಿವೆ ಎಂಬುದನ್ನು ಅಳತೆಮಾಡಿ ಲೇಖನವನ್ನು ಓದಿದವರು ತಿಳಿಸಿದ್ದಲ್ಲಿ ಬಹಳ ಸಹಾಯವಾಗುತ್ತಿದ್ದಿತು. ಸವೆದು ಹೋದ ಅಕ್ಷರಗಳ ಭಾಗಗಳೇನಾದರೂ ಕಂಡುಬಂದಿದ್ದಲ್ಲಿ ಆದರ ವಿಚಾರವು ಅಕ್ಷರಗಳೇನೆಂಬುದನ್ನು ಕಂಡುಹಿಡಿಯುವುದರಲ್ಲಿ ಸಹಾಯವಾಗುತ್ತಿದ್ದಿತು. ಇಷ್ಟೇ ಅಕ್ಷರಗಳು ಸವೆದು ಹೋಗಿವೆಯೆಂಬುದು ತಿಳಿಯದೆ ಹೋದಲ್ಲಿ ಸವೆದು ಹೋದ ಬರವಣಿಗೆಯೇನೆಂಬುದನ್ನು ಊಹಿಸುವುದು ಕಷ್ಟವಾಗುವುದು. ಶ್ರೀಯುತ ಕೃಷ್ಣರಾಯರು ಕಂದ ಪದ್ಯಗಳಲ್ಲಿ ಕೆಲವು ಭಾಗಗಳು ಸವೆದು ಹೋಗಿರುವುದರಿಂದ ಆ ಪದ್ಯಗಳ ಪ್ರಸ್ತಾರಹಾಕಿಕೊಂಡು ಎಷ್ಟು ಅಕ್ಷರಗಳು ಸವೆದುಹೋಗಿವೆ ಎಂಬುದನ್ನು ನಿರ್ಧರಿಸಲು ಹೊರಟಿರುವುದು ಒಳ್ಳೆಯ ಮಾರ್ಗ. ಆದರೆ, ಅವರು ಹೇಳುವಂತೆ ಸಂಗನಬಸವನ ಎಂದು ಮೊದಲಾಗುವ ಕಂದ ಪದ್ಯದ ಮೊದಲನೆಯ ಪಾದದ ಒಂದು ಮಾತ್ರೆಯ ಅಕ್ಷರವೂ ಎರಡನೆಯ ಪಾದದಲ್ಲಿ ಸೊನ್ನೆಯಿಂದ ಕೂಡಿದ ಹ್ರಸ್ವಾಕ್ಷರವೊಂದು ಮಾತ್ರ ಸವೆದುಹೋಗಿದೆಯೆಂಬುದು ಸರಿಯಾದರೂ ಮೂರನೆಯ ಪಾದದಲ್ಲಿ ಒಂದು ಮಾತ್ರೆಯ ಮೂರು ಅಕ್ಷರಗಳೇ ಸವೆದು ಹೋಗಿವೆಯೆಂದು ನಿರ್ಧರಿಸಿರುವುದನ್ನು ಒಪ್ಪಲಾಗುವುದಿಲ್ಲ.

ಅವರು ಹೇಳಿರುವಂತೆ

"ಮೊದಲನೆಯ ಪದ್ಯದ ಪ್ರಥಮ ಚರಣದ ಕೊನೆಯಲ್ಲಿ ಒಂದು ಮಾತ್ರೆಯ ಲಘು ಅಕ್ಷರವು ಮತ್ತು ಎರಡನೆಯ ಚರಣದ ಪ್ರಾರಂಭದಲ್ಲಿ ಅನುಸ್ವಾರಯುಕ್ತ ಲಘು ವ್ಯಂಜನವು ಹೀಗೆ ಒಟ್ಟು ಎರಡೇ ಲಘು ಅಕ್ಷರಗಳು ಅಳಿಸಿಹೋಗಿವೆ. ಅನುಸ್ವಾರದಿಂದ ಕೂಡಿದ ಒಂದು ಗುರು (–) ಮತ್ತು ಒಂದು ಲಘು (∪) ಎರಡು ಮಾತ್ರೆಗಳ ಎರಡು ಅಕ್ಷರಗಳು ಬೇಕಾಗುವುವು."

ಇದು ಸರಿ. ಆದರೆ ಮುಂದೆ ಹೀಗೆ ಹೇಳುವರು.

"ಮೂರನೆಯ ಚರಣದ ಕೊನೆಯ ಭಾಗದಲ್ಲಿ ನಾಲ್ಕು ಅಕ್ಷರಗಳಿದ್ದು, ಮೂರು ಲಘು ಅಕ್ಷರಗಳು ಮಾತ್ರ ಲೋಪವಾಗಿವೆ. ಈ ರೀತಿ ಊಹಿಸಲು ಕಾರಣವೇನೆಂದರೆ ಪ್ರತಿಯೊಂದು ಪಾದದಲ್ಲಿ ಕವಿಯು ನಾಲ್ಕು ಲಘು ಅಕ್ಷರಗಳ ಗಣವನ್ನು ಸಾಧಿಸಿರುವನು. ಮೊದಲನೆಯ

ಪಾದದ ಎರಡನೆಯ ಸ್ಥಾನ, ಎರಡನೆಯ ಪಾದದ ನಾಲ್ಕನೆಯ ಸ್ಥಾನ, ಮೂರನೆಯ ಪಾದದ ಮೂರನೆಯ ಗಣದ ಸ್ಥಾನ, ನಾಲ್ಕನೆಯ ಪಾದದ ಎರಡನೆಯ ಸ್ಥಾನಗಳಲ್ಲಿ ಕವಿಯು ಬಿಡದೆ ನಾಲ್ಕು ಅಕ್ಷರಗಳ ಗಣಗಳನ್ನು ಬಳಸಿರುವನು. ಆದುದರಿಂದ ಮೊದಲನೆಯ ಪದ್ಯದ ಮೂರನೆಯ ಪಾದದ ಕೊನೆಯ ಗಣವು ನಾಲ್ಕು ಅಕ್ಷರದ್ದೇ ಆಗಿದೆ ಎಂದು ಸಂಕೋಚವಿಲ್ಲದೆ ಊಹಿಸಿಕೊಳ್ಳಬಹುದು."

ಶ್ರೀಯುತ ಕೃಷ್ಣರಾಯರ ಈ ವಾದದ ಸರಣಿಯು ಸಾಧುವಲ್ಲವೆಂಬುದನ್ನು ಸುಲಭವಾಗಿ ತೋರಿಸಿಕೊಡಬಹುದು. ಕಲಿದೇವ ಎಂದು ಮೊದಲಾಗುವ ಈ ಶಾಸನದ ಕಂದ ಪದ್ಯದಲ್ಲಿ ಮೊದಲನೆಯ ಮೂರು ಪಾದಗಳಲ್ಲಿಯೂ ಸಹ ಮೊದಲನೆಯ ಗಣದಲ್ಲಿ ಒಂದು ಮಾತ್ರೆಯ ಎರಡು ಅಕ್ಷರಗಳು ಮೊದಲು ಬಂದು ಎರಡು ಮಾತ್ರೆಯ ಅಕ್ಷರವೊಂದು ಕೊನೆಯಲ್ಲಿರುವುದು. ಕಲಿದೇ, ಸಲೆಮೂ, ಗೆಲಿದಂ, ಇವು ಮೇಲೆ ಹೇಳಿದ ಮೊದಲನೆಯ ಮೂರು ಪಾದದ ಮೊದಲ ಗಣಗಳು. ನಾಲ್ಕನೆಯ ಪಾದದ ಮೊದಲನೆಯ ಗಣದ ಅಕ್ಷರಗಳು ಸವೆದು ಹೋಗಿದ್ದರೆ ರಾಯರ ವಾದದಂತೆ, ಒಂದು ಮಾತ್ರೆಯ ಎರಡು ಅಕ್ಷರಗಳೂ ಎರಡು ಮಾತ್ರೆಯ ಒಂದು ಅಕ್ಷರವು, ನಾಲ್ಕನೆಯ ಪಾದದ ಮೊದಲನೆಯ ಗಣದಲ್ಲಿರಬೇಕೆಂದು ಹೇಳಬೇಕಾಗುತ್ತದೆ. ಆದರೆ ನಾಲ್ಕನೆಯ ಪಾದದ ಮೊದಲನೆಯ ಗಣವು "ಛಲರಧಿ" ಎಂದಿದೆ. ಅದು ರಾಯರ ವಾದಕ್ಕೆ ವಿರುದ್ಧವಾಗಿ ಒಂದೊಂದು ಮಾತ್ರೆಯ ನಾಲ್ಕು ಅಕ್ಷರಗಳುಳ್ಳದ್ದಾಗಿದೆ. ಮೊದಲು ಒಂದು ಮಾತ್ರೆಯ ಎರಡು ಅಕ್ಷರಗಳು ಎರಡು ಮಾತ್ರೆಯ ಕೊನೆಯ ಅಕ್ಷರವುಳ್ಳ ಗಣವು ಆ ಪಾದದಲ್ಲೇ ಇಲ್ಲ. ಆದುದರಿಂದ ಸಂಗನಬಸವನ ಎಂದು ಮೊದಲಾಗುವ ಕಂದಪದ್ಯದಲ್ಲಿ ಒಂದು, ಎರಡು, ನಾಲ್ಕನೆಯ ಪಾದದಲ್ಲಿ ನಾಲ್ಕು ಮಾತ್ರೆಯ ನಾಲ್ಕು ಅಕ್ಷರಗಳುಳ್ಳ ಒಂದೊಂದು ಗಣವಿದ್ದ ಮಾತ್ರಕ್ಕೆ ಆ ಪದ್ಯದ ಮೂರನೆಯ ಪಾದದಲ್ಲಿಯೂ ಅಂತಹ ಗಣವಿರಬೇಕೆಂಬ ವಾದವು ಅದೇ ಕಾರಣದಿಂದ ಅಳಿಸಿಹೋದ ಅಕ್ಷರಗಳು ಒಂದೊಂದು ಮಾತ್ರೆಯ ಮೂರು ಅಕ್ಷರಗಳಾಗಿದ್ದು ಅಳಿಸಿಹೋಗದೆ ಇರುವ "ರ" ಎಂಬ ನಾಲ್ಕನೆ ಅಕ್ಷರದೊಡನೆ ಸೇರಿ ಒಂದೊಂದು ಮಾತ್ರೆಯ ನಾಲ್ಕು ಅಕ್ಷರಗಳ ಗಣವಾಗುವುದೆಂಬ ವಾದವೂ ಸರಿ

ಯಲ್ಲಿ. ಅಳಿಸಿಹೋದ ಅಕ್ಷರಗಳು ಅವರು ಸೂಚಿಸುವ 'ಶರಣ ಅಥವ ಬಕುತ' ಎಂದಿರದೆ 'ಭಕ್ತ' ಎಂದಿದ್ದರೂ ತಪ್ಪಾಗುವುದಿಲ್ಲ, ಅಳಿಸಿಹೋದ ಅಕ್ಷರಗಳು ಎಂತಹವು ಎಂಬ ವಿಷಯದಲ್ಲಿ ಈ ಅಭಿಪ್ರಾಯವು ವಿಮರ್ಶಾರ್ಹವಾಗಿದೆ.

ಕಲ್ಲುಕುಟಿಕನು ಅಕ್ಷರಗಳನ್ನು ಕೆತ್ತುವುದರಲ್ಲಿ ತಪ್ಪು ಬರೆದಿರುವನೆಂಬುದು ಅವಗಾಹನೆಗೆ ತೆಗೆದುಕೊಳ್ಳುವ ವಿಷಯವೇ. ಆದರೆ ಅನಾವಶ್ಯಕವಾಗಿ ತಿದ್ದಲು ಹೋಗುವುದು ಉಚಿತವಲ್ಲ. 'ಮುನೀಸಂ' ಎಂಬುದು 'ಮುನೀಶಂ' ಎಂದಿರಬೇಕೆಂಬುದು ಸ್ಪಷ್ಟ. ಹಾಗೆಯೇ 'ಅಘ' ಎಂದು ಮೊದಲಾಗುವ ಯಾವ ಪದದ ಅಕ್ಷರಗಳನ್ನು 'ಸಂಗನ ಬಸವನ' ಎಂಬ ಪದಗಳ ನಂತರ ಸೇರಿಸಲಾಗುವುದಿಲ್ಲ. ಆದುದರಿಂದ ಆ ಪದವು ಯಾವುದೇ ಇರಲಿ ಅಗ್ರ ಎಂಬ ಅಕ್ಷರಗಳಿಂದ ಪ್ರಾರಂಭವಾಗಬೇಕಾಗುವುದು. ಅಗ್ರಜ, ಅಗ್ರಗ, ಅಗ್ರಣಿ ಎಂಬ ಪದಗಳನ್ನು ಸಲಹೆ ಕೊಡಬಹುದು. ಹಾಗೆಯೇ ಜಂಗಮ ಪರುಸಂ ಎಂಬಲ್ಲಿ 'ಸಂ' ಎಂಬ ಅಕ್ಷರವು 'ಷಂ' ಎಂದು ಇರಬೇಕಾದುದು ಸ್ಪಷ್ಟವು ಎಂದರೆ 'ಜಂಗಮ ಪರುಷಂ' ಎಂದು ಓದಿಕೊಳ್ಳಬೇಕಾಗುವುದು. ಆದರೆ ಶ್ರೀಯುತ ಕೃಷ್ಣರಾಯರ ತಿದ್ದುಪಡಿಯಂತೆ 'ಜಂಗಮ ಪುರಷಂ' ಎಂದು ಬದಲಾಯಿಸಿಕೊಳ್ಳುವುದು ಅನಾವಶ್ಯಕ. ಹಾಗೆ ಅನಾವಶ್ಯಕವಾಗಿ 'ಪ' ಎಂಬ ಅಕ್ಷರವನ್ನು 'ಪು' ಎಂದು ಬದಲಾಯಿಸಿಕೊಳ್ಳುವುದರಿಂದ ಲಾಭವೇನೂ ಇಲ್ಲ. ಜಂಗಮನೆಂದ ಮೇಲೆ ಅವನು ಪುರುಷನೆಂದು ಸೇರಿಸಿ ಹೇಳಬೇಕಾಗಿಲ್ಲ. ಪರುಷವು ಮುಟ್ಟಿದುದನ್ನು ಚಿನ್ನ ಮಾಡುವಂತೆ ಜಂಗಮರನ್ನು ಉದ್ಧಾರ ಮಾಡುವವನು ಜಂಗಮ ಪರುಷನು. ಅಥವಾ ಜಂಗಮರಲ್ಲಿ ಪರುಷದಂತೆ ಶ್ರೇಷ್ಟನೆಂದಾದರೂ ರಾ॥ ಬ॥ ಹಳಕಟ್ಟಿಯವರು ಹೇಳಿರುವಂತೆ ಅರ್ಥ ಮಾಡಬಹುದು. ಪರುಷ ಎಂಬ ಪದವು ವಚನಗಳಲ್ಲಿ ಅನೇಕ ವೇಳೆ ಬರುವುದು. ಆದುದರಿಂದ ರಾಯರ ಅಭಿಪ್ರಾಯದಂತೆ ಪುರುಷನೆಂದು ಬದಲಾಯಿಸುವುದು ಅವಶ್ಯಕವೇ ಎಂಬುದು ವಿಚಾರಾರ್ಹವಾಗಿದೆ.

ಕವಿಯ ಶಕ್ತಿಯೂ, ಶೈಲಿಯೂ, ಸವೆದುಹೋದ ಅಕ್ಷರಗಳೇನೆಂಬುದನ್ನು ಕಂಡುಹಿಡಿಯುವುದರಲ್ಲಿ ಸಹಾಯಕವಾಗುವುವು. ಕವಿಯ ವಿಷಯದಲ್ಲಿ ಶ್ರೀಯುತ ರಾಯರು ಕೆಳಗೆ ಕಂಡಂತೆ ಬರೆದಿರುವರು.

"ಕವಿಯು ಒಳ್ಳೆ ಸರಸವಾಗಿ ಪದ್ಯಗಳನ್ನು ಹೆಣೆದಿರುವನು. ಅವನ ನಿರರ್ಗಳವಾದ ಶೈಲಿಯನ್ನು ಮತ್ತು ಕವಿತಾ ಬಂಧವನ್ನು ಎಷ್ಟು ಕೊಂಡಾಡಿದರೂ ಸಾಲದು. ಪ್ರತಿಯೊಂದು ಪಾದದ ಕೊನೆಗೆ ಸಂಪೂರ್ಣ ಶಬ್ದವನ್ನು ಮುಗಿಸುವನು. ಹೊಸ ಶಬ್ದದ ಆರಂಭದಿಂದ ಪ್ರತಿಯೊಂದು ಚರಣವು ಮೊದಲಾಗಿ ಪ್ರಾಸವನ್ನು ಸಹಜವಾಗಿ ಸಾಧಿಸಿರುವನು. ಇದರಿಂದ ಕವಿಯ ಸಹಜತೆಯು ಹೊರಸೂಸುತ್ತದೆ. ಪ್ರಾಸಕ್ಕಾಗಿ ಶಬ್ದಗಳ ವಿಭಜನೆ ಯಾಗುವುದಾಗಲಿ ಅಥವಾ ಕಷ್ಟಪಟ್ಟದ್ದಾಗಲಿ ಕಂಡು ಬರುವುದಿಲ್ಲ."

ಇದು ರಾಯರ ಅಭಿಪ್ರಾಯ. ನನಗೇನೋ ಈ ವಿಷಯದಲ್ಲೂ ಭಿನ್ನಾಭಿಪ್ರಾಯವು ಅನಿವಾರ್ಯವೆನಿಸಿದೆ. ಪ್ರತಿಯೊಂದು ಪಾದದ ಕೊನೆಗೆ ಸಂಪೂರ್ಣ ಶಬ್ದದಿಂದ ಮುಗಿಸುವುದು ಅನೇಕ ವೇಳೆ ಹೊಸದಾಗಿ ಪದ್ಯರಚನೆಯನ್ನು ಮಾಡಲು ಅಕ್ಷರಗಳನ್ನು ಜೋಡಿಸುವವರಲ್ಲಿ ಹೆಚ್ಚು ಕಂಡುಬರುವುದು. "ಸಂಗನ । ಬಸವನ । ಅಗ್ರಜ" ಎಂಬ ಪಾದವು ಮೊದಲನೆಯ ಪಾದದಲ್ಲಿ ನಾಲ್ಕು ಮಾತ್ರೆಯ ಮೂರು ಗಣಗಳಿರಬೇಕೆಂಬುದನ್ನು ಸಾಧಿಸಲು ಹೊರಟು, ಸಂಧಿ ಮಾಡದೆ "ಅ" ಎಂಬ ಸ್ವರವನ್ನು ಉಳಿಸಿಕೊಂಡಂತಿದೆ. "ಗೆಲಿದಂ ಅಸನಬೆಸನವಂ" ಎಂಬ ಇನ್ನೊಂದು ಪದ್ಯದ ಪಾದವೂ ಹೀಗೆ ನೇದಂತಿದೆ. "ಛಲರಧಿಕಂ" ಎಂದು ಬರೆದಂತಿದೆ. ಇದರಿಂದ ಕವಿಯು ರಾಯರು ಕೊಂಡಾಡಿರುವಷ್ಟು ಮಟ್ಟದ ಶ್ರೇಷ್ಠ ಕವಿಯೆನ್ನಲಾಗುವದಿಲ್ಲ. 'ಅಗ್ರಜಂಗೆ' ಎಂದು ಬರೆಯದೆ ಅಗ್ರಜನಿಂಗೆ ಎಂದು ಬರೆದು ಏಕಂ ಎಂಬ ಪದವನ್ನು ಇದಕ್ಕೆ ಸೇರಿಸುವಾಗ 'ಅಗ್ರಜನಿಂಗೈಕಂ' ಎಂದು ರಾಯರ ಸಲಹೆಯಂತೆ ಕವಿಯು ಬರೆದಿರುವನಾದರೆ ಕವಿಯು ಸಾಮಾನ್ಯನೆಂಬುದೇ ರಾಯರ ವಿಮರ್ಶೆಗೂ ಸಹಾಯವಾಗುವಂತಿದೆ.

ಸವೆದು ಹೋದ ಅಕ್ಷರಗಳನ್ನು ಸೇರಿಸಿ ಕಂದ ಪದ್ಯವನ್ನು ರಾಯರು ಕೆಳಗೆ ಕಂಡಂತೆ ಬರೆದಿರುವರು.

ಸಂಗನ ಬಸವನ ಅಗ್ರಜ ।
ನಿಂಗೈತಂ ದೇವರಾಜ ಮುನಿಪನ ತನಯಂ ॥
ಜಂಗಮ ಪುರುಷಂ ಶರಣರ ।
ಸಂಗಂ ಪ್ರಿಯಸುತನೆನಿಪ್ಪ ಕಲಿದೇವರಸಂ ॥

ಶ್ರೀಯುತ ಕೃಷ್ಣರಾಯರು, ಸವೆದು ಹೋದ, ಅಕ್ಷರಗಳಾವು ವೆಂಬುದನ್ನು ಹೀಗೆ ಸೂಚಿಸಿದ ಮೇಲೆ ಅವರು ಸೂಚಿಸಿರುವ ಅಕ್ಷರ ಗಳು ತಪ್ಪಿರಬಹುದೆಂಬುದನ್ನೂ ತಿದ್ದಲಕಾಶವಿದೆಯೆಂಬುದನ್ನು ಒಪ್ಪಿ ವರಾದರೂ ಹೀಗೆ ತಿದ್ದಿದರೂ ದೇವರಾಜ ಮುನಿಪನು ಸಂಗನಬಸವನ ಅಣ್ಣನೆಂದರ್ಥ ಬರುವುದೇ ಹೊರತು ಅವನ ಮಗನಾಗಲೀ ಅಥವಾ ವೊಮ್ಮಗನಾಗಲಿ ಆಗಿರುವನೆಂಬ ಅರ್ಥ ಬರುವಂತೆ ತಿದ್ದಲಾಗುವುದಿ ಲ್ಲವೆಂಬುದೇ ಅವರ ವಾದದ ತಿರಳು. ಈ ವಾದವು ಒಪ್ಪತಕ್ಕುದಲ್ಲ. ಅವರು ಸೂಚಿಸಿರುವ ಅಕ್ಷರಗಳ ಸ್ಥಳದಲ್ಲಿ ಬೇರೆ ಅಕ್ಷರಗಳನ್ನು ಹಾಕಿ ಅವರು ಅರ್ಥ ಮಾಡುವ ರೀತಿಯಲ್ಲಿಯೇ ಅರ್ಥಮಾಡಿದರೆ ದೇವ ರಾಜ ಮುನಿಪನು ಸಂಗನಬಸವ ಮಗನೆಂಬುದನ್ನು ತೋರಿಸಬಹುದು. ಮೇಲಿರುವ ಪದ್ಯಕ್ಕೆ ಅವರು ಅರ್ಥ ಮಾಡಿರುವ ರೀತಿಯಿದು:—

"ಅಗ್ರಜ ಎಂದರೆ ಅಣ್ಣನೆಂದು ಅರ್ಥವಿಟ್ಟುಕೊಂಡು ಆ ಹಿರಿಯ ಅಣ್ಣನಿಗೆ ಒಬ್ಬನೆಯಾದ (ಎಕಂ ಎಂಬ ಪದದಿಂದ) ದೇವರಾಜ ಮುನಿಪನ ಮಗನಾದ, ಜಂಗಮ ಪುರುಷನಾದ ಶರಣರ ಅಥವ ಬಕುತರ ಸಂಗವುಳ್ಳವನಾದ, ಪ್ರಿಯಸುತನಾದ ಕಲಿದೇವರಸನಿಗೆ ಈ ಎಲ್ಲ ವಿಶೇಷಣಗಳು ಸರಿಯಾಗಿ ಹೊಂದಿಕೊಳ್ಳುವುವು. ಈ ರೀತಿ ಅರ್ಥ ಮಾಡಿದರೆ ವಂಶಕ್ರಮ ಈ ಕೆಳಗಿನಂತಾಗುವುದು.

ಸಂಗನಬಸವ = ಆತನ ಹಿರಿಯ ಅಣ್ಣದೇವರಾಜನು.

|

ಮಗ ಕಲಿದೇವರಸ

|

ಮಗಹಾಲಬಸವಿದೇವ"

ಆದರೆ ನಾನು ಸೂಚಿಸಿದಂತೆ ತಿದ್ದಿದ ಪದ್ಯವು ಹೀಗಾಗುವುದು.

ಸಂಗನ ಬಸವನ ಅಗ್ರಸು ।<br>
ತಂಗೈಕಂ ದೇವರಾಜ ಮುನಿಪನ ತನಯಂ ॥<br>
ಜಂಗಮ ಪುರುಷಂ ಶರಣರ ।<br>
ಸಂಗಂ ಪ್ರಿಯಸುತನೆನಿಪ್ಪ ಕಲಿದೇವರಸಂ ॥

ಹೀಗೆ ತಿದ್ದಿದ ಪದ್ಯಕ್ಕೆ ರಾಯರ ವಾಕ್ಯ ಸರಣಿಯನ್ನು ಅನು ಸರಿಸಿ ಕೆಳಗೆ ಕಂಡಂತೆ ಅರ್ಥಮಾಡಲು ಬರುವುದು. ಅಗ್ರಸುತ ಎಂದರೆ ಹಿರಿಯ ಮಗನೆಂದು ಅರ್ಥವಿಟ್ಟುಕೊಂಡು, ಆ ಹಿರಿಯ ಮಗ ನಿಗೆ ಒಬ್ಬನೆಯಾದ (ಏಕಂ ಎಂಬ ಪದದಿಂದ) ದೇವರಾಜನ ಮುನಿ ಪನ ಮಗನಾದ ಜಂಗಮ ಪುರುಷನಾದ. (ಶರಣರ ಅಥವ ಭಕುತರ) ಸಂಗವುಳ್ಳವನಾದ, ಪ್ರಿಯ ಸುತನಾದ ಕಲಿದೇವರಸನಿಗೆ ಈ ಎಲ್ಲ ವಿಶೇಷಣಗಳು ಸರಿಯಾಗಿ ಹೊಂದಿಕೊಳ್ಳುವುವು. ಈ ರೀತಿ ಅರ್ಥ ಮಾಡಿದರೆ ವಂಶಕ್ರಮವು ಈ ಕೆಳಗಿನಂತಾಗುವುದು.

ಸಂಗನ ಬಸವ

|

ಆತನ ಹಿರಿಯ ಮಗ ದೇವರಾಜ

|

ಮಗ ಕಲಿದೇವರಸ

|

ಹಾಲಬಸವಿದೇವ

ಆದರೆ ರಾಯರ ಸಲಹೆಯಂತೆ ಸರಿಪಡಿಸಿದ "ಸಂಗನ ಬಸವನ ಅಗ್ರಜನಿಂಗೈಕಂ ದೇವರಾಜ ಮುನಿಪನ ತನಯಂ" ಎನ್ನುವ ಪದಗ ಳಿಗಾಗಲಿ ಅವರ ವಾದಕ್ಕನುಸಾರವಾಗಿಯೇ ಸರಿಪಡಿಸಬಹುದಾದ "ಸಂಗನ ಬಸವನ ಅಗ್ರಸುತಂಗೈಕಂ ದೇವರಾಜ ಮುನಿಪನ ತನಯಂ" ಎಂಬ ಪದಗಳಿಗಾಗಲೀ ಸಮಂಜಸವಾದ ಅರ್ಥವನ್ನು ಹೇಳಲಾಗು ವುದಿಲ್ಲ. "ಸಂಗನ ಬಸವನ ಅಗ್ರಜನಿಂಗೆ" ಎಂಬ ಪದಗಳಿಗೂ "ದೇವ ರಾಜ ಮುನಿಪನ ತನಯಂ" ಎಂಬ ಪದಗಳಿಗೂ ಮಧ್ಯೆ ಏಕಂ ಎಂಬ ಪದವು ಬರುವುದರಿಂದ ದೇವರಾಜ ಮುನಿಪನು ಸಂಗನ ಬಸವನ ಅಗ್ರಜನೆಂಬ ಸಂಬಂಧ ಕಲ್ಪನೆಯಾಗುವುದಿಲ್ಲ. ಏಕಂ ಎಂಬ ಪದವಿ ಲ್ಲದಿದ್ದರೂ, ಸಂಗನ ಬಸವನ ಅಗ್ರಜನಿಗೆ ದೇವರಾಜ ಮುನಿಪನ ತನಯಂ ಎಂಬಲ್ಲಿ ಸಂಗನ ಬಸವನ ಅಗ್ರಜನು ದೇವರಾಜ ಮುನಿ ಪನೆಂದಾಗುವುದಿಲ್ಲ. ಒಂದು ಪಕ್ಷ, ಸಂಗನ ಬಸವನ ಅಗ್ರಜ ದೇವ ರಾಜ ಮುನಿಪನ ತನಯನೆಂದಾದರೂ ಇದ್ದಿದ್ದರೆ ಸಂಗನ ಬಸವನ

ಅಣ್ಣ ದೇವರಾಜ ಮುನಿಪನ ಮಗನೆಂದರ್ಥ ಮಾಡಬಹುದಾಗಿತ್ತು. ಆದರೆ ಅಗ್ರಜನಿಂಗೆ ಯೆಂಬ ಪದದ ಚತುರ್ಥಿ ವಿಭಕ್ತಿಯು. ಈ ಸಂಬಂ ಬಂಧವನ್ನು ತಪ್ಪಿಸುವುದು. ಆದುದರಿಂದ "ಅಗ್ರಜನಿಂಗೈಕಂ" ಎಂಬ ರಾಯರ ಸಲಹೆಯು ಒಪ್ಪತಕ್ಕದಲ್ಲ. ಅಲ್ಲದೆ ರಾಯರ ಸಲಹೆಗನು ಸಾರವಾಗಿರುವ "ಅಗ್ರಸುತಂಗೈಕಂ" ಎಂದಿಟ್ಟುಕೊಳ್ಳುವುದಾದರೂ ಗ್ರಾಹ್ಯವಲ್ಲ.

ಇಂತಹ ಸಲಹೆಗೆ ಆಧಾರವಾದ ಕಾರಣವನ್ನು ರಾಯರು ಹೀಗೆ ಕೊಟ್ಟಿರುವರು.

"ಮೊದಲಿನಿಂದ ಕೊನೆಯ ವರೆಗೆ ಇರುವ ಎಲ್ಲ ವಾಕ್ಯಗಳನ್ನು ಕಲಿದೇವರಸನ ವಿಶೇಷಣಗಳನ್ನಾಗಿ ಉಪಯೋಗಿಸಿರುವನು. ವಾಕ್ಯಗಳ ವಿಭಜನೆಯಿಂದ ಈ ಮಾತು ಸ್ಪಷ್ಟವಾಗುವಂತಿದೆ. ಉದಾಹರಣಾ ರ್ಥವಾಗಿ ದೇವರಾಜ ಮುನಿಪನ ತನಯಂ; ಜಂಗಮ ಪುರುಷಂ; ...ರ (ಶರಣರ ಅಥವ ಬಕುತರ) ಸಂಗಂ; ಪ್ರಿಯಸುತನಪ್ಪ ಕಲಿದೇ ವರಸಂ ಈ ಎಲ್ಲ ವಿಶೇಷಣಗಳಂತೆ ಮೊದಲನೇ ಪಾದದ ವಾಕ್ಯವಾ ದರೋ "ಸಂಗನ ಬಸವನ" ಅಗ್ರ...... "ಕಲಿದೇವರಸನ ವಿಶೇಷಣವಾ ಗಿಯೇ ಉಪಯೋಗಿಸಿರುವಂತೆ ಕಂಡುಬರುತ್ತದೆ." ರಾಯರ ಈ ವಾದವೂ ಸರಿಯಲ್ಲ. ಮೊದಲನೆಯದು ಹೊರತು ಉಳಿದ ವಿಶೇಷಣಗಳೂ ಕಲಿದೇ ವರಸನ ವಿಶೇಷಣಗಳಾದರೂ "ಸಂಗನ ಬಸವನ ಅಗ್ರಜ ನಿಂಗೇಕಂ" ಎಂಬುದು ಹೇಗೆ ಕಲಿದೇವರಸನ ವಿಶೇಷಣವಾಗುವುದೆಂಬುದು ತಿಳಿ ಯುವುದಿಲ್ಲ. ಸಂಗನ ಬಸವನ ಅಣ್ಣನಿಗೆ ಏಕವಾದ ಕಲಿದೇವನೆಂದರೆ ಅರ್ಥವಾಗುವುದಿಲ್ಲ.

ಇಲ್ಲಿ ಏಕಂ ಎಂಬ ಪದವಾದರೂ ಎಲ್ಲಿದೆ ಐಕಂ ಎಂಬ ಪದವು ಕಲ್ಲು ಕುಟಿಕನು ತಪ್ಪಾಗಿ ಬರೆದುದೆಂದು ರಾಯರು ಬರೆದಿಲ್ಲ. ಗ್ರಾಮ್ಯ ವನ್ನಾಡುವ ಕಲ್ಲುಕುಟಿಕನು "ಏಕಂ" ಎಂದು ಸುಲಭವಾಗಿ ಉಚ್ಚಾರ ವಾಗುವ ರೂಪವನ್ನು ಬಿಟ್ಟು "ಐಕಂ" ಎಂದು ಉಚ್ಚರಿಸುವುದಿಲ್ಲ. ಇವೆಲ್ಲವನ್ನು ಆಲೋಚಿಸಿದರೆ ಸವೆದ ಅಕ್ಷರಗಳು "ಜನಿಂ" ಎಂಬುವೂ ಅಲ್ಲ, "ಸುತಂ" ಎಂಬುವೂ ಅಲ್ಲ. ನನಗೆ ಸರಿಯೆಂದು ತೋಚುವ ಅಕ್ಷರಗಳನ್ನು ಜೋಡಿಸಿದರೆ ಪದಾರ್ಥವು ಕೆಳಗೆ ಬರದಂತಾಗುವುದು.

ಸಂಗನ ಬಸವನ ಅಗ್ರಜ ।
ಲಿಂಗೈಕ್ಯಂ ದೇವರಾಜ ಮುನಿಪನ ತನಯಂ ॥

ನನ್ನ ಅಭಿಪ್ರಾಯದ ಪ್ರಕಾರ 'ಕ್ಯಂ' ಎಂಬ ಅಕ್ಷರದ "ಯ" ಒತ್ತನ್ನು ಕಲ್ಲು ಕುಟಿಕನು ಬಿಟ್ಟಿದ್ದಾನೆ. ಬರಹದಲ್ಲಿಯೂ ಇನ್ನೊಬ್ಬರ ಬರವಣಿಗೆಯನ್ನು ಪ್ರತಿಮಾಡುವುದರಲ್ಲಿಯೂ ಅಥವ ಕೆತ್ತುವುದರಲ್ಲಿಯೂ ಒಂದಕ್ಷರವನ್ನೋ ಅಥವ ಅದರ ಒತ್ತನ್ನೋ ಮರೆತು ಬಿಡುವುದು ಸಹಜ. "ಅಗ್ರಜನಿಂಗೇಕಂ'' ಎಂಬುದನ್ನು ಕೆತ್ತುವಾಗ 'ಗೆ' ಪಕ್ಕದ ದೀರ್ಘವನ್ನು ತೆಗೆದುಹಾಕಿ ಅದರ ಬದಲು ಐತ್ವವನ್ನು ಕೊಟ್ಟನೆಂಬುದಕ್ಕಿಂತಲೂ "ಲಿಂಗೈಕ್ಯ"ನೆಂಬ ಪದದಲ್ಲಿ "ಯ" ಒತ್ತನ್ನು ಹಾಕಲು ಮರತನೆಂಬುದೇ ಸಾಧುವಾದುದೆಂದು ನನಗೆ ತೋರುವುದು. ಅಲ್ಲದೆ ಲಿಂಗೈಕ್ಯನೆಂಬ ಪದವು ವೀರಶೈವರ ಪಾರಿಭಾಷಿಕ ಪದವು. ವಂಶವೃಕ್ಷದಲ್ಲಿ ಹಿಂದಿನವರ ವಿಷಯವನ್ನು ಬರೆಯುವಾಗ ಸ್ವಭಾವವಾಗಿ ಬರುವ ಪದವಿದು. ಅಲ್ಲದೆ ಕವಿಯು ಪ್ರತಿಪಾದದ ಕೊನೆಯಲ್ಲಿ ಪೂರ್ಣಪದವನ್ನು ಉಪಯೋಗಿಸಿ ಪ್ರತಿಪಾದದ ಮೊದಲು ಪೂರ್ಣಪದದಿಂದ ಪ್ರಾರಂಭಿಸುವನೆಂಬುವ ರಾಯರ ವಾದದಂತೆ ನೋಡಿದರೆ ಮೊದಲನೆಯ ಪಾದವನ್ನು ಅಗ್ರಜನೆಂಬ ಪೂರ್ಣಪದದಿಂದ ಮುಗಿಸಿ "ಲಿಂಗೈಕ್ಯಂ" ಎಂಬುವ ಪೂರ್ಣಪದದಿಂದ ಎರಡನೆಯ ಪಾದವನ್ನು ಪ್ರಾರಂಭಿಸಿದಂತಾಗುತ್ತದೆ.

ಮೂಲದಲ್ಲಿರುವ "ಯ" ಒತ್ತನ್ನು ಸೇರಿಸುವುದು ಹೆಚ್ಚೆಂದರೆ "ಲಿಂಗೈಕಂ" ಎಂಬ ಪದವೇ ಸಾಕು. ಲಿಂಗೇ+ಏಕಃ = ಲಿಂಗೈಕಃ ಇದು ಕನ್ನಡದಲ್ಲಿ ಲಿಂಗೈಕಂ ಎಂದಾಗುವುದು. ಇದಕ್ಕೂ ತಾತ್ಪರ್ಯದಿಂದ ಲಿಂಗೈಕ್ಯಂ ಎಂಬ ಪದದ ಅರ್ಥವೇ ಬರುವುದು. ಲಿಂಗವೇ ಪ್ರಧಾನವಾಗಿ ಉಳ್ಳವನು. ಲಿಂಗವೊಂದರಲ್ಲಿಯೇ ನಿಷ್ಠೆಯುಳ್ಳವನು ಎಂಬ ಅರ್ಥವನ್ನಾದರೂ ಮಾಡಬಹುದು. ಅಲ್ಲದೆ 'ಲಿಂಗೈಕಂ" ಎಂಬ ಪದವು ಶಾಸನದ ಭಾಗದಲ್ಲಿಯೂ ಬಂದಿದೆ. ಮೇಲಾಗಿ "ಲಿಂಗೈಕ್ಯಂ'' ಅಥವ "ಲಿಂಗೈಕಂ" ಎಂಬ ಪದಗಳಲ್ಲಿ ಯಾವುದಾದರೂ ಸಹ ಅದು ಹಿಂದು ಮುಂದಿನ ಪದಗಳೊಡನೆ ಹೊಂದಿಕೊಂಡು ಸಮಂಜಸವಾದ ಅರ್ಥಕ್ಕೆ ಪೋಷಕವಾಗುತ್ತದೆ.

ಇನ್ನು ಈ ಕಂದ ಪದ್ಯದ ಮೂರನೆಯ ಪಾದದಲ್ಲಿ ಸವೆದು ಹೋಗಿರುವ ಅಕ್ಷರಗಳು ಯಾವುವೆಂಬುದನ್ನು ಆಲೋಚಿಸಬೇಕಾಗಿದೆ. ರಾ॥ ಬ॥ ಹಳಕಟ್ಟಿಯವರು ಈ ವಿಷಯದಲ್ಲಿ ಕೆಳಗೆ ಕಂಡಂತೆ ಬರೆಯುವರು.

"ದೇವರಾಯನ ಮಗನ ಹೆಸರು ಶಿಲಾಲೇಖದಲ್ಲಿ ಅಳಿಸಿ ಹೋಗಿದೆ. ಆದರೆ ಆತನು "ಜಂಗಮ ಪರುಷ" ಎಂದರೆ ಶ್ರೇಷ್ಠನಾದ ಜಂಗಮ ಎಂದು ವರ್ಣಿಸಲ್ಪಟ್ಟಿದ್ದಾನೆ. ಈತನ ಪ್ರಿಯಸುತನು ಕಲಿದೇವರಸನು ಎಂದು ಹೇಳಲ್ಪಟ್ಟಿದೆ. ಈತನ ವರ್ಣನಾತ್ಮಕವಾದ ಭಾಗವಾದರೂ ಶಾಸನದಲ್ಲಿ ಹೊರಟು ಹೋಗಿದೆ."

ರಾ॥ ಬ॥ ಹಳಕಟ್ಟಿಯವರ ಈ ಅಭಿಪ್ರಾಯದಂತೆ ಬಸವೇಶ್ವರನ ವಂಶದವನೊಬ್ಬನ ಹೆಸರೂ ಅವನ ವರ್ಣನೆಯೂ ಸವೆದು ಹೋಗಿವೆ. ಆದರೆ ಸವೆದು ಹೋಗಿರುವುದು ಮೂರು ಮಾತ್ರೆಯ ಎರಡು ಅಥವ ಮೂರು ಅಕ್ಷರ. ಇಷ್ಟರಲ್ಲಿ ಇದಷ್ಟು ಇರಲು ಸಾಧ್ಯವೇ? ಎಂಬ ಪ್ರಶ್ನೆ ಯೇಳುವುದು.

ಸಂಗನ ಬಸವನ ಅಘ್ರ– ।
–ಗ್ರೈಕಂ ದೇವರಾಜ ಮುನಿಪನ ತನಯಂ ॥
ಜಂಗಮ ಪರುಸಂ.........ರ ।
ಸಂಗಂ ಪ್ರಿಯಸುತನೆನಿಪ್ಪ ಕಲಿದೇವರಸಂ ॥

ವಿಮರ್ಶೆಗೆ ಅನುಕೂಲವಾಗಲೆಂದು ಮತ್ತೆ ಕಂದಪದ್ಯವನ್ನು ಶಾಸನದಲ್ಲಿರುವಂತೆ ಇಲ್ಲಿ ಕೊಟ್ಟಿದೆ. ಶ್ರೀಯುತ ಕೃಷ್ಣರಾಯರು ಹೇಳವುದಿದು:–

"ಮೂರನೆಯ ಚರಣದ ಕೊನೆಯ ಗಣದಲ್ಲಿ ಮೂರು ಲಘು ಅಕ್ಷರಗಳಿಂದ ದೇವರಾಜನ ಮಗನನ್ನು ಕಲ್ಪಿಸಲು ಶಕ್ಯವಿಲ್ಲ. ಏಕೆಂದರೆ ಕೊನೆಯ ಗಣದ ನಾಲ್ಕು ಅಕ್ಷರಗಳಲ್ಲಿ ಕೊನೆಯ ಅಕ್ಷರವಾದ ರಕಾರ, ಸಂಗಂ ಎಂಬ ಮುಂದಿನ ಪದಕ್ಕೆ ಸಂಬಂಧ ಸೂಚಕವಾಗಿದೆ."

ಶ್ರೀಯುತ ಹಳಕಟ್ಟಿಯವರು ಹೇಳುವಂತೆ ವರ್ಣನೆಯೂ, ಬಸವೇಶ್ವರ ವಂಶದವನ ಹೆಸರೂ ಇಲ್ಲಿ ಸವೆದು ಹೋಗಿರಲು ಸಾಧ್ಯವಿಲ್ಲ. ಅಂತಹ ಹೆಸರಾದರೂ ಇರಲು ಸಾಧ್ಯವಿಲ್ಲ. ವರ್ಣನೆಯು ಮಾತ್ರವಿರಲು ಸಾಧ್ಯ. ಸವೆದು ಹೋಗಿರುವುದು ವರ್ಣನಾಭಾಗವೇ ಎಂದು ಹೇಳಲು ಕಾರಣವಿದೆಯೆಂಬುದೇ ರಾಯರ ವಾದ. ಈ ವಾದವಾದರೂ

ಒಪ್ಪತಕ್ಕುದಲ್ಲ. ವರ್ಣನೆಗಿಂತಲೂ ಹೆಸರೊಂದು ಇಲ್ಲಿ ಹಾಕಲೇಬೇಕು. ದೇವರಾಜ ಮುನಿಪನ ತನಯಂ ಎಂದು ಮೊದಲು ಹೇಳಿ ಮತ್ತೆ ಸವೆದು ಹೋದ ಅಕ್ಷರಗಳುಳ್ಳ ಪದದ ಮುಂದೆ "ಪ್ರಿಯಸುತನೆನಿಪ್ಪ ಕಲಿದೇವರಸಂ" ಎಂದು ಬರೆದಿರುವುದನ್ನು ಮರೆಯಬಾರದು. ವಂಶ ವೃಕ್ಷವನ್ನು ಹೇಳುವ ಈ ಕಂದಪದ್ಯದಲ್ಲಿ ಎರಡು ಬಾರಿ ಮಗನೆಂದು ಅರ್ಥಬರುವ ಪದಗಳು ಬಂದಿರುವುದರಿಂದ ಎರಡು ತಲೆಯನ್ನು ಸೂಚಿಸುವ ಪದಗಳಿರಬೇಕೆಂಬುದು ಜ್ಞಾಪಕದಲ್ಲಿಡುವ ವಿಷಯ. ದೇವ ರಾಜ ಮುನಿಪನ ತನಯಂ ಜಂಗಮ ಪುರುಷಂ ಎಂದು ಹೇಳಿದುದಾಯಿತು. ಸವೆದು ಹೋದ ಅಕ್ಷರಗಳುಳ್ಳ ಪದದ ಮುಂದೆ ಮತ್ತೆ "ಪ್ರಿಯಸುತನೆನಿಪ್ಪ ಕಲಿದೇವರಸಂ" ಎಂದಿರುವುದರಿಂದ ದೇವ ರಾಜ ಮುನಿಪನ ತನಯನಾದ ಜಂಗಮಪುರುಷನಾದ ಕಲಿದೇವನ ತಂದೆಯಾದವನೊಬ್ಬನ ಹೆಸರು ಸವೆದು ಹೋದ ಅಕ್ಷರಗಳುಳ್ಳ ಪದ ದಲ್ಲಿರಬೇಕೆಂಬುದು ಸ್ಪಷ್ಟ.

ಆದರೆ ಶ್ರೀಯುತ ಕೃಷ್ಣರಾಯರ ಆಕ್ಷೇಪ "ಮೂರು ಲಘು ಅಕ್ಷರಗಳಿಂದ ದೇವರಾಜನ ಮಗನನ್ನು ಕಲ್ಪಿಸಲು ಶಕ್ಯವಿಲ್ಲ." ಎಂಬುದೇ ಆಗಿದೆ. ಪ್ರಯತ್ನ ಮಾಡಿದರೆ ಶ್ರೀಯುತ ಕಪಟರಾಳ್ ಕೃಷ್ಣರಾಯರಂತಹ ಮೇಧಾವಿಗಳಿಗೆ ಅದು ಅಷ್ಟು ಕಷ್ಟವಲ್ಲ. ಆದರೆ ಕವಿಯು ಪ್ರತಿಯೊಂದು ಪಾದದ ಮೊದಲು ಹೊಸಪದದಿಂದ ಪ್ರಾರಂಭ ಮಾಡಿಯೇ ಮಾಡು ತ್ತಿರುವನೆಂಬ ನಂಬುಗೆ ಹಾಗೆ ಪ್ರಯತ್ನ ಮಾಡಲು ಅವಕಾಶ ಕೊಡು ವುದಿಲ್ಲ. "ದನವುಂ ಕಡಿಕಡಿದು ಬಸದಿಯೊಳೆಸೆಯುತಿರ್ದರ್" ಎಂಬ ಕಂದ ಪದ್ಯದ ಕೊನೆಯ ಪಾದದ ಮೊದಲನೆಯ ಪದವು ಹಿಂದಿನ ಭಾಗವನ್ನು ಪೂರ್ಣಮಾಡುವುದನ್ನು ಹಿಮ್ಮೆಟ್ಟಿಸುತ್ತದೆ. "ಚಂ। ದನವುಂ ಕಡಿಕಡಿದು ಬಸದಿಯೊಳೆಸೆಯುತಿರ್ದರ್" ಎಂದು ಪೂರ್ಣಮಾಡಬಹು ದೆಂದು ಕೂಡಲೇ ಹೊಳೆಯುವುದಿಲ್ಲ. ಕಡಿಯಬಹುದಾದ ದನವೆಂಬ ಪ್ರಾಣಿವಾಚಕವಾದ "ದನ" ಎಂಬ ಶಬ್ದವು ಚಂದನ ಎಂಬ ಮತ್ತೊಂದು ಪದದ ಭಾಗವಾಗಿ 'ದನ' ಎಂಬ ಅಕ್ಷರಗಳಿರಬಹುದೆಂಬುದನ್ನು ಮರ ವೆಗೆ ತರುತ್ತದೆ. ಹೀಗೆಯೇ ಇಲ್ಲಿ "ಸಂಗಂ" ಎಂಬ ಪೂರ್ಣವಾದ ಅರ್ಥವುಳ್ಳ ಪದವು ಆ ಎರಡು ಅಕ್ಷರಗಳು ದೊಡ್ಡದೊಂದು ಪದದ ಭಾಗವಾಗಿರಬಹುದೆಂಬುದನ್ನು ಮರವೆ ಮಾಡುತ್ತದೆ. ಆದರೂ ದೇವ

ರಾಜ ಮುನಿಪನ ಮಗನೂ ಕಲಿದೇವರಸನ ತಂದೆಯೂ ಆದ ಜಂಗಮ ಪುರುಷನೆನ್ನಿಸಿಕೊಂಡವನ ಹೆಸರು ಸವೆದು ಹೋದ ಅಕ್ಷರಗಳುಳ್ಳ ಪದದಲ್ಲಿದೆ ಎಂಬುದು ನಿಶ್ಚಯವಾದ ಬಳಿಕ ಅಂತಹ ಹೆಸರುಗಳನ್ನು ಹುಡುಕುವುದು ಕಷ್ಟವಲ್ಲ. ಅಂತಹುದೊಂದು ಹೆಸರನ್ನು ಹಾಕಿದ ಕಂದಪದ್ಯವು ಹೀಗಾಗುವುದು.

ಸಂಗನ ಬಸವನ ಅಗ್ರಜ
ಲಿಂಗೈಕ್ಯಂ ದೇವರಾಜ ಮುನಿಪನ ತನಯಂ ॥
ಜಂಗಮ ಪುರುಷಂ ಬಸವರ ।
ಸಂಗಂ ಪ್ರಿಯಸುತನೆನಿಪ್ಪ ಕಲಿದೇವರಸಂ ॥

ಹೀಗೆ ದೇವರಾಜ ಮುನಿಪನ ತನಯನೂ ಜಂಗಮ ಪುರುಷನೂ ಆದ ಬಸವರಸನಿಗೆ ಪ್ರಿಯಸುತನು ಕಲಿದೇವರಸನೆಂದಾಗುವುದು. ಲಿಂಗರಸ, ದೇವರಸ, ನಾಗರಸ ಮೊದಲಾದ ಹೆಸರುಗಳೂ ಇಲ್ಲಿಗೆ ಸರಿಹೊಂದುವುದಾದರೂ ದೇವಾಂಶ ಪುರುಷನೆಂದು ಪವಾಡ ಪುರುಷ ಎಂದರೆ ಮಹಾತ್ಮನೆಂದು ಮಹಾತ್ಮಗಾಂಧಿಯಂತೆ ತನ್ನ ಜೀವಿತ ಕಾಲದಲ್ಲಿಯೇ ಪ್ರಸಿದ್ಧಿಪಡೆದ ಶ್ರೀ ಬಸವೇಶ್ವರನು ಅಪುತ್ರವಂತನಾಗಿ ಚಿಕ್ಕವಯಸ್ಸಿನಲ್ಲಿಯೇ ಲಿಂಗೈಕ್ಯನಾಗಲು ಅವನ ಅಣ್ಣನ ಮಗನಿಗೆ ಬಸವರಸನೆಂದು ಹೆಸರಿಡುವುದು ಸ್ವಭಾವ. ಇವನ ಮೊಮ್ಮಗನ ಹೆಸರು ಹಾಲಬಸವಿದೇವನ ಹೆಸರಿನಲ್ಲಿಯೂ ಬಸವೇಶ್ವರನ ಹೆಸರಿದೆ. ಇನ್ನು ಬಸವರಸನೆಂಬಲ್ಲಿ ಅರಸನೆಂಬ ಪದವಿರುವುದರಲ್ಲಿ ಆಶ್ಚರ್ಯವೇನೂ ಇಲ್ಲ. ಶಾಸನದಲ್ಲಿಯೇ "ಬಸವರಾಜನನ್ವಯರು" ಎಂದು ಹೇಳಿದೆ. ಬಸವೇಶ್ವರನ ತಂದೆಯ ಹೆಸರು ಮಾದಿರಾಜ, ಅಣ್ಣನ ಹೆಸರಾದರೋ ದೇವರಾಜ; ಇವನ ಮೊಮ್ಮಗನು ಕಲಿದೇವರಸ. ಆದುದರಿಂದ ಬಸವರಸನೆಂಬ ಪದವೇ ಗ್ರಾಹ್ಯವಾಗಿದೆ. ಇದಕ್ಕೆ ವಿರುದ್ಧವಾಗಿ ಸೂಚಿಸಲ್ಪಟ್ಟಿರುವ "ಶರಣರಸಂಗಂ" ಎಂಬ ಪದಕ್ಕಾದರೂ ಅರ್ಥವೇನು? ಸಂಗಂ ಎಂದರೆ ಸಹವಾಸ. ಶರಣರ ಸಂಗಂ ಎಂದರೆ ಶರಣರ ಸಹವಾಸವು. ಆದರೆ ಶ್ರೀಯುತ ಕೃಷ್ಣರಾಯರು ಶರಣರ ಸಂಗಂ ಎಂದರೆ ಶರಣರ ಸಂಗವುಳ್ಳವನೆಂದು ಅರ್ಥಮಾಡಿರುವರು. ಸರ್ಪಭೂಷಣ, ಫಾಲಾಕ್ಷ ಎಂಬ ಸಮಸ್ತ ಪದಗಳಿಗೆ ಈಶ್ವರನೆಂಬ ಅರ್ಥವಾದರೂ ಸರ್ಪದ ಭೂಷಣ ಫಾಲದ ಅಕ್ಷ ಎಂಬ ಬಿಡಿಪದಗಳಿಗೆ ಆ ಅರ್ಥವಾ

ಗುವುದಿಲ್ಲ. ಹಾಗೆಯೇ "ಶರಣಸಂಗಂ" ಎಂಬ ಸಮಸ್ತ ಪದಕ್ಕೆ ಶರ
ಣರ ಸಂಗವುಳ್ಳವನು ಯಾರೋ ಅವನು ಎಂದು ಅರ್ಥಮಾಡಬಹು
ದಾದರೂ ಶರಣರಸಂಗಂ ಎಂಬ ಬಿಡಿಪದಗಳಿಗೆ ಶರಣರ ಸಂಗವುಳ್ಳವ
ನೆಂದು ಅರ್ಥವಾಗುವುದಿಲ್ಲ. ಶರಣರ ಸಹವಾಸವು ಎಂದೇ ಆ ಪದ
ಗಳಿಗೆ ಅರ್ಥವಾಗುವುದು. ಶರಣರಸಂಗಂ ಎಂಬ ಪದದಿಂದ ಶಾಸ
ನದ ಈ ಕಂದ ಪದ್ಯಕ್ಕೆ ಸಮಂಜಸವಾದ ಅರ್ಥವಾಗುವುದಿಲ್ಲ. ಆದು
ದರಿಂದ ಶಾಸನದಲ್ಲಿ ಸವೆದುಹೋದ ಭಾಗವು ವರ್ಣನೆಯನ್ನೊಳ
ಗೊಂಡ ವಿಶೇಷಣದಿಂದ ಕೂಡಿದುದಲ್ಲ. ಅದರಲ್ಲಿ ಶ್ರೀ ಬಸವೇಶ್ವರನ
ವಂಶದವರಲ್ಲೊಬ್ಬನ ಹೆಸರಿನ ಭಾಗವಿದೆ ಎಂಬುದೇ ವಿಮರ್ಶಕರಿಗೆ
ನನ್ನ ಸೂಚನೆ.

ಶ್ರೀಯುತ ಕೃಷ್ಣರಾಯರ ವಾದದಂತೆ ಸಂಗನಬಸವನ ಅಣ್ಣ
ದೇವರಾಜ ಮುನಿಪನ ಮೊಮ್ಮಗನು ಹಾಲಬಸವಿದೇವನೆಂದು ಶಾಸನ
ದಿಂದ ಗೊತ್ತಾಗುವುದು. ಇದರಿಂದ ಶ್ರೀ ಬಸವೇಶ್ವರನ ಕಾಲಕ್ಕೂ
ಅವನ ಅಣ್ಣನ ಮಗನೆನ್ನುವ ಹಾಲಬಸವಿದೇವನ ಕಾಲಕ್ಕೂ ನೂರು
ವರ್ಷಗಳ ಅಂತರವಾಯಿತು. ಏಕೆಂದರೆ ಬಸವೇಶನು ಲಿಂಗೈಕ್ಯನಾದ
ಮೇಲೆ ಸುಮಾರು ನೂರು ವರ್ಷಕ್ಕೆ ಬರೆದ ಶಿಲಾಲೇಖವಿದು. ಸಾಧಾ
ರಣವಾಗಿ ಒಬ್ಬ ಮನುಷ್ಯನು ತನ್ನ ಮೊಮ್ಮಗನು ದೊಡ್ಡವನಾಗಿ ಅಭಿ
ವೃದ್ಧಿಗೆ ಬಂದಿರುವುದನ್ನು ನೋಡಬಹುದು. ಬಸವೇಶ್ವರನ ಕಾಲದ
ನಂತರ ನೂರು ವರ್ಷಗಳಾದ ಮೇಲೆ ದಾನವನ್ನು ಪಡೆದ ಹಾಲ
ಬಸವಿದೇವನು ಬಸವೇಶ್ವರನ ಅಣ್ಣನ ಮೊಮ್ಮಗನಿರಲಾರನು. ಬಸವೇ
ಶ್ವರನ ಅಣ್ಣನ ಮರಿಮಗನಾದರೂ ಆಗಿರಬೇಕೆಂದು ತೋರುವುದು.
ನಾನು ಸೂಚಿಸುವ ವಂಶವೃಕ್ಷವು ಕೆಳಗೆ ಕಂಡಂತಿದೆ.



ಶ್ರೀಯುತ ಕಪಟರಾಳ ಕೃಷ್ಣರಾಯರು ಸೂಚಿಸಿದ ಅಗ್ರಜನಿಂಗೈಕಂ" ಎಂಬ ಪದಗಳಿಗೆ ಬದಲಾಗಿ ನಾನು ಸೂಚಿಸಿರುವ "ಅಗ್ರಸುತಂಗೈಕಂ" ಎಂಬ ಪದಗಳೇ ಗ್ರಾಹ್ಯವೆಂದೂ "ಲಿಂಗೈಕ್ಯ" ಅಥವ ಲಿಂಗೈಕಂ ಎಂದು ಬದಲಾಯಿಸಬೇಕೆಂಬ ನನ್ನ ಸೂಚನೆ ಒಪ್ಪಲ್ಪಡತಕ್ಕದಲ್ಲ ವೆಂದೂ ಹೇಳುವುದಾದರೆ ವಂಶವೃಕ್ಷವು ಕೆಳಗೆ ಬರೆದಂತಾಗುವುದು.




ಶ್ರೀಯುತ ಹಳಕಟ್ಟಿಯವರ ಸಲಹೆಯಂತೆ ವಂಶವೃಕ್ಷವು ಕೆಳಗೆ ಕಂಡಂತಾಗುವುದು.




ಶ್ರೀಯುತ ಕೃಷ್ಣರಾಯರ ಅಭಿಪ್ರಾಯದಂತೆ ವಂಶವೃಕ್ಷವು.



ಬಸವೇಶ್ವರನು ಅವನು ಬದುಕಿರುವ ಕಾಲದಲ್ಲಿಯೇ ಮಹಾತ್ಮ ಗಾಂಧಿಯಂತೆ ದೇವಾಂಶ ಪುರುಷನೆಂದೂ ಪ್ರಸಿದ್ಧಿಗೆ ಬಂದನು. ಅವನು ಲಿಂಗೈಕ್ಯನಾದ ಸ್ವಲ್ಪ ಕಾಲದಲ್ಲಿಯೇ ಅವನ ಚರಿತ್ರೆಯು ಹರಿಹರ ಮೊದಲಾದವರಿಂದ ಬರೆಯಲ್ಪಟ್ಟಿತು. ಅವನಿಗೆ ಮಕ್ಕಳುಳಿದಿದ್ದರೆ ಆ ವಿಷಯವು ಅವನ ಚರಿತ್ರೆಯಲ್ಲಿ ಬರೆಯಲ್ಪಡುತ್ತಿದ್ದಿತು. ಗೃಹಸ್ಥಾಶ್ರಮದಲ್ಲಿಯೇ ಮೋಕ್ಷವನ್ನು ಸಾಧಿಸಬಹುದೆಂದು ಬಸವೇಶ್ವರನ ನಂಬುಗೆಯಾದರೂ ಮೋಹಕ್ಕೆ ಬಲಿಬಿದ್ದವನಲ್ಲ. "ಪ್ರಜಾತಂತುಂ ಮಾವ್ಯವಚ್ಛೇತ್ಸೀಃ" ಎಂಬ ನಿಯಮವನ್ನು ಪಾಲಿಸಬೇಕೆಂದೇ ಮಕ್ಕಳಿಲ್ಲದುದರಿಂದ ಎರಡನೆಯ ಸಲ ಲಗ್ನಮಾಡಿಕೊಂಡಿರಬೇಕು. ಬಸವೇಶ್ವರನಿಗಿದ್ದ 'ಬಾಲಸಂಗಯ್ಯ'ನೆಂಬ ಮಗನು ಬಾಲ್ಯದಲ್ಲಿಯೇ ತೀರಿಹೋದ ಮೇಲೆ ತಂದೆಯು "ಪುಷ್ಪವಿದ್ದಂತೆ ಮೊಗ್ಗೆಯನರ್ಪಿಸಿಕೊಂಡ ಶಿವನು, ಪಕ್ವವಾದ ಫಲವಿದ್ದಂತೆ ಕಸುಗಾಯ ಕೊಯ್ದ ಶಿವನು" ಎಂದು ಪ್ರಲಾಪಿಸಿದಂತೆ ಭೈರವೇಶ್ವರ ಕಾವ್ಯ ಕಥಾಸೂತ್ರ ರತ್ನಾಕರದಲ್ಲಿ ಹೇಳಿರುವುದರಲ್ಲಿ ಸತ್ಯದ ಧ್ವನಿಯಿದೆ. ಆದುದರಿಂದ ಶ್ರೀ ಬಸವೇಶ್ವರನಿಗೆ ಇದ್ದ ಮಗನೊಬ್ಬ ಬಾಲ್ಯದಲ್ಲಿಯೇ ಅಳಿಯಲು ಮಕ್ಕಳಾಗಲೀ ಮೊಮ್ಮಕ್ಕಳಾಗಲೀ ಇರಲಿಲ್ಲನೆಂಬುದೇ ಸರಿಯೆನಿಸುತ್ತದೆ. ದೇವರಾಜಮುನಿಪನು ಅವನ ಹಿರಿಯಣ್ಣನೆಂದೂ ಅವನ ಮೊಮ್ಮಗನು ಕಲಿದೇವರಸನೆಂದೂ ನನಗೆ ತೋರುವುದು.

ಶ್ರೀಯುತ ಕಪಟರಾಳ ಕೃಷ್ಣರಾಯರು "ಮಹಾನುಭಾವ ಪಂಥ ಮತ್ತು ಶಿವಾನುಭವ ಪಂಥಗಳ ಹಿನ್ನೆಲೆ" ಎಂಬ ಲೇಖನದಲ್ಲಿ ಬರೆದಂತೆ.

"ಕಲ್ಯಾಣ ಚಾಳುಕ್ಯ ರಾಜ್ಯ ಅಳಿದೊಡನೆ ದೇವಗಿರಿಯ ಭಿಲ್ಲಮನು ಉತ್ತರಭಾಗವನ್ನು ಆಕ್ರಮಿಸಿಕೊಂಡನು........ಬಿಲ್ಲಮನ ನಂತರದಲ್ಲಿ ಸಿಂಘಣದೇವನು ಆಳಿದನು. (ಕ್ರಿ. ಶ. ೧೨೧೦–೧೨೪೭)......ಯಾದವ ಸಿಂಘಣರಾಯನ ಸೇನೆಯು ಗುರ್ಜರರ ಮೇಲೆ ದಾಳಿಮಾಡಿತು. ಈ ದಾಳಿಯಲ್ಲಿ ವೀಸ್ಣುದೇವ (ವೀಚ, ಬೀಚ, ಬೀಚ-ಣ, ವೀಚಣ ಮುಂತಾದ ಹೆಸರುಗಳೂ ಇವೆ ಇವನಿಗೆ) ಜಗದಳ ಮಾಯಿದೇವ ಇವರೆಲ್ಲರೂ ಯಾದವರಾಯನ ಸೇನಾಪತಿಗಳಾಗಿದ್ದರು." ಪ್ರಸ್ತುತ ಶಿಲಾಲೇಖದಲ್ಲಿ ಯಾದವ ಭೂಮಿಪಾಳ"ರಲ್ಲೊಬ್ಬನಾದ ಸಿಂಹಣನು ರಾಜ್ಯವಾಳಿದ ಉಲ್ಲೇಖವಿದೆ. ಹಾಗೆಯೇ ಅವನ ಮಗ "ಶ್ರೀಮತ್ಪ್ರೌಢ

ಪ್ರತಾಪ ಚಕ್ರವರ್ತಿ ಶ್ರೀ ಕನ್ನರದೇವಂ" ಆಳಿದುದೂ ಉಲ್ಲೇಖಿಸಲ್ಪಟ್ಟಿದೆ. ಶ್ರೀಯುತ ಹಳಕಟ್ಟಿಯವರು ಹೇಳಿದಂತೆ ಇವನು ೧೨೬೦ ರ ವರಿಗೆ ಆಳಿದನು. "ತತ್ಪಾದ ಪದ್ಮೋಪಜೀವಿ ಚಿಕ್ಕನ ಚಿಕ್ಕಮಗಂ, ವಿಭವಕ್ಕೆ ಕುಬೇರಂಗೆ ಸೆಣಸುವಂ, ರಾಯರುಮಂ ಮಿಕ್ಕಂ ಬೀಚುಗಿ" ಯ ಉಲ್ಲೇಖವೂ ಶಾಸನದಲ್ಲಿವೆ. ಇವನೇ ಮೇಲೆ ಹೇಳಿದಂತೆ ಯಾದವ ಸಿಂಹಣ (ಸಿಂಘಣ)ನು ಗುರ್ಜರರ ಮೇಲೆ ಯುದ್ಧ ಮಾಡಿದಾಗ ಸೇನಾನಿಯಾಗಿದ್ದವನು "ಪಿರಿಯ ನಾತನಣ್ಣಂ ಮಲ್ಲಂ ಆತನ ತನೂಭವಂ ಜಾವುಂಡಂ" ಸಹ ಶಿಲಾಲೇಖದಲ್ಲಿ ಉಲ್ಲೇಖಿಸಲ್ಪಟ್ಟಿದ್ದಾರೆ. ಈ "ಜಾವುಂಡನ ಮನದನ್ನಂ" "ತ್ಯಾಗಗುಣಕ್ಕೆ ತಾಯ್ವನೆ" ಯಾದ ನಾಗನು ಜನಾರ್ಧನ ಭಕ್ತನಾದರೂ "ಬಸವರಾಜನನ್ವಯರುಮಪ್ಪತಪ ಚಕ್ರವರ್ತಿವೀರ ವ್ರಿತಿ ಹಾಲಬಸವಿದೇವಂಗೆ" ದಾನವಂ ಕೊಟ್ಟಂ.

ಮೇಲಿನ ವಿವರದಿಂದ ಬಿಜ್ಜಳನು ಚಾಳುಕ್ಯ ವಂಶದ ತೈಲಪನನ್ನು ಗೆದ್ದು ರಾಜ್ಯವಾಳಲು ಪ್ರಾರಂಭಿಸಿದ್ದು ೧೧೫೬ ರಲ್ಲಿ. ಅವನ ಆಳ್ವಿಕೆ ೧೧೬೮ ರ ವರಿಗೆ ಬಿಜ್ಜಳ ಮತ್ತು ಬಸವೇಶ್ವರನ ಈ ಕಾಲವಾದ ನಂತರ ನಲವತ್ತು ವರ್ಷಗಳ ಮೇಲೆ ಎಂದರೆ ೧೨೧೦ ರಲ್ಲಿ ಸಿಂಹಣನು ರಾಜ್ಯವಾಳಲು ಪ್ರಾರಂಭಿಸಿದುದು. ಇವನ ಸೇನಾನಿ ಬೀಚುಗೆಯು ಗುರ್ಜರರ ಮೇಲೆ ಯುದ್ಧ ಮಾಡಿದ ಕಾಲಕ್ಕೂ ಬಸವಣ್ಣನವರ ಕಾಲಕ್ಕೂ ಒಂದೆರಡು ತಲೆನೂರು ಕಾಲಕಳೆದಿದೆಯೆನ್ನಬಹುದು. ಬೀಚುಗಿಯ ಅಣ್ಣನ ಮಗ ಜಾವುಂಡನೂ ಹಾಲಬಸವಿದೇವರೂ ಸಮಕಾಲಿಕರು. ಸಿಂಹಣನ ಮಗ ಕನ್ನರನ ಆಳ್ವಿಕೆಯ ಕೊನೆಯ ವರ್ಷದಲ್ಲಿ (೧೨೬೦) ಈ ಶಿಲಾಲೇಖನವನ್ನು ಬರೆದುದು ಸಿಂಹಣನ ಮತ್ತು ಬೀಚುಗಿಯ ಸಮಕಾಲಿಕನು ಕಲಿದೇವರಸನೆನ್ನಬಹುದು. ಬಸವಣ್ಣನವರು ಮತ್ತು ಅವರಣ್ಣ ದೇವರಾಜ ಮುನಿಪ ಮತ್ತು ಬಿಜ್ಜಳ ಇವರು ಸಮಕಾಲಿಕರು. ಇವರ ಕಾಲಾನಂತರ ಸಿಂಹಣನ ಕಾಲದವರಿಗಿನವರು (೧೧೬೮-೧೨೧೦) ಬಸವರಸರೆನ್ನಬಹುದು. ಈ ದೃಷ್ಟಿಯಿಂದಲೂ ಬಸವೇಶ್ವರ ಮೊದಲುಗೊಂಡು ಹಾಲ ಬಸವೀದೇವರು ಆರನೆಯ ತಲೆಯವರೆನ್ನುವುದಕ್ಕಿಂತಲೂ ಅಥವ ಬಸವೇಶ್ವರನ ಅಣ್ಣನ ಮೊಮ್ಮಗನೇ ಹಾಲ ಬಸವೀದೇವನೆನ್ನುವುದ

ಕ್ಕಿಂತಲೂ ಹಾಲಬಸವೀದೇವರು ಶ್ರೀಬಸವೇಶ್ವರನ ಅಣ್ಣನ ಮರಿಮಗ ನೆನ್ನುವುದು ಸರಿಯೆಂದು ತೋರುವುದು.

ಶ್ರೀ ಬಸವೇಶ್ವರನಿಗೆ ಬಸವರಾಜನೆಂಬ ಹೆಸರಿದ್ದುದು ಶಾಸನ ದಿಂದಲೇ ತಿಳಿದುಬರುವುದು. ಅವನ ತಂದೆ ಮಾದಿರಾಜ ಇವನ ಮಕ್ಕಳು ಮೊಮ್ಮಕ್ಕಳಿಗೂ ಅರಸ ಎಂಬ ಹೆಸರಿದೆ. "ಬಾಗವಾಡಿ ಪುರ ವರಾಧೀಶ್ವರ ಮಾದಿರಾಜನ ತನೂಜಂ ಬಸವರಾಜ" ಎಂದು ಶಿಲಾ ಲೇಖನದಲ್ಲಿರುವುದರಿಂದಲೂ ಶ್ರೀ ಬಸವೇಶ್ವರನ ಸೋದರಮಾವನು ಬಿಜ್ಜಳನ ಮುಖ್ಯ ಮಂತ್ರಿಯಾದ ಬಲದೇವನಾದುದರಿಂದಲೂ ಶ್ರೀ ಬಸ ವಣ್ಣನವರ ತಂದೆತಾಯಿಗಳು ಮಾನ್ಯರಾದವರೆಂಬುದು ಸ್ಪಷ್ಟ. ಮೇಲಾಗಿ ಬಾಗೆವಾಡಿ ಪುರದ ಒಡೆಯರಾಗಿದ್ದರೆಂಬುದೂ ಶಿಲಾಲೇಖನದಿಂದಲೇ ತಿಳಿದುಬರುವುದು.

ಶ್ರೀ ಬಸವೇಶ್ವರನನ್ನು ಅಪರಿಮಿತವಾಗಿ ಹೊಗಳುವ ಈ ಶಿಲಾ ಶಾಸನದಲ್ಲಿ ಅವನು ಯಾವ ಹೊಸ ಮತದ ಸಂಸ್ಥಾಪಕನೆಂದು ಹೊಗ ಳಿದಿರುವುದು ಮರೆಯಬಾರದ ವಿಷಯ. ಇಷ್ಟೇ ಅಲ್ಲದೆ, "ಪುರಾತನ ಜಂಗಮಲಿಂಗೈಕ ಭಕ್ತನಿರ್ಭರ ಲೀಲಾ ಸಂಗಂ" ಎಂದು ಶಿಲಾಲೇಖನ ದಲ್ಲಿ ಹೇಳಿರುವುದಕ್ಕೆ ಶ್ರೀಯುತ ಹಳಕಟ್ಟಿಯವರು ಹೇಳುವಂತೆ "ಬಸ ವೇಶ್ವರನು ಪುರಾತನರೂ ಜಂಗಮರೂ ಮತ್ತು ಲಿಂಗ ಇವುಗಳಲ್ಲಿ ಭಕ್ತಿಯುಳ್ಳವನೆಂದು ಹೇಳಲ್ಪಟ್ಟಿದ್ದಾನೆ." ಎಂದು ಅರ್ಥ ಮಾಡಬಹು ದಾದರೂ ಪುರಾತನ ಎಂಬ ಪದವು ಹೆಚ್ಚಾಗಿ ವಿಶೇಷಣವಾಗಿಯೇ ಉಪಯೋಗಿಸಲ್ಪಡುವುದರಿಂದ ಪುರಾತನ ಜಂಗಮರೆಂಬ ಪದಕ್ಕೆ ಪುರಾ ತನರೂ ಜಂಗಮರೂ ಎಂಬ ಅರ್ಥವು ಹೊಳೆಯುವುದಕ್ಕಿಂತಲೂ ಹೆಚ್ಚು ಸಹಜವಾಗಿ ಪುರಾತನರಾದ ಜಂಗಮರೆಂಬ ಅರ್ಥವೇ ಸ್ಫುರಿಸುವುದು. ಅನಿವಾರ್ಯವಾದಾಗ ಮಾತ್ರ ಕ್ಲಿಷ್ಟ ಕಲ್ಪನೆಯು ಬೇಕಾಗುವುದು. ಇಲ್ಲಿ ಪುರಾತನರಾದ ಜಂಗಮರಲ್ಲಿಯೂ ಲಿಂಗದಲ್ಲಿಯೂ ನಿಷ್ಠೆಯು ಳ್ಳವನೆಂಬ ಅರ್ಥದಲ್ಲಿಯೇ ಈ ಪದಗಳು ಉಪಯೋಗಿಸಲ್ಪಟ್ಟಿವೆಯೆಂದು ನನಗೆ ತೋರುವುದು. ಮುದ್ರಿತವಾದ ಪ್ರತಿಯಲ್ಲಿರುವ ಪುರಾತನ ಜಂಗಮ ಎಂಬ ಪದವು ಲಿಂಗ ಎಂಬ ಪದದಿಂದ ಒಂದು ಗೀಟಿನಿಂದ ಪ್ರತ್ಯೇಕಿಸಲ್ಪಟ್ಟಿರುವುದರಿಂದ ಪುರಾತನರಾದ ಜಂಗಮರಲ್ಲಿಯೂ ಲಿಂಗ

ದಲ್ಲಿಯೂ ನಿಷ್ಠೆಯುಳ್ಳವನೆಂಬ ಅರ್ಥಕ್ಕೆ ಪುಷ್ಟಿದೊರೆಯುವುದು. ಏಕೆಂದರೆ ಪುರಾತನ ಎಂಬ ಪದದ ಮುಂದೆ ಗೀಟಿಲ್ಲ. ಪುರಾತನರಾದ ಜಂಗಮರಲ್ಲಿ ಶ್ರೀ ಬಸವೇಶ್ವರನಿಗೆ ಭಕ್ತಿಯಿದೆಯೆಂಬುದು ಶಾಸನದಲ್ಲಿ ವ್ಯಕ್ತವಾಗಿರುವುದರಿಂದ ಆತನು ಹೊಸ ಮತವನ್ನು ಸ್ಥಾಪಿಸಲಿಲ್ಲವೆಂಬುದು ವ್ಯಕ್ತವಾಗುವುದು. ಬಸವೇಶ್ವರ ಅಣ್ಣನಾದ ದೇವರಾಜ ಮುನಿಪನು ಲಿಂಗೈಕ್ಯನೆನ್ನಬಹುದಾದರೆ ತಮ್ಮನ ಮಾರ್ಗವನ್ನು ಅಣ್ಣನು ತಮ್ಮನ ಕಾಲಾನಂತರವಾದರೂ ಹಿಂಬಾಲಿಸಿರಬೇಕು. "ಜಂಗಮ ಪುರುಷ" ನಾದ ಅವನ ಮಗನು ವೀರಶೈವನೆಂಬುದು ವ್ಯಕ್ತವಾದುದು. ಈತನ ಪ್ರೀತಿಯ ಮಗ ಕಲಿದೇವರಸನೂ ವಿಶೇಷವಾಗಿ ಹೊಗಳಲ್ಪಟ್ಟಿರುವ "ಮಹಾಲಿಂಗ ಜಂಗಮ ಪ್ರಸಾದಸಿಯುತ"ರಾದ ಹಾಲಬಸವಿದೇವರು ವೀರಶೈವರೆನ್ನುವುದು ಸ್ಪಷ್ಟ. ಜನಾರ್ದನಭಕ್ತನೆಂದು ಶಿಲಾಶಾಸನದಲ್ಲಿ ಹೇಳಿರುವ ನಾಗನು ವೀರಶೈವ ತಪಸ್ವಿಗೆ ದಾನ ಮಾಡುವುದೆಂದರೆ ಶ್ರೀ ಬಸವೇಶ್ವರನ ವಂಶದವರು ವಂಶಕೀರ್ತಿಯನ್ನು ಉಳಿಸಿಕೊಂಡ ಬಂದವರೆನ್ನಬಹುದು.

ಈ ವಿಸ್ತೃತವಾದ ಲೇಖನವನ್ನೋದುವ ಮುನ್ನ ಶರಣ–ಸಾಹಿತ್ಯದ ಆಗಸ್ಟ್ ಸೆಪ್ಟೆಂಬರ್ ತಿಂಗಳ ಸಂಚಿಕೆಯಲ್ಲಿನ ಶ್ರೀಯುತ ಕಪಟರಾಳ ಕೃಷ್ಣರಾಯರ ವಿಮರ್ಶಾತ್ಮಕ ಲೇಖನವನ್ನೂ ಶ್ರೀಯುತ ಹಳಕಟ್ಟಿಯವರ ವಿಮರ್ಶಾತ್ಮಕ ಲೇಖನವನ್ನೂ ಓದಿದರೆ ಸುಲಭವಾಗಿ ನನ್ನ ವಾದವು ಅರ್ಥವಾಗುವುದು ಶ್ರೀಯುತ ಹಳಕಟ್ಟಿಯವರ ಮತ್ತು ಶ್ರೀಯುತ ಕೃಷ್ಣರಾಯರ ಲೇಖನಗಳಿಗೆ ಎಲ್ಲರೂ ಋಣಿಗಳು. ಇವುಗಳ ತಳಹದಿಯ ಮೇಲೆ ಬರೆದುದೆನ್ನ ಲೇಖನ. ಒಟ್ಟಿನಲ್ಲಿ

> ಸಂಗನ ಬಸವನ ಅಗ್ರಜ ।
> ಲಿಂಗೈಕ್ಯಂ ದೇವರಾಜ ಮುನಿಪನ ತನಯಂ ॥
> ಜಂಗಮ ಪುರುಷಂ ಬಸವರ ।
> ಸಂಗಂ ಪ್ರಿಯಸುತನೆನಿಪ್ಪ ಕಲಿದೇವರಸಂ ॥

ಎಂದು ಸವೆದು ಹೋದ ಅಕ್ಷರಗಳನ್ನು ಕೂಡಿಸಿ ಈ ಪದ್ಯವನ್ನು ಓದಿಕೊಳ್ಳಬೇಕೆಂಬುದೇ ನನ್ನ ಸೂಚನೆ. ಇದು ನಿರ್ದೋಷವಾಗಿದೆಯೆಂದು ನಾನು ಹೇಳುವುದಿಲ್ಲ. ಕವಿಯ ಶಕ್ತಿ, ಶೈಲಿ ಶಾಸನದಲ್ಲಿನ

ಇತರ ವಿಷಯ, ಸನ್ನಿವೇಶ, ಮೊದಲಾದವುಗಳ ದೃಷ್ಟಿಯಿಂದ ನನ್ನ ಸೂಚನೆಯು ಗ್ರಾಹ್ಯವೆನಿಸುವುದು. ಆದರೆ ಪ್ರಾಜ್ಞರ ಹೆಚ್ಚು ವಿಮರ್ಶೆಗೆ ಅವಕಾಶವಿದ್ದೇ ಇದೆ. ಎಲ್ಲಾ ವಿಷಯಗಳೂ ಅವರ ವಿಮರ್ಶೆಗೊಳಗಾಗಿ ವೀರಶೈವ ಮತೋದ್ಧಾರಕನೂ ಅಪ್ರತಿಮ ಸಮಾಜ ಸುಧಾರಕನೂ ಆದ ಬಸವೇಶ್ವರನ ಚರಿತ್ರೆಯು ಬೆಳಕಿಗೆ ಬರಲೆಂಬುದೇ ನನ್ನ ಆಶ್ರಯ. ರಾ॥ ಬ॥ ಹಳಕಟ್ಟಿಯವರ ಲೇಖನವೇ ಎಲ್ಲರ ವಿಮರ್ಶೆಗೂ ಮೂಲವು. ಆದರಂತೆ ಶ್ರೀಯುತ ಕೃಷ್ಣರಾಯರ ಲೇಖನ ವಿಮರ್ಶಾತ್ಮಕವಾದುದು. ನನ್ನ ಲೇಖನವು ಹೆಚ್ಚಿನ ಪರಾಮರ್ಶೆಗೆ ಪ್ರಚೋದನಕಾರಿಯಾದರೆ ಈ ಲೇಖನಕ್ಕಾಗಿ ವಿನಿಯೋಗಿಸಲಾಗಿಟ್ಟ ಕಾಲದ ವ್ಯಯವು ಸಾರ್ಥಕವಾಗುವುದು.

---

# ಪಂಚಾಚಾರಗಳು.

## ೧ ನೇ ವಚನ.

ಪಂಚಾಚಾರಗಳಿಂದ ಪಂಚಭೂತಗಳ ನಿರಸನಃ— ಪಂಚಭೂತಂಗಳ ಪೂರ್ವಾಶ್ರಯವ ಕಳೆದು, ಪ್ರಸಾದ ಕಾಯವಾದರು ನಮ್ಮ ಶರಣರು. ಅದೆಂತೆಂದೊಡೆ, ಪೃಥ್ವಿಯ ಪೂರ್ವಾಶ್ರಯ ನಿರಸನವ ಮಾಡಿದರು ಭೃತ್ಯಾಚಾರದಿಂದ. ಅಪ್ಪುವಿನ ಪೂರ್ವಾಶ್ರಯ ನಿರಸನವ ಮಾಡಿದರು ಸದಾಚಾರದಿಂದ. ಅಗ್ನಿಯ ಪೂರ್ವಾಶ್ರಯ ನಿರಸನವ ಮಾಡಿದರು ಶಿವಾಚಾರದಿಂದ. ವಾಯುವಿನ ಪೂರ್ವಾಶ್ರಯ ನಿರಸನವ ಮಾಡಿದರು ಲಿಂಗಾಚಾರದಿಂದ. ಆಕಾಶದ ಪೂರ್ವಾಶ್ರಯ ನಿರಸನವ ಮಾಡಿದರು ಗಣಾಚಾರದಿಂದ. ಇಂತೀ ಪರಿಯಲ್ಲಿ ಪಂಚಾಚಾರವನರಿತ ನಮ್ಮ ಶರಣರು ಪಂಚಭೂತ ಕಾಯ ಬಯಲಾಗಿ, ಪ್ರಸಾದ ಕಾಯರೆಂದೆನಿಸಿದರು, ನೋಡಾ ಓಂಕಾರೇಶ್ವರ ಪ್ರಿಯ ಮಹಾಲಿಂಗ ಪ್ರಭುವೇ

## ೨ ನೇ ವಚನ.

ಪಂಚಾಚಾರಗಳಿಂದ ಪಂಚಸೂತಕ ನಿರಸನ:—ಅಂಗ್ಯಾ, ಮರ್ತ್ಯ ಲೋಕದ ಮಹಾಸದ್ಭಕ್ತ ಜನಂಗಳು ಶಿವಾಚಾರ ಸಂಪನ್ನರೆಂದೊಡೆ, ಜಾತಿ ಸೂತಕವ ನಳಿದಿರಬೇಕು. ಲಿಂಗಾಚಾರ ಸಂಪನ್ನರೆಂದೊಡೆ, ಜನನ ಸೂತಕವನಳಿದಿರಬೇಕು. ಸದಾಚಾರ ಸಂಪನ್ನರೆಂದೊಡೆ, ಉಚ್ಛಿಷ್ಟ ಸೂತಕವ ನಳಿದಿರಬೇಕು. ಭೃತ್ಯಾಚಾರ ಸಂಪನ್ನರೆಂದೊಡೆ, ಪ್ರೇತಸೂತ ಕವನಳಿದಿರಬೇಕು. ಗಣಾಚಾರ ಸಂಪನ್ನರೆಂದೊಡೆ, ರಜ ಸೂತ ಕವನಳಿದಿರಬೇಕು. ಇಂತೀ ಪಂಚಾಚಾರವನರಿದು, ಪಂಚಸೂತಕವ ತೊರೆದು, ಪಂಚಭೂತ ಕಾಯ ತಾನೆಂಬುದ ಮರೆದು, ನಿಜದೊಳಗೆ ನಿಂದ ಶಿವಭಕ್ತರು ಒಕ್ಕು ಮಿಕ್ಕುದ ಇಕ್ಕಿ ಎನ್ನ ಅಕ್ಕರೆಯಿಂದ ಸಲಹು ದರು ಓಂಕಾರೇಶ್ವರ ಪ್ರಿಯ ಮಹಾಲಿಂಗ ಪ್ರಭುವೇ.

—ಎಸ್ ರಾಚೋಟಯ್ಯ,
ಕಾನಕಾನಹಳ್ಳಿ.

---

# ಅನುಭವ ಮಂಟಪವು ಜಗತ್ಕಲ್ಯಾಣ ಮಂಟಪವು!

(ಲೇ.:— ಶ್ರೀ. ಅನ್ನದಾನೀಶ್ವರ ವಿರಕ್ತಮಠ, ಮು. ರಾಣೀಬಿನ್ನೂರು.)

---

ಜಗತ್ಕಲ್ಯಾಣ ಮಂಟಪವಾಗಿದ್ದ ಅನುಭವ ಮಂಟಪದಿಂದ ಸಮಾಜ ಸುಧಾರಕರಾದ ನಾವು ಮಹತ್ವದ ಅನೇಕ ಪಾಠಗಳನ್ನು ಕಲಿಯಬೇ ಕಾಗಿದೆ. ಹಾಗೆ ಕಲಿತೆವೆಂದರೆ ಜಯವಧುವನ್ನು ತೋಳಿನೊಳಿಟ್ಟು ತೂಗಿದಂತೆ.

ಅನುಭವ ಮಂಟಪದ ಸದಸ್ಯರು ಶರಣಶರಣಿಯರು. ಅವರು ಶ್ರೇಷ್ಠಜ್ಞಾನಾನುಭವ, ಶ್ರೇಷ್ಠ ಕ್ರಿಯೆ, ಶ್ರೇಷ್ಠ ಆನಂದಗಳಲ್ಲಿ ತನ್ಮಯ ರಾದ ಶರಣನೊಬ್ಬನನ್ನು ಅಧ್ಯಕ್ಷನನ್ನಾಗಿ ಆರಿಸಿಕೊಳ್ಳುತ್ತಿದ್ದರು. ಒಂದು ಕಡೆಗೆ ಶರಣರು ಮತ್ತೊಂದು ಕಡೆಗೆ ಶರಣಿಯರು ಶಿಸ್ತಿನಿಂದ ಶಾಂತಿ ಯಿಂದ ಅನುಭವಮಂಟಪದಲ್ಲಿ ವಿರಾಜಮಾನರಾಗುತ್ತಿದ್ದರು. ಅಧ್ಯಕ್ಷನು ಷಟ್‌ಸ್ಥಲದ ಪೀಠದ ಮೇಲೆ ಶೋಭಿಸುತ್ತಿದ್ದನು.

'ಕಿರಿದರೊಳು ಪಿರಿದುಮರ್ಥಮಂ ತುಂಬಿಕೊಂಡಿರ್ದ ವಚನ'
ಗಳ ಸೂರೆಯಾಗುತ್ತಿದ್ದಿತು ಅನುಭವಮಂಟಪದಲ್ಲಿ ಶರಣ-ಶರಣೆಯರು
ತಮ್ಮ ಜ್ಞಾನಾನುಭವವನ್ನು ಕ್ರಮವಾಗಿ ಚರ್ಚಿಸುತ್ತ ಮಂಟಪದಲ್ಲಿ
ಇಡುತ್ತಿದ್ದರು, ವಚನ ರೂಪದಲ್ಲಿ ಮಾತನಾಡುವದು, ವಚನ ರೂಪ
ದಲ್ಲಿ ಹಾಡುವದು ಅವರಿಗೆ ಸಹಜವಾಗಿ ಹೋಗಿತ್ತು. ಒಂದು ವಚ
ನವು ಪ್ರಕಟವಾದ ಕೂಡಲೇ ಎಲ್ಲರೂ ಅದನ್ನು ಸ್ವೀಕರಿಸಲೇಬೇಕೆಂಬ
ನಿರ್ಬಂಧವಾಗಲಿ, ಅದನ್ನು ಖಂಡಿಸಲೇಬೇಕೆಂಬ ಕಟ್ಟಪ್ಪಣೆಯಾಗಲಿ
ಅಲ್ಲಿ ಇದ್ದಿಲ್ಲ. ಅಲ್ಲಿ ಸಕಲರಿಗೂ—ಎಲ್ಲ ಶರಣ-ಶರಣೆಯರಿಗೂ—
ಭಾಷಣ ಸ್ವಾತಂತ್ರ್ಯವಿದ್ದಿತು. ಸ್ತ್ರೀಯರಿಗೆ ಸಮಾನತೆಯಿದ್ದಿತು. ಎಲ್ಲರೂ
ಬಂಧುಪ್ರೀತಿಯಿಂದ ತಾವು ಸಂಪಾದಿಸಿದ ಜ್ಞಾನವನ್ನು ಅನುಭಾವವನ್ನು
ನಿವೇದಿಸುತ್ತಿದ್ದರು.

ಶೂನ್ಯವೆಂದರೆ ಲಿಂಗ, ಲಿಂಗದ ಅನುಭಾವ ಸಂಪತ್ತನ್ನು ಅನು
ಭವಮಂಟಪದಲ್ಲಿ ಸಂಪಾದಿಸುತ್ತಿದ್ದುದರಿಂದ 'ಶೂನ್ಯಸಂಪಾದನೆ' ಎಂಬ
ಹೆಸರೂ ಸಹ ಇದಕ್ಕೆ ಬಂದಿರುವದು. 'ಶೂನ್ಯಸಂಪಾದನೆ' ಎಂಬ
ಅದ್ವಿತೀಯ ಅಮರ ಗ್ರಂಥದಲ್ಲಿ ಅನುಭವಮಂಟಪದ ಲೋಕೋತ್ತರ
ವಾದ ಕಾರ್ಯಕಲಾಪಗಳ ಅರಿವು ನಮಗೆ ಸ್ಪಷ್ಟವಾಗಿ ತೋರುವದು.
ಅನುಭವಮಂಟಪದ ಸಮಗ್ರ ಚಿತ್ರವು ನಮ್ಮ ಕಣ್ಣೆದಿರಿಗೆ ಬಂದು
ನಿಲ್ಲುವದು.

ಶರಣರಂತೆ ಶರಣೆಯರೂ ತಮ್ಮ ಅನುಭವವನ್ನು ಅಲ್ಲಿ ನಿವೇದಿ
ಸುತ್ತಿದ್ದರೆಂಬದಕ್ಕೆ ಅನೇಕ ಶರಣೆಯರ ವಚನಗಳೇ ಸಾಕ್ಷಿಯಾಗಿವೆ.
ಸ್ತ್ರೀಯರಿಗೆ ಸ್ವಾತಂತ್ರ್ಯವಿಲ್ಲದಿದ್ದರೆ ಈ ಪ್ರಕಾರ ಪುರುಷರೊಡನೆ ಆತ್ಮ
ನಿವೇದನೆ ಮಾಡಲಿಕ್ಕೆ ಅಸ್ಪದವಿರುತ್ತಿತ್ತೇ? ಇಷ್ಟು ಮಾತ್ರ ನಿಜ.
ಇಂದಿನ ಸ್ತ್ರೀಸ್ವಾತಂತ್ರ್ಯದ ದುರುಪಯೋಗವಾಗುವಂತೆ ಅಂದು ಆಗು
ತ್ತಿದ್ದಿಲ್ಲ.

ಅನುಭವ ಮಂಟಪದಲ್ಲಿ ಜ್ಞಾನಯೋಗಿಗಳಿದ್ದರು. ಭಕ್ತಿಯೋಗಿ
ಗಳಿದ್ದರು. ರಾಜಯೋಗಿಗಳಿದ್ದರು. ಶಿವಯೋಗಿಗಳಿದ್ದರು. ವೈರಾಗ್ಯ
ಯೋಗಿಗಳಿದ್ದರು. ಇವೆಲ್ಲ ಯೋಗಗಳು ಲಿಂಗಾಂಗ-ಸಾಮರಸ್ಯ ಯೋಗ
ದಲ್ಲಿ ಸಮಾವೇಶವಾಗುತ್ತವೆ. ಆದ್ದರಿಂದ ಲಿಂಗಾಂಗ-ಸಾಮರಸ್ಯಯೋ

ಗವನ್ನೇ ಎಲ್ಲರೂ ಕೂಡಿ ಸಿದ್ಧಾಂತ ಮಾಡುತ್ತಿದ್ದರು. ಕೇವಲ ವೈರಾಗ್ಯಕ್ಕೇನೇ ರಾಜಪಟ್ಟಕಟ್ಟಿದ್ದಿಲ್ಲ ಎಂಬ ಮಾತು ಇಲ್ಲಿ ಗಮನಾರ್ಹವಾಗಿದೆ. ವೈರಾಗ್ಯ ಚಕ್ರವರ್ತಿಯಾದ ಪ್ರಭುದೇವನು ಅಧ್ಯಕ್ಷನಾಗಿದ್ದರೂ ಸಹ ಅವನ ಎಲ್ಲ ವಚನಗಳನ್ನೂ ಎಲ್ಲರೂ ಅಂಧತೆಯಿಂದ ಸ್ವೀಕರಿಸದೆ, ಪ್ರಭುದೇವನ ವಚನಗಳನ್ನು ಟೀಕಿಸುವದನ್ನು ನಾವು ನೋಡುತ್ತೇವೆ.

ಅನುಭವ ಮಂಟಪದಲ್ಲಿ ಸಾಮೂಹಿಕ ಕಲ್ಯಾಣದ ದೃಷ್ಟಿಯೇ ಮುಖ್ಯವಾಗಿದ್ದರೂ ವ್ಯಕ್ತಿವಿಕಾಸಕ್ಕೆ ಸಾಕಷ್ಟು ಅವಕಾಶವಿರುವದು ಅತ್ಯಂತ ಮಹತ್ವದ ಮಾತು. ವ್ಯಕ್ತಿ—ಸಮಾಜಗಳ ಅಭ್ಯುದಯ ನಿಃಶ್ರೇಯಸ ಸಾಧಕನ ಮಾರ್ಗವೇ ಇಲ್ಲಿದೆ.

ಜೀವ, ಜಗತ್ತು, ಈಶ್ವರ—ಇವುಗಳ ಬಗ್ಗೆ ಅನುಭವ ಮಂಟಪದ ವಚನಕಾರರ ವಿಚಾರಗಳೇನು ? ಜಗತ್ತಿಗೆ, ಜೀವಕ್ಕೆ, ಆಧಾರವಾದದ್ದೇ ಈಶ್ವರಾಂಶವು. ಈಶ್ವರ, ಪರಮಾತ್ಮ, ಅಥವಾ ಲಿಂಗವು ಜೀವ-ಜಗತ್ತುಗಳು ಇಲ್ಲದ ಕಾಲದಲ್ಲಿ ಸಹ ಅದು ಇತ್ತು. ಪರಮಾತ್ಮನ ಚಿಚ್ಛಕ್ತಿ ಲೀಲಾ ವಿಲಾಸನೇ ಈ ಜಗತ್ತು. ಆದ್ದರಿಂದ ಈ ಜಗತ್ತಿನಲ್ಲಿ ಜಗತ್ಕಲ್ಯಾಣಕರವಾದ ಅಸಂಖ್ಯ ಶಕ್ತಿಗಳಿವೆ. ವಿಜ್ಞಾನಿಗಳು ಈ ಮಾತನ್ನು ಒಪ್ಪುತ್ತಾರೆ.

ಜಗತ್ತು ಸತ್ಯವಾಗಿದೆ. ಲಿಂಗಮಯವಾಗಿದೆ. ಆನಂದದ ಮಹಾಮನೆಯಾಗಿದೆ ಹೀಗಾದ ಮೇಲೆ ಕೇವಲ ವೈರಾಗ್ಯಕ್ಕೆ ರಾಜಪಟ್ಟವೆಲ್ಲಿದೆ? ಹೂವಿನಲ್ಲಿ ಗಂಧವಿದ್ದಂತೆ ಜೀವರುಗಳಲ್ಲಿ ಪರಮಾತ್ಮನಿದ್ದಾನೆ ಪರಮಾತ್ಮನೇ ಪ್ರಥಮತತ್ವವು. ಈ ಅರುಹನ್ನು ಮರೆತದ್ದರಿಂದ ಜೀವಾತ್ಮನಿಗೆ ದುಃಖವಿದೆ. ಈ ಅರುಹು ಅಥವಾ ಲಿಂಗದೃಷ್ಟಿ ಬಂದೊಡನೆ ಎಲ್ಲೆಲ್ಲಿಯೂ ಆನಂದದ ರಾಶಿಯೇ ಅನುಭವವೇದ್ಯವಾಗುವದು. ಈ ಲಿಂಗದೃಷ್ಟಿಯಿಂದ ಜೀವನದ ಎಲ್ಲ ಕ್ಷೇತ್ರಗಳಲ್ಲಿಯೂ ಬೆಳಕು ಬೀಳುವದು. ಪ್ರಪಂಚವು ನಂದನವನವಾಗುವದು. ಭೂಕೈಲಾಸವಾಗುವದು. ಅಂಗವು ಲಿಂಗವಾಗುವದೆಂದರೆ ಇದೇ. ದೇಹ, ಮನ, ಪ್ರಾಣ, ಜೀವಾತ್ಮ ಇವೆಲ್ಲವೂ ಪರಮಾತ್ಮನ ಆವಿಷ್ಕಾರ ಪಾತ್ರವಾಗುವ ಕ್ರಮವೇ ಷಟ್‌ಸ್ಥಲ ಕ್ರಮವು.

ಪರಮಾತ್ಮನು ಶಕ್ತಿಯ ಸಹಾಯದಿಂದ ಬ್ರಹ್ಮಾಂಡವನ್ನು ನಿರ್ಮಿಸಿದಂತೆ ಜೀವಾತ್ಮನು ಭಕ್ತಿಯ ಸಹಾಯದಿಂದ ಅದ್ಭುತ ಕಾರ್ಯಗಳನ್ನು ಮಾಡಬಲ್ಲನು. ಕಾರಣ ಬಸವಣ್ಣನು ಶರಣನು, ಪರಮಾತ್ಮನ ಪ್ರತಿಬಿಂಬ, ಎನ್ನುವರು.

ಅನುಭವ ಮಂಟಪದ ಅನುಭವವು ಏಕಪಕ್ಷೀಯವಲ್ಲ. ಅದು ಸರ್ವ ಪಕ್ಷೀಯವು. ಅದು ಲಿಂಗಾಂಗ ಸಾಮರಸ್ಯವು. ಈ ಅನುಭವವನ್ನು ಪ್ರತಿಯೊಬ್ಬನು ತನ್ನ ಮನೆಯಲ್ಲಿ ವೈಯಕ್ತಿಕವಾಗಿ ಸಾಧನೆ ಮಾಡಿ ಅನುಭವ ಮಂಟಪದಲ್ಲಿಟ್ಟು ಕೊರತೆಯಿದ್ದರೆ ತುಂಬಿಕೊಂಡು ಪ್ರಗತಿಹೊಂದುತ್ತಿದ್ದನು. ಆದರೆ ವೈದಿಕ ಋಷಿಗಳ ಅನುಭವವು ವೈಯಕ್ತಿಕವಾಗಿ ಕಂಡದ್ದೇ ಶ್ರೇಷ್ಠ ಎನ್ನುವದರಿಂದ ಅಲ್ಲಿ ಸಮಾಜ ಪ್ರಗತಿ ಇಲ್ಲ.

ಶಿವಾನುಭವದಲ್ಲಿ ಒತ್ತಾಯದ ಮತಾಂತರಕ್ಕೆ ಸ್ಥಾನವಿಲ್ಲ. ಸ್ವಸಂತೋಷದಿಂದ ಹೃದಯಪರಿವರ್ತನೆಯಾಗಲಿಕ್ಕೆ ಅನುಕೂಲ ವಾತಾವರಣವನ್ನು ಸಿದ್ಧಗೊಳಿಸುವ ಕಾರ್ಯವನ್ನೇ ಅನುಭವ ಮಂಟಪವು ಮಾಡಿತು. ವ್ಯಕ್ತಿಯು ತನ್ನ ತಪ್ಪನ್ನು ತಾನೇ ತಿದ್ದಿಕೊಳ್ಳುವಂತೆ—ಸಂತೋಷದಿಂದ ತಿದ್ದಿಕೊಳ್ಳುವಂತೆ ಅಲ್ಲೊಂದು ವಾತಾವರಣವು ಒಡಮೂಡಿತ್ತು ಆ ಅನುಭವ ಮಂಟಪದಲ್ಲಿ. ಇದೇ ವ್ಯಕ್ತಿತ್ವವಿಕಾಸದ ಮಾರ್ಗವಲ್ಲವೇ ? ಆಧುನಿಕ ಶಿಕ್ಷಣ ಸಿದ್ಧಾಂತದ ಶ್ರೇಷ್ಠ ತತ್ವವೇ ಇದಾಗಿಲ್ಲವೇ?

ಯೋಗ್ಯತೆಯುಳ್ಳವರ ಯೋಗ್ಯತೆಯನ್ನು ತಿಳಿದು ಅದನ್ನು ಹೊಗಳಿ ಅವರ ಕೂಡ ಸಮರಸವಾಗಿ ಹೋಗುವದರಿಂದಲೇ ವ್ಯಕ್ತಿಯ ಮತ್ತು ಸಮಾಜದ ಬೆಳವಣಿಗೆಯು ಸುಗಮವಾಗುವದೆಂದೇ ಅನುಭವ ಮಂಟಪವು ಹೇಳುತ್ತದೆ. ಜಗತ್ತಿನಲ್ಲಿಯ ವರ್ಣ, ಕುಲ, ಜಾತಿ, ಪಕ್ಷ, ಉಚ್ಚ ನೀಚ ಕಲ್ಪನೆ,—ಇವೆಲ್ಲವೂ ಜೀವನೋನ್ನತಿಗೆ ಕಾರಣವಾಗಲಾರವು. ಏಕತ್ವದಲ್ಲಿ ಅನೇಕತ್ವವನ್ನೂ, ಅನೇಕತ್ವದಲ್ಲಿ ಏಕತ್ವವನ್ನೂ ಅನುಭವಿಸುವ ಸಹಜ ದೃಷ್ಟಿಯನ್ನೇ ಅನುಭವ ಮಂಟಪವು ಕೊಡುತ್ತದೆ.

ಪರರ ಬಗ್ಗೆ ನಾವು ಹೆಚ್ಚೆಚ್ಚು ತಿಳಿದುಕೊಂಡಂತೆ ಅವರ ಬಗ್ಗೆ ಹೆಚ್ಚೆಚ್ಚು ಪ್ರೇಮವು ಹುಟ್ಟುತ್ತದೆ. ಪರಸ್ಪರ ದ್ವೇಷಭಾವನೆಯನ್ನು ಕಳೆದುಕೊಳ್ಳುವ ಮಾರ್ಗವೇ ಇದು. ಇದನ್ನೇ ಅನುಭವಮಂಟಪವು ಹೇಳುತ್ತದೆ.

ಲಿಂಗ ನುಡಿ, ಲಿಂಗ ನಡೆ, ಲಿಂಗ ಸಂಶೋಧನೆ ಸಾಧ್ಯವಾಗಬೇಕಾದರೆ ಅನುಭವಮಂಟಪವನ್ನೇ ಅನುಸರಿಸಬೇಕು. ಜೀವನದಲ್ಲಿ ಸ್ವಾರಸ್ಯವಿಲ್ಲವೆನ್ನುವ ಅರಸಿಕರೂ, ದಾಸ್ಯಮನೋವೃತ್ತಿಯ ಗುಲಾಮರೂ ಅಲ್ಲಿಗೆ ಹೋಗಿ ರಸವನ್ನೂ ಸ್ವಾತಂತ್ರ್ಯವನ್ನೂ ಸವಿದು ಸ್ವತಂತ್ರ್ಯಯುಕ್ತ ರಸಮಯ ಜೀವನವನ್ನು ಸಾಗಿಸಬೇಕು. ಕಾರಣ 'ಬಸವಣ್ಣನು ರಸದ ವಾರುಧಿ" ಎಂದು ಶರಣರು ಅವನನ್ನು ಕರೆದಿದ್ದಾರೆ.

ಅಜ್ಞಾನ, ದುಃಖ, ಜರೆ, ಮರಣ, ರೋಗ, ಮಾನಸಿಕ ರೋಗ (ಆಧಿ)ಗಳಿಂದ ಪಾರಾಗುವ ಹಂಚಿಕೆಯು ತನ್ನೊಳಗಿದೆ. ಹೀಗೆ ಒಳಗಣ್ಣನ್ನು ತೆರೆಯುವಂತಹದೇ ಅನುಭವ ಮಂಟಪವು ಜಗತ್ತು ಒಂದು ಶಾಲೆಯು, ಮನುಷ್ಯನು ಅದರಲ್ಲಿಯ ವಿದ್ಯಾರ್ಥಿಗಳು. ಪ್ರಕೃತಿಯು ಪುಸ್ತಕವು ಎಲ್ಲರೂ ಕೂಡಿ ಹೋಗುವದರಿಂದಲೇ ಬಾಂಧವ್ಯದಿಂದ ಕೂಡಿ ನಡೆಯುವದರಿಂದಲೇ ಸುಖ-ಶಾಂತಿಗಳನ್ನು ಹೊಂದಬಲ್ಲೆವು. ಸಾಮೂಹಿಕ ಜೀವನದಲ್ಲಿಯೇ ಸುಖ-ಶಾಂತಿಗಳ ಉಗಮಸ್ಥಾನವಿದೆ. ಏಕಾಂಗರಾಗಿ ಜೀವಿಸಲಿಕ್ಕೆ ವೈದಿಕ ಋಷಿಗಳಂತೆ ಮನಸ್ಸು ಮಾಡಿದರೆ ಸುಖ-ಶಾಂತಿಗಳಿಗೂ ಧಕ್ಕೆ ತರುತ್ತವೆ ನಲಿ, ತಿಳಿ, ಸೇವಿಸು, ಸಹಾಯ ಮಾಡು, ಸ್ನೇಹಬೆಳಿಸು, ಏನು ಮಾಡಿದರೂ ಕೂಡಿಮಾಡು ಇದನ್ನೇ ಪ್ರಜಾಪ್ರಭುತ್ವಕ್ಕೆ ಒಂದು ಅತ್ಯುನ್ನತವಾದ ಮತ್ತು ಅತ್ಯಗಾಧವಾದ ಪರಮಾತ್ಮ ತತ್ವದ ಆದರ್ಶವಿಲ್ಲದ್ದರಿಂದ ೧೯೧೪ರ ಇಸ್ವಿಯಲ್ಲಿಯೂ, ೧೯೩೯ ರಲ್ಲಿಯೂ ಎರಡು ಮಹಾಯುದ್ಧಗಳಾದವು. ಪ್ರಜಾಪ್ರಭುತ್ವವು ಮೇಲಿನ ಆದರ್ಶವನ್ನು ಮುಂದಿಟ್ಟುಕೊಂಡು ನಡೆದರೆ ಜಗತ್ತಿನಲ್ಲಿ ಯುದ್ಧಗಳೇ ಆಗಲಾರವು. ಆದಕಾರಣ ಪ್ರಜಾಪ್ರಭುತ್ವವಾದಿಗಳು ಅನುಭವಮಂಟಪದ ಕಡೆಗೆಯೇ ಹೊರಳಬೇಕು.

'ನಮ್ಮಷ್ಟಕ್ಕೆ ನಾವು' ಎಂಬ ಸಂಕುಚಿತ ಮನೋವೃತ್ತಿಯು ಉದಾತ್ತವಾಗಬೇಕಾದರೆ ಲಿಂಗಾಂಗ ಸಾಮರಸ್ಯ ಸಂಸ್ಕೃತಿಯ ಕಡೆಗೆ

ತಿರುಗದೆ ಗತ್ಯಂತರವೇ ಇಲ್ಲ. ಲಿಂಗಾಂಗಸಾಮರಸ್ಯ ಸಂಸ್ಕೃತಿಯು ಹಿರಿಯರಲ್ಲಿಯ ಅನುಭವದ ಗರ್ವವನ್ನು, ಕಿರಿಯರಲ್ಲಿಯ ಸ್ವಾತಂತ್ರ್ಯದ ಗರ್ವವನ್ನೂ ನಿವಾರಣೆ ಮಾಡಿ ಹಿರಿಕಿರಿದೆಂಬ ಭೇದವಡಗಿದಡೆ ಆತನೇ ಶರಣ ಎಂದು ಸಾರುತ್ತಿದೆ.

೨೦ನೇ ಶತಮಾನದ ನವನಾಗರಿಕತೆಯು ಪ್ರಧಾನ ದೋಷವಾವುದು? ಸ್ತ್ರೀಪುರುಷರಲ್ಲಿಯ ವಿಷಮತೆ ಪೂರ್ವಗೋಲಾರ್ಧದಲ್ಲಿ ವಿಶೇಷತಃ ಭರತಖಂಡದಲ್ಲಿ ಇದ್ದರೆ, ಸ್ತ್ರೀಪುರುಷರಲ್ಲಿಯ ಏಕಪಕ್ಷೀಯ ಭೌತಿಕಸಂಬಂಧವು ಪಶ್ಚಿಮ ಗೋಲಾರ್ಧದಲ್ಲಿ ಇದೆ. ಈ ವಿಷಮತೆ, ಈ ಭೌತಿಕ ಸಂಬಂಧವನ್ನು ಕಳೆದು, ಅನುಭವಮಂಟಪವು ಆಧ್ಯಾತ್ಮಿಕ ಸಂಬಂಧ ಸಮಾನತೆಗಳನ್ನು ಸ್ತ್ರೀಪುರುಷರಲ್ಲಿ ಸ್ಥಾಪಿಸುತ್ತದೆಯೆಂಬ ಸಂಗತಿಯು ನಿಷ್ಪಕ್ಷಪಾತಿಗಳಿಗೆ ಹೊಳೆಯದಿರದು. ಈ ದೃಷ್ಟಿಯಿಂದ ವಿಚಾರಿಸಿದರೆ ಅನುಭವಮಂಟಪವು ಜಗತ್ತಿಗೆ ಆದರ್ಶವಾದ ನವನಾಗರಿಕತೆಯನ್ನು ಕೊಡಲು ಕೈಯೆತ್ತಿ ಕರೆಯುತ್ತಿರುವದು. ಆದ್ದರಿಂದ ಅನುಭವಮಂಟಪವು ಜಗತ್ಕಲ್ಯಾಣ ಮಂಟಪವೆಂದು ಹೇಳಿದ್ದೇವೆ.

ನಾವು ಕೇವಲ ಜ್ಞಾನಿಗಳೂ, ಅನುಭಾವಿಗಳೂ ಆದರೆ ತೀರಲಿಲ್ಲ. ಆ ಜ್ಞಾನ, ಅನುಭವಗಳು ನಮ್ಮ ಕ್ರಿಯೆಗಳಲ್ಲಿ ಪ್ರಕಟವಾಗಬೇಕು. ಅಂದರೆ ನಮ್ಮಿಂದ ಜಗತ್ತಿನ ಸೇವೆ ಸಾಧಿಸುವದು. ಲಿಂಗಜ್ಞಾನಾನುಭವ, ಮತ್ತು ಲಿಂಗಕ್ರಿಯೆಗಳಿಂದ ದ್ವೈತಾದ್ವೈತದಿಂದ ಜಗತ್ಕಲ್ಯಾಣವಾಗುವದು. ಇದೇ ಸಮನ್ವಯ ಮಾರ್ಗ. ಇದೇ ಜಗತ್ತಿಗೆ ಬೇಕು.

ಲಿಂಗಕ್ರಿಯೆಯೆಂದರೆ ಅನ್ಯರೊಡನೆ ಕೂಡಿ ನಡೆಯುವ ಕ್ರಿಯೆ. ಲಿಂಗಜ್ಞಾನನೆಂದರೆ ಅನ್ಯರೊಡನೆ ಕೂಡಿಪಡೆದ ಜ್ಞಾನ ಈ ಕ್ರಿಯಾಜ್ಞಾನ ಸಾಮರಸ್ಯದ ಸುಂದರ ಸಮನ್ವಯ ಮಾರ್ಗವು ಷಟ್‌ಸ್ಥಲ ಸಿದ್ಧಾಂತ ಮಾರ್ಗವು. ಪರಮಾತ್ಮನ ಇಚ್ಛಾ, ಜ್ಞಾನ, ಕ್ರಿಯೆಗಳು ಜೀವಾತ್ಮನ ಇಚ್ಛಾ, ಜ್ಞಾನ, ಕ್ರಿಯೆಗಳಲ್ಲಿ ಸಮರಸವಾದರೆ ಜಗತ್ಕಲ್ಯಾಣವಾಗುವದು. ಇದರಿಂದ ಜಗತ್ತಿನ ಸಮಸ್ಯೆಗಳು ಸುಲಭವಾಗಿ ಬಿಡಿಸಲ್ಪಡುವವು. ಜೀವನದ ಮಹೋನ್ನತ ಉದ್ದೇಶವು ಸಾಧ್ಯವಾಗುವದು. ಇದೇ ಭೂ ಕೈಲಾಸ, ದೇವರಾಜ್ಯ. ಲಿಂಗರಾಜ್ಯ. ಇದನ್ನು

ಸ್ಥಾಪಿಸುವದಕ್ಕಾಗಿಯೇ ಶರಣರು ಅಹರ್ನಿಶ ಹೋರಾಡಿದರು. ಕಲ್ಯಾಣದಲ್ಲಿಯ ಚಾಲುಕ್ಯರಾಜ್ಯ ಹಾಳಾದರೂ, ಜಗತ್ಕಲ್ಯಾಣವೆಂಟಪದ ಅನುಭಾವ ವಿದ್ಯೆಯು, ಅನುಭವವೆಂಟಪದ ಲಿಂಗಾಂಗ ಸಾಮರಸ್ಯ ಸಂಸ್ಕೃತಿಯು, ವಚನಗಳಲ್ಲಿ ಹುದುಗಿಕೊಂಡಿರುವದು. ಅದನ್ನು ಬಹಿಷ್ಕರಿಸಿದರೆ, ಅನುಭವಿಸಿದರೆ ಹೊಸ ಜಗತ್ತೇ ರೂಪುಗೊಳ್ಳುವದರಲ್ಲಿ ಸಂದೇಹವಿಲ್ಲ.

---

## ಯೋಗಾಭ್ಯಾಸಕ್ಕೆ ಯೋಗ್ಯ ಅಧಿಕಾರಿಗಳಾರು?

(ಲೇಃ—ಶ್ರೀ ಗುರುಬಸವ ಸ್ವಾಮಿಗಳು ಮು. ಬಂಥನಾಳ ತಾ॥ ಇಂಡಿ)

---

" ತಸ್ಮಾಚ್ಛಾಸ್ತ್ರಂ ಪ್ರಮಾಣಂ ತೆ ಕಾಯರ್ಾ ಕಾರ್ಯ ವ್ಯವ ಸ್ಥಿತೌ" ಎಂಬ ಭಗವದ್ಗೀತೋಕ್ತಿಯಂತೆ ಹಿಂದೂ ಜನರ ಪ್ರಮಾಣ ಗ್ರಂಥಗಳಾದ ಪೂರ್ವ ಮೀಮಾಂಸ, ಉತ್ತರ ಮೀಮಾಂಸ, ಸಾಂಖ್ಯ, ನ್ಯಾಯ, ವೈಶೇಷಿಕ, ಯೋಗ ಈ ಮೊದಲಾದ ಷಡ್ದರ್ಶನಗಳಲ್ಲಿ ಪತಂಜಲಿ ಋಷಿ ಕೃತವಾದ ಯೋಗದರ್ಶನವು ಅತ್ಯಂತ ಮಹತ್ವವಾದದೆಂಬ ಸಂಗತಿಯು ಈವಾಗ ಬಹು ಜನರ ಲಕ್ಷವನ್ನು ತನ್ನತ್ತ ಎಳೆಯುಹತ್ತಿದೆ. ಉಳಿದ ಶಾಸ್ತ್ರಗಳು ಕೇವಲ ಬುದ್ಧಿ ವಿಕಾಸ, ವಿವಾದ ವಿಚಾರಗಳಲ್ಲಿಯೇ ಪರ್ಯವಸನವಾಗುತ್ತಿದ್ದು ಯೋಗ ಶಾಸ್ತ್ರವು ಮಾತ್ರ ದೇಹ, ಮನ, ಬುದ್ಧಿ, ಭಾವನಾದಿಗಳೆಲ್ಲವುಗಳ ಬೆಳವಣಿಗೆಗಳಿಗೆ ಕಾರಣವಾಗಿದ್ದರಿಂದಲೂ ಭೌತಿಕ ಶಾಸ್ತ್ರದಂತೆ ಅದು ಪ್ರತ್ಯಕ್ಷ ಪ್ರಮಾಣಕ್ಕೆ ಗಮ್ಯವಾದುದರಿಂದಲೂ ಸದ್ಯದ ಹಿಂದೂ ದೇಶದ ಪರಿಸ್ಥಿತಿಗೆ ಯೋಗ ಶಾಸ್ತ್ರದ ಅಭ್ಯಾಸವು ಬಹು ಅಗತ್ಯವಾದುದೆಂದು ಮೈಸೂರಿನ ವಿದ್ಯಾಮಂತ್ರಿಗಳಾಗಿದ್ದ ರಾವುಬಾಹದ್ದೂರ ಡಾ॥ ಟಿ. ಸಿ. ಎಂ. ರಾಯನ್ನರವರು ಮೈಸೂರಿನ ಯೋಗ ಶಾಲೆಯ ಹದಿನೈದನೇ ವಾರ್ಷಿಕೋತ್ಸವದ ತಮ್ಮ ಅಧ್ಯಕ್ಷೀಯ ಭಾಷಣದಲ್ಲಿ ಹೇಳಿರುವರು. ಇದು ವಿಚಾರಪೂರಿತ ವಿಷಯವಾಗಿದೆ. ಹೀಗೆ ಜನೋಪಯುಕ್ತವಾದ ಯೋಗಾಭ್ಯಾಸವು.

ಜನಾನುಷ್ಠಾನಕ್ಕೆ ಬರದಿರಲು ಅನೇಕ ಕಾರಣಗಳಲ್ಲಿ ಯೋಗ ಸಾಧನೆಯನ್ನು ಮಾಡತಕ್ಕವರು ಸಂಸಾರದಲ್ಲಿರಬಾರದು, ಹೆಂಡರು ಮಕ್ಕಳು ಹೊಲ ಮನೆಮಾರುಗಳನ್ನು ತೊರೆದು ಸನ್ಯಾಸಿಯಾಗಿರಬೇಕು. ಅಥವಾ ಬಾಲಬ್ರಹ್ಮಚಾರಿಗಳಾಗಿರಬೇಕು, ಅಂಥವರಿಗಾಗಿಯೇ ಯೋಗ ವಿದ್ಯೆಯು ಸಾಧ್ಯವು, ಗ್ರಹಸ್ಥರಿಗೆ ಎಂದಿಗೂ ಸಾಧ್ಯವಲ್ಲ, ಎಂಬ ವಿಚಾರವು ಬಹು ಜನರಲ್ಲಿ ಪ್ರಸಾರವಾಗಿರುವದು ಒಂದು ಮುಖ್ಯ ಕಾರಣವಾಗಿದೆ. ಈ ವಿಚಾರವು ಪ್ರಪಂಚದಲ್ಲಿರುವವರಿಗೆ ಅಧಿಕಾರವಿಲ್ಲ ವೆನ್ನುವಷ್ಟು ಜನಾಂಗದಲ್ಲಿ ದೃಢವಾಗಿ ಬೇರು ಬಿಟ್ಟು ಹೋಗಿದೆ. ಆದರೆ ಪ್ರಾಚೀನ ಯೋಗ ಗ್ರಂಥಗಳನ್ನು ಸೂಕ್ಷ್ಮ ದೃಷ್ಟಿಯಿಂದ ಅವಲೋಕನ ಮಾಡಿದರೆ, ಯೋಗಾಭ್ಯಾಸಕ್ಕೆ ಸನ್ಯಾಸಿಗಿಂತ ಪ್ರಪಂಚದಲ್ಲಿರುವವರೇ ಅಧಿಕಾರಿಗಳಾಗಲು ಹೆಚ್ಚು ಅನುಕೂಲವೆಂದು ನಿಃಸಂದೇಹವಾಗಿ ತಿಳಿದು ಬರುವದು.

ಆದಿ ಯೋಗಿಯಾದ ಭಗವಾನ್ ಶಂಕರನು ಸತಿಸಹಿತನಾಗಿದ್ದಾನೆ. ಯೋಗಸಿದ್ಧನಾದ ನಾರಾಯಣನೂ ಲಕ್ಷ್ಮೀಸಹಿತನಾಗಿದ್ದಾನೆ. ಸದಾ ಪದ್ಮಾಸನನಾದ ಬ್ರಹ್ಮನೂ, ಸರಸ್ವತಿ ಸಹಿತನಾಗಿದ್ದಾನೆ. ರಾಮ ರಾವಣಾದಿಗಳೂ, ಸತಿ ಸಹಿತರಾಗಿದ್ದರೂ ಯೋಗಿಗಳಾಗಿದ್ದಾರೆಂದು ಅವರ ಚರಿತ್ರೆಗಳಿಂದ ಕಂಡುಬರುವದು. ಯತ್ರ ಯೋಗೇಶಃ ಕೃಷ್ಣಯೆಂದು ಹೇಳಿಸಿಕೊಳ್ಳುವ ಕೃಷ್ಣನೂ ಒಬ್ಬರಲ್ಲದೆ ಅನೇಕ ಸ್ತ್ರೀಯರಿಂದ ಕೂಡಿಕೊಂಡಿದ್ದನೆಂದು ಭಾಗವತವು ಸಾರಿ ಹೇಳುತ್ತದೆ. ಸ್ತ್ರೀಯರು ಯೋಗಕ್ಕೆ ವಿಘ್ನಕಾರಿಯಾಗಿದ್ದರೆ, ಯೋಗ ಸಾಮ್ರಾಟನಾದ ಮಹಾದೇವನು ದಾಕ್ಷಾಯಣಿಯು ದಕ್ಷನ ಸಂಬಂಧವಾದ ದೇಹವನ್ನು ದಕ್ಷನ ಯಜ್ಞದಲ್ಲಿ ಬಿಟ್ಟ ಬಳಿಕ ಪುನಃ ಪಾರ್ವತಿಯನ್ನು ಲಗ್ನವಾಗುತ್ತಿರಲಿಲ್ಲ. ವಶಿಷ್ಠ, ಯಾಜ್ಞವಲ್ಕ್ಯ, ಅತ್ರಿ, ಗೌತಮ, ವ್ಯಾಸಾದಿ ಮುನಿಗಳೂ ಗೃಹಸ್ಥಾಶ್ರಮಿಗಳಾಗಿ ಯೋಗಿಗಳಾಗಿದ್ದಾರೆಂದು ಇವರೆಲ್ಲರ ಚಾರಿತ್ರ್ಯದಿಂದ ತಿಳಿದು ಬರುತ್ತದೆ. ಬಸವಾದಿಪ್ರಮಥರು ಕೂಡಾ ಗೃಹಸ್ಥಾಶ್ರಮಿಗಳಿದ್ದರೂ ಯೋಗಾಭ್ಯಾಸವನ್ನು ಮಾಡಿದವರಾಗಿದ್ದರೆಂದು ಅವರ ವಚನ[illegible]ಗಳಿಂದ ಕಂಡುಬರುತ್ತದೆ. ಎಷ್ಟೋ ಸ್ತ್ರೀಯರು ಕೂಡಾ [illegible]ಗಳಾಗಿದ್ದರೆಂದು ಗಾರ್ಗಿ, ಮೀರಾ, ಅಕ್ಕಮಹಾದೇವಿಯರ ಜೀವನೇತಿಹಾಸಗಳಿಂದ ಕಾಣಬಹುದಾಗಿದೆ. ಆಧುನಿಕ ಯೋಗಿಗಳಲ್ಲಿ

ಅಗ್ರಗಣ್ಯನಾದ ರಾಮಕೃಷ್ಣ ಪರಮಹಂಸರಿಗೆ ನಿಜವಾದ ಯೋಗಾನುಭವವಾದುದು ಒಬ್ಬ ಯೋಗಿನಿಯಿಂದಲೇ ಎಂಬುದು ಅವರ ಗ್ರಂಥಗಳಲ್ಲಿ ಬರೆದಿರುವರು. ಹೀಗೆ ಯೋಗಾನುಭವವು ಸ್ತ್ರೀಪುರುಷರ ಪ್ರಾಪಂಚಿಕ ಪಾರಮಾರ್ಥಿಕರೆಲ್ಲರಿಗೂ ಸಾಧ್ಯವಾಗಲು ಅನುಕೂಲವಾಗಿರುವಾಗ ಅದು ಕೇವಲ ಸಾಧು, ಸನ್ಯಾಸಿ, ಬಾಲಬ್ರಹ್ಮಚಾರಿಗೆಯೇ ಸಾಧ್ಯವೆಂದು ಬಹುಜನರ ಅಭಿಪ್ರಾಯವಾಗಿರುವದು ಅತಿ ಶೋಚನೀಯವು. ಸನ್ಯಾಸಿಗಿಂತ ಸಂಸಾರದಲ್ಲಿದ್ದವರಿಗಾಗಿಯೇ ಯೋಗಾಭ್ಯಾಸವು ಹೆಚ್ಚು ಅನುಕೂಲವೆಂದು ಹಿಂದೆ ಹೇಳಿದೆಯಲ್ಲವೆ ? ಅದು ಹೇಗೆಂಬುದನ್ನು ಈವಾಗ ನೋಡುವಾ.

ಯೋಗಾಭ್ಯಾಸವನ್ನು ಮಾಡುವದರಲ್ಲಿ ಎಲ್ಲದಕ್ಕಿಂತ ಮುಖ್ಯವಾದ ಸಂಗತಿ ಯಾವದೆಂದರೆ ಅಭ್ಯಾಸವು. ಪ್ರತಿನಿತ್ಯ ವೇಳೆಗೆ ಸರಿಯಾಗಿ ನಡಿಯುತ್ತಿರಬೇಕು. ಯೋಗ್ಯ ಸಮಯಕ್ಕನುಸರಿಸಿ ಇಪ್ಪತ್ತುನಾಲ್ಕು ತಾಸುಗಳಲ್ಲಿ ಒಂದು ಸರತಿಗೆ ಅತಿ ಸ್ವಲ್ಪ ವೇಳೆಯೆಂದರೆ ಎರಡು ತಾಸುಗಳಾದರೂ ಸಾಧನೆಯು ಸಾಗಬೇಕು. ಪ್ರಾತಃಕಾಲದ ನಾಲ್ಕು ಅಥವಾ ಐದು ಗಂಟೆಯಿಂದ ಎರಡು ತಾಸುಗಳೂ ಸಾಯಂಕಾಲ ಆರು ಗಂಟೆಯಿಂದ ಎರಡು ತಾಸುಗಳೂ ಸಾಧನೆಗೆ ಸರ್ವೋತ್ತಮ ವೇಳೆಯೆಂದು ಎಲ್ಲ ಯೋಗಿಗಳ ಅಭಿಪ್ರಾಯವಿರುತ್ತದೆ. ಒಂದು ವೇಳೆ ಸಾಧಕನು ತನ್ನ ಅನುಕೂಲತೆಗನುಸರಿಸಿ ಬೇರೆ ಕಾಲವನ್ನು ಗೊತ್ತುಮಾಡಿಕೊಂಡರೂ ಯಾವ ತರದ ಹಾನಿಯೂ ಇಲ್ಲ. ಅಂತೂ ಗೊತ್ತುಮಾಡಿದ ವೇಳೆಗೆ ಕಿಂಚಿತ್ ಕೂಡಾ ವ್ಯತ್ಯಾಸವಿಲ್ಲದೆ ಅಭ್ಯಾಸವು ಸಾಗಬೇಕು. ಸಮಯಕ್ಕನುಸರಿಸಿ ನಿದ್ರೆ ಜಾಗರಣಗಳಾಗಬೇಕು. ಜಲಮಲಾಧಿಗಳಾಗಬೇಕು. ಯೋಗಾಭ್ಯಾಸಕ್ಕನುಕೂಲವಾಗಿರುವ ಆಹಾರ ಹಾಗೂ ವಿಹಾರಗಳು ಆಗಬೇಕು. ಯೋಗಾಭ್ಯಾಸವು ಏಕಾಂತವಾದ ಪವಿತ್ರವಾದ ಸ್ವಚ್ಛ ಸುಗಂಧಮಯವಾದ ಕ್ರಿಮಿ ಕೀಟಕಾದಿಗಳಿಲ್ಲದ ಸ್ವತಂತ್ರವಾದ ಸ್ಥಾನದಲ್ಲಿ ಮಾಡಲ್ಪಡಬೇಕಾಗುವದು. ಅದಿಲ್ಲದೆ ಯೋಗಸಿದ್ಧಯು ಸಾಧಿಸುವದಿಲ್ಲ. ಆದರೆ ಇಷ್ಟೆಲ್ಲ ಅನುಕೂಲತೆಗಳು ಮನೆಮಾರು ಬಿಟ್ಟು ಅತ್ತಿತ್ತ ನಿರಾಲಂಬಿಯಾಗಿ ತಿರುಗುತ್ತಿರುವ ಸಾಧುಸನ್ಯಾಸಿಗಳಿಗೆ ದೊರೆಯುವದು ಹೇಗೆ ಸಾಧ್ಯವು ? ಹಚ್ಚಗಿದ್ದಲ್ಲಿ ಮೇದು ಬೆಚ್ಚಗಿದ್ದಲ್ಲಿ ಮಲಗುವ ಸ್ವೇಚ್ಛಾ ಪಶುವಿನ ವೃತ್ತಿಯನ್ನಿಟ್ಟುಕೊಂಡು

ಭಿಕ್ಷೇ ಬೇಡುತ್ತ ತಿರುಗುತ್ತಿರುವವರಿಗೆ ಸಮಯಕ್ಕನುಸರಿಸಿ ಊಟವಿಲ್ಲ, ಒಂದು ವೇಳೆ ಊಟ ಸಿಕ್ಕರೂ, ಯೋಗಾಭ್ಯಾಸಕ್ಕನುಗುಣವಾದ ಊಟ ವಿರುವದಿಲ್ಲ. ಊಟವೇ ವೇಳೆಗನುಸರಿಸಿ ಆಗದಿದ್ದರೆ ನಿದ್ರೆಯೂ ಸಕಾಲಕಾಗುವದಿಲ್ಲ. ಹೀಗಾಗಿ ಯೋಗಾಭ್ಯಾಸದ ಪ್ರಾರಂಭದಲ್ಲಿಯೇ ಅಡಚಣಿಗಳುಂಟಾದ ಬಳಿಕ ಯೋಗಸಾಧನೆಯೂ ಮುಂದುವರಿಯುವದು ಸಾಧ್ಯವಿಲ್ಲ. ಸಾಧನೆಯೇ ಸಾಗಲು ಶಕ್ಯವಿಲ್ಲದಿದ್ದಾಗ ಸಾಧ್ಯಸಿದ್ಧಿಸುವದಂತೂ ಅತ್ಯಂತ ಅಸಂಭವನೀಯವು.

ಇದೇ ವಿಷಯವನ್ನು ಭಗವದ್ಗೀತೆಯಲ್ಲಿ ಸ್ಪಷ್ಟವಾಗಿ ಪ್ರತಿಪಾದಿಸಿರುತ್ತದೆ. "ನಾತ್ಯಸ್ನತಸ್ತು ಯೋಗೋಸ್ತಿನ ಚೈಕಾಂತಮನಸ್ನತಃ। ನಾಚಾತಿ ಸ್ವಪ್ನಶೀಲಸ್ಯ ಜಾಗ್ರತೋ ನೈವಚಾರ್ಜುನ ॥೧೬॥

"ಯುಕ್ತಾ ಹಾರ ವಿಹಾರಸ್ಯ ಯುಕ್ತ ಚೇಷ್ಟಸ್ಯ ಕರ್ಮಸು। ಯುಕ್ತ ಸ್ವಪ್ನಾವ ಚೋದಸ್ಯ ಯೋಗೋ ಭವತಿ" ದುಃಸ್ವಹಾ ॥೧೭॥

(ಅಧ್ಯಾಯ ೬.)

ಅತಿಯಾಗಿ ಊಟ ಮಾಡುವವನಿಗೂ ಸ್ವಲ್ಪವೂ ಕೂಡಾ ಊಟ ಮಾಡದೆ ಇರುವವನಿಗೂ ಅತಿ ನಿದ್ರೆ ಮಾಡುವವನಿಗೂ ಸ್ವಲ್ಪವೂ ಕೂಡ ನಿದ್ರೆ ಮಾಡದವನಿಗೂ ಯೋಗ ವಿದ್ಯೆಯು ಸಾಧಿಸುವದಿಲ್ಲ. ಯುಕ್ತವಾದ ಆಹಾರಯುಕ್ತವಾದ ವಿಹಾರಯುಕ್ತವಾದ ನಿದ್ರೆಯುಕ್ತವಾದ ಜಾಗರಣೆ ಮಾಡುವವನಿಗಾಗಿಯೇ ಸರ್ವದುಃಖ ವಿನಾಶಕವಾದ ಯೋಗವು ಸಿದ್ಧಿಸುವದು. ಹೀಗೆಯೇ ಅನೇಕ ಪ್ರಾಚೀನ ಯೋಗ ಗ್ರಂಥಗಳು ಹೇಳಿರುವವಲ್ಲದೆ ಹಿಂದಿನ ಇಂದಿನ ಮಹಾನುಭವಿಗಳಾದ ಎಲ್ಲ ಯೋಗಿಗಳೂ ಸಹ ಯೋಗಾಭ್ಯಾಸದ ಕಾಲದಲ್ಲಿ ಸಾತ್ವಿಕ ಆಹಾರವೇ ಇರಬೇಕಾದುದವಶ್ಯಕವೆಂದು ಹೇಳಿರುತ್ತಾರೆ. ಹಠಯೋಗ ಪ್ರದೀಪಿಕೆಯಲ್ಲಿ "ಅಭ್ಯಾಸಕಾಲೆ ಪ್ರಥಮಂ ಕುರ್ಯಾತ್ ಕ್ಷೀರಾಜ್ಯಭೋಜನಂ" ಅಂದರೆ ಅಭ್ಯಾಸದ ಆರಂಭದಲ್ಲಿ ಕೆಲಕೆಲವು ದಿವಸಗಳ ವರೆಗೆ ಕೇವಲ ಹಾಲುತುಪ್ಪಗಳ ನಂತರ ಯೋಗಿಯ ರುಚಿಯಲ್ಲಿ ಬದಲಾವಣೆಯಾಗುವದು. ಯೋಗಿಯು ಕಹಿ, ಖಾರ, ಅತಿ ಸಿಹಿ, ಹುಳಿ ಮೊದಲಾದವುಗಳನ್ನು ಬಿಡಬೇಕಾಗುವದಲ್ಲದೆ, ಚಹಾ ತಂಬಾಕಾದಿ ವ್ಯಸನಗನ್ನು ಬಿಡಬೇಕಾಗುವದು. ಸಾಮಾನ್ಯ ವ್ಯಸ್ಯನು ಊಟದಲ್ಲಿ ಉಪ

ಯೋಗಿಸುವ ಉಪ್ಪಿಗಿಂತ ಅತಿ ಸ್ವಲ್ಪ ಅಥವಾ ಪೂರ್ಣ ಲವಣ ವರ್ಜಿತ ವಾಗಿಯೇ ಆಹಾರ ತಕ್ಕೊಳ್ಳಬೇಕಾಗುವದು. ಹೀಗೆ ಸಾಮಾನ್ಯ ಮನುಷ್ಯನಿಗಾಗಿ ನಿತ್ಯದಲ್ಲಿ ಉಪಯೋಗಿಸುವ ಆಹಾರವು ಯೋಗಾ ಭ್ಯಾಸಿಗೆ ಯಾವ ಕಾಲದಲ್ಲಿಯೂ ಅನುಕೂಲವಾಗಲಾರದು. ಇಂದ ಬಳಿಕ ಗೃಹಹೀನ ಧನಹೀನ ಜನಸಹಾಯಹೀನರಾದ ಸನ್ಯಾಸಿ, ಸಾಧು, ಬೈರಾಗಿ, ಗೋಸಾಯಿ, ವೈರಾಗಿ ಮೊದಲಾದ ಭಿಕ್ಷೆ ಬೇಡಿ ಹೊಟ್ಟೆ ತುಂಬಿಕೊಳ್ಳುವವರಿಗೆ ದೊರೆಯುವ ಆಹಾರವು ನಿಜವಾಗಿ ಯೋಗಾ ಭ್ಯಾಸಕ್ಕೆ ಅನುಕೂಲವಲ್ಲದ ಆಹಾರವಾಗಿರುವದರಿಂದ ಅವರಿಗೆ ಯೋಗ ಸಿದ್ಧಿಸುವದು ಅತ್ಯಂತ ಕಠಿಣವಾಗುವದು. ತಾನು ನ್ಯಾಯವಾದ ರೀತಿ ಯಲ್ಲಿ ದುಡಿದ ಸಂಪಾದನೆಯಿಂದ ಮಾಡಿದ ಆಹಾರದಿಂದ ಯೋಗವು ತೀವ್ರ ಸಿದ್ಧಿಸುವದೆಂದು ಕೆಲವರು ಹೇಳುತ್ತಾರೆ. ಆದರೆ ಏನೂ ಪ್ರಯತ್ನ ಪಡದೆ ಬಿಕ್ಕೆಬೇಡಿ ತಂದು ತಿಂದು ತಿರುಗುವ ಆಲಸ್ಯಗಾರರಿಗೆ ಯೋಗ ವೆಂತು ಸಿದ್ಧಿಸುವದು

ಯೋಗಾಭ್ಯಾಸಕ್ಕಾಗಿ ಸ್ವತಂತ್ರವಾದ ಒಂದು ಸ್ಥಾನವಿರಬೇಕೆಂದು ಹಿಂದೆ ಹೇಳಿದೆಯಷ್ಟೇ. ಅದೇ ವಿಷಯವನ್ನೇ ಕುರಿತು ಸ್ವಾಮಿ ವಿವೇ ಕಾನಂದರು ಹೇಳಿರುವದೇನಂದರೆ— ಯೋಗಾಭ್ಯಾಸಕ್ಕಾಗಿ ಏಕಾಂತ ದಿಂದ ಶುದ್ಧ ಹವೆಯಾಡುವ ಕೋಣೆ ಒಂದು ದೊರೆಯುತ್ತಿದ್ದರೆ ಬಹಳೇ ಅನುಕೂಲವಾಗುವದು. ಆ ಕೋಣೆಯಲ್ಲಿ ಯಾರೂ ಮಲಗ ಬಾರದು. ಅದನ್ನು ಪವಿತ್ರವಾಗಿಟ್ಟಿರಬೇಕು. ಸ್ನಾನಮಾಡದೆ ಯಾರೂ ಆ ಕೋಣೆಯಲ್ಲಿ ಪ್ರವೇಶಿಸಬಾರದು. ಅಲ್ಲಿ ಯಾವಾಗಲೂ ಸುವಾಸನೆ ಯುಳ್ಳ ಪುಷ್ಪಗಳನ್ನಿಟ್ಟಿರಬೇಕು. ಮತ್ತು ಮಹಾನುಭಾವಿಗಳಾದ ಯೋಗಿಗಳ ಮಹಾತ್ಮರ ಚಿತ್ರಪಟಗಳನ್ನು ಹಚ್ಚಿರಬೇಕು. ಮುಂಜಾನೆ ಸಂಜೆಗೆ ಸುಗಂಧಮಯವಾದ ಧೂಪವನ್ನು ಸುಡುತ್ತಿರಬೇಕು. ಆ ಕೋಣೆ ಯಲ್ಲಿದ್ದಾಗ್ಗೆ ಸಿಟ್ಟು ಸಿಡುಕು ಹೊಟ್ಟೆಕಿಚ್ಚು ವಿಷಯವಾಸನೆ ಮೊದ ಲಾದ ಹೊಲಸು ವಿಷಯಗಳನ್ನೆಂದೂ ಮನದಲ್ಲಿ ತರಬಾರದು. ತನ್ನಂ ತೆಯೇ ಆಚಾರ ವಿಚಾರವುಳ್ಳವರನ್ನು ಮಾತ್ರ ಅಲ್ಲಿ ಹೋಗಗೊಡು ತ್ತಿರಬೇಕು ಹೀಗೆ ಮಾಡುವದರಿಂದ ಕೆಲವು ದಿವಸಗಳಲ್ಲಿ ಆ ಕೋಣೆ ಯಲ್ಲಿಯ ವಾತಾವರಣವೇ ಮಂಗಳಮಯವಾಗುವದು [illegible] ಸಾಧಕನಿಗೆ ಉದಾಸೀನತೆ ತ್ರಾಸ ತಾಪ ಮನಸ್ಸಿನ ಚಂಚಲತೆಯು

ಟಾದ ಕಾಲಕ್ಕೆ ಸಹಜವಾಗಿ ಆ ಕೋಣೆಯಲ್ಲಿ ಹೋಗೋಣದರಿಂದಲೇ ವ ನಸ್ಸಿಗೆ ನಿಜವಾದ ಶಾಂತಿ ಹಾಗು ಪ್ರಸನ್ನತೆಗಳು ಲಭಿಸುವವು. ದೇವಾಲಯಗಳೂ, ಮಠಗಳೂ, ಆಶ್ರಮಗಳೂ, ಉಂಟಾದ ಉದ್ದೇಶ ವಾದರೂ ಇದೇಯಾಗಿರುತ್ತದೆ ಯೋಗ ಸಾಧನಕ್ಕಾಗಿ ಮೇಲೆ ಕಾಣಿಸಿದ ಎಲ್ಲ ಸಲಕರಣೆಗಳು ಗೃಹಸ್ಥನಿಗನುಕೂಲವಿರುವಷ್ಟು ಸನ್ಯಾಸಿ ಸಾಧುಗಳಿಗೆ ಇರುವದಿಲ್ಲ.

ಹಾಗಾದರೆ ಯೋಗಿಯಾಗಲು ಬಾಲಬ್ರಹ್ಮಚಾರಿ ಸಾಧುಸನ್ಯಾಸಿಗಳಿಗೆ ಶಕ್ಯವಿಲ್ಲವೆಂದೇ ತಾವು ಹೇಳಿದಂತಾಗಲಿಲ್ಲವೇ? ಎಂದು ಕೇಳಿದರೆ, ಹಾಗೇನು ಇಲ್ಲ. ಅವರೂ ಮಹಾಮಹಾ ಯೋಗಿಗಳಾಗಿರವರೆಂದು ಎಲ್ಲರೂ ತಿಳಕೊಂಡ ಮಾತಾಗಿದೆ ಆದರೆ ಇಷ್ಟುಮಾತ್ರ ನಿಜ. ಅವರು ಯೋಗಿಗಳಾಗಬೇಕಾದರೆ ಗೃಹಸ್ಥಾಶ್ರಮಿಗಳಾದ ರಾಜಮಹಾರಾಜ ಶ್ರೀಮಂತ ಜನರ ಸಹಾಯದಿಂದಲೇ ಆಗಿರುವರು. ಯೋಗಾಭ್ಯಾಸಕ್ಕೆ ಬೇಕಾಗಿರುವ ಎಲ್ಲ ಸಾಹಿತ್ಯಗಳನ್ನು ಗೃಹಸ್ಥರೇ ಪೂಜ್ಯಬುದ್ಧಿಯಿಂದ ಅವರಿಗೆ ಒದಗಿಸಿಕೊಟ್ಟಿದ್ದರಿಂದಲೇ ಅವರು ಯೋಗಿಗಳಾಗಿರುವರು. ಮಹಾ ಭಾರತದಲ್ಲಿ ಒಂದು ಸಂಗತಿ ಇರುವದು ಏನೆಂದರೆ, ಒಮ್ಮೆ ಧರ್ಮರಾಜನೂ ಶ್ರೀಕೃಷ್ಣನೂ ತಿರುಗಾಡುತ್ತ ನದಿಯ ಕಡೆಗೆ ಹೋದಾಗ್ಗೆ ನದಿಯಲ್ಲಿ ಸ್ನಾನ ಮಾಡಿದ ಯೋಗಸಾಧಕರು ಯೋಗ ಶಕ್ತಿಯಿಂದ ತಮ್ಮ ಹಸಿಯ ಬಟ್ಟೆಗಳನ್ನು ಮೇಲಕ್ಕೆ ಹಾರಿಸಿ ಮಧ್ಯಾನ್ಹದ ಬಿಸಲಿನ ತಾಪವಾಗದಂತೆ ಚತ್ತರಿಕೆಯಂತೆ ಅವು ಅಂತರದಿಂದಲೇ ತಮ್ಮೊಡನೆ ಬರುವಂತೆಯೇ ಮಾಡಿಕೊಂಡು ಬರುತ್ತಿರುವದನ್ನು ಧರ್ಮರಾಜನು ನೋಡಿ ಮುರಾರಿಯೇ ನೋಡು ನನ್ನ ರಾಜ್ಯದಲ್ಲಿ ಇಂಥ ಯೋಗಸಮರ್ಥರು ಇದ್ದದರಿಂದಲೇ ನನ್ನ ಆಳಿಕೆಯು ದೇವಲೋಕದ ಆಳುವಿಕೆಯಂತೆ ಹೊಗಳಲ್ಪಡುವದು. ಧನ್ಯ ಧನ್ಯ. ಯೋಗಿಗಳೇ ನೀವೇ ಧನ್ಯರೆಂದು ಸ್ತುತಿಸುವದನ್ನು ಕಂಡು, ಶ್ರೀಕೃಷ್ಣನು ಅಯ್ಯೋ ಸಂತಶಿರೋಮಣಿಯಾದ ಧರ್ಮರಾಯನೇ, ಈ ಸಾಮರ್ಥ್ಯವು ನಿನ್ನ ಔದಾರ್ಯದಿಂದಲೇ ಅವರಿಗೆ ಬಂದಿರುವದಲ್ಲದೆ ಕೇವಲ ಅವರೇ ಆ ಸಾಮರ್ಥ್ಯಕ್ಕೆ ಕಾರಣರಲ್ಲ. ನಿತ್ಯದಲ್ಲಿ ಅವರಿಗೆ ಸಲ್ಲತಕ್ಕ ಹಾಲುತುಪ್ಪ ಹಿಟ್ಟು ಅಕ್ಕಿ ಮೊದಲಾದ ಸದಾ ವೃತ್ತವನ್ನು ನಿಲ್ಲಿಸಿಬಿಡು. ಆ ಮೇಲೆ ನೋಡೆಂದನು. ಅದರಂತೆ ಮಾಡಲು ಸಾಧಕರಿಗೆ ಹಸಿವಿನ ತ್ರಾಸ

ದಿಂದ ಯೋಗಸಾಧನೆಯನ್ನು ಮಾಡುವದು ಬಿಡಬೇಕಾಯಿತಲ್ಲದೆ, ಹೊಟ್ಟೆತುಂಬಿಕೊಳ್ಳುವ ಚಿಂತೆಯೇ ಮುಖ್ಯವಾಯಿತು. ಹೀಗಾಗಿ ಯೋಗಶಕ್ತಿಯೇ ಇಲ್ಲದಾದ ಮೇಲೆ ಸ್ನಾನಕ್ಕೆ ಹೋದಾಗ್ಗೆ ಹಾರಿಸಿದ ಬಟ್ಟೆಗಳು ನೆಲಕ್ಕೆ ಬೀಳಹತ್ತಿದವಂತೆ. ಒಟ್ಟಿನ ಮೇಲೆ ಈ ಎಲ್ಲ ವಿವೇಚನೆಯಿಂದ ಸಿದ್ಧವಾಗುವದೇನಂದರೆ, ಯೋಗವಿದ್ಯೆಗೆ ಕೇವಲ ಬಾಲಬ್ರಹ್ಮಚಾರಿ, ಸಾಧು, ಸನ್ಯಾಸಿ ಮೊದಲಾದವರೇ ಅಧಿಕಾರಿಗಳಾಗಿರದೆ ಗೃಹಸ್ಥಾಶ್ರಮಿಗಳೂ ಅಧಿಕಾರಿಗಳಿರುತ್ತಾರೆ. ಇಷ್ಟೇ ಅಲ್ಲ, ಯಾವ ಜಾತಿಯವರಿದ್ದರೂ ಯೋಗಕ್ಕೆ ಅಧಿಕಾರಿಗಳಾಗಿರುತ್ತಾರೆ. ಆದರೆ ಸಾಧಕರು ಮಾತ್ರ ಯೋಗದ ನೇಮದಂತೆ ನಡೆಯಲು ಹೃದಯ ಪೂರ್ವಕ ಸಿದ್ಧರಿರಬೇಕು. ಆರೋಗ್ಯವನ್ನೂ ಅಮರತ್ವವನ್ನೂ ಅನುಮಾನವಿಲ್ಲದೆ ಕೊಡುವ ಇಂಥ ಯೋಗವಿದ್ಯೆಯು ಸ್ವತಂತ್ರವಾಗಿದ್ದರೂ ಅತ್ಯಂತ ಅವನತ ಸ್ಥಿತಿಯಲ್ಲಿರುವ ಈಗಿನ ಹಿಂದುಸ್ತಾನದ ಪ್ರತಿಯೊಂದು ವ್ಯಕ್ತಿಗೆ ಅತ್ಯಂತಗತ್ಯವಲ್ಲವೇ?

---

# ವಚನಶಾಸ್ತ್ರಸಾರ

# ಭಾಗ ೩.

## ಉತ್ತರಾರ್ಧ.

---

ವಚನಶಾಸ್ತ್ರಸಾರ ಗ್ರಂಥಗಳಲ್ಲಿ ವೀರಶೈವ ಮತತತ್ವಗಳ ನಿರೂಪಣೆ ಇದ್ದು ಇವುಗಳಲ್ಲಿ ನಾವು ಮೂರು ಮುಖ್ಯ ಭಾಗಗಳನ್ನು ಮಾಡಿದ್ದೇವೆ. ಮೊದಲನೆಯ ಭಾಗದಲ್ಲಿ ಷಟ್‌ಸ್ಥಲ ಶಾಸ್ತ್ರದ ಸಾಮಾನ್ಯ ನಿರೂಪಣೆ ಇದ್ದು ಇದರ ತತ್ವಗಳ ತಿಳಿವಳಿಕೆಗೆ ಅತ್ಯವಶ್ಯವಾಗಿರುವ ಸೃಷ್ಟಿಯ ರಚನೆ, ಪರಮಾತ್ಮನ ಸ್ವರೂಪ, ಲಿಂಗಗಳ ಜ್ಞಾನ, ಈ ವಿಷಯಗಳನ್ನು ಶಿವಶರಣರ ಉಕ್ತಿಗಳಿಂದಲೇ ನಿರೂಪಿಸಿದ್ದೇವೆ. ಇದು ದೊಡ್ಡ ಗ್ರಂಥವಾದುದರಿಂದ ಅದರ ಪುನರ್ಮುದ್ರಣ ಕಾಲದಲ್ಲಿ ಅದರಲ್ಲಿ ಪೂರ್ವಾರ್ಧವೆಂತಲೂ ಉತ್ತರಾರ್ಧವೆಂತಲೂ ಎರಡು ವಿಭಾಗಗಳನ್ನು ಮಾಡಿದೆವು. ವಚನಶಾಸ್ತ್ರಸಾರದ ಎರಡನೆಯ ಭಾಗದಲ್ಲಿ ವೀರಶೈವ ಸಿದ್ಧಾಂತದ ಸಂಪೂರ್ಣ ವಿವೇಚನೆ ಇದೆ. ಅದರಲ್ಲಿ ವೀರಶೈವ ಮತದ ತತ್ವಗಳು ವಿಸ್ತೃತವಾಗಿ ನಿರೂಪಿಸಲ್ಪಟ್ಟಿವೆ. ಮೂರನೆಯ ಭಾಗದಲ್ಲಿ ವೀರಶೈವ ಮತದ ಕ್ರಿಯಾಚಾರಗಳು ಹೇಳಲ್ಪಟ್ಟಿವೆ. ಈ ಗ್ರಂಥದಲ್ಲಿ ಅಷ್ಟಾವರಣಗಳಲ್ಲಿ ಮೊದಲನೆಯ ಮೂರು ಆವರಣಗಳಾದ ಗುರುಲಿಂಗ ಜಂಗಮಗಳೂ ಇವುಗಳ ಪರಸ್ಪರ ಸಂಬಂಧ ಇವೇ ಮೊದಲಾದ ವಿಷಯಗಳೂ ನಿರೂಪಿಸಲ್ಪಟ್ಟಿವೆ. ಇದು ಮೂರನೆಯ ಭಾಗದ ಪೂರ್ವಾರ್ಧವಾಗಿದೆ. ಈಗಿನ ಈ ಗ್ರಂಥದಲ್ಲಿ ಅಷ್ಟಾವರಣಗಳಲ್ಲಿ ಕಡೆಯ ಐದು ಆವರಣಗಳಾದ ಪಾದೋದಕ, ಪ್ರಸಾದ, ವಿಭೂತಿ, ರುದ್ರಾಕ್ಷಿ, ಮಂತ್ರ ಇವುಗಳ ವಿವೇಚನೆಯು ಇದೆ. ಇದು ಈ ಮೂರನೆಯ ಭಾಗದ ಉತ್ತರಾರ್ಧವು. ನಾವು ಹಿಂದಿನ ಗ್ರಂಥಗಳಲ್ಲಿ ಹೇಗೆ ವೀರಶೈವ ಮತತತ್ವಗಳ ವಿವೇಚನೆಯನ್ನು ಶಿವಶರಣರ ಉಕ್ತಿಗಳ ಮೂಲಕ

ವಾಗಿ ಮಾಡಿರುತ್ತೇವೆಯೋ ಹಾಗೆಯೇ ಈ ಗ್ರಂಥದಲ್ಲಿಯೂ ಮಾಡಿರುವೆವು. ವಚನಶಾಸ್ತ್ರಸಾರ ಗ್ರಂಥಗಳಲ್ಲಿ ಈಗಿನ ಗ್ರಂಥವೇ ಕಡೆಯದಾಗಿದೆ.

ಈಗ ನಾವು ಪಾದೋದಕ ವಿಷಯುವನ್ನು ಮೊದಲು ತೆಗೆದುಕೊಳ್ಳುವೆವು. ಪಾದೋದಕ ಪ್ರಸಾದಗಳ ಸಾಮಾನ್ಯ ವಿವೇಚನೆಗಳು ಹಿಂದಿನ ಗ್ರಂಥಗಳಲ್ಲಿ ಅನೇಕ ಕಡೆಗೆ ಬಂದಿವೆ. ಆದರೆ ಅವುಗಳಲ್ಲಿ ಪಾದೋದಕದ ಕ್ರಿಯೆಗಳು ಹೇಳಲ್ಪಟ್ಟಿರುವದಿಲ್ಲ. ಆದರೆ ಈಗಿನ ಗ್ರಂಥವು ಕ್ರಿಯೆ ಅಥವಾ ಆಚಾರಗಳಿಗೆ ಸಂಬಂಧಿಸಿರುವದರಿಂದ ಇವುಗಳನ್ನು ಉಲ್ಲೇಖಿಸುವ ಉಕ್ತಿಗಳನ್ನು ನಾವು ಇಲ್ಲಿ ಉದಹರಿಸುವದಲ್ಲದೆ ಅವುಗಳ ತತ್ವಗಳೂ ಕೂಡ ಹೇಳಲ್ಪಟ್ಟಿರುತ್ತವೆ. ಅವುಗಳನ್ನು ವಾಚಕರು ಲಕ್ಷಿಸಿದಲ್ಲಿ ವೀರಶೈವಾಚರಣೆಯಲ್ಲಿ ಪಾದೋದಕದ ಮಹತ್ವವು ಎಷ್ಟಿದೆ ಎಂಬುದು ಅವರಿಗೆ ಗೋಚರವಾಗದೆ ಇರದು.

## ಪಾದೋದಕದ ಸ್ವರೂಪು.

೧. ತಾನು ಗುರುಲಿಂಗ ಜಂಗಮದ ಪಾದಕ್ಕೆರಗಿ ಲೀಯ್ಯವಾದ ಬಳಿಕ ಇದು ಚಿನ್ನ ನೋಡಯ್ಯ. ಗುರುಲಿಂಗ ಜಂಗಮದ ಪಾದವೇ ತನ್ನ ಸರ್ವಾಂಗದಲ್ಲಿ ಅಚ್ಚೊತ್ತಿದಂತಾಯಿತ್ತಾಗಿ, ಅಲ್ಲಿಯೇ ಪಾದಾರ್ಚನೆ, ಅಲ್ಲಿಯೇ ಪಾದೋದಕ ಸೇವನೆ, ಬೇರೆ ಪ್ರತ್ಯೇಕವಿಲ್ಲವಯ್ಯ. ಅದೆಂತೆಂದೊಡೆ—ಪರಮಜ್ಞಾನ ಲಿಂಗ ಜಂಗಮ ಸಂಬಂಧ ಸಮರತಿಯ ಸೋಂಕಿನಲ್ಲಿ ಪರಮಾನಂದ ಜಲವೇ ಪ್ರವಾಹವಾಗಿ ಸರ್ವಾಂಗದಲ್ಲಿ ಪುಳುಕಿತವಾಗಿ ಹರಿವುತ್ತಿರಲು, ಆ ಪರಮ ಸುಖ ಸೇವನೆಯ ಮಾಡುವಲ್ಲಿ ಪಾದೋದಕ ಸೇವನೆ ಎನಿಸಿತ್ತಯ್ಯ. ಈ ಪರಮಾಮೃತತೃಪ್ತಿ ಬಸವಣ್ಣಂಗಾಯಿತ್ತು. ಆ ಬಸವಣ್ಣನ ಶ್ರೀಪಾದಕ್ಕೆ ನಮೋ ನಮೋ ಎಂದು ಬದುಕಿದೆನಯ್ಯ ಕಲಿದೇವಯ್ಯ.

೨. ಅಂಗವಿಕಾರ ಆಚಾರದೊಳಡಗಿ, ಆಚಾರ ಕ್ರಿಯೆಗಳು ಗುರುವಿನೊಳಡಗಿ, ಗುರುವೆನ್ನಂಗದೊಳಡಗಿ, ಅಂಗ ಲಿಂಗತೃಪ್ತಿಯೊಳಡಗಿ, ಲಿಂಗನಿಷ್ಠೆ ಅಂಗದಾಚಾರಣೆಯ ಆಚಾರವಾವರಿಸಿ, ಆಚಾರದ ನಿಲವ ಗುರುಮೂರ್ತಿಯಾವರಿಸಿ, ಗುರುಮೂರ್ತಿಯ ಸರ್ವಾಂಗವಾವರಿಸಿ,

ಸರ್ವಾಂಗವ ಲಿಂಗ ನಿಷ್ಠೆಯಾವರಿಸಿ, ಲಿಂಗ ನಿಷ್ಠೆಯು ಸಾವಧಾನವಾವರಿಸಿ, ಸಾವಧಾನವ ಸುವಿಚಾರವಾವರಿಸಿ, ಸುವಿಚಾರವ ಮಹಾಜ್ಞಾನವಾವರಿಸಿ, ಮಹಾಜ್ಞಾನದೊಳಗೆ ಪರಮಾನಂದ ನಿಜ ನಿಂದು, ಆ ನಿಜದೊಳಗೆ ಪರಮಾಮೃತ ತುಂಬಿ, ಮೊದಲ ಕಟ್ಟೆಯನೊಡೆದು ನಡುವಣ ಕಟ್ಟೆಯನಾಂತು ನಿಂದು, ನಡುವಣ ಕಟ್ಟೆಯೂ ಮೊದಲ ಕಟ್ಟೆಯೂ ಎರಡೂ ಕೂಡಿ ಬಂದು, ಕಡೆಯ ಕಟ್ಟೆಯನಾಂತುದು. ಈ ಮೂರು ಕಟ್ಟೆಯೊಡೆದ ಮಹಾ ಜಲವನು ಪರಮ ಪದವಾಂತುದು. ಆ ಪದದಲ್ಲಿ ನಾನೆರಗಿ ಪಾದೋದಕವ ಕೊಂಡು ಎನ್ನ ನಾನರಿಯದಾದೆ ಕಾಣಾ ಗುಹೇಶ್ವರಾ.

೩ ಪಾದೋದಕವೆಂಬುದು ಪರಮಾತ್ಮನ ಚಿದ್ರೂಪು ನೋಡಾ. ಪಾದೋದಕವೆಂಬುದು ಮೋಕ್ಷದ ಮಾರ್ಗ ನೋಡಾ. ಪಾದೋದಕವೆಂಬುದು ಪಾಪದ ಕೇಡು ನೋಡಾ. ಪಾದೋದಕವೆಂಬುದು ಪ್ರಮಥರ ಇರವು ನೋಡಾ. ಪಾದೋದಕವೆಂಬುದು ಕಪಿಲಸಿದ್ಧ ಮಲ್ಲಿಕಾರ್ಜುನನ ಮಹಿಮೆ ನೋಡಾ.

೪. ಬ್ರಹ್ಮ ಜಗನ್ಮಯವೆಂಬುದು ಪ್ರಸಿದ್ಧ. ಜಗದ್ಬ್ರಹ್ಮಮಯವೆಂಬುದು ಅಪ್ರಸಿದ್ಧ. ಅದೇನು ಕಾರಣವೆಂದೊಡೆ ಬ್ರಹ್ಮದಲ್ಲಿ ಜಗತ್ತು ತೋರಿ ಅಡಗುವದು. ಜಗತ್ತಿನಲ್ಲಿ ಬ್ರಹ್ಮ ತೋರಿಯಡಗದು. ಅಂತಪ್ಪ ಇರವ ಚನ್ನಬಸವಣ್ಣನ ಪಾದೋದಕದಲ್ಲಿ ಸೇರ್ಪಡೆಯಾಯಿತ್ತು. ಅಂತಪ್ಪ ಪಾದೋದಕ ನಿನ್ನ ರಸನೆಯಲ್ಲಿ ನಿಂದಿತ್ತು. ನಿನ್ನ ರಸನೆಯಲ್ಲಿ ಪಾದೋದಕ, ಎಮ್ಮ ಕಿವಿಯಲ್ಲಿ ರಸನೆಯಲ್ಲಿ ನಯನದಲ್ಲಿ ಸರ್ವಾವಯವದಲ್ಲಿ ಶಿವಶಾಂತ ಮಲ್ಲಿಕಾರ್ಜುನನ ಪಾದೋದಕವಾಗಿ ನಿಂದಿತ್ತು ನೋಡಾ.

೫. ನಿತ್ಯನೆಂಬ ಭಕ್ತನ ಮನೆಗೆ ಘನ ಚೈತನ್ಯವೆಂಬ ಜಂಗಮ ಬಂದಡೆ, ಜಲವಿಲ್ಲದ ಜಲದಲ್ಲಿ ಪಾದಾರ್ಚನೆಯ ಮಾಡಿದೆ. ಆ ಪಾದೋದಕವೇ ಮಹಾ ಪಥವಯ್ಯ. ಗ್ರಂ ॥ ಸಚ್ಚಿದಾನಂದ ಜಲಂ ನಿತ್ಯಂ ಪ್ರಕ್ಷಾಲನಂ ಚರಪಾದೋದಕಂ । ತತ್ಪಾದೋದಕಂ ಪೀತ್ವಾ ಸ ಮುಕ್ತೋ ನಾತ್ರ ಸಂಶಯಃ ॥ ಎಂದುದಾಗಿ ಆ ಪಾದೋದಕದಲ್ಲಿ ಪರಮ ಪರಿಣಾಮಿ ಕೂಡಲಚನ್ನಸಂಗಾ ನಿಮ್ಮ ಶರಣ.

೬. ಅಂಗವ ಮುಟ್ಟಿ ಆಚಮನ ಮಾಡುವರು ಲಿಂಗಾಂಗಿಗಳಲ್ಲದವರು. ಕೂಡಿ ಮಾಡಿದಡೆಯೂ ಮಾಡಲಿ. ಲಿಂಗ ಪಾದೋದಕವ ಧರಿಸಿ ಮರಳಿ ಅಪವಿತ್ರ ಶಂಕೆಯಿಂದ ಆಚಮನವ ಮಾಡಿದಡೆ, ಅಘೋರ ನರಕದಲ್ಲಿಕ್ಕುವುದಯ್ಯ, ಆ ಪಾದೋದಕವೇ ವಿಷವಾಗಿ. ಗ್ರಂ॥ ಶಂಭೋಃ ಪಾದೋದಕಂ ಪೀತ್ವಾ ಪಶ್ಚಾತ್ ಅಶುಚಿ ಶಂಕಯಾ । ಯೋ ಆಚಮತಿ ಮಾಹೇಶಸ್ತಂ ವಿದ್ಯಾದ್ಬ್ರಹ್ಮ ಘಾತಕಃ ॥ ಎಂದುದಾಗಿ ಇಂತೆಂಬಾಗಮವ ಕೇಳಿ ನಂಬುವುದಯ್ಯ. ಪರಮ ಪಾವನ ಮಪ್ಪ ಪಾದೋದಕವ ನಂಬದವರು ಬಸವಪ್ರಿಯ ಕೂಡಲಚನ್ನಸಂಗಯ್ಯಂಗೆ ದೂರ.

೭. ಆಸರಿನ ಭಕ್ತ ಜಡರುಗಳು ಬೇಸತ್ತು ಜಂಗಮಕ್ಕೆರಗಿ ಪಾದಪ್ರಕ್ಷಾಲನೆಯಂ ಮಾಡಿ ಪಾದೋದಕವ ಧರಿಸುತ್ತಿರ್ಪರು. ಆವುದು ಕ್ರಮವೆಂದರಿಯರು. ಅರಿದಡೆ ಪಾದೋದಕ, ಅರಿಯದಿರ್ದಡೆ ಬಳಿಯ ನೀರೆಂದರಿಯರು. ಅರಿದರಿದು ಬರುದೊರೆವೋದರು ಮಾನವರೆಲ್ಲ. ಅರಿವು ಸಾಮಾನ್ಯವೇ? ಗ್ರಂ॥ ಶಿವಾತ್ಮಕ ಪದ ದ್ವಂದ್ವಂ । ಪ್ರಕ್ಷಾಲನ ಜಲಂ ವರಃ ॥ ಯತ್ಪಿಬಂತಿ ಮನಸ್ತಮೋ ನ ಪಿಬಂತಿ ಕದಾಚನ ॥ ಇಂತೆಂಬ ವಚನವ ಕೇಳಿ ನಂಬುವುದು. ನಂಬದಿರ್ದಡೆ ಮುಂದೆ ಭವಘೋರ ನರಕ ತಪ್ಪದು ಉರಿಲಿಂಗ ಪೆದ್ದಿಪ್ರಿಯ ವಿಶ್ವೇಶ್ವರಾ.

೮. ದರಿದ್ರಂಗೆ ಧನದಾಸೆ, ಶೂರಂಗೆ ರಣದಾಸೆ, ಕಾಮಿಗೆ ಸ್ತ್ರೀಯಾಸೆ, ನೀಚಂಗೆ ಕಲಹದಾಸೆ, ಪಂಡಿತಂಗೆ ಸಭೆಯಾಸೆ, ಕೋಕಿಲೆಗೆ ವಸಂತದಾಸೆ, ಹಂಸಂಗೆ ಕಮಲದಾಸೆ, ಪತಿವ್ರತೆಗೆ ಗಂಡನು ಮುನಿದಿಹನು ಹೋಹನೆಂಬಾಸೆ, ಎನಗೆ ಶ್ರೀಗುರು ಚನ್ನಬಸವ ಸ್ವಾಮಿಗಳ ಪಾದೋದಕದಾಸೆ ಕಪಿಲಸಿದ್ಧ ಮಲ್ಲಿಕಾರ್ಜುನಾ.

೯. ಪಾದೋದಕ ಪಾದೋದಕವೆಂದುಕೊಂಬಿರಿ. ಎಲ್ಲರಿಗೆಲ್ಲಿಯದೋ ಪಾದೋದಕ? ಈ ಪಾದೋದಕದ ಭೇದವ ಬಲ್ಲರೆ ಹೇಳಿ. ಅರಿಯದಿರ್ದರೆ ಕೇಳಿ. ಪಾದೋದಕವೆಂಬುದು ಪಾತಾಳಾದಿ ಪರಲೋಕಾಂತ್ಯವಾದ ಅಖಿಳಕೋಟಿ ಬ್ರಹ್ಮಾಂಡಗಳ ಗರ್ಭೀಕರಿಸಿಕೊಂಡಿರ್ದ ಪರಿಪೂರ್ಣತ್ವವೇ ಪಾದೋದಕ. ಪಾದೋದಕವೆಂಬುದು ಶರಣನ ಸರ್ವಾಂಗವನೊಳಕೊಂಡು ಥಳಥಳಿಸಿ ಹೊಳೆವ ಚಿದ್ರಸವೇ ಪಾದೋದಕ.

ಇಂತಪ್ಪ ಪಾದೋದಕದ ಭೇದವ ಬಲ್ಲರು ನಿಜಗುಣ ಸ್ವಾಮಿಗಳು, ಅಜಗಣ್ಣ ತಂದೆಗಳು, ನಿಜ ಮಂಚಣ್ಣ, ಮೊದಲಾದ ಅಸಂಖ್ಯಾತ ಮಹಾ ಪ್ರಮಥ ಗಣಂಗಳು, ಇವರು ಬಲ್ಲರಲ್ಲದೆ, ಸತ್ತು ಹೋಗುವ ಹೇಸಿ ಮೂಳ ಕತ್ತೆಗಳೆತ್ತ ಬಲ್ಲರಯ್ಯಾ? ಇಂತಪ್ಪ ಪರಾಪರ ನಾಮ ವನುಳ್ಳ ಪರಂಜ್ಯೋತಿ ಸ್ವರೂಪವಾದ ಪರತತ್ವ ಪಾದೋದಕವನರಿದು ಕೊಡಬಲ್ಲಡೆ ಗುರುಲಿಂಗ ಜಂಗಮವೆಂಬೆನು. ಇಂತೀ ವಿಚಾರವ ತಿಳಿದು ಕೊಳಬಲ್ಲಡೆ ಸತ್ಯ ಸದ್ಭಕ್ತರೆಂಬೆನು. ಇಂತಪ್ಪ ಭೇದವನರಿಯದೆ ಮತಿ ಭ್ರಷ್ಟ ಮರುಳು ಮಾನವರು ಆಣವಾದಿ ಕಾರ್ಮಿಕಾಂತ್ಯವಾದ ಮಲ ತ್ರಯದ ಬಲೆಯಲ್ಲಿ ಶಿಲ್ಕಿ ದೇಹಾದಿ ಮನಾಂತ್ಯವಾದ ಅರುವತ್ತಾರು ಕೋಟಿ ಕರಣಾದಿ ಗುಣಂಗಳು ಮೊದಲಾದ ಸಕಲ ಸಂಸಾರ ವಿಷಯ ಲಂಪಟದಲ್ಲಿ ಮಗ್ನರಾಗಿ ಮಂದಮತಿ ಅಧಮ ಜಂಗಮನ ಕಾಲ ತ್ರಿಕಾಲದಲ್ಲಿ ಜಲದಿಂದ ತೊಳೆದು ಪಾದೋದಕವೆಂದು ಬಟ್ಟ ಬಟ್ಟಲು ತುಂಬ ನೀರ ಕುಡಿದು ತಮ್ಮ ದೇಹದ ಪ್ರಾಣಾಗ್ನಿಯ ತೃಷ್ಣಿಯ ನಡಗಿಸಿಕೊಂಡು ಮಡಿ ಮೈಲಿಗೆಯೆಂದು ನುಡಿವ ಮಲದೇಹಿಗಳ ಮೂಗ ತುಟಿ ತನಕ ಕೊಯ್ದು ಇಟ್ಟಂಗಿಯಲೊರಸಿ ಕಟವಾಯ ಸೀಳಿ ಕನ್ನ ಡಿಯ ತೋರಿ ಮೇಲು ಮುಂದಾಗಿ ಅಟ್ಟೆಂದ ಕಾಣಾ ನಿಮ್ಮ ಶರಣ ಕಾಡಿನೊಳಗಾದ ಶಂಕರ ಪ್ರಿಯ ಚನ್ನಕದಂಬ ಲಿಂಗ ನಿರ್ಮಾಯ ಪ್ರಭುವೇ.

೧೦. ಕೇಳು ಕೇಳಯ್ಯ ಎನ್ನ ಮತ್ಪ್ರಾಣನಾಥ ಬಸವಣ್ಣ ಲಿಂಗ ತಂದೆ. ಜಿತೇಂದ್ರಿಯಗಳಲ್ಲಿ ತೀರ್ಥ ಪ್ರಸಾದವಿಪ್ಪುದಲ್ಲದೆ ಕೃತಕೇಂದ್ರಿ ಯಗಳಲ್ಲಿ ತೀರ್ಥಪ್ರಸಾದವಿಪ್ಪುದೇನಯ್ಯ? ಶಿವಜ್ಞಾನೋದಯವಾಗಿ ಶ್ರೀಗುರುಕಾರುಣ್ಯವ ಪಡೆದು ಲಿಂಗಾಂಗ ಸಂಬಂಧಿಗಳಾದ ಶಿವಶರಣ ರಲ್ಲಿ ಪರಶಿವ ಲಿಂಗವಿಪ್ಪುದಲ್ಲದೆ ಭಿನ್ನಜ್ಞಾನಿಗಳಾದ ಅಜ್ಞಾನ ನರಕ ಜೀವಿಗಳಾದ ಮತಿಭ್ರಷ್ಟ ಮನುಜರಲ್ಲಿ ಪರಶಿವಲಿಂಗವಿಪ್ಪುದೇನಯ್ಯ? ಊರ್ಧ್ವ ಕುಂಡಲಿಯಲ್ಲಿ ಅಮೃತ ಕುಂಭವಿಪ್ಪುದಲ್ಲದೆ ಅಧೋ ಕುಂಡ ಲಿಯಲ್ಲಿ ಅಮೃತ ಕುಂಭವಿಪ್ಪುದೇನಯ್ಯ? ಚಿತ್ತ ಸ್ವಸ್ಥಿರವಾದ ಸದ್ಭಕ್ತ ಮಾಹೇಶ್ವರರ ಹಸ್ತದಲ್ಲಿ ಚಿದ್ಘನ ಲಿಂಗವಿಪ್ಪುದಲ್ಲದೆ ಕುಚಿತ್ತ ಕುಬುದ್ಧಿ ದುರ್ಭಾವಿಗಳ ಹಸ್ತದಲ್ಲಿ ಚಿದ್ಘನಲಿಂಗವಿಪ್ಪುದೇನಯ್ಯ? ಉದಯದಲ್ಲಿ ಸೂರ್ಯ ಹೊರಡುವನಲ್ಲದೆ ಅಸ್ತಮಾನದಲ್ಲಿ ಸೂರ್ಯ ಹೊರಡುವನೇ

ನಯ್ಯ? ಆಕಾಶದೊಳಗೆ ಮಿಂಚು ಮಿಂಚುವುದಲ್ಲದೆ ಭೂಮಿಯೊಳಗೆ ಮಿಂಚು ಮಿಂಚುವುದೇನಯ್ಯ? ಇಂತೀ ದೃಷ್ಟದಂತೆ ತನ್ನ ತಾನರಿದಂಥ ಗುರುಹಿರಿಯರಲ್ಲಿ ತೀರ್ಥ ಪ್ರಸಾದವಿಪ್ಪುದಲ್ಲದೆ ತನ್ನ ನಿಜವ ಮರೆದು ಮಲತ್ರಯಯುಕ್ತವಾದ ದೇಹೋಹಂಮೆಂದು ಸಟೆಯ ಸಂಸಾರದಲ್ಲಿ ಮನ ಮಗ್ನನಾಗಿ ಜಡ ಸಂಸಾರ ಮಾಡುವ ಜಗಭಂಡ ಹೊಲೆ ಮಾದಿಗರಲ್ಲಿ ಲಿಂಗವಿಲ್ಲ. ಲಿಂಗವಿಲ್ಲದಲ್ಲಿ ತೀರ್ಥಪ್ರಸಾದವಿಲ್ಲ. ಇಂತಪ್ಪ ಜಡಮತಿ ನರಕ ಜೀವಿಗಳ ವಿಸರ್ಜಿಸಿ ಸುಜ್ಞಾನೋದಯವಾಗಿ ಶ್ರೀಗುರು ಕಾರುಣ್ಯವ ಪಡೆದು ಲಿಂಗಾಂಗ ಸಮರಸವನುಳ್ಳ ಗುರುಲಿಂಗ ಜಂಗಮದ ತೀರ್ಥ ಪ್ರಸಾದವ ಕೊಂಡಡೆ ನರಕ ತಪ್ಪುವುದು. ಮೋಕ್ಷವೆಂಬುದು ಕರತಳಾಮಳಕವಾಗಿ ತೋರುವುದು ಕಾಣಾ, ಕಾಡಿನೊಳಗಾದ ಶಂಕರ ಪ್ರಿಯ ಚನ್ನಕದಂಬಲಿಂಗ ನಿರ್ಮಾಯ ಪ್ರಭುವೇ.

೧೧. ಅಯ್ಯ, ಪಾದ ಪೂಜೆ ಎಂಬುದು ಅಗಮ್ಯ, ಅಗೋಚರ, ಅಪ್ರಮಾಣ, ಮಹಾ ಅಸಾಧ್ಯವು. ಶ್ರೀಗುರು ಬಸವೇಶ್ವರ ದೇವರು ತಮ್ಮ ಅಂತರಂಗದೊಳಗಣ ಪಾದಪೂಜೆಯಿಂದಾದ ತೀರ್ಥಪ್ರಸಾದಮಂ ಗಣ ಸಮೂಹಕ್ಕೆ ಸಲ್ಲಲಿ ಎಂದು ನಿಮಿಸಿ ಭಕ್ತಿಯ ತೊಟ್ಟು ಮೆರೆದು ಇಂತಪ್ಪ ತೀರ್ಥಪ್ರಸಾದವ ಸೇವಿಸುವ ಕ್ರಮವೆಂತೆಂದೊಡೆ, ಗ್ರಾಮ ಸೇವಾಕರಂ ರಂಭಾ ಗೀತವಾದ್ಯ ನೃತ್ಯಸ್ತಥಾ ಅನಾಚಾರ ವಿಕಾರಂಚ ಪಾದತೀರ್ಥಪ್ರಸಾದಃ, ಇಂತೆಂದುದಾಗಿ ತಂಬೂರಿ ಕಿನ್ನರಿವಿಡಿದು ಮನೆ ಮನೆಯ ಬೇಡುವಾತ, ಹಲವು ವೇಷವ ತೊಟ್ಟು ಆಡುವಾತ, ನಗಾರಿ ಸನ್ಮೇಳ ಕರ್ನೆ ಕಹಳೆ ಶಂಖ ಬಾರಿಸುವಾತ, ಅಷ್ಟಾವರಣ ಪಂಚಾಚಾರದಲ್ಲಿ ಅಹಂಕರಿಸುವಾತ, ಅನಾಚಾರಿ, ಪರ್ವತದ ಕಂಬಿ ಮಹಾಧ್ವಜವ ಹೊರುವಾತ, ರಾಜಾರ್ಥದಲ್ಲಿ ಅಹುದು ಅಲ್ಲವ ಮಾಡಿ, ಅಲ್ಲದ ಅಹುದ ಮಾಡುವಾತ, ಅನಾಚಾರವ ಹೇಳುವಾತ, ಸದಾಚಾರದ ನುಡಿಗೆ ಇದಿರುತ್ತರವ ಕೊಟ್ಟು ಭಕ್ತ ಗಣಂಗಳ ನಿಂದೆಯನಾಡುವಾತ, ಸದಾಚಾರ ಸದ್ಭಕ್ತ ಗಣಂಗಳ ಕಂಡರೆ ಗರ್ವಿಸುವಾತ, ಧಾನ್ಯ, ಅರಿವೆ, ಬೆಳ್ಳಿ ಬಂಗಾರಂಗಳ ಕ್ರಯವಿಕ್ರಯವ ಮಾಡಿ ಪ್ರತಿಯಾಗಿ ಮಾರಿ ವ್ಯವಹಾರವ ಮಾಡುವಾತ, ಗುರು ಹಿರಿಯರಲ್ಲಿ ಹಾಸ್ಯ ರಹಸ್ಯವ ಮಾಡುವಾತ, ಪರದೈವ, ಪರಧನ, ಪರಸ್ತ್ರೀ ಗಮಿಸುವಾತ, ಸೂಳೆ ಬಸವಿಯರ ಗೃಹದಲ್ಲಿರುವಾತ, ಆಚಾರ ಭ್ರಷ್ಟ ಮಾನವ ಹೀನರ ಸಂಗವ ಮಾಡುವಾತ,

ಇಂಥ ದುರುಳು ಮಂಕುಗಳ ಗುರು ಲಿಂಗ ಜಂಗಮವೆಂದು ನುಡಿಯ ಲಾಗದು. ಅದೆಂತೆಂದೊಡೆ:—ಖೇಟಕೋ ದಂಡ ಚಕ್ರಾಸಿ ಗದಾ ತೋಮರ ಧಾರಣಂ। ಜಂಗಮೋ ನಾನ್ಯ ಕರ್ತವ್ಯಂ ಸ್ವಯಲಕ್ಷಣಂ॥ ಆಶಾಶ್ಚ ವೇಷಧಾರೀ ಚ ವೇಷಶ್ಚ ಗ್ರಾಸತೋಷಕಃ। ಗ್ರಾಸಶ್ಚ ದೋಷ ಮಾದಾಯ ಇತಿ ಭೇದ ವರಾನನೇ॥ ಅನಾಚಾರ ವಿಭಾವೇನ ಆಚಾ ರಶ್ಚ ವಿಸರ್ಜಯೇತ್। ಸದಾಚಾರ ಭಕ್ತನಾಂಚ ಪಾದತೀರ್ಥ ಪ್ರಸಾದಂ॥ ಮಹಾ ಭೋಗೀ ಮಹಾ ತ್ಯಾಗೀ ಲೋಲುಪ್ತಂ ವಿಷಯಾತುರಂ। ನಾನಾ ಅಂಗ ವಿಕಾರಂಚ ಪಾದತೀರ್ಥಂ ನ ಕಾರಯೇತ್॥ ಪೃಷ್ಠಶ್ಚೈಕರ್ಣ ಹೀನಸ್ಯಬಧಿರಂ ಕಲಹಪ್ರಿಯಾ। ವ್ಯಾಧೀ ನಾಂ ಅಂಗ ಹೀನಂಚ ತಸ್ಯಾ ಚಾರ ವಿಸರ್ಜಯೇತ್॥ ಇಂತೀ ದುರ್ಮಾರ್ಗ ನಡತೆಗಳಿಲ್ಲದೆ ಅಯೋ ಗ್ಯವಾದ ಜಂಗಮವನುಳಿದು ಯೋಗ್ಯವಾದ ಜಂಗಮವ ವಿಚಾರಿಸಿ ತನು ಮನ ಧನ ವಂಚನೆ ಇಲ್ಲದೆ ಸಮರ್ಪಿಸಿ ಅವರ ತೀರ್ಥಪ್ರಸಾದವ ಕೊಳಬೇಕಲ್ಲದೆ ದುರ್ಮಾರ್ಗದಲ್ಲಿ ಆಚರಿಸುವಾತನಲ್ಲಿ ತ್ರಿನೇತ್ರವಿದ್ದರೂ ತೀರ್ಥಪ್ರಸಾದ ಉಪದೇಶವ ಕೊಳಲಾಗದು ಕಾಣಾ ಕೂಡಲ ಚನ್ನ ಸಂಗಮದೇವ ಸಾಕ್ಷಿಯಾಗಿ ನೋಡಾ ಸಂಗನ ಬಸವಣ್ಣ, ಇಂತು ಗುರು ವಾಕ್ಯವ ತಿಳಿದು ನೋಡಾ ಸಂಗನಬಸವೇಶ್ವರಾ.

ಮೇಲಿನ ವಚನಗಳಲ್ಲಿ ಪಾದೋದಕದ ತತ್ವಗಳ ವಿವರಣೆಯು ಇದ್ದು ಈ ಪಾದೋದಕದಲ್ಲಿ ಅನೇಕ ತೆರದ ಭೇದ ವಿಭೇದಗಳಿವೆ. ಅವುಗ ಳನ್ನು ನಾವು ಮುಂದೆ ವಿವರಿಸುತ್ತೇವೆ.

## ೧ನೆಃ ವಿಧ.

## ಗುರುಪಾದೋದಕ, ಕ್ರಿಯಾಪಾದೋದಕ, ಜ್ಞಾನಪಾದೋದಕ—ಗುರುಪಾದೋದಕ, ಲಿಂಗಪಾದೋದಕ, ಜಂಗಮ ಪಾದೋದಕ, — ದೀಕ್ಷಾಪಾದೋದಕ, (ಧೂಳಪಾದೋದಕ) ಶಿಕ್ಷಾಪಾದೋದಕ, ಜ್ಞಾನಪಾದೋದಕ.

೧. ಗುರುಪಾದೋದಕಂಗೊಂಡು ಎನ್ನ ಸಂಚಿತ ಕರ್ಮ ನಾಸ್ತಿಯಾಯಿತ್ತು. ಲಿಂಗಪಾದೋದಕಂಗೊಂಡು ಎನ್ನ ಪ್ರಾರಬ್ಧ ಕರ್ಮ ನಾಸ್ತಿಯಾಯಿತ್ತು. ಜಂಗಮಪಾದೋದಕಂಗೊಂಡು ಎನ್ನ ಆಗಾಮಿ ಕರ್ಮ ನಾಸ್ತಿಯಾಯಿತ್ತು. ಇಂತೀ ತ್ರಿಮೂರ್ತಿಗಳ ತ್ರಿವಿಧ ಪಾದೋದಕವ ಕೊಂಡು ತ್ರಿಕರ್ಮಂಗಳು ನಾಸ್ತಿಯಾದವು ಅಖಂಡೇಶ್ವರಾ.

೨. ಕರುಣಜಲ, ವಿನಯಜಲ, ಸಮತೆಜಲ. ಕರುಣಜಲ ಗುರುಪಾದೋದಕ. ವಿನಯಜಲ ಲಿಂಗಪಾದೋದಕ. ಸಮತೆಜಲ ಚರ ಪಾದೋದಕ. ಗುರುಪಾದೋದಕ ಸಂಚಿತ ಕರ್ಮನಾಸ್ತಿ. ಲಿಂಗಪಾದೋದಕ ಪ್ರಾರಬ್ಧ ಕರ್ಮನಾಸ್ತಿ. ಚರಪಾದೋದಕ ಆಗಾಮಿ ಕರ್ಮನಾಸ್ತಿ. ಇಂತೀ ತ್ರಿವಿಧ ಪಾದೋದಕದಿಂದ ತ್ರಿವಿಧ ಕರ್ಮನಾಸ್ತಿ. ಇದು ಕಾರಣ ತ್ರಿವಿಧೋದಕವ ಕೂಡಲ ಚನ್ನ ಸಂಗಾ ನಿಮ್ಮ ಶರಣ ಬಲ್ಲ.

೩. ಗುರು ಪಾದೋದಕದಿಂದ ಸ್ಥೂಲ ದೇಹ ಶುದ್ಧಿ, ಕ್ರಿಯಾ ಪಾದೋದಕದಿಂದ ಸೂಕ್ಷ್ಮ ದೇಹ ಶುದ್ಧಿ, ಜ್ಞಾನ ಪಾದೋದಕದಿಂದ ಕಾರಣ ದೇಹ ಶುದ್ಧಿ. ಗುರು ಪಾದೋದಕದಲ್ಲಿ ಇಷ್ಟ ಲಿಂಗ ಸಂಬಂಧ, ಕ್ರಿಯಾ ಪಾದೋದಕದಿಂದ ಪ್ರಾಣಲಿಂಗ ಸಂಬಂಧ. ಜ್ಞಾನಪಾದೋದಕದಿಂದ ಭಾವಲಿಂಗ ಸಂಬಂಧ. ಅದು ಕಾರಣ ಪಾದೋದಕವೇ ಪ್ರತ್ಯಕ್ಷ ಪರಬ್ರಹ್ಮ ನೋಡಾ ಕಪಿಲಸಿದ್ಧ ಮಲ್ಲಿಕಾರ್ಜುನಾ.

೪. ಲಿಂಗ ವಿಚಾರ, ಜಂಗಮ ವಿಚಾರ, ಪಾದೋದಕ ವಿಚಾರ ಬಹು ಸೂಕ್ಷ್ಮ ಕೇಳಯ್ಯಾ. ಮೊದಲನೇ ಪಾದೋದಕ ಗುರುಸಂಬಂಧ, ಎರಡನೇ ಪಾದೋದಕ ಲಿಂಗಸಂಬಂಧ, ಮೂರನೇ ಪಾದೋದಕ ಜಂಗಮ ಸಂಬಂಧ. ಈ ತ್ರಿವಿಧೋದಕ ಭಕ್ತನಲ್ಲಿ ಸಂಬಂಧ. ಈ

ತ್ರಿವಿಧೋದಕ ಗುರುಲಿಂಗಜಂಗಮದಲ್ಲಿ ಸಂಬಂಧ. ಅದುಕಾರಣ ಭಕ್ತ, ಮಹೇಶ, ಪಾದೋದಕ, ಪ್ರಸಾದದಲ್ಲಿ ಭೇದವ ಮಾಡಿ ನಿಂದರೆ ಅಘೋರ ನರಕದಲ್ಲಿಕ್ಕುವ ಕಪಿಲಸಿದ್ಧ ಮಲ್ಲಿಕಾರ್ಜುನ.

೫. ಉದಕ ಹೋಗಿ ಗುರು ಪಾದೋದಕವೆನಿಸಿತು. ಗುರು ಪಾದೋದಕ ಹೋಗಿ ಕ್ರಿಯಾಪಾದೋದಕವೆನಿಸಿತು. ಕ್ರಿಯಾ ಪಾದೋದಕ ಹೋಗಿ ಜ್ಞಾನ ಪಾದೋದಕವೆನಿಸಿತು. ಜ್ಞಾನ ಪಾದೋದಕವೇ ಶರಣನ ಮನದ ಮೊನೆಯಲ್ಲಿ ಕಪಿಲಸಿದ್ಧಮಲ್ಲಿಕಾರ್ಜುನನಾಗಿ ನಿಂದಿತ್ತು.

೬. ಗುರು ಪಾದೋದಕ ಸಕಲ ಕ್ರಿಯೆಗಳಿಗೆ ಬರುವುದು. ಕ್ರಿಯಾ ಪಾದೋದಕ ಭಸ್ಮ ಶುದ್ಧತೆಗೆ ಬರುವುದು. ಜ್ಞಾನಪಾದೋದಕ ಅರ್ಪಣಂಗೈವುದಕ್ಕೆ ಬರುವುದು ನೋಡಾ ಕಪಿಲಸಿದ್ಧಮಲ್ಲಿಕಾರ್ಜುನಾ.

---

## ೨ನೇ ವಿಧ.

## ಲಿಂಗೋದಕ, ಪಾದೋದಕ, ಪ್ರಸಾದೋದಕ.

೧. ಲಿಂಗೋದಕ ಅಂಗಾರ್ಚನೆ, ಪಾದೋದಕ ಪಂಚೇಂದ್ರಿಯಾರ್ಚನೆ, ಪ್ರಸಾದೋದಕ ಪ್ರಾಣಾರ್ಚನೆ. ಲಿಂಗೋದಕ, ಪಾದೋದಕ, ಪ್ರಸಾದೋದಕ ಇಂತೀ ತ್ರಿವಿಧೋದಕವನಲ್ಲದೆ ಮುಟ್ಟಲಾಗದು ಕೂಡಲ ಚನ್ನ ಸಂಗಮದೇವಾ.

೨. ಪಾದೋದಕದಿಂದ ಪರಂ ನಾಸ್ತಿಯಾಗಿರಬೇಕು. ಲಿಂಗೋದಕದಿಂದ ಅಂಗ ಮಂಗಳಮಯವಾಗಿರಬೇಕು. ಪ್ರಸಾದೋದಕದಿಂದ ಆತ್ಮ ಭವಕ್ಕೆ ಬೀಜವಿಲ್ಲದಿರಬೇಕು. ಒಂದನಳಿದು ಒಂದ ಕಂಡೆಹೆನೆಂದರೆ ತಾವು ನಿಂದಲ್ಲಿಯೇ ನಿರುತರು. ಎನಗಾ ಉಭಯದ ಬಂಧವಿಲ್ಲ ನಿಃಕಳಂಕ ಮಲ್ಲಿಕಾರ್ಜುನಾ.

೩. ಪಾದೋದಕ ಮಂಡೆಗೆ ಮಜ್ಜನ. ಲಿಂಗೋದಕ ಅಂಗಕ್ಕೆ ಲೇಪನ. ಪ್ರಸಾದೋದಕ ಜಿಹ್ವೆಗೆ ಭಾಜನ. ಈ ಮೂರು ಮುನ್ನಿನ

ಅನಾದಿಯು ಲಿಂಗ ಸೋಂಕು. ಆದಿಯಿಂದತ್ತತ್ತ. ನೀವೇ ಬಲ್ಲಿರಿ. ನಾನ
ರಿಯೆ ನಿಃಕಳಂಕ ಮಲ್ಲಿಕಾರ್ಜುನಾ.

೪. ಸದ್ಗುರು ಸ್ವಾಮಿ ಶಿಷ್ಯಂಗೆ ಅನುಗ್ರಹವ ಮಾಡುವಲ್ಲಿ ಹಸ್ತ
ಮಸ್ತಕ ಸಂಯೋಗವ ಮಾಡುವ ಕಾಲದಲ್ಲಿ ಪಂಚ ಕಳಸದ ನಿರ್ಮಳ
ಜಲವ ತನ್ನ ಕರುಣ ಜಲವ ಮಾಡಿ, ಆತ ಜನ್ಮದ ವೈಲಿಗೆಯು ಕಳೆ
ಯಲು ತಾ ನಿರ್ಮಲನಾಗಿ ಲಿಂಗವ ಗ್ರಹಿಸಿದಲ್ಲಿ ಲಿಂಗಕ್ಕೆ ಮಜ್ಜನಕ್ಕೆ
ರೆಯ ತೊಡಗಿ ಲಿಂಗೋದಕವನರಿದೆ. ಲಿಂಗ ಸ್ಪರ್ಶನದಿಂದ ಪಾದೋ
ದಕವನರಿದೆ. ಲಿಂಗಾರ್ಪಿತ ಭೋಗೋಪಭೋಗದಲ್ಲಿ ಅರ್ಪಿತ ಪ್ರಸಾ
ದೋದಕವನರಿದೆ. ಅರಿದು ಅನ್ಯೋದಕವ ಮರೆದು ನಿಮ್ಮಲ್ಲಿ ತದ್ಗತ
ನಾಗಿರ್ದೆನಯ್ಯ ಮಹಾಲಿಂಗಕಲ್ಲೇಶ್ವರಾ.

೫. ಅಂಗ ದೇಹಿ ಲಿಂಗೋದಕ ಕೊಳಲಾಗದು. ಪ್ರಕೃತಿ ಜೀವಿ
ಪಾದೋದಕವ ಕೊಳಲಾಗದು. ಭವಜೀವಿ ಪ್ರಸಾದೋದಕವ ಕೊಳಲಾ
ಗದು. ಇಂತು ತ್ರಿವಿಧ ಭೇದಂಗಳಲ್ಲಿ ತ್ರಿವಿಧ ಶುದ್ಧವಾಗಿ ಕೊಳಬಲ್ಲಡೆ
ತ್ರಿವಿಧಕ್ಕೆ ಸಮರ್ಪಣ, ಈಶಾನ್ಯ ಮೂರ್ತಿ ಮಲ್ಲಿಕಾರ್ಜುನ ಲಿಂಗ
ಕ್ಕರ್ಪಿತ.

೬. ಗುರು ಕರುಣವೆಂಬ ಪಾದೋದಕದಲ್ಲಿ ನಾಂದು ಕ್ರಿಯೆ
ಯಾಯಿತ್ತಯ್ಯ. ಇಂತು ನಿರ್ಮಲವಾಗಿ ಲಿಂಗಕ್ಕೆ ಮಜ್ಜನಕ್ಕೆರೆದು
ಲಿಂಗೋದಕವಾಯಿತ್ತು. ಲಿಂಗದ ಸೋಂಕಿನಿಂದ ಪಾದೋದಕವಾ
ಯಿತ್ತು. ಲಿಂಗಾರ್ಪಿತದಿಂದ ಪ್ರಸಾದೋದಕವಾಯಿತ್ತು. ಲಿಂಗೋದಕ
ಮಜ್ಜನದಲ್ಲಿ, ಪಾದೋದಕ ಕರ ಚರಣ ಮುಖ ಪ್ರಕ್ಷಾಲನದಲ್ಲಿ,
ಪ್ರಸಾದೋದಕ ಲಿಂಗ ಭೋಗೋಪಭೋಗದಲ್ಲಿ, ಇಂತೀ ತ್ರಿವಿಧೋ
ದಕದ ಪರಿಯನರಿದು ಭೋಗಿಸಬಲ್ಲ ಸೌರಾಷ್ಟ್ರ ಸೋಮೇಶ್ವರಾ ನಿಮ್ಮ
ಶರಣ.

೭. ಲಿಂಗೋದಕ, ಪಾದೋದಕ, ಪ್ರಸಾದೋದಕವು ಆ ತ್ರಿವಿ
ಧೋದಕದಲ್ಲಿ. ಇಂತೀ ಲಿಂಗೋದಕದಿಂದ ಸಂಚಿತ ಕರ್ಮವಿಲ್ಲ.
ಪಾದೋದಕದಿಂದ ಪ್ರಾರಬ್ಧ ಕರ್ಮವಿಲ್ಲ. ಪ್ರಸಾದೋದಕದಿಂದ ಆಗಾಮಿ
ಕರ್ಮವಿಲ್ಲ. ಇಂತೀ ತ್ರಿವಿಧೋದಕದಿಂದ ಬ್ರಹ್ಮಹತ್ಯ ಭ್ರೂಣಹತ್ಯ
ಪಾಪಪಂಕ ಪ್ರಕ್ಷಾಲನವಯ್ಯ ಸೌರಾಷ್ಟ್ರಸೋಮೇಶ್ವರಾ.

೮. ಲಿಂಗೋದಕದಿಂದ ಅಂಗ ರಕ್ಷಣಂಗಳ ಮಾಡುವೆ. ಪಾದೋದಕದಿಂದ ಸರ್ವ ಪವಿತ್ರವ ಮಾಡುವೆ. ಪ್ರಸಾದೋದಕದಿಂದ ಪ್ರಾಣನ ನೆಲೆಯನರಿವೆ. ಇಂತೀ ತ್ರಿವಿಧೋದಕದಿಂದ ಶುದ್ಧನಹೆ, ಸಿದ್ಧನಹೆ, ಪ್ರಸಿದ್ಧನಹೆ ಕಪಿಲಸಿದ್ಧ ಮಲ್ಲಿಕಾರ್ಜುನ ತಾನಹೆ.

೯. ಇನ್ನು ಲಿಂಗೋದಕ, ಪಾದೋದಕ, ಪ್ರಸಾದೋದಕವೆಂದು ತ್ರಿವಿಧ. ಲಿಂಗೋದಕವೆಂದು ಶಿವ ಸಂಸ್ಕಾರದಿಂದಾದುದು. ಪಾದೋದಕವೆಂದು ಲಿಂಗಕ್ಕೆ ಮಜ್ಜನಕ್ಕೆರೆದುದು. ಪ್ರಸಾದೋದಕವೆಂದು ಲಿಂಗ ವಾರೋಗಿಸಿದ ಬಳಿಕ ಸಿತಾಳಂಗೊಟ್ಟುದು. ಲಿಂಗೋದಕದಲ್ಲಿ ಲಿಂಗಕ್ಕೆ ಪಾಕಪ್ರಯುತ್ನ ಮಜ್ಜನಕ್ಕೆರೆವುದು. ಪಾದೋದಕದಲ್ಲಿ ಮುಖಪ್ರಕ್ಷಾಲನವ ಮಾಡುವುದು. ಶಿರಸ್ಸಿನ ಮೇಲೆ ತಳಿದುಕೊಂಬುದು. ಪ್ರಸಾದೋದಕವನಾರೋಗಿಸುವುದು. ಇಂತೀ ತ್ರಿವಿಧೋದಕ, ದಾಸೋಹ ಷಟ್ ಪ್ರಕಾರ ವರ್ತಿಸುವುದು. ಭಕ್ತ ನಿಂದೆಯ ಮಾಡಲಾಗದು. ಆಚಾರ ನಿಂದೆಯ ಮಾಡಲಾಗದು. ಹುಸಿ ಇಲ್ಲದಿದ್ದರೆ ಭಕ್ತನು. ಇಂತಿದು ಭಕ್ತಿಸ್ಥಲ ಕೂಡಲ ಚನ್ನ ಸಂಗಮದೇವಾ.

೧೦. ಲಿಂಗಾರೋಪಿತ ಮುಖದಿಂದ ಬಂದುದು ಪಾದೋದಕ. ಲಿಂಗಾವಧಾನಮುಖದಿಂದ ಬಂದುದು ಅವಧಾನೋದಕ. ಲಿಂಗಾರ್ಪಿತ ಮುಖದಿಂದ ಬಂದುದು ಪ್ರಸಾದೋದಕ. ಶ್ಲೋ॥ ಪಾದೋದಕಂ ತ್ರಿವಿಧಂ ಆರೋಪ್ಯಂ ಚಾವಧಾರಿತಂ॥ ಲಿಂಗಾರ್ಪಿತಂ ಪ್ರಸಾದಂಚ ತಥಾ ಲಿಂಗೋದಕಂ ಭವೇತ್॥ ಎಂದುದಾಗಿ ಇಂತು ಮಜ್ಜನ ಭೋಜನ ಆರೋಪಿತ ಮುಖದಿಂದ ತ್ರಿವಿಧೋದಕವನು ಕೂಡಲ ಚನ್ನ ಸಂಗಮದೇವಾ ನಿಮ್ಮ ಶರಣ ಬಲ್ಲ.

೧೧. ಇನ್ನು ಲಿಂಗೋದಕ, ಪಾದೋದಕ, ಪ್ರಸಾದೋದಕ, ಅವೆಂತೆಂದೊಡೆ— ಲಿಂಗೋದಕ ಶಿವಮಂತ್ರ ಸಂಸ್ಕಾರದಿಂದಾದುದು. ಲಿಂಗಕ್ಕೆ ಮಜ್ಜನಕ್ಕೆರೆದುದೇ ಪಾದೋದಕ. ಲಿಂಗಾರೋಗಣೆಯ ಮಾಡಿ ಮಿಕ್ಕುದೇ ಪ್ರಸಾದೋದಕ. ಲಿಂಗೋದಕದಲ್ಲಿ ಪಾಕ ಪ್ರಯುತ್ನ ಮಜ್ಜನಾದಿಗಳ ಮಾಡುವುದು. ಪಾದೋದಕದಲ್ಲಿ ಮುಖ ಪ್ರಕ್ಷಾಲನವ ಮಾಡುವುದು. ಮಸ್ತಕದ ಮೇಲೆ ತಳಿದುಕೊಂಬುದು. ಪ್ರಸಾದೋದಕವ ಭುಂಜಿಸುವುದು ನೋಡಾ ಅಪ್ರಮಾಣ ಕೂಡಲ ಸಂಗಮ ದೇವಾ.

## ಪಾದೋದಕದಲ್ಲಿ ಗುರುಶಿಷ್ಯ ಸಾಮರಸ್ಯವು.

೧. ಗುರು ತತ್ವವನರಿದು ಆ ಶ್ರೀಗುರುವಿನಿಂದ ಶಿವದೀಕ್ಷೆಯಾದ ಪರಮಾದ್ವೈತ ಶಿಷ್ಯನು ಆ ಜ್ಞಾನ ಗುರುವಿನ ಅನಂದೈಕ್ಯ ಪಾದೋದಕವ ಕೊಂಡು ಪಾದೋದಕ ರೂಪವಾದ ಶಿಷ್ಯನಲ್ಲಿ ಗುರುವಡಗಿ ಗುರುವಿನಲ್ಲಿ ಶಿಷ್ಯನಡಗಿ ಗುರು ಶಿಷ್ಯರೊಂದಾದ ಘನವನುಪಮಿಸಬಹುದೇ ನಿಜಗುರು ಸ್ವತಂತ್ರ ಸಿದ್ಧ ಲಿಂಗೇಶ್ವರನಲ್ಲಿ ಏಕರಸವಂದುದನು ?

೨. ಅರಿವಿಂದ ಅರಿದೆನೆಂಬ ಶಿಷ್ಯನಿಲ್ಲ. ಅರುಹಿಸುವ ಗುರುವುನ್ನಿಲ್ಲ. ಅರಿವುದಿನ್ನೇನ, ಅರುಹಿಸುವದಿನ್ನೇನ ಹೇಳಾ? ಶ್ರೀಗುರು ಪ್ರಸನ್ನ ಪಾದೋದಕದಲ್ಲಿ ಮುಳುಗಿ ಸಮರಸ ಸಂಬಂಧವಾದ ಬಳಿಕ ಇನ್ನು ಭೇದ ಭಾವ ಉಂಟೇ ಹೇಳಾ ? ಸೀಮೆಯುಳಿದ ನಿಸ್ಸೀಮಂಗೆ ಕಾಯವಿಲ್ಲ. ಕಾಯವಿಲ್ಲಾಗಿ ಮಾಯೆಯಿಲ್ಲ. ಅವಿರಳವಾದ ಗುರು ಶಿಷ್ಯರೈಕ್ಯವನು ನಿಜಗುರು ಸ್ವತಂತ್ರಸಿದ್ಧಲಿಂಗೇಶ್ವರನ ಶರಣನೇ ಬಲ್ಲ.

೩. ನಿತ್ಯಾನಂದ ನಿಜದಾಕಾರದ ಪರಮ ನಿರ್ಮಲ ಲಿಂಗ ತೇಜದೊಳಗೆ ಮನವಳಿದು ಲೀಯ್ಯವಾದ ಮತ್ತೆ ತಾನೆಂಬುದಿಲ್ಲ. ಅನಾದಿ ವಿದ್ಯೆಯ ಮೀರಿನಿಂದ ಪರಮಾನಂದ ಜ್ಞಾನ ಪಾದೋದಕ ರೂಪು ತಾನೆಯಲ್ಲದೆ ಅನ್ಯವಿಲ್ಲ. ಇದು ಕಾರಣ ಅರಿವುದುದಿಲ್ಲ, ಅರುಹಿಸಿಕೊಂಬುದಿಲ್ಲ. ಅರಿವ ಅರುಹಿಸಿಕೊಂಬ ಈ ಉಭಯ ಒಂದಾದ ನಿಲವೇ ನಿಜಗುರು ಸ್ವತಂತ್ರ ಸಿದ್ಧಲಿಂಗೇಶ್ವರನೆಂಬೆನು.

---

## ತ್ರಿವಿಧ ಪಾದೋದಕಗಳು.

೧. ಭಯಭಕ್ತಿ ಕಿಂಕುರ್ವಾಣದಿಂ ಜಂಗಮಕ್ಕೆ ಪಾದಾರ್ಚನೆಯಂ ಮಾಡಿ, ಗದ್ದುಗೆಯ ಮೇಲೆ ಮೂರ್ತಮಾಡಿಸಿ ಪಾದಪೂಜೆಯ ಮಾಡಿಕೊಂಬಾತನು ದೀರ್ಘದಂಡ ನಮಸ್ಕಾರವಂ ಮಾಡಿ, ಪಾದ ಪೂಜೆಯ ಮಾಡುವುದಕ್ಕೆ ಅಗ್ಗವಣಿಯಂ ತೆಗೆದುಕೊಂಡು ಮೂರ್ತವಂ ಮಾಡಿ ತನ್ನ ಲಿಂಗವ ನಿರೀಕ್ಷಿಸಿ ತನ್ನ ಅಂಗೈಯ್ಯಲ್ಲಿ ಹಕಾರ ಪ್ರಣ

ಮವಂ ವಿಭೂತಿಯಲ್ಲಿ ಬರೆದು ಆ ಜಂಗಮದ ಪಾದವನು ತನ್ನ ಕರ ದಲ್ಲಿ ಲಿಂಗದೋಪಾದಿಯಲ್ಲಿ ಹಿಡಿದು ಎರಡು ಅಂಗುಷ್ಠದ ಮೇಲೆ ಪ್ರಣವಮವಂ ಬರೆದು ಅಷ್ಟವಿಧಾರ್ಚನೆ ಷೋಡಶೋಪಚಾರವಮಂ ಮಾಡಿ ನಮಸ್ಕರಿಸಿ ಆ ಪೂಜೆಯನಿಳುಹಿ ಬಟ್ಟಲೊಳಗೆ ಪ್ರಣವವಮಂ ಬರೆದು ತಂಬುಗೆಯೊಳಗಿರ್ದ ಉದಕದಲ್ಲಿ ಪ್ರಣವವಮಂ ಬರೆದು ಈಶ್ವರನ ಬ್ರಹ್ಮರಂಧ್ರದಲ್ಲಿ ಸತ್ಯೋದಕವೆಂದು ಭಾವಿಸಿಕೊಂಡು ಆ ಉದಕವ ಬಲದುಂಗುಟದ ಮೇಲೆ ನೀಡುವಲ್ಲಿ ಆರು ವೇಳೆ ಷಡಕ್ಷರಿಯ ನುಡಿದು ಇಷ್ಟಲಿಂಗವೆಂದು ಭಾವಿಸಿಕೊಂಡು ಎಡದುಂಗುಟದ ಮೇಲೆ ನೀಡು ವಲ್ಲಿ ಐದು ವೇಳೆ ಪಂಚಾಕ್ಷರಿಯ ನುಡಿದು ಪ್ರಾಣಲಿಂಗವೆಂದು ಭಾವಿಸಿಕೊಂಡು ಎರಡುಂಗುಟದ ಮಧ್ಯದಲ್ಲಿ ನೀಡುವಾಗ 'ಓಂ ಬಸವ ಲಿಂಗಾಯ ನಮಃ' ಎಂದು ನುಡಿವುದ ಭಾವಲಿಂಗವೆಂದು ಭಾವಿಸಿ, ದ್ರವವ ತೆಗೆದು ಮತ್ತಂ ಪೂಜೆಯಂ ನಮಸ್ಕರಿಸಿ ಆ ಪೂಜೆಯನಿಳುಹಿ 'ಶರಣಾರ್ಥಿ' ಎಂದು ಆ ಜಂಗಮವು ಸಲಿಸದ ಮೇಲೆ ತಾನು ಸಲಿಸುವ ವಿವರವೆಂತೆಂದೊಡೆ— ಪಂಚಾಕ್ಷರಿಯಿಂ ಪಂಚಾಂಗುಳಿಯಿಂ ಲಿಂಗಕ್ಕೆ ಅರ್ಪಿಸಿ ಆ ಪಂಚಾಂಗುಲಿಯ ಸ್ವೀಕರಿಸಿಕೊಂಡು ಸದ್ಗುರು ಪಾದೋ ದಕವೆಂದು ಹೇಳಲ್ಪಟ್ಟಿತ್ತು. ಆ ಲಿಂಗದ ಮೇಲೆ ನೀಡಿದ್ದು ಲಿಂಗೋ ದಕವೆಂದು ಹೇಳಲ್ಪಟ್ಟಿತ್ತು. ಆ ಬಟ್ಟಲೊಳಗಿರ್ದ ತೀರ್ಥವು ಜಂಗಮ ಪಾದೋದಕವೆಂದು ಹೇಳಲ್ಪಟ್ಟಿತ್ತು. ತ್ರಿವಿಧ ಪಾದೋದಕದ ಈ ಕ್ರಮವ ನರಿದು ಸಲಿಸುವ ಮಾರ್ಗದಿಂದ ಮುಕ್ತಿಯಾಗುವುದಕ್ಕೆ ಸಂದೇಹವಿಲ್ಲ.

---

## ದಶವಿಧ ಪಾದೋದಕಗಳು.

೧. ಪ್ರಥಮದಲ್ಲಿ ಪಾದೋದಕ, ದ್ವಿತೀಯದಲ್ಲಿ ಲಿಂಗೋದಕ, ತೃತೀಯದಲ್ಲಿ ಮಜ್ಜನೋದಕ, ಚತುರ್ಥದಲ್ಲಿ ಸ್ಪರ್ಶನೋದಕ, ಪಂಚ ಮದಲ್ಲಿ ಅವಧಾನೋದಕ, ಷಷ್ಠಮದಲ್ಲಿ ಆಪ್ಯಾಯನೋದಕ, ಸಪ್ತ ಮದಲ್ಲಿ ಹಸ್ತೋದಕ, ಅಷ್ಟಮದಲ್ಲಿ ಪರಿಣಾಮೋದಕ, ನವಮದಲ್ಲಿ ನಿರ್ನಾಮೋದಕ, ದಶಮದಲ್ಲಿ ಸತ್ಯೋದಕ, ಇಂತೀ ದಶವಿಧ ಪಾದೋ ದಕವ ತಿಳಿದು ಕೇಳಬಲ್ಲ ಚನ್ನ ಸಂಗಾ ನಿಮ್ಮ ಶರಣ.

೨. ಪಾದದಲ್ಲಿ ಪಾದೋದಕ, ಆ ಪಾದ ತೀರ್ಥವನ್ನು ಲಿಂಗಕ್ಕೆ ಮಜ್ಜನಕ್ಕೆರೆಯುಬೇಕೆಂಬ ಇಚ್ಛೆ ಹುಟ್ಟಿದಲ್ಲಿ ಲಿಂಗೋದಕ, ಮಜ್ಜನಕ್ಕೆರೆದಲ್ಲಿ ಮಜ್ಜನೋದಕ, ಜಿಹ್ವೆಯಲ್ಲಿ ಪಂಚಾಂಗುಲವ ಸ್ವೀಕರಿಸಿದ್ದೇ ಸ್ಪರ್ಶನೋದಕ, ಎಚ್ಚರಿಕೆ ಸಾವಧಾನದಿಂದ ಸೇವಿಸಿದ್ದೇ ಅವಧಾನೋದಕ, ಸಲಿಸಿ ಸಂತೋಷವಾದರೆ ಆಪ್ಯಾಯನೋದಕ, ಹಸ್ತದೊಳಗಿರ್ದ ತೀರ್ಥವನು ಸಲಿಸಿದ್ದೇ ಹಸ್ತೋದಕ, ಬಟ್ಟಲಲ್ಲಿರ್ದ ತೀರ್ಥವನು ಮೂರು ಸಲ ಸ್ವೀಕರಿಸಿದ್ದೇ ಪರಿಣಾಮೋದಕ, ಆ ಪಾದೋದಕವನು ಅಂತಿಂತೆಂದು ಹೆಸರಿಡಲಿಲ್ಲವಾಗಿ ನಿರ್ನಾಮೋದಕ, [illegible]ದಲ್ಲಿರ್ದ ಚಿದಮೃತವೆಂದು ಭಾವಿಸುವುದೇ ಸತ್ಯೋದಕ, ಇಂತೀ ದಶವಿಧ ಪಾದೋದಕವನು ಎನ್ನಂತರಂಗದಲ್ಲಿ ತಿಳಿದು ನಾನು ಸಾಧ್ಯನ್[illegible]ನಾದೆನಯ್ಯ ಶಿವತಂತ್ರಗುರುಶಾಂತೇಶ್ವರಾ.

೩. ಪ್ರಥಮದಲ್ಲಿ ಸ್ಪರ್ಶನವೆಂಬ ಗುಣದಿಂದ ಬಂದುದು ಪಾದೋದಕ, ದ್ವಿತೀಯದಲ್ಲಿ ಅಂಗದ ಗುಣವಳಿಯಿತ್ತಾಗಿ ಲಿಂಗ ಮುಖದಿಂ ಬಂದುದು ಲಿಂಗೋದಕ, ತೃತೀಯದಲ್ಲಿ ಮುಖಾಗಣಂಗಳ ಬರವಿಂದ ಒಂದುದಾಗಿ ಮಜ್ಜನೋದಕ, ಚತುರ್ಥದಲ್ಲಿ ಚತುರ್ದಳ ಪದ್ಮ ವಿಕಸಿತವಾಗಿ ಪುಷ್ಪೋದಕ, ಪಂಚಮದಲ್ಲಿ ಲಿಂಗಕ್ಕೆ ಪರಮ ಪರಿಣಾಮವನಿಕ್ಕಿದಲ್ಲಿ ಅವಧಾನೋದಕ, ಷಷ್ಠಮದಲ್ಲಿ ಲಿಂಗಾರೋಗಣೆಯವಸರದಲ್ಲಿ ಆಪ್ಯಾಯನೋದಕ, ಸಪ್ತಮದಲ್ಲಿ ಲಿಂಗಕ್ಕೆ ಹಸ್ತೋದಕ, ಅಷ್ಟಮದಲ್ಲಿ ಅಷ್ಟಾಂಗಯೋಗವಾದಲ್ಲಿ ಪರಮ ಪರಿಣಾಮೋದಕ, ನವಮದಲ್ಲಿ ನಾಮಸೀಮೆ ಇಲ್ಲವಾಗಿ ನಿರ್ನಾಮೋದಕ, ದಶಮದಲ್ಲಿ ಹೆಸರಿಲ್ಲವಾಗಿ ಸತ್ಯೋದಕ ನೋಡಾ. ಹೇಳಬಾರದ ಘನವ ಕೇಳಬಾರದಾಗಿ ಕೂಡಲ ಚನ್ನ ಸಂಗಯ್ಯನಲ್ಲಿ ಉಪಮಿಸಬಾರದಯ್ಯ ಮಹಾ ಘನವ.

೪. ಅಯ್ಯಾ. ಜಗತ್ಪಾವನ ನಿಮಿತ್ತಾರ್ಥವಾಗಿ ಸಾಕಾರ ಲೀಲೆಯ ಧರಿಸಿದ ಸ್ವಯ ಚರ ಪರ ಗುರುಮೂರ್ತಿಗಳು ಅರ್ಪಿತಾವಧಾನದ ನಿಲುಕಡೆ ಎಂತೆಂದೊಡೆ—ಲಿಂಗಾಚಾರ [illegible] ಗಣಂಗಳಲ್ಲಿ ಲಿಂಗಾರ್ಪಿತ ಭಿಕ್ಷೆ ಲೀಲೆಯ ಧರಿಸಿ ಹೋದ [illegible] ಆ ಭಕ್ತಗಣಂಗಳು ಶರಣು ಹೊಕ್ಕ ಸಮಸ್ತ ಆಚರಣೆಯು ಒದಗಿ[illegible]

ಕೊಟ್ಟಲ್ಲಿ ದಶವಿಧ ಪಾದೋದಕ, ಏಕಾದಶ ಪ್ರಸಾದದಾಚರಣೆಯಾಗುವುದಯ್ಯ. ಇಂತು ಲಿಂಗಾಚಾರ ಭಕ್ತ ಗಣಂಗಳು ದೊರೆಯದಿರ್ದಡೆ, ವೇದಾಂತಿ ಸಿದ್ಧಾಂತಿ ಭಿನ್ನಯೋಗಿ ಮೊದಲಾದ ಸಮಸ್ತಮತದಿಂದ ಏಕ ಶಬ್ದ ಭಿಕ್ಷ ಸಪ್ತಗೃಹವ ಬೇಡಿ, ದುರ್ಗುಣಯುಕ್ತವಾದ ಅಯೋಗ್ಯ ದ್ರವ್ಯವನುಳಿದು, ಸದ್ಗುಣಯುಕ್ತವಾದ ಯೋಗ್ಯ ದ್ರವ್ಯವ ಕೈಕೊಂಡು ಧೂಳ ಪಾದ ಜಲದಿಂದ ಭವಿತನವ ಕಳೆದು ಭಕ್ತ ಪದಾರ್ಥವೆನಿಸಿ, ಅರ್ಘ್ಯಪಾದ್ಯಾಚಮನವ ಮಾಡಿ, ಧಾನ್ಯವಾದಡೆ ಪರಿಣಾಮ ಜಲದಿಂ ಶೋಧಿಸಿ ಪಾಕವ ಮಾಡಿ, ಫಲಾಹಾರವಾದಡೆ ಶೋಧಿಸಿ ಪಕ್ವವ ಮಾಡಿಟ್ಟು, ಆ ಮೇಲೆ ಅಯ್ಯಾ, ನಿನಗೆ ಭಕ್ತ ಗಣಂಗಳು ದೊರೆಯದ ಸಮಯದಲ್ಲಿ ಚತುರ್ವಿಧ ಪಾದೋದಕವೆಂತೆಂದೊಡೆ, ಏಕಾಂತವಾಸದಲ್ಲಿ ಪರಿಣಾಮ ತರವಾದ ಹಳ್ಳ ಹೊಳೆ ಕೆರೆ ಬಾವಿ ಮಡು ಹೊಂಡ ಚಿಲುಮೆ ಕೊಳ ಮೊದಲಾದ ಸ್ಥಾನಕ್ಕೆ ಹೋಗಿ ಪ್ರಥಮದಲ್ಲಿ 'ಶಿವ ಶಿವ, ಹರಹರಾ, ಗುರುಬಸವಲಿಂಗಾ' ಎಂಬ ಮಂತ್ರ ಸ್ಮರಣೆ ಧ್ಯಾನದಿಂದ ಪಾದವಿಟ್ಟು ಚರಣ ಸೋಂಕಿಸಿಂ ಪವಿತ್ರವಾದುದಕವೇ ಪಾದೋದಕವೆನಿಸುವುದಯ್ಯ. ಆ ಮೇಲೆ ತಂಬಿಗೆಯೊಳಗೆ ಶೋಧಿಸಿ ಬಸವಾಕ್ಷರವ ಲಿಖಿಸುವದೇ ಗುರುಪಾದೋದಕವೆನಿಸುವದಯ್ಯ. ಇಂತು ಗುರು ಪಾದೋದಕದಿಂದ ಇಂತು ಇಷ್ಟ ಮಹಾಲಿಂಗ ದೇವಂಗೆ ಅಭಿಷೇಕ ಮುಖದಿಂದ ಲಿಂಗೋದಕವೆನಿಸುವುದಯ್ಯ. ಆ ಮೇಲೆ ಅರ್ಚನಾಕ್ರಿಯೆಗಳ ತೀರ್ಚಿಸಿಕೊಂಡು ನಿಚ್ಚ ಪ್ರಸಾದಿ ಸಂಬಂಧಾಚರಣೆಯಂತೆ ಮುಗಿದಲ್ಲಿ ಜಂಗಮ ಪಾದೋದಕವೆನಿಸುವುದಯ್ಯ. ಇಂತು ಚತುರ್ವಿಧ ಪಾದೋದಕದೊಳಗೆ ಷಡ್ವಿಧ ಪಾದೋದಕ ಉಂಟು. ಅದೆಂತೆಂದೊಡೆ:— ಹಸ್ತವಿಟ್ಟು, ಸ್ಪರ್ಶನವ ಮಾಡೆ, ಸ್ಪರ್ಶನೋದಕವೆನಿಸುವುದಯ್ಯ. ಲಿಂಗಕ್ಕೆ ಧಾರೆಯಿಂದ ಅಭಿಷೇಕವನೆರೆದಲ್ಲಿ ಅವಧಾನೋದಕವೆನಿಸುವುದಯ್ಯ ಲಿಂಗಾರ್ಪಿತವ ಮಾಡಬೇಕೆಂಬ ಆನಂದವೇ ಆಪ್ಯಾಯನೋದಕವೆನಿಸುವದಯ್ಯ. ಅರ್ಪಿತ ಮುಖದಲ್ಲಿ ಹಸ್ತ ಪ್ರಕ್ಷಾಳಿಸಿ ಖಂಡಿತವ ಮಾಡಿದಲ್ಲಿಗೆ ಹಸ್ತೋದಕವೆನಿಸುವುದಯ್ಯ. ಲಿಂಗಕ್ಕೆ ಸಂತೃಪ್ತಿ ಪರಿಯಂತರವು ಅರ್ಪಿತವ ಮಾಡಿದ್ದೇ ಪರಿಣಾಮೋದಕವೆನಿಸುವುದಯ್ಯ. ತಟ್ಟೆ, ಬಟ್ಟಲು ಲೇಹ್ಯವ ಮಾಡಿದಲ್ಲಿ ನಿರ್ನಾಮೋದಕವೆನಿಸುವುದಯ್ಯ. ಲೇಹ್ಯವ ಮಾಡಿದ ಮೇಲೆ ದ್ರವವನಾರಿಸಿ ಸರ್ವಾಂಗದಲ್ಲಿ ಲೇಪಿಸುವುದೇ ಸತ್ಯೋ

ದಕವೆನಿಸುವುದಯ್ಯ. ಇಂತೀ ದಶವಿಧ ಪಾದೋದಕದ ವಿಚಾರವ ತಿಳಿದಾನಂದಿಸಿದಡೆ ನಿನ್ನ ಸರ್ವಾಂಗವೆಲ್ಲ ಚಿದ್ಘನ ಶರಣ ಪ್ರಸಾದ ಲಿಂಗ ಸ್ವರೂಪು ನೋಡಾ ಸಂಗನಬಸವೇಶ್ವರಾ.

೫. ನೇತ್ರದಲ್ಲಿ ಷಡುವರ್ಣ ಸಂಬಂಧವಹ ಅಪವಿತ್ರವ ಪವಿತ್ರವನರಿದು ಮಹತ್ಪವಿತ್ರವ ಮಾಡಿ ನೇತ್ರದ ಕೈಯ್ಯಲ್ಲಿ ಲಿಂಗ ನೇತ್ರಕ್ಕೆ ಅರ್ಪಿಸುವಲ್ಲಿ ನೇತ್ರೋದಕವು. ಶ್ರೋತ್ರದಲ್ಲಿ ಶಬ್ದಕ್ಕೆ ಶಬ್ದವನರಿದು ಮಹಾಶಬ್ದದಲ್ಲಿ ವರ್ತಿಸಿ ಶ್ರೋತ್ರದ ಕೈಯ್ಯಲ್ಲಿ ಲಿಂಗ ಶ್ರೋತ್ರಕ್ಕೆ ಅರ್ಪಿಸುವಲ್ಲಿ ಶ್ರೋತ್ರೋದಕವು. ಘ್ರಾಣದಿಂದ ಸುಗಂಧ ದುರ್ಗಂಧವನರಿದು ಮಹಾಗಂಧವ ಮಾಡಿ ಘ್ರಾಣದ ಕೈಯ್ಯಲು ಲಿಂಗ ಘ್ರಾಣಕ್ಕೆ ಅರ್ಪಿಸುವಲ್ಲಿ ಘ್ರಾಣೋದಕವು. ಜಿಹ್ವೆಯಿಂದಲು ಮಧುರ ಆಮ್ಲ ಲವಣ ತಿಕ್ತ ಕಟು ಕಷಾಯವೆಂಬ ಷಡುರುಚಿಯನರಿದು ಮಹಾರುಚಿಯ ಮಾಡಿ ಜಿಹ್ವೆಯ ಕೈಯ್ಯಲ್ಲಿ ಲಿಂಗ ಜಿಹ್ವೆಗರ್ಪಿಸುವಲ್ಲಿ ಜಿಹ್ವೋದಕವು. ಸ್ಪರ್ಶನದಿಂದ ಶೀತೋಷ್ಣವನರಿದು ಇಚ್ಛೆಯ ಕಾಲವನರಿದು ಮಹಾಸ್ಪರ್ಶನವ ಮಾಡಿ ಸ್ಪರ್ಶನದ ಕೈಯ್ಯಲ್ಲಿ ಲಿಂಗ ಸ್ಪರ್ಶನಕ್ಕರ್ಪಿಸುವಲ್ಲಿ ಸ್ಪರ್ಶನೋದಕವು. ಸದ್ಭಕ್ತಿಯಿಂ ಪಾದಾರ್ಚನೆಯಿಂ ಮಾಡುವಲ್ಲಿ ಪಾದೋದಕವು. ಸ್ನೇಹದಿಂದ ಮಜ್ಜನಕ್ಕೆರೆವಲ್ಲಿ ಮಜ್ಜನೋದಕವು. ಆರೋಗಣೆಯಲ್ಲಿ ಅರ್ಪಿಸಿದುದು ಅರ್ಪಿತೋದಕವು. ಆರೋಗಣೆಯ ಮೇಲೆ ಹಸ್ತಕ್ಕೆರೆದುದು ಹಸ್ತೋದಕವು. ಗುರು ಲಿಂಗ ಶಿವ ಲಿಂಗ ಜಂಗಮಲಿಂಗ ಒಂದೇ ಎಂದರಿದು ಸರ್ವಕ್ರಿಯಾ ಕರ್ಮವೆಲ್ಲಕ್ಕೆ ಲಿಂಗಸಂಬಂಧವ ಮಾಡಿ ಪ್ರಯೋಗಿಸುವುದು ಸತ್ಯೋದಕವು. ಈ ದಶೋದಕ ಕ್ರಮವನರಿದು ವರ್ತಿಸುವುದು ಆಗಮಾಚಾರ ಕ್ರಿಯಾ ಸಂಪತ್ತು ಉರಿಲಿಂಗಪೆದ್ದಿಪ್ರಿಯ ವಿಶ್ವೇಶ್ವರಾ.

೬. ಅಂಗ ಲಿಂಗ ಸಂಬಂಧಿಯಾದ ಬಳಿಕ ಗುರುವಿನನುಮತದಿಂದ ಸ್ವಾನುಭವ, ಲಿಂಗ ಸಂಬಂಧಿಯಾದ ಬಳಿಕ ಪ್ರಾಣವಿಪ್ಪ ನೆಲೆಯನರಿದು ಆ ಲಿಂಗ ಮಜ್ಜನೋದಕದಿಂದ ನಿನ್ನ ಕಾಯಶುದ್ಧಿ. ಆ ಲಿಂಗ ನಿರೀಕ್ಷಣೋದಕದಿಂದ ಅವಯವ ಶುದ್ಧಿ. ಆ ಲಿಂಗ ಪ್ರಸಾದೋದಕ ನಿನ್ನ ಶಿರವು ಪಾದವು. ಇಂತು ಪಾದೋದಕತ್ರಯದಲ್ಲಿ ಸಂಬಂಧಿಯಾಗಿ ಕಪಿಲಸಿದ್ಧಮಲ್ಲಿಕಾರ್ಜುನನ ಕೂಡಿ ನಿತ್ಯನಾಗು ಸಂದಿಲ್ಲದೆ.




ವರ್ಷ ೨೨ ] ನವ್ಹಂಬರ—ದಿಸೆಂಬರ ೧೯೪೭ [ ಸಂಚಿಕೆ ೧—೨

# ಶಿವಶರಣರ ಚರಿತ್ರೆಗಳು.

## ಭಾಗ ೨

( ಪುಟಗಳು ೪೫೮ ಬೆಲೆ ೬-೪-೦ )

ಈ ಭಾಗವು ಪುಸ್ತಕ ರೂಪದಿಂದ ಈಗ ಪ್ರಸಿದ್ಧವಾಗಿದ್ದು ಇದರಲ್ಲಿ ೬೩ ಜನ ಶಿವಶರಣ, ಶರಣೆಯರ ಚರಿತ್ರೆಗಳು ಬಂದಿವೆ. ಇವರಲ್ಲಿ ೩೪ ಜನ ವಚನಕಾರರಿದ್ದಾರೆ. ಅವರ ಚರಿತ್ರೆಗಳನ್ನು ಐತಿಹಾಸಿಕ ದೃಷ್ಟಿಯಿಂದ ಸಂಶೋಧಿಸಿ ಗ್ರಂಥವನ್ನು ಸಿದ್ಧಪಡಿಸಿದ್ದಾಗಿದೆ. ಇಂಥ ಪ್ರಯತ್ನವು ಈ ವರೆಗೆ ಆದದ್ದು ಇದೇ ಮೊದಲನೆಯದೆಂದು ಹೇಳಬಹುದು. ಈ ಚರಿತ್ರೆಗಳಿಂದ ವೀರಶೈವ ಧರ್ಮ ಪ್ರಸಾರ ಕಾರ್ಯಗಳು ಆರಂಭದಲ್ಲಿ ಹೇಗೆ ನಡೆದವೆಂಬುದನ್ನು ವಾಚಕರು ಸ್ಪಷ್ಟವಾಗಿ ಅರಿಯಬಹುದಾಗಿದೆ. ಇದರ ವಿವರಣೆಗಳು ಪ್ರಸ್ತಾವನೆಯಲ್ಲಿ ಬಹು ವಿಸ್ತಾರವಾಗಿ ನಿರೂಪಿಸಲ್ಪಟ್ಟಿವೆ. ಪ್ರಸ್ತಾವನೆಯು ೮೮ ಪುಟವುಳ್ಳದಾಗಿದೆ. ಗ್ರಂಥದ ಪ್ರತಿಗಳ ಸಂಖ್ಯೆಯು ಬಹಳ ಸ್ವಲ್ಪ ಇದ್ದು ಗ್ರಾಹಕರು ಇದನ್ನು ಅವಶ್ಯವಾಗಿ ಸಂಗ್ರಹಿಸಬೇಕೆಂದು ನಮ್ಮ ಸೂಚನೆ ಇದೆ.

ಹಿತಚಿಂತಕ ಪ್ರಿಂಟಿಂಗ ಪ್ರೆಸ್,
ವಿಜಾಪುರ.

## ವಿಷಯಾನುಕ್ರಮಣಿಕೆ.

(೧) ಶರಣರಿಗೆ ಸರ್ವಾಂಗದಲ್ಲಿಯೂ ಮಹಾಲಿಂಗ
— ಶ್ರೀಮಠದ ಬಸವಯ್ಯ-ಪುಣಬಗಟ್ಟಿ.

(೨) ಪರುಷ
— ಶ್ರೀ ಸಿಂಪಿ ಲಿಂಗಣ್ಣ.

(೩) ವೀರಶೈವ ರಸಯುಕ್ತ ಪ್ರಪಂಚದ ಹೆದ್ದಾರಿ
— ಶ್ರೀ. ಶಾಂತವೀರ ಮುಮ್ಮಿಗಟ್ಟಿ.

(೪) ಪ್ರಭುಲಿಂಗಲೀಲೆಯಲ್ಲಿ ಚಾಮರಸನು ತೋರಿಸಿರುವ ಪಾತ್ರರಚನಾ ಕೌಶಲ
— ಶ್ರೀ. ಸಣ್ಣಪ್ಪ ನಾಯಕ ಬಿ ಎ.

(೫) ಮಹಾತ್ಮ ಬಸವೇಶ್ವರರು
— ಶ್ರೀ. ಮ. ಮಲ್ಲಪ್ಪ-ಹುಲಗೂರು.

(೬) ವೀರಶೈವ ಸಂಸ್ಕೃತಿ
— ಶ್ರೀ. ಡ್ಹಿ. ಸಿ. ಯುಗಟಿ, ಬಿ. ಎ ಎಲ್ ಎಲ್ ಬಿ.

(೭) ಅರ್ಜುನವಾಡದ ಶಿಲಾಶಾಸನದಲ್ಲಿ ಬಸವೇಶ್ವರನ ವಂಶಜರ ವಿಚಾರವು
— ಶ್ರೀ. ಬಿ. ಎನ್ ಮಲ್ಲಪ್ಪ,
ಬಿ. ಎ. ಎಲ್. ಎಲ್. ಬಿ. ಡಿ॥ ಜಡ್ಜ-ಬೆಂಗಳೂರು.

(೮) ಪಂಚಾಚಾರಗಳು
— ಎನ್. ರಾಚೋಟಯ್ಯ ಕಾನಕಾನಹಳ್ಳಿ.

(೯) ಅನುಭವ ಮಂಟಪವು ಜಗತ್ಕಲ್ಯಾಣ ಮಂಟಪವು
— ಶ್ರೀ. ಅನ್ನದಾನೀಶ್ವರ ವಿರಕ್ತಮಠ.

(೧೦) ಯೋಗಾಭ್ಯಾಸಕ್ಕೆ ಯೋಗ್ಯ ಅಧಿಕಾರಿಗಳಾರು?
— ಶ್ರೀ. ಗುರುಬಸವಸ್ವಾಮಿಗಳು, ಮ. ಬಂಥನಾಳ.

(೧೧) ವಚನಶಾಸ್ತ್ರಸಾರ ಭಾಗ-೩.
ಉತ್ತರಾರ್ಧ.

---

# ಶಿವಾನುಭವ

ವರ್ಷ ೨೨ | ಜಾನೇವರಿ ೧೯೪೭ | ಸಂಚಿಕೆ ೪

## ಕದಳೀ ಬನದ ಬಟ್ಟೆ.

( ಲೇಖಕಃ— ಶ್ರೀಯುತ ಲಕ್ಷ್ಮಣರಾವ ಜಮಖಂಡಿ ವಕೀಲ, ಗದಗ. )

### ಅನುಭಾವ ಪೂರ್ವದಲ್ಲಿ 'ಕದಳಿ' ಎಂಬುದು ಭವರೋಗದರಣ್ಯ ಕಾಯದ ಬಗ್ಗೆ ದ್ವಿವಿಧ ಕಲ್ಪನೆ.

ಅಕ್ಕಮಹಾದೇವಿಯವರ ಕದಳಿ ಎಂಬುದು ತನು, ಕದಳಿ ಎಂಬುದು ಮನ, ಕದಳಿ ಎಂಬುದು ವಿಷಯಂಗಳು, ಕದಳಿ ಎಂಬುದು ಭವರೋಗದರಣ್ಯ. ಕದಳಿ ಎಂಬುದ ಗೆದ್ದು ಬದುಕಿ ಬಂದು ಕದಳಿಯ ಬನದಲ್ಲಿ ಭವಹರನ ಕಂಡೆನು. ಭವಗೆಟ್ಟ ಮಗಳೆಂದು ಕರುಣದಿಂ ತೆಗೆದು ಬಿಗಿದಪ್ಪಿದರೆ, ಚನ್ನಮಲ್ಲಿಕಾರ್ಜುನನ ಹೃದಯಕಮಲದಲ್ಲಿ ಅಡಗಿದೆನು." ಈ ವಚನದಲ್ಲಿಯ 'ಕದಳಿ' ಶಬ್ದಕ್ಕೆ 'ಅರಣ್ಯಮಧ್ಯ'ವೆಂದು ಶ್ರೀಮಾನ್ ಹಳಕಟ್ಟಿಯವರು ಅರ್ಥಮಾಡಿದ್ದು. ಈ ಸಂದರ್ಭದಲ್ಲಿ 'ಕದಳಿ' ಶಬ್ದಕ್ಕೆ 'ಭವರೋಗದರಣ್ಯ'ವೆಂದು ಅರ್ಥಮಾಡಬಹುದು. ಅನುಭಾವಪೂರ್ವದಲ್ಲಿ, ಮಾಯೆಯು, ಕಾಯಕ್ಕೆ ನೆಳಲಾಗಿ, ಪ್ರಾಣಕ್ಕೆ ಮನವಾಗಿ, ಮನಕ್ಕೆ ನೆನಹಾಗಿ, ನೆನಹಿಂಗೆ ಅರಿವಾಗಿ, ಜನದ ಜಂಗುಳಿಗಳಿಗೆ ಬೆಂಗೋಲನೆತ್ತಿ ಕಾಡುವದು. ಹರಿಯ ನುಂಗಿದ ಮಾಯೆಯು, ಅಜನ ನುಂಗಿದ ಮಾಯೆಯು, ಇಂದ್ರನ ನುಂಗಿದ ಮಾಯೆಯು, ಚಂದ್ರನ ನುಂಗಿದ ಮಾಯೆಯು, ಅರಿಯೆನೆಂಬ ಅಜ್ಞಾನಿಗಳ ನುಂಗುವದು; ಬಲ್ಲೆನೆಂಬ ಬಲುಗಯ್ಯರ ನುಂಗುವದು; ಈರೇಳು ಭುವನವ

ನಾರಡಿಗೊಳ್ಳುವದು. ಕುಲಭ್ರಮೆ, ಛಲಭ್ರಮೆ, ಜಾತಿಭ್ರಮೆ, ರಾಜ್ಯಭ್ರಮೆ, ಧನ-ಧಾನ್ಯ ಪುತ್ರ-ಮಿತ್ರ-ಐಶ್ವರ್ಯ-ತ್ಯಾಗ-ಯೋಗ ಭ್ರಮೆ ಮೊದಲಾದ ಪಾಶಾಭ್ರಮಿತರಾಗಿ ಕೆಲವರು ತೊಳಲುತ್ತಿರುವರು. ಜಗದ ಯಂತ್ರವಾಹಕ ಚನ್ನಮಲ್ಲಿಕಾರ್ಜುನ ಸಾಕೆಂಬನ್ನಕ್ಕ ಕೋಲತುದಿಯ ಕೋಡಗನಂತೆ, ನೇಣತುದಿಯ ಬೊಂಬೆಯಂತೆ ಆಡುವೆವು. ಪುರುಷನ ಮುಂದೆ ಮಾಯೆ ಸ್ತ್ರೀ ಎಂಬ ಅಭಿಮಾನವಾಗಿ ಕಾಡುವದು. ಸ್ತ್ರೀಯ ಮುಂದೆ ಮಾಯೆ ಪುರುಷನೆಂಬ ಅಭಿಮಾನವಾಗಿ ಕಾಡುವದು. ಮಾಯೆಯು ಯೋಗಿಗೆ ಯೋಗಿಣಿಯಾಗುವದು; ಸವಣಗೆ ಸವಣಿಯಾಗುವದು; ಯತಿಗೆ ಪರಾಕಿಯಾಗುವದು. ಊರ ಸೀರೆಗೆ ಅಸಗ ತಡಬಡಗೊಂಬಂತೆ ಹೊನ್ನೆನ್ನದು, ಹೆಣ್ಣೆನ್ನದು, ಮಣ್ಣೆನ್ನದು ಎಂದು ನೆನೆನೆನೆದು ಕೆಮ್ಮನೆ ಕೆಡುವೆವು. ತೆರಣಿಯ ಹುಳು ತನ್ನ ಸ್ನೇಹದಲ್ಲಿ ಮನೆಯ ಮಾಡಿ ತನ್ನ ನೂಲು, ತನ್ನಸುತ್ತಿ ಸಾವ ತೆರನಂತೆ, ಮನ ಬಂದುದ ಬಯಸಿ, ಬೇವುತ್ತಿರುವೆವು. ಗುಣದೋಷ ಸಂಪಾದನೆಯ ಮಾಡುವನ್ನಕ್ಕರ, ಕಾಮದ ಒಡಲು, ಕ್ರೋಧದ ಗೊತ್ತು, ಲೋಭದ ಇಕ್ಕೆ, ಮೋಹದ ಮಂದಿರ, ಮದದಾವರಣ, ಮತ್ಸರದ ಹೊದಿಕೆ; ಈ ಭವವರತಲ್ಲದೆ ಚನ್ನಮಲ್ಲಿಕಾರ್ಜುನನರಿವುದಕ್ಕೆ ಇಂಬಿಲ್ಲ. ತಾಯಿ ರಕ್ಕಸಿಯಾದಂತೆ ಕಾಯ ವಿಕಾರವು, ಅನುಭಾವ ಪೂರ್ವದಲ್ಲಿ, ಕಾಯ ವಿಕಾರದ ಕತ್ತಲೆಯಲ್ಲಿ ಇರುವೆವು. ಪ್ರಭುದೇವರ "ಕಾಯವೆಂಬ ಮಹಾ ಕದಳಿಯ ಗೆಲಬಲ್ಲವರಾರನು ಕಾಣೆನು. ಸಂಸಾರವೆಂಬ ಸಪ್ತಸಮುದ್ರವ ಬಳಸಿ ಬಂದಿಪ್ಪ ಉಭಯವೆಂಬ ಮಹಾರಣ್ಯದೊಳು ಪಂಚೇಂದ್ರಿಯವೆಂಬ ವಿಷದ-ಮಳೆ ಸುರಿವುತ್ತಿಪ್ಪದು. ಕೋಪವೆಂಬ ಪೆರ್ಬುಲಿ ಮೊರೆವುತ್ತಿಪ್ಪದು. ಅಷ್ಟಮದಗಜಂಗಳು ಬೀದಿವರಿವುತ್ತಿಪ್ಪವು. ಕಾಮವೆಂಬ ಮೂರಂಬಿನ ಸೋನೆ ಸುರಿವುತ್ತಿಪ್ಪದು. ಮತ್ಸರವೆಂಬ ಮಹಸರ್ಪಂಗಳು ಕಿಡಿಯನುಗುಳುತ್ತಿರ್ಪವು. ಆಸೆ ಎಂಬ ಪಾಪಿಯ ಕೂಸು ಹಿಸಿಹಿಸಿದು ತಿನುತ್ತಿರ್ಪುದು. ತಾಪತ್ರಯವೆಂಬ ಕೆಂಡವ ಮಳೆ ಅಡಿ ಇಡಬಾರದು. ಅಹಂಕಾರವೆಂಬ ಗಿರಿಗಳು ಅಡ್ಡಬಿದ್ದಿಪ್ಪವು. ಪಂಚಭೂತಂಗಳೆಂಬ ಬೂತಂಗಳ ಭಯ ದಿಟ್ಟಿಸಬಾರದು. ಮಾಯೆ ಎಂಬ ರಕ್ಕಸಿ ಹಸಿಯ ತಿನುತಿಪ್ಪಳು. ವಿಷಯವೆಂಬ ಕೂಪವ ಬಳಸಬಾರದು. ಮೋಹವೆಂಬ ಬಳ್ಳಿ ಕಾಲ ಕುತ್ತಬಾರದು. ಲೋಹವೆಂಬ ಮಸದಡ್ಡಾ

ಯುಧವನೊರೆಯಲುಚ್ಚಬಾರದು. ಇಂತಪ್ಪ ಕದಳಿಯು ಹೊಗಲರಿಯದೆ ದೇವದಾನವ ಮಾನವರೆಲ್ಲರು ಮತಿಗೆಟ್ಟು ಮರುಳಾಗಿ ಹೊರೆದೆಗೆದು ಓಡಿದರು." ವಚನದಲ್ಲಿ 'ಮಹಾಕದಳಿ' ಶಬ್ದಕ್ಕೆ 'ಭವರೋಗದ ಮಹಾರಣ್ಯ'ವೆಂದು ಅರ್ಥವಾಗುವದು; ಮತ್ತು ಈ ಕದಳಿಯನ್ನು ಒರೆದು ಗೆಲಿದುತ್ತರಿಸಿ, ನಿಜ ಸಮಾಧಿಯಲ್ಲಿ ನಿಂದು ಪರವಶರಾಗಬೇಕೆಂದು ಪ್ರಭುದೇವರು ನಿರೂಪಿಸುವರು.

## ಅನುಭಾವ ಪೂರ್ವದಲ್ಲಿ 'ಕದಳಿ' ಎಂಬುದು ಸಾಕ್ಷಾತ್ಕಾರಕ್ಕೆ ಸಾಧನವು

ಅಕ್ಕಮಹಾದೇವಿಯವರ, "ಕರ್ಮವೆಂಬ ಕದಳಿ ಎನಗೆ, ಕಾಯವೆಂಬ ಕದಳಿ ಪ್ರಭುದೇವರಿಗೆ, ಮಾಟವೆಂಬ ಕದಳಿ ಬಸವಣ್ಣಂಗೆ, ಭಾವವೆಂಬ ಕದಳಿ ಚನ್ನಬಸವಣ್ಣಂಗೆ. ಬಂದ ಭಾವ ಸಲೆ ಸಂದಿತ್ತು. ಎನ್ನಂಗದವಸಾನ ಹೇಳಾ ಚನ್ನಮಲ್ಲಿಕಾರ್ಜುನಯ್ಯ" ಎಂಬ ವಚನದಲ್ಲಿ 'ಕದಳಿ' ಶಬ್ದಕ್ಕೆ 'ಭವರೋಗದರಣ್ಯ' ಎಂದು ಅರ್ಥವಾಗದೆ 'ಸಾಕ್ಷಾತ್ಕಾರದ ಸಾಧನೆ' ಎಂದು ಅರ್ಥವಾಗುವದು. ಪ್ರಭುದೇವರು, "ಪರಿಣಾಮದೊಳಗೆ ಮನದ ಪರಿಣಾಮವೆ ಚಲುವು. ಸಂಗದೊಳಗೆ ಶರಣರ ಸಂಗವೆ ಚಲುವು. ಕಾಯಗೊಂಡು ಹುಟ್ಟಿದ್ದ ಮೂಥರೆಲ್ಲ ಸಾಯದ ಸಂಚವನರಿವುದೆ ಚಲುವು ಗುಹೇಶ್ವರಾ", ಮತ್ತು "ಕಾಯವೆಂಬ ಕದಳಿಯು ಹೊಕ್ಕು ಪ್ರಾಣವೆಂಬ ಗಂಹರದೊಳಗೆ, ಸಕಲೇಂದ್ರಿಯವೆಂಬ ಕೋಣೆ ಕೋಣೆಗಳಲ್ಲಿ ತಿರುಗಾಡುತ್ತಾ ಬರಲಾಗಿ, ಮೇರು ಮಂದಿರದ ತ್ರಿಕೋಣೆಯಲ್ಲಿ ಬೆಳಗಾಯಿತ್ತು. ಗುಹೇಶ್ವರ ಲಿಂಗವೆಂಬುದು ರೂಪಾಯಿತ್ತು." ಎಂಬ ವಚನಗಳಲ್ಲಿ ಕಾಯಗೊಂಡು ಹುಟ್ಟಿದ್ದ ಮೂಥರೆಲ್ಲ ಸಾಯದ ಸಂಚವನರಿಯಬೇಕೆಂದೂ, ಕಾಯವೆಂಬ ಕದಳಿಯು ಹೊಕ್ಕು ಗುಹೇಶ್ವರ ಲಿಂಗವು ರೂಪಾಗುವದು ಕಾಣಬೇಕೆಂದೂ ನಿರೂಪಿಸುವರು. "ಹಾವಿನ ಹಲ್ಲ ಕಳೆದು, ಹಾವನಾಡಿಸ ಬಲ್ಲಡೆ ಹಾವಿನ ಸಂಗವೇ ಲೇಸು ಕಂಡಯ್ಯ. ಕಾಯದ ಸಂಗವ ವಿವರಿಸಬಲ್ಲಡೆ, ಕಾಯದ ಸಂಗವೇ ಲೇಸು ಕಂಡಯ್ಯ. ಚನ್ನಮಲ್ಲಿಕಾರ್ಜುನಯ್ಯ, ನೀನೊಲಿದವರು ಕಾಯಗೊಂಡಿದ್ದರೆನಬೇಡ." ಎಂದು ಅಕ್ಕ ಮಹಾದೇವಿಯವರು ಪ್ರಭುದೇವರಿಗೆ ಹೇಳುವರು. ಮೇಲ್ಕಾಣಿಸಿದ ವಚನಗಳ ಮೇಲಿಂದ, ಮತ್ತು ಅಕ್ಕ

ಮಹಾದೇವಿಯವರ, "ಅಂಗದಲ್ಲಿ ಆಚಾರವ ತೋರಿದ. ಆ ಆಚಾರವೆ ಲಿಂಗವೆಂದರುಹಿದ. ಪ್ರಾಣದಲ್ಲಿ ಅರಿವ ನೆಲೆಗೊಳಿಸಿದ. ಆ ಅರಿವೇ ಜಂಗಮವೆಂದು ತೋರಿದ. ಅಂಗದೊಳಗೆ ಲಿಂಗವಾಗಿ ಅಂಗವ ಲಿಂಗೈಕ್ಯವ ಮಾಡಬೇಕು. ಸಂಗನಬಸವಣ್ಣನು ಎನಗೀ ಕ್ರಮವನರುಹಿದನಯ್ಯ." ಈ ವಚನದ ಮೇಲಿಂದ ಕಾಯವು ಸಾಕ್ಷಾತ್ಕಾರಕ್ಕೆ ಹೇಗೆ ಸಾಧನವಾಗಬಲ್ಲದೆಂಬದನ್ನು ನಾವು ಅರಿತುಕೊಳ್ಳಬಹುದು. ರವೀಂದ್ರನಾಥ ಟಾಗೋರ ಇವರ,

> "Ever grateful I am to this clay-cast mould through which I have had my introduction to the formless.—

"ದೇವನೆಡೆಗೆ ಸಾಗುವದಕ್ಕೆ, ದೇಹವನ್ನು ಕೊಟ್ಟದ್ದಕ್ಕಾಗಿ ನಾನು ಯಾವಾಗಲೂ ಕೃತಜ್ಞನಿದ್ದೇನೆ." ಎಂಬ ವಾಕ್ಯವು ಮತ್ತು ಸರ್ಪಭೂಷಣರ

"ರಾಗ—ಸೌರಾಷ್ಟ್ರ ಗುಂಡಕ್ರಿಯೆ
ತನುವೆಂಬ ಗರುಡಿಯೊಳನುಭವ ಧೀರರು
ಘನಯೋಗ ಸಾಧನೆ ಮಾಡಿರೊ
ಮನುಜರೊಲಿವ ನಿಮ್ಮ ಬಿನುಗು ಸಾಧನೆಯಿಂದ
ಜನನ ಮರಣವಂಜಿವೋಡುತವೆ ॥ ಪಲ್ಲ ॥

ಸ್ಥಿರಬುದ್ಧಿಯೆಂದೆಂಬ ಸಮವಾದ ನೆಲದೊಳು
ಗುರುಬೋಧೆಯೆಂಬ ದಂಡೆಗಳಗೊತ್ತಿ
ಪರತತ್ವವೆಂಬೂರ ಬಸಿಗೆಗಳನು ಹಾಕು
ತರಿವೆಂಬ ಕೊಣತವ ನೊತ್ತಿಕಟ್ಟಿ ॥ ೧ ॥"

ಎಂಬ ಪದವು, ಅನುಭಾವಿಗಳು ಕಾಯದ ಉಪಯೋಗವನ್ನು ಹೇಗೆ ಮಾಡಿಕೊಳ್ಳುವರೆಂಬದನ್ನು ಸ್ಪಷ್ಟೀಕರಿಸುವದು.

# ಅಕ್ಕ ಮಹಾದೇವಿಯವರು ಕದಳಿ ಎಂಬುದ ಹೇಗೆ ಗೆದ್ದು ಬದುಕಿ ಬಂದರು?

## ವಿಶ್ವದಲ್ಲಿ ಅರಸಿ ಕಾಣದೆ ಚನ್ನಮಲ್ಲಿಕಾರ್ಜುನನ್ನು ಶರಣರ ಸಂಗದಿಂದ ಕಾಣುವರು.

“ಒಡಲ ಕಳವಳಕ್ಕಾಗಿ ಅಡವಿಯ ಪೊಕ್ಕೆ. ಗಿಡುಗಿಡುದಪ್ಪದೆ ಬೇಡಿದೆನೆನ್ನಂಗಕ್ಕೆಂದು. ಅವು ನೀಡಿದವು ತಮ್ಮ ಲಿಂಗಕ್ಕೆಂದು. ಆನು ಬೇಡಿ ಭವಿಯಾದೆನು. ಅವು ನೀಡಿ, ಭಕ್ತರಾದವು.”

“ವನವೆಲ್ಲ ನೀವೆ. ವನದೊಳಗಣ ದೇವತರುವೆಲ್ಲ ನೀವೆ. ತರುವಿನೊಳಗಾಡುವ ಖಗಮೃಗವೆಲ್ಲ ನೀವೆ. ಚನ್ನಮಲ್ಲಿಕಾರ್ಜುನ, ಸರ್ವಭರಿತನಾಗಿ ಎನಗೆ ಮುಖದೋರ’, “ಗಿರಿಯೊಳು, ವನದೊಳು, ಗಿಡಗಿಡದತ್ತ ದೇವ ಬಾರಯ್ಯಾ, ತೋರಯ್ಯಾ ನಿಮ್ಮ ಕರುಣವನು. ಎಂದು ಬೆಳುದಿಂಗಳಲ್ಲಿ, ಮಾಮರದಲ್ಲಿ, ಮಾಮರದ ಕೆಂದಳಿರಲ್ಲಿ, ಸ್ವರಗೈಯುವ ಕೋಗಿಲೆಗಳಲ್ಲಿ, ಪರಿಮಳವಿದ್ದ ಪುಷ್ಪಕ್ಕೆಳಸಿ, ಎರಗಿ ಬಂದಾಡುವ ತುಂಬಿಗಳಲ್ಲಿ, ಕೊಳನ ತಡೆಯೊಳಾಡುವ ಹಂಸೆಗಳಲ್ಲಿ, ಗಿರಿಗಂಹ್ವರದೊಳಗಾಡುವ ನವಿಲುಗಳಲ್ಲಿ, ಅಕ್ಕಮಹಾದೇವಿಯವರು ಚನ್ನಮಲ್ಲಿಕಾರ್ಜುನನನ್ನು ಅರಸುತ್ತ ಅಳಲುತ್ತ ಕಾಣದೆ ಸುಳಿದು ಬಂದು, ಅವನನ್ನು ಶರಣರ ಸಂಗದಿಂದ ಕಾಣುವರು.

## ಗುರುವಿನ ಮಹತ್ವ.

ಒಳಗೆ ಶೋಧಿಸಿ ಹೊರಗೆ ಶುದ್ಧವಿಸಿ, ಒಳಹೊರಗೆಂಬ ಉಭಯ ಶಂಕೆಯ ಕಳೆದು, ಸುಕ್ಷೇತ್ರವನರಿದು ಬೀಜವ ಬಿತ್ತಿ, ನಿಜೋಪದೇಶ ವನಿತ್ತು, ಪ್ರಪಂಚ ನಿವೃತ್ತಿಯಂ ಮಾಡಿ, ಶಿಷ್ಯನ ನರಜನ್ಮವ ತೊಡೆದು ಹರಜನ್ಮವ ಮಾಡುವನು ಜ್ಞಾನಗುರು.

ಚನ್ನಬಸವಣ್ಣನ ಪಾದವ ಕಂಡವರಾಗಿ ಮಹಾದೇವಿಯಕ್ಕನವರ ಪ್ರಾಣ ಸಾಕ್ಷಿಯಾಗುವದು. ಪ್ರಭುವಿನ ಶ್ರೀಚರಣಕ್ಕೆ ಶರಣೆಂದವರಾಗಿ ಮಹಾದೇವಿಯಕ್ಕನವರಿಗೆ ಅರುಹು ಸ್ವಾಯತವಾಗುವದು. ಸಿದ್ಧ ರಾಮಯ್ಯನು, ಶಿಶುಮಗಳಾದ ಕಾರಣ, ಪ್ರಾಣಪ್ರಸಾದವ ಕರುಣಿಸಿ ಕೊಡುವನು. ಮಡಿವಾಳಯ್ಯನು, ಮನೆಯ ಮಗಳಾದ ಕಾರಣ,

ನಿರ್ಮಲ ಪ್ರಸಾದವ ನಿಶ್ಚಯಿಸಿ ಕೊಡುವನು. ಅಸಂಖ್ಯಾತ ಗಣಂಗಳೆಲ್ಲರೂ, ತಮ್ಮ ಕರುಣದ ಕಂದನೆಂದು ತಲೆದಡಹಿದ ಕಾರಣ, ಚನ್ನಮಲ್ಲಿಕಾರ್ಜುನನ ಶ್ರೀಪಾದಕ್ಕೆ, ಮಹಾದೇವಿಯಕ್ಕನವರು ಯೋಗ್ಯರಾಗುವರು. ಬಸವಣ್ಣನವರ ಭಕ್ತಿಯು ಮಹಾದೇವಿಯಕ್ಕನವರ ಧರ್ಮವಾಗುವದು. ಅಕ್ಕಮಹಾದೇವಿಯವರು ಬಸವಣ್ಣನ ದಯೆಯಿಂದ ಕಾಮನ ಗೆಲಿಯುವರು; ಬಸವನ ಕೃಪೆಯಿಂದ ಸೋಮಧರನ ಹಿಡಿತಪ್ಪುವರು.

## ಆಚಾರದ ಅವಶ್ಯಕತೆ.

"ಸದಾಚಾರ, ಸದ್ಭಕ್ತಿ, ಸತ್ಕ್ರಿಯೆ, ಸಮ್ಯಜ್ಞಾನ, ಸದ್ವರ್ತನೆ, ಸಗುಣ, ನಿರ್ಗುಣ, ನಿಜಗುಣ, ಸಚ್ಚರಿತ, ಸದ್ಭಾವ, ಅಕ್ರೋಧ, ಸತ್ಯವಚನ, ಕ್ಷಮೆ, ದಮೆ, ಸತ್ಪಾತ್ರದ್ರವ್ಯಾರ್ಪಣ, ಗೌರವ ಬುದ್ಧಿ, ತಾ ಮಾಡುವ ಸತ್ಯಕಾಯಕ, ತಾನಾಚರಿಸುವ ಸತ್ಯ ನಡೆನುಡಿ" ಮುಂತಾದ ಸದ್ಗುಣಂಗಳನೊಳಗೊಂಡ "ಆಚಾರದ" ಬೇರ ಹಿಡಿದು ಅಕ್ಕಮಹಾದೇವಿಯವರು ಐಕ್ಯದ ತುದಿಯನೇರುವರು. "ಬಸವಣ್ಣ, ನಿಮ್ಮಂಗದಾಚಾರವ ಕಂಡು ಎನಗೆ ಲಿಂಗಸಂಗವಾಯಿತ್ತು. ಅಯ್ಯ ಬಸವಣ್ಣ, ನಿಮ್ಮ ಮನ ಸುಜ್ಞಾನವ ಕಂಡು ಎನಗೆ ಜಂಗಮ ಸಂಬಂಧವಾಯಿತ್ತಯ್ಯ. ಬಸವಣ್ಣ, ನಿಮ್ಮ ಸದ್ಭಕ್ತಿಯ ತಿಳಿದು ಎನಗೆ ನಿಜವು ಸಾಧ್ಯವಾಯಿತ್ತು. ಚನ್ನಮಲ್ಲಿಕಾರ್ಜುನಯ್ಯನ ಹೆಸರಿಟ್ಟ ಗುರು ನೀವಾದ ಕಾರಣ ನಿಮ್ಮ ಶ್ರೀಪಾದಕ್ಕೆ ನಮೋನಮೊ ಎನುತಿರ್ದೆನು" ಎಂದು ಅಕ್ಕಮಹಾದೇವಿಯವರು ಆಚಾರದ ಮಹತ್ವವನ್ನು ಹೇಳುವರು.

## ಮನವು ಚನ್ನಮಲ್ಲಿಕಾರ್ಜುನನಲ್ಲದೆ ಅನ್ಯಕ್ಕೆಳಿಸಬಾರದು.

ಅಕ್ಕಮಹಾದೇವಿಯವರ, "ಲೋಕದ ಚೇಷ್ಟೆಗೆ ರವಿ ಬೀಜವಾದಂತೆ, ಕರಣಂಗಳ ಚೇಷ್ಟೆಗೆ ಮನವೇ ಬೀಜ. ಎನಗುಳ್ಳುದೊಂದು ಮನ, ಆ ಮನ ನಿಮ್ಮಲ್ಲಿ ಒಡವೆರೆದ ಬಳಿಕ ಎನಗೆ ಭವವುಂಟೇ? ಚನ್ನಮಲ್ಲಿಕಾರ್ಜುನಾ, ",

"ನಚ್ಚುಗೆ ಮನ ನಿಮ್ಮಲ್ಲಿ, ಮಚ್ಚುಗೆ ಮನ ನಿಮ್ಮಲ್ಲಿ; ಸಲುಗೆಗೆ ಮನ ನಿಮ್ಮಲ್ಲಿ, ಸೋಲುಗೆ ಮನ ನಿಮ್ಮಲ್ಲಿ; ಅಳಲುಗೆ

ಮನ ನಿಮ್ಮಲ್ಲಿ, ಬಳಲುಗೆ ಮನ ನಿಮ್ಮಲ್ಲಿ; ಕರಗುಗೆ ಮನ ನಿಮ್ಮಲ್ಲಿ; ಕೊರಗುಗೆ ಮನ ನಿಮ್ಮಲ್ಲಿ; ಎನ್ನ ಪಂಚೇಂದ್ರಿಯಂಗಳು ಕಬ್ಬುನ ಉಂಡ ನೀರಿನಂತೆ ನಿಮ್ಮಲ್ಲಿ ಬೆರಸುಗೆ ಚನ್ನಮಲ್ಲಿಕಾರ್ಜುನಯ್ಯ",

"ಗಿರಿಯಲ್ಲದೆ ಹುಲ್ಲುವೊರಡಿಯಲ್ಲಾಡುವದೇ ನವಿಲು? ಕೊಳನಲ್ಲದೆ ಕಿರಿವಳ್ಳಕ್ಕೆಳಿಸುವದೇ ಹಂಸೆ? ಮಾಮರ ತಳಿತಲ್ಲದೆ ಸ್ವರಗೈವುದೇ ಕೋಗಿಲೆ? ಪರಿಮಳವಿಲ್ಲದ ಪುಷ್ಪಕ್ಕೆಳಿಸುವದೇ ಭ್ರಮರ? ಎನ್ನದೇವ ಚನ್ನಮಲ್ಲಿಕಾರ್ಜುನನಲ್ಲದೆ, ಅನ್ಯಕ್ಕೆಳಿಸುವದೇ ಎನ್ನಮನ, ಕೇಳಿರೇ ಕೆಳದಿಯರಾ", ಮುಂತಾದ ವಚನಗಳು, ಅಕ್ಕಮಹಾದೇವಿಯವರು, ಮನವೆಂಬ ಸಖಿಯ ಪ್ರಸಾದದಿಂದ ಹೇಗೆ ಶಿವನೊಡನೆ ಅನುಭಾವವ ಕಲಿತರೆಂಬುದನ್ನು ತೋರಿಸುವವು.

## ಮಂತ್ರ.

"ಓಂ ನಮಃ ಶಿವಾಯ ಶರಣೆಂಬುದೇ ಮಂತ್ರ, ನಮಃ ಶಿವಾಯ ಎಂಬುದೇ ಮಂತ್ರ. ಎಲೆ ಮನವೆ 'ಶಿವಶಿವಾ' ಎಂದರೆ ಸಾಲದೆ? ಎನಗಿದೇ ತಂತ್ರ, ಎನಗಿದೇ ಮಂತ್ರ, ಎನಗಿದೇ ಗತಿ, ಮತಿ, ಚೈತನ್ಯವಯ್ಯ." ಎಂದು ಅಕ್ಕಮಹಾದೇವಿಯವರು ಉಸುರುವರು. ಇಂದ್ರನೀಲಗಿರಿಯ ನೇರಿಕೊಂಡು, ಚಂದ್ರಕಾಂತ ಶಿಲೆಯ ಅಪ್ಪಿಕೊಂಡು, ಕೊಂಬ ಬಾರಿಸುತ್ತೆ, "ಶಿವನೆ, ನಿನ್ನನಪ್ಪಿಕೊಂಡು ಎಂದಿಪ್ಪೆನೋ", ಎಂದು ಯಾವಾಗಲೂ ಕೂಗುತ್ತ, ಅಕ್ಕಮಹಾದೇವಿಯವರು ಶಿವನನ್ನು ಒಲಿಸಿಕೊಳ್ಳುವರು.

ವೈರಾಗ್ಯದ ಸೋಪಾನದಿಂದ ಶ್ರೀಗಿರಿಯನೇರಿ, ಚನ್ನಮಲ್ಲಿಕಾರ್ಜುನನಲ್ಲಿ ಬೆರಿಸಿ, ಕದಳಿಯ ಗೆದ್ದು ಬದುಕಿ ಬಂದು, "ಭಕ್ತೆಯಾನಪ್ಪೆನೆ ಅಯ್ಯ? ಕರ್ತೃ ಭೃತ್ಯತ್ವವ ನಾನರಿಯೆ. ಮಹೇಶ್ವರಿಯಾನಪ್ಪೆನೆ ಅಯ್ಯ? ವ್ರತ ನೇಮವ ನಾನರಿಯೆ. ಪ್ರಸಾದಿಯಾನಪ್ಪೆನೆ ಅಯ್ಯ? ಅರ್ಪಿತ ಅನರ್ಪಿತವೆಂಬ ಭೇದವ ನಾನರಿಯೆ. ಪ್ರಾಣಲಿಂಗಿಯಾನಪ್ಪೆನೆ ಅಯ್ಯ? ಶರಣಸತಿ ಲಿಂಗಪತಿ ಎಂಬ ಭಾವವ ನಾನರಿಯೆ. ಐಕ್ಯಳಾನಪ್ಪೆನೆ ಅಯ್ಯ? ಬೆರಸಿ ಭೇದವ ನಾನರಿಯೆ. ಚನ್ನಮಲ್ಲಿಕಾರ್ಜುನಯ್ಯ ಷಟ್‌ಸ್ಥಳದಲ್ಲಿ ನಿಃಸ್ಥಲವಾಗಿಪ್ಪೆನು", ಎಂದು ಘೋಷಿಸುವಳು.

## ಕದಳಿ ಬನದಲ್ಲಿ ಭವಹರನ ಕಂಡೆನು.

"ಕದಳಿ ಎಂಬುದು ತನು, ಕದಳಿ ಎಂಬುದು ಮನ, ಕದಳಿ ಎಂಬುದು ವಿಷಯಂಗಳು, ಕದಳಿ ಎಂಬುದು ಭವರೋಗದರಣ್ಯ. ಕದಳಿ ಎಂಬುದು ಗೆದ್ದು ಬದುಕಿ ಬಂದು ಕದಳಿಯ ಬನದಲ್ಲಿ ಭವಹರನ ಕಂಡೆನು. ಭವಗೆಟ್ಟ ಮಗಳೆಂದು ಕರುಣದಿಂ ತೆಗೆದು ಬಿಗಿದಪ್ಪಿದರೆ, ಚನ್ನಮಲ್ಲಿಕಾರ್ಜುನನ ಹೃದಯ ಕಮಲದಲ್ಲಿ ಅಡಗಿದೆನು." ಎಂಬ ವಚನವು ಅಕ್ಕಮಹಾದೇವಿಯವರ ಅತ್ಯಂತ ಮಹತ್ವದ ವಚನವಿರುವದು.

ಅಕ್ಕಮಹಾದೇವಿಯವರ ಅನುಭಾವದ ಬೇರೆ ಬೇರೆ ಅವಸ್ಥೆಗಳನ್ನು ಪರಿಶೀಲಿಸಿ, ಆ ಅವಸ್ಥೆಗಳೆಲ್ಲ ಒಂದಕ್ಕೊಂದು ಪೂರಕವಾಗಿರುವವೆಂಬದನ್ನು ಲಕ್ಷ್ಯದಲ್ಲಿಟ್ಟುಕೊಂಡು, ಮೇಲ್ಕಾಣಿಸಿದ "ಕದಳಿಯ ಬನದಲ್ಲಿ ಭವಹರನ ಕಂಡೆನು." ಎಂಬ ವಾಕ್ಯದ ಅರ್ಥವನ್ನು ಮಾಡಬೇಕು. ತಿರುವಾನ ಕಾಡೊಳಗೆ ಕಾರಿಕಾಲಮ್ಮೆಯು ಶಿವನ ನಾಟ್ಯಮಂ ನೋಡಿದಂತೆ ಅಕ್ಕಮಹಾದೇವಿಯವರು ಶ್ರೀಶೈಲದ ಕದಳಿಯ ಬನದಲ್ಲಿ ಭವಹರನನ್ನು ನೋಡಿರಬಹುದು.

### ಮೊದಲನೆಯ ಅರ್ಥವು.

ಶರ್ವಂಗೆ ಆಪ್ತೆಯಾದ ಕಾರಿಕಾಲಮ್ಮೆಯು, ತಿರುವಾನ ಕಾಡೊಳಗೆ ಮಯ್ಯೆಲ್ಲ ಕಣ್ಣಾಗಿ, "ನಿಂದು ನೋಡಲ್ಕೊಡೆ ಗಗನಮಂ ಮೀರಿದಂ। ಜಡೆ ನಭವನೆಡೆಗೊಂಡು ಪರ್ವಿ ಪಲ್ಲಿಸುತಿರೆ। ಹೆಡೆಗಳಂ ಚಿರ್ಬಿಯುರಗಂಗಳಾಡುತ್ತಮಿರೆ। ಹಸ್ತಂಗಳೆಣ್ದೆಸೆಗೆ ನಟಣೆಯಿಂ ನಲಿಯುತಿರೆ। ವಿಸ್ತರದ ಚರಣ-ಪಲ್ಲವನೆತ್ತಿ ಮೆರೆಯುತಿರೆ। ಮೇಲೆ ವಿಶ್ವಕ್ಸೇನದಲ್ಲಿ ತಿರ್‍ರನೆ ತಿರುಗೆ॥ ಡಮರುಗದ ನಾದಮಂ ಢಣಢಣಮೆನುತ್ತಿರಲ್। ಅಮಮ ಘಂಟಾನಾದವಲ್ಲಿ ಢಣಢಣಮೆನಲ್। ಭುಜಹತ್ತು ದೆಸೆಗಳಂ ಕೌಂಕುಳೊಳಿರಿಂಕುತಿರೆ। ಕೋಟಿರವಿಕಾಂತಿಯಂ ಪದನಖಂ ಸೂಸುತಿರೆ।" ಈ ಪ್ರಕಾರ ಶಿವನ ನಾಟ್ಯಮಂ ನೋಡಿದಂತೆ, ಅಕ್ಕಮಹಾದೇವಿಯವರು, ಸತ್ಯಲೋಕಕೆ ಹಾರಿಸುವ ಶಿಖರಗಳುಳ್ಳ, ಶ್ರೀಶೈಲವನ್ನು ಸುತ್ತಿಬಂದು ಕದಳಿಯ ಬನದಲ್ಲಿ ಭವಹರನ ಕಂಡ

ರೆಂದು. "ಕದಳಿಯು ಬನದಲ್ಲಿ ಭವಹರನ ಕಂಡೆನು." ಈ ವಾಕ್ಯಕ್ಕೆ ನಾವು ಮಾಡಬಹುದಾದ ಮೊದಲನೆಯ ಅರ್ಥವು.

ಗೂಳೂರ ಸಿದ್ಧವೀರಣಾಚಾರ್ಯನು ತಾನು ಬರೆದ 'ಶೂನ್ಯ ಸಂಪಾದನೆ' ಎಂಬ ಗ್ರಂಥದಲ್ಲಿ "ಇಂತು ಮಹದೇವಿಯಕ್ಕಗಳು ಚನ್ನ ಮಲ್ಲಿಕಾರ್ಜುನನೊಳಗೆ ಸಮರಸೈಕ್ಯವಂ ಶೀಘ್ರದಿಂ ಬಯಸಿ ಉಪಾವಸ್ಥೆಗೈದು ಬಂದು ಕದಳಿಯಂ ಕಂಡ ಪ್ರಸ್ತಾವದ ವಚನ. 'ವನವೆಲ್ಲ ಕಲ್ಪತರು, ಗಿಡವೆಲ್ಲ ಮರುಜೀವಣಿ, ಶಿಲೆಗಳೆಲ್ಲ ಪರುಷ, ನೆಲವೆಲ್ಲ ಅವಿಮುಕ್ತಕ್ಷೇತ್ರ, ಜಲವೆಲ್ಲ ನಿರ್ಜರಾಮೃತ, ಮೃಗವೆಲ್ಲ ಪುರುಷಮೃಗ, ಎಡಹುವ ಹರಳೆಲ್ಲ ಚಿಂತಾಮಣಿ, ಚನ್ನಮಲ್ಲಿಕಾರ್ಜುನಯ್ಯನ ಮಚ್ಚಿನ ಗಿರಿಯ ಸುತ್ತಿನೋಡುತ್ತ ಬಂದು ಕದಳಿಯ ಬನವ ಕಂಡೆ ನಾನು."

ಇಂತು ಮಹದೇವಿಯಕ್ಕಗಳು ಕದಳಿಯ ಬಾಗಿಲಲ್ಲಿ ನಿಂದು ಕರಕಮಲದಿಷ್ಟಲಿಂಗವಂ ತೂರ್ಯದಿಂ ಜ್ಞಾನಪ್ರಭಾವದೊಳು ಸ್ತುತಿಸುತ್ತಿರಲು, ಅಂತರಂಗದ ಚಿತ್ಪ್ರಕಾಶವೇ ಬಹಿಸ್ಫುರಿಸಿ ಜಂಗಮಸ್ವರೂಪವನೈದಿ ಹೊಳೆವ ಕೆಂಜೆಡೆಗಳಿಂ, ಸುಲಿಪಲ್ಗಳಿಂ, ಕಂಗಳ ಕಾಂತಿಯಿಂ, ದರಹಸಿತ ವದನದಿಂ, ಮಾಣಿಕ್ಯ ಮುಕುಟದಿಂ, ತೊಳಗಿ ಬೆಳಗುತ್ತೆ ಮುಂದೆ ಪ್ರಸನ್ನವಾಗಲು, ಮಹದೇವಿಯಕ್ಕಗಳು ಆ ಶ್ರೀಮೂರ್ತಿಯಂ ಕಂಡ ಪ್ರಸ್ತಾವದ ವಚನ.

'ಹೊಳೆವ ಕೆಂಜೆಡೆಗಳ, ಮಣಿಮುಕುಟದ, ಒಪ್ಪುವ ಸುಲಿಪಲ್ಲ, ನಗೆಮೊಗದ, ಕಂಗಳ ಕಾಂತಿಯಿಂ ಈರೇಳು ಭುವನವಂ ಬೆಳಗುವ ದಿವ್ಯಸ್ವರೂಪನ ಕಂಡೆ ನಾನು! ಕಂಡೆನ್ನ ಕಂಗಳ ಬರ ಹಿಂಗಿತ್ತಿಂದು! ಗಂಡಗಂಡರೆಲ್ಲ ಹೆಂಡರಾಗಿ ಆಳುವ ಗುರುವನ ಕಂಡೆ! ನಾನು ಜಗದಾದಿಶಕ್ತಿಯೊಳು ಬೆರಸಿಯೊಡನಾಡುವ ಪರಮಗುರು ಚನ್ನಮಲ್ಲಿಕಾರ್ಜುನನ ನಿಲವ ಕಂಡು ಬದುಕಿದೆನು. ಈ ಪ್ರಕಾರ ಬರೆದದ್ದು ಓದಿದರೆ, "ಕದಳಿಯ ಬನದಲ್ಲಿ ಭವಹರನ ಕಂಡೆನು." ಈ ವಾಕ್ಯಕ್ಕೆ ಅಕ್ಕಮಹಾದೇವಿಯವರು, ಶ್ರೀಶೈಲದ ಕದಳಿಯ ಬನದಲ್ಲಿ ಭವಹರನನ್ನು ಕಂಡರೆಂದು ನಾವು ಮಾಡಿದ ಮೇಲಿನ ಅರ್ಥಕ್ಕೆ ಪುಷ್ಟಿಯು ಸಿಗುವದು.

# ಕದಳಿ ಬನದಲ್ಲಿ ಭವಹರನ ಕಂಡೆನು.

"ಕದಳಿ ಎಂಬುದು ತನು, ಕದಳಿ ಎಂಬುದು ಮನ, ಕದಳಿ ಎಂಬುದು ವಿಷಯಂಗಳು, ಕದಳಿ ಎಂಬುದು ಭವರೋಗದರಣ್ಯ. ಕದಳಿ ಎಂಬುದು ಗೆದ್ದು ಬದುಕಿ ಬಂದು ಕದಳಿಯ ಬನದಲ್ಲಿ ಭವಹರನ ಕಂಡೆನು. ಭವಗೆಟ್ಟ ಮಗಳೆಂದು ಕರುಣದಿಂ ತೆಗೆದು ಬಿಗಿದಪ್ಪಿದರೆ, ಚನ್ನಮಲ್ಲಿಕಾರ್ಜುನನ ಹೃದಯ ಕಮಲದಲ್ಲಿ ಅಡಗಿದೆನು." ಎಂಬ ವಚನವು ಅಕ್ಕಮಹಾದೇವಿಯವರ ಅತ್ಯಂತ ಮಹತ್ವದ ವಚನವಿರುವದು.

ಅಕ್ಕಮಹಾದೇವಿಯವರ ಅನುಭಾವದ ಬೇರೆ ಬೇರೆ ಅವಸ್ಥೆಗಳನ್ನು ಪರಿಶೀಲಿಸಿ, ಆ ಅವಸ್ಥೆಗಳೆಲ್ಲ ಒಂದಕ್ಕೊಂದು ಪೂರಕವಾಗಿರುವವೆಂಬದನ್ನು ಲಕ್ಷ್ಯದಲ್ಲಿಟ್ಟುಕೊಂಡು, ಮೇಲ್ಕಾಣಿಸಿದ "ಕದಳಿಯ ಬನದಲ್ಲಿ ಭವಹರನ ಕಂಡೆನು." ಎಂಬ ವಾಕ್ಯದ ಅರ್ಥವನ್ನು ಮಾಡಬೇಕು.

ತಿರುವಾನ ಕಾಡೊಳಗೆ ಕಾರಿಕಾಲಮ್ಮೆಯು ಶಿವನ ನಾಟ್ಯಮಂ ನೋಡಿದಂತೆ ಅಕ್ಕಮಹಾದೇವಿಯವರು ಶ್ರೀಶೈಲದ ಕದಳಿಯ ಬನದಲ್ಲಿ ಭವಹರನನ್ನು ನೋಡಿರಬಹುದು.

## ಮೊದಲನೆಯ ಅರ್ಥವು.

ಶರ್ವಂಗೆ ಆಪ್ತೆಯಾದ ಕಾರಿಕಾಲಮ್ಮೆಯು, ತಿರುವಾನ ಕಾಡೊಳಗೆ ಮಯ್ಯೆಲ್ಲ ಕಣ್ಣಾಗಿ, "ನಿಂದು ನೋಡಲ್ಕೊಡೆ ಗಗನಮಂ ಮೀರಿದಂ। ಜಡೆ ನಭವನೆಡೆಗೊಂಡು ಪರ್ವಿ ಪಲ್ಲಿಸುತಿರೆ। ಹೆಡೆಗಳಂ ಚಿರ್ಬಿಯುರಗಂಗಳಾಡುತ್ತಮಿರೆ। ಹಸ್ತಂಗಳೆಣ್ದೆಸೆಗೆ ನಟಣೆಯಿಂ ನಲಿಯುತಿರೆ। ವಿಸ್ತರದ ಚರಣ-ಪಲ್ಲವವೆತ್ತಿ ಮೆರೆಯುತಿರೆ। ಮೇಲೆ ವಿಶ್ವಕ್ಸೇನದಲ್ಲಿ ತಿರ್ರನೆ ತಿರುಗೆ॥ ಡಮರುಗದ ನಾದಮಂ ಥಣಥಣಮೆನುತ್ತಿರಲ್। ಅಮಮ ಘಂಟಾನಾದವಲ್ಲಿ ಥಣಥಣಮೆನಲ್। ಭುಜಹತ್ತು ದೆಸೆಗಳಂ ಕೌಂಕುಳೊಳಿರಿಂಕುತಿರೆ। ಕೋಟಿರವಿಕಾಂತಿಯಂ ಪದನಖಂ ಸೂಸುತಿರೆ।" ಈ ಪ್ರಕಾರ ಶಿವನ ನಾಟ್ಯಮಂ ನೋಡಿದಂತೆ, ಅಕ್ಕಮಹಾದೇವಿಯವರು, ಸತ್ಯಲೋಕಕೆ ಹಾರಿಸುವ ಶಿಖರಗಳುಳ್ಳ, ಶ್ರೀಶೈಲವನ್ನು ಸುತ್ತಿಬಂದು ಕದಳಿಯ ಬನದಲ್ಲಿ ಭವಹರನ ಕಂಡ

ರೆಂದು. "ಕದಳಿಯು' ಬನದಲ್ಲಿ ಭವಹರನ ಕಂಡೆನು." ಈ ವಾಕ್ಯಕ್ಕೆ ನಾವು ಮಾಡಬಹುದಾದ ಮೊದಲನೆಯ ಅರ್ಥವು.

ಗೂಳೂರ ಸಿದ್ಧವೀರಣಾಚಾರ್ಯನು ತಾನು ಬರೆದ 'ಶೂನ್ಯ ಸಂಪಾದನೆ' ಎಂಬ ಗ್ರಂಥದಲ್ಲಿ ಇಂತು ಮಹದೇವಿಯಕ್ಕಗಳು ಚನ್ನ ಮಲ್ಲಿಕಾರ್ಜುನನೊಳಗೆ ಸಮರಸೈಕ್ಯಮಂ ಶೀಘ್ರದಿಂ ಬಯಸಿ ಉಪಾವ ಸ್ಥೆಗೈದು ಬಂದು ಕದಳಿಯಂ ಕಂಡ ಪ್ರಸ್ಥಾವದ ವಚನ. 'ವನವೆಲ್ಲ ಕಲ್ಪತರು, ಗಿಡವೆಲ್ಲ ಮರುಜೀವಣಿ, ಶಿಲೆಗಳೆಲ್ಲ ಪರುಷ, ನೆಲವೆಲ್ಲ ಅವಿ ಮುಕ್ತಕ್ಷೇತ್ರ, ಜಲವೆಲ್ಲ ನಿರ್ಜರಾಮೃತ, ಮೃಗವೆಲ್ಲ ಪುರುಷಮೃಗ, ಎಡ ಹುವ ಹರಳೆಲ್ಲ ಚಿಂತಾಮಣಿ, ಚನ್ನಮಲ್ಲಿಕಾರ್ಜುನಯ್ಯನ ಮಚ್ಚಿನ ಗಿರಿಯ ಸುತ್ತಿನೋಡುತ್ತಬಂದು ಕದಳಿಯ ಬನವ ಕಂಡೆ ನಾನು."

ಇಂತು ಮಹದೇವಿಯಕ್ಕಗಳು ಕದಳಿಯ ಬಾಗಿಲಲ್ಲಿ ನಿಂದು ಕರ ಕಮಲದಿಷ್ಟಲಿಂಗಮಂ ತೂರ್ಯದಿಂ ಜ್ಞಾನಪ್ರಭಾವದೊಳು ಸ್ತುತಿಸು ತ್ತಿರಲು, ಅಂತರಂಗದ ಚಿತ್ಪ್ರಕಾಶವೇ ಬಹಿಸ್ಫುರಿಸಿ ಜಂಗಮಸ್ವರೂಪವ ನ್ನೈದಿ ಹೊಳೆವ ಕೆಂಜೆಡೆಗಳಿಂ, ಸುಲಿಪಲ್ಗಳಿಂ, ಕಂಗಳ ಕಾಂತಿಯಿಂ, ದರಹಸಿತ ವದನದಿಂ, ಮಾಣಿಕ್ಯ ಮುಕುಟದಿಂ, ತೊಳಗಿ ಬೆಳಗುತ್ತೆ ಮುಂದೆ ಪ್ರಸನ್ನವಾಗಲು, ಮಹದೇವಿಯಕ್ಕಗಳು ಆ ಶ್ರೀಮೂರ್ತಿಯಂ ಕಂಡ ಪ್ರಸ್ಥಾವದ ವಚನ.

'ಹೊಳೆವ ಕೆಂಜೆಡೆಗಳ, ಮಣಿಮುಕುಟದ, ಒಪ್ಪುವ ಸುಲಿಪಲ್ಲ, ನಗೆಮೊಗದ, ಕಂಗಳ ಕಾಂತಿಯಿಂ ಈರೇಳು ಭುವನಮಂ ಬೆಳಗುವ ದಿವ್ಯಸ್ವರೂಪನ ಕಂಡೆ ನಾನು! ಕಂಡೆನ್ನ ಕಂಗಳ ಬರ ಹಿಂಗಿತ್ತಿಂದು! ಗಂಡಗಂಡರೆಲ್ಲ ಹೆಂಡರಾಗಿ ಆಳುವ ಗುರುವನ ಕಂಡೆ! ನಾನು ಜಗದಾ ದಿಶಕ್ತಿಯೊಳು ಬೆರಿಸಿಯೊಡನಾಡುವ ಪರಮಗುರು ಚನ್ನಮಲ್ಲಿಕಾರ್ಜು ನನ ನಿಲವ ಕಂಡು ಬದುಕಿದೆನು." ಈ ಪ್ರಕಾರ ಬರೆದದ್ದು ಓದಿದರೆ, "ಕದಳಿಯ ಬನದಲ್ಲಿ ಭವಹರನ ಕಂಡೆನು." ಈ ವಾಕ್ಯಕ್ಕೆ ಅಕ್ಕಮ ಹಾದೇವಿಯವರು, ಶ್ರೀಶೈಲದ ಕದಳಿಯ ಬನದಲ್ಲಿ ಭವಹರನನ್ನು ಕಂಡರೆಂದು ನಾವು ಮಾಡಿದ ಮೇಲಿನ ಅರ್ಥಕ್ಕೆ ಪುಷ್ಟಿಯು ಸಿಗುವದು.

## ಗುಪ್ತ ಕದಳಿಯ ಬನದಲ್ಲಿ ಭವಹರನನ್ನು ನೋಡಿರಬಹುದು

### ಎರಡನೆಯ ಅರ್ಥವು

ಪ್ರಭುದೇವರ ರಗಳೆಯಲ್ಲಿ, ಹರಿಹರನು,

‘ ತರುನಿಕಾಯದ ಕೋಟರಂಗಳೊಳಗಲ್ಲವಂ
ಗಿರಿ ಕುಳದ ಗಹ್ವರಂಗಳೊಳಗಲ್ಲವಂ
ಪರಿವ ನಿರ್ಮಲ ತರಂಗಿಣಿಯೊಳೆಲ್ಲಲ್ಲವಂ
ನೆರೆದ ತಣ್ಪುಳಿನ ಸಾರಸ್ಥಳದೊಳಲ್ಲವಂ
ಚಂದ್ರಕಾಂತದ ಶಿಲೆಯ ತಂಪಿನೊಳಗಲ್ಲವಂ
ಇಂದ್ರನೀಲದ ಮಣಿ ಶಿಲಾತಲದೊಳಲ್ಲವಂ
ಪರಿಮಳದ ಚಂದನದ ತರುಗಳೊಳಗಲ್ಲವಂ
ಕುರವಕವದೊಳಂಕುರದ ಕುಟ್ಮಳದೊಳಲ್ಲವಂ
ಸಂಪಿಗೆಯ ಪರಿಮಳದ ಪಸರದೊಳಗಲ್ಲವಂ
ಸೊಂಪೆಸೆದ ಕೆಂದಳಿರ ಕಾವಣದೊಳಲ್ಲವಂ
ಮಾಮರದ ಮಾಧವಿಯ ಮಂಟಪದೊಳಲ್ಲವಂ
ಮಲ್ಲಿಗೆಯ ಮಾಲತಿಯ ಪೊದರಿನೊಳಗಲ್ಲವಂ
ಮೊಲ್ಲೆ ಇರವಂತಿಗೆಯ ಮೊತ್ತದೊಳಗಲ್ಲವಂ
ಶಿವನ ನೋಳ್ಪಂತಿವೆಲ್ಲವ ಕಾಣ್ಬನಲ್ಲವಂ

ಎಂದು ಶಿವನ ನೋಳ್ಪಂತಿವೆಲ್ಲವ ಕಾಣ್ಬ, ಅಲ್ಲಮದೇವರು, ಶಿವನ ನೋಡುವೆನೆನುತೆ, ಕದಳೀ ಬನದ ಬಟ್ಟೆಗೊಂಡರೆಂದು ಬರೆದಿರುವನು.

ಅಲ್ಲಮದೇವರು, ಅಕ್ಕಮಹಾದೇವಿಯವರಿಗೆ ನೀನಾನೆಂಬ ಭಯ ಸಂಗವಳಿದು, ತಾನು ತಾನಾದ ತ್ರಿಕೂಟವೆಂಬ ಮಹಾಗಿರಿಯ ಮೆಟ್ಟಿನೋಡಲು, ಬಟ್ಟಬಯಲು ಕಾಣಬಹುದು ನೋಡಾ ! ಆ ಬಯಲ ಬೆರಸುವರೆ ತ್ರಿಕೂಟಗಿರಿಯೊಳಗೊಂದು ಕಾಣಬಾರದ ಕದಳಿಯುಂಟು ನೋಡಾ ! ಆ ಕದಳಿಯ ಕಳದಲ್ಲಿ, ತೊಳಗಿ ಬೆಳಗುವ ಜ್ಯೋತಿಯುಂಟು ನೋಡಾ! ನಡೆಯಲ್ಲಿಗೆ ತಾಯೆ. ಗುಹೇಶ್ವರ ಲಿಂಗದಲ್ಲಿ ಪರಮಪದವಿ ನಿನಗೆ ಸ್ವಯವಹುದು ನೋಡಾ.” ಎಂದು ನಿರೂಪಿಸುವರು.

ಅಕ್ಕಮಹಾದೇವಿಯವರು, ಮೂಲದ್ವಾರದ ಬೇರ ಮೆಟ್ಟಿ ಭೂಮಂಡಲವನೇರುವರು; ಆಚಾರದ ಬೇರ ಹಿಡಿದು ಐಕ್ಯದ ತುದಿಯನೇರು

ವೆರು; ವೈರಾಗ್ಯದ ಸೋಪಾನದಿಂದ ಶ್ರೀಗಿರಿಯನೇರುವರು. ಸಜ್ಜೆಯುಪ್ಪರಿಸಿ ಶಿವಲಿಂಗ ನೀನೆನ್ನ ಕರಸ್ಥಲಕ್ಕೆ ಬರೆ, ಪ್ರಜ್ವಲಿಸಿ ತೊಳತೊಳಗಿದೆ. ಬೆಳಗುತ್ತಿಹ ಕಾಂತಿಯಲ್ಲಿ ಜಜ್ಜರಿಸಿ, ತನುಮನ ದೃಷ್ಟಿನಟ್ಟು, ಲಿಂಗದಲ್ಲಿ ಒಜ್ಜರಿಸಿ ಸುರಿವ ಶಿವಸುಖರತಿಯೊಳೋಲಾಡುತ್ತ, ಸಜ್ಜನ ಸದ್ಭಕ್ತಿರತಿಯೊಡನೆ ಕೂಡಿಯಾಡಿ, ಲಜ್ಜೆಗೆಟ್ಟು, ನಿಮ್ಮ ನೆರೆವೆ ಚನ್ನಮಲ್ಲಿಕಾರ್ಜುನ." ಎಂದು ಘೋಷಿಸುವರು.

ಸರ್ಪಭೂಷಣರು,

ರಾಗ—ಯಾಲ.

ಶ್ರೀಗಿರಿಯ ಸುಕ್ಷೇತ್ರಕಿಂದು ।
ಹೋಗಿ ಯಾತ್ರೆಯ ಮಾಡಿ ಬಂದೆ ॥
ಶ್ರೀಗಿರಿಯು ಶರೀರದೊಳಗುಂಟು । ಓಂ ಶ್ರೀಗುರುಸಿದ್ಧ ।
ಯೋಗಿ ಜನರಿಗೆ ಮರ್ಮ ಬೇರುಂಟು ॥ ಪಲ್ಲ ॥

ಆರುಬೆಟ್ಟವ ದಾಂಟ ನಡೆದು ।
ಮೂರು ಕೊಳದ ಮೂಲಕಿಳಿದು ॥
ಏರಿದೆನು ಕೈಲಾಸ ದ್ವಾರವ । ಓಂ ಶ್ರೀಗುರುಸಿದ್ಧ ।
ಸಾರಿ ಬಡಗಲ ಗುಡಿಯ ಕಂಡೆನು ॥ ೧ ॥

ಏಳು ಸುತ್ತಿನ ಕೋಟೆಯೊಳಗೆ ।
ನೀಲ ದುಪ್ಪರಿಗೆಗಳ ನಡುವೆ ॥
ತಾಳ, ಮದ್ದಲೆ, ಭೇರಿ ಘಂಟೆಗಳು । ಓಂ ಶ್ರೀಗುರುಸಿದ್ಧ ।
ವ್ಯಾಳ್ಯವ್ಯಾಳ್ಯಕೆ ತಾವೆ ನುಡಿಯುವವು ॥ ೨ ॥

ಒಂಭತ್ತು ಬಾಗಿಲಗಳದರೊ ।
ಳಿಂಬಾದ ಬೀದಿಗಳು ನಾಲ್ಕು ॥
ತುಂಬಿ ಸೂಸುವ ಕೊಳಗಳೇಳುಂಟು । ಓಂ ಶ್ರೀಗುರುಸಿದ್ಧ ।
ಸ್ತಂಭವೆರಡು ಶಿಖರವೊಂದುಂಟು ॥ ೩ ॥

ಪಾತಾಳಗಂಗೆಯೊಳು ಮಿಂದು ।
ಓತು ಶಿಖರೇಶ್ವರಸಿಗೇರಿ ॥

ಜ್ಯೋತಿರ್ಲಿಂಗಕೆ ದೃಷ್ಟಿಯಿಟ್ಟಿನೋ । ಓಂ ಶ್ರೀಗುರುಸಿದ್ಧ ।
ಜ್ಯೋತಿರ್ಲಿಂಗವು ಕರದಿ ಕಾಣಿಸಿತು ॥ ೪ ॥

ಬರುವ ಕೋಣಗಳೆಂಟ ಬಡಿದೆ ।
ಹಿರಿಯ ಹುಲಿಗಳನಾರ ತಡದೆ ॥
ಮೆರೆವ ಸರ್ಪನ ಹೆಡೆಯ ಮೆಟ್ಟಿದೆನೋ । ಓಂ ಶ್ರೀಗುರುಸಿದ್ಧ।
ಚರಿಪ ಕಪಿಯನು ಹಿಡಿದು ಕಟ್ಟಿದೆನೋ ॥ ೫ ॥

ಸಪ್ತನದಿಯ ಸಂಗಮ ದಾಟಿ ।
ಗುಪ್ತ ಕದಳಿಯ ಬನದೊಳು ಸುಳಿದ- ॥
ಲ್ಲಿಪ್ಪ ಗುಹೆಯೊಳು ಒಬ್ಬನೆ ಹೊಕ್ಕೆನೊ । ಓಂ ಶ್ರೀಗುರುಸಿದ್ಧ ।
ಸಪ್ತವರ್ಣದ ಲಿಂಗವ ಕಂಡೆನೊ ॥ ೬ ॥

ಇಂದ್ರ ದಿಕ್ಕಿನೊಳಿದ್ದ ಸೂರ್ಯ ।
ಚಂದ್ರಗುಪ್ತದ ಪುರದೊಳು ಮುಳುಗೆ ॥
ಚಂದ ಚಂದದ ಬೆಳಗು ತೋರ್ಪುದು । ಓಂ ಶ್ರೀಗುರುಸಿದ್ಧ ।
ನಿಂದು ನೋಡಲು ಬಯಲಿಗೆ ಬಯಲು ॥ ೭ ॥

ಗಿರಿಯ ಶಿಖರಕಗ್ನಿ ಮುಖದೊ ।
ಳಿರುವ ಅಡಕೇಶ್ವರನ ಹಿಂದೆ ॥
ಸುರಿವುದಮೃತದ ಪಂಚಧಾರೆಗಳು । ಓಂ ಶ್ರೀಗುರುಸಿದ್ಧ ।
ಅರಿದು ಸೇವಿಸೆ ಮರಣವಿಲ್ಲವು ॥ ೮ ॥

ಇಂತು ಶ್ರೀಶೈಲದ ಘನವ ।
ಭ್ರಾಂತಿಯಳಿದು ತಿರುಗಿ ನೋಡಿ ॥
ಅಂತರಂಗದ ಗುಡಿಯ ಹೊಕ್ಕೆನೊ । ಓಂ ಶ್ರೀಗುರುಸಿದ್ಧ ।
ಶಾಂತಮಲ್ಲನೆ ನೀನೆಯಾಗಿರ್ದೆ ॥ ೯ ॥

ಎಂಬ ಪದದಲ್ಲಿ ಶ್ರೀಗಿರಿಯು ಶರೀರದೊಳಗುಂಟೆಂದೂ, ಅಂತರಂಗದ ಗುಡಿಯ ಹೊಕ್ಕು ನೀಲದುಪ್ಪರಿಗೆಗಳ ನಡುವೆ, ವೇಳೆವೇಳೆಗೆ ತಾವೆ ನುಡಿಯುವ ತಾಳ ಮದ್ದಳೆ ಭೇರಿ ಘಂಟೆಗಳ ಸುನಾದವನ್ನು ಕೇಳಬೇಕೆಂದೂ, ಪಾತಾಳಗಂಗೆಯೊಳು ಮಿಂದು ಜ್ಯೋತಿರ್ಲಿಂಗಕೆ

ದೃಷ್ಟಿಯಿಟ್ಟರೆ ಜ್ಯೋತಿರ್ಲಿಂಗವು ಕರದಿ ಕಾಣಿಸುವದೆಂದೂ, ಸಪ್ತನದಿಯ ಸಂಗಮ ದಾಂಟಿ ಗುಪ್ತಕದಳಿಯ ಬನದೊಳು ಸುಳಿದು ಅಲ್ಲಿಪ್ಪ ಗುಹೆಯೊಳು ಒಬ್ಬನೆ ಹೊಕ್ಕು ಸಪ್ತವರ್ಣದ ಲಿಂಗವ ಕಾಣಬೇಕೆಂದೂ, ಮತ್ತು ಈ ಪ್ರಕಾರ ಶ್ರೀಗಿರಿಯ ಸುಕ್ಷೇತ್ರಕ್ಕೆ ಹೋಗಿ ಯಾವಾಗಲೂ ಯಾತ್ರೆಯ ಮಾಡಿ ಬರಬೇಕೆಂದೂ ಉಪದೇಶಿಸುವರು.

ಅಲ್ಲಮ ಪ್ರಭುಗಳು, ‘ ಕಾಣಬಾರದ ಕದಳಿಯ ಕಳದಲ್ಲಿ ತೊಳಗಿ ಬೆಳಗುವ ’ ಜ್ಯೋತಿಯ ನೋಡಿದಂತೆ,

ಸರ್ಪಭೂಷಣರು, ‘ ಗುಪ್ತ ಕದಳಿಯ ಬನದೊಳು ’ ಸಪ್ತವರ್ಣದ ಲಿಂಗವ ಕಂಡಂತೆ,

ಕಬೀರದಾಸರು, ‘ ಶರೀರದೊಳಗಿರುವ ಹೂವಿನ ಬನದಲ್ಲಿ ’ ದೇವನನ್ನು ನೋಡಿದಂತೆ,

ಕನಕದಾಸರು, ‘ ವನ ಉಪವನಗಳುಳ್ಳ, ಘನಸರೋವರಗಳುಳ್ಳ ವೈಕುಂಠದಲ್ಲಿ, ’ ನಾಗಶಯನ ಮೂರ್ತಿಯ, ಭೋಗಿಭೂಷಣ ಶಿವನ ಕಂಡಂತೆ,

ಅಕ್ಕಮಹಾದೇವಿಯವರು, ‘ ಕಾಣಬಾರದ ’ ಕದಳಿಯ ಬನದಲ್ಲಿ ಭವಹರನನ್ನು ಕಂಡರೆಂದು ನಾವು “ ಕದಳಿಯ ಬನದಲ್ಲಿ ಭವಹರನ ಕಂಡೆನು. ” ಈ ವಾಕ್ಯಕ್ಕೆ ಮಾಡಬಹುದಾದ ಎರಡನೆಯ ಅರ್ಥವು.

ಅಕ್ಕಮಹಾದೇವಿಯವರ, “ ಕದಳಿಯ ಬನದಲ್ಲಿ ಭವಹರನ ಕಂಡೆನು. ” ಈ ವಾಕ್ಯಕ್ಕೆ ನಾವು ಮಾಡಬಹುದಾದ ಬೇರೆ ಅರ್ಥಗಳನ್ನೂ, ಮತ್ತು ಜಲಾಲುದ್ದೀನ ರೂಮಿಯವರು **“ To the Rose-Garden of Unity** – ಐಕ್ಯದ ಗುಲಾಬೀ ತೋಟಕ್ಕೆ. ” ನಮ್ಮನ್ನು ಕರೆಯುವಂತೆ ಅಕ್ಕಮಹಾದೇವಿಯರು “ **To the Plantain-Garden of Unity**---ಐಕ್ಯದ ಅರ್ಥಾತ್ ಸಮರಸದ ಕದಳೀ ಬನಕ್ಕೆ. ” ನಮ್ಮನ್ನು ಹೇಗೆ ಕರೆಯುವರೆಂಬದನ್ನು ಈ ಲೇಖದಲ್ಲಿ ನಿರ್ದೇಶ ಮಾತ್ರ ಮಾಡಿದ್ದೇನೆ.

# ಜಗತ್ತು ಬಸವಣ್ಣನ ಸೇವಾಧರ್ಮ ಸಾಧಿಸಲಿ! ಶಾಂತಿ ಪಡೆಯಲಿ!

ಬರೆದವರು:— ಶ್ರೀ. ಅನ್ನದಾನೀಶ್ವರ ವಿರಕ್ತಮಠ.

ಯೋಗಿಗಳಿಗೂ ಭೋಗಿಗಳಿಗೂ ಸೇವಾ ಧರ್ಮವೇ ಬೇಕು. ಭೋಗಿಯಂತೂ ಸೇವಾಧರ್ಮದಿಂದಲೇ ಸುಖಶಾಂತಿಗಳನ್ನು ಪಡೆಯುತ್ತಾನೆ. ಯೋಗಿಯಾದರೂ ಸೇವಾಧರ್ಮವಿಲ್ಲದೆ ಪೂರ್ಣನಾಗಲಾರನು. ಸೇವಾಧರ್ಮದಿಂದ ಭೋಗಿಯು ಯೋಗಿಯಾಗುತ್ತಾನೆ. ಯೋಗಿಯು ಪೂರ್ಣನಾಗುತ್ತಾನೆ. ಪೂರ್ಣತ್ವವನ್ನು ಹೊಂದಿದ ಯೋಗಿಯೇ ಪೂರ್ಣ ಮಾನವನು. ಪೂರ್ಣ ಮಾನವನಾಗಬೇಕಾದರೆ ಸೇವಾಧರ್ಮವೇ ಬೇಕು. ಅಹಂಕಾರದಿಂದ ಇಹದಲ್ಲಿ ಏನೂ ಸಾಧ್ಯವಾಗುವದಿಲ್ಲ. ನಾಶ ಮಾತ್ರ ಕಟ್ಟಿಟ್ಟದ್ದು. ಸೇವಾಧರ್ಮದಿಂದ ಅಹಂಕಾರವು ನಿರಹಂಕಾರವಾಗಿ ಪರಿಣಮಿಸಿ, ವಿಶ್ವಸಂಗಿತದೊಡನೆ ನಮ್ಮ ಶಕ್ತಿಗಳು ಸುರಮ್ಯವಾಗಿ ಮೇಳಯಿಸಲಿಕ್ಕೆ ಸಂಸ್ಕರಣ ಹೊಂದುತ್ತವೆ. ಆಗ ನಮ್ಮಿಂದ ಪೂರ್ಣ ಮತ್ತು ದೊಡ್ಡ ಕಾರ್ಯಗಳು ಆಗುತ್ತವೆ. ಜಗದಣ್ಣ ಬಸವಣ್ಣನು ಸೇವಾಧರ್ಮದಲ್ಲಿ ಅಗ್ರಗಣ್ಯನೂ ಅದ್ವಿತೀಯನೂ ಆಗಿದ್ದನು. ಆದ್ದರಿಂದ ಅವನಿಂದ ಮಹಾಕಾರ್ಯಗಳು ಜರಗಿದವು.

ಬಸವಣ್ಣನ ವಚನಗಳಲ್ಲಿ ಸರಳತನವೂ, ಸೌಂದರ್ಯವೂ, ನಿಜವಾದ ದೊಡ್ಡಿಸ್ತನವೂ, ನಿಜವಾದ ವಿನಯವೂ, ಸ್ವಾರ್ಥತ್ಯಾಗದ ಸೇವೆಯೂ ಪ್ರಜ್ವಲಿಸುತ್ತಿರುವವು. ನೋಡಿರಿ! "ತೊತ್ತುತನವ ಮಾಡಲು ತನ್ನನೀವ ಕೂಡಲ ಸಂಗಮದೇವ." "ಇಲ್ಲಿ ಸಲ್ಲದವರು ಅಲ್ಲಿ ಸಲ್ಲರಯ್ಯ." ನಿಮ್ಮ ತೊತ್ತಗೆಲಸವ ಮಾಡದವನ ಸಂಸಾರವೇನಯ್ಯ?" "ಬರಿಯ ಮಾತಿನ ಮಾಲೆಯಲೇನಹುದು?" "ತ್ರಿವಿಧ ದಾಸೋಹದಲ್ಲಲ್ಲದೇ ಕಾಣಬಾರದು ಕೂಡಲ ಸಂಗಮದೇವನ." "ಕಿಂಕರನಾಗಿ ಬದುಕು ಮನವೇ." "ಎನಗಿಂತ ಕಿರಿಯರಿಲ್ಲ." "ಭೃತ್ಯನಾಗಿಪ್ಪೆನಯ್ಯಾ ಕೂಡಲ ಸಂಗಮದೇವಾ." "ಆನು ಭಕ್ತ

ಎನ್ನಲ್ಲಿ ಲೇಸುಂಟೆಂದು ಪರಿಣಮಿಸಿದೆನಾದರೆ ನಿಮಗಾನು ದ್ರೋಹಿಯಯ್ಯಾ." ಶರಣರ ಲೇಸೇ ಎನ್ನ ಲೇಸಯ್ಯ." "ನುಡಿದಂತೆ ನಡೆಯದಿದ್ದರೆ ಕೂಡಲ ಸಂಗಯ್ಯ ಮೆಚ್ಚ ಕಾಣಿರಯ್ಯ." "ಕಿಂಕರರ ಮನೆಯಲ್ಲಿ ಕಿಂಕರನು ಆನು." "ಮಾಡುವ ಭಕ್ತಂಗೆ ಮನಹೀನನಾದರೆ ಅದೇ ಕಡೆ." "ವೇಷಡಂಭಕರಿಗೆ ಭಕ್ತಿ ಎಂತಪ್ಪದಯ್ಯಾ?" "ಅಂಜಲೇಕೋ ನಿಮ್ಮ ಆಳಾಗಿ?" "ಹಾಳುಗೆಟ್ಟೋಡುವ ಆಳು ನಾನಲ್ಲಯ್ಯ. "ಶರಣನಾರಿಗಂಜುವನಲ್ಲ ಕೂಡಲ ಸಂಗಮ ದೇವರ ರಾಜತೇಜದಲ್ಲಿಪ್ಪನಾಗಿ." "ನಿಮ್ಮ ಪ್ರತಿಬಿಂಬದಂತಿಪ್ಪ ನಿಮ್ಮ ಶರಣ." "ಕರ್ಮಫಲಗೂಡಿ ಆತ್ಮ ನೈವೇದ್ಯವ ಮಾಡಿದವನೇ ಧನ್ಯನು." "ಕೂಡಲ ಸಂಗನ ನೊಲಿಸ ಬಂದ ಪ್ರಸಾದ ಕಾಯುವ ಕೆಡಿಸಲಾಗದು.

"ಅಹಂಕಾರ ಮನವನಿಂಬುಗೊಂಡಲ್ಲಿ ಲಿಂಗ ತಾನೆಲ್ಲಿಪ್ಪದೋ?" "ಕೂಡಲ ಸಂಗನ ಶರಣರು ಸತ್ತ ವ್ಯಸನಿಗಳಲ್ಲಾಗಿ." "ಸಂಗನ ಶರಣ ಸ್ವತಂತ್ರನಾಗಿ ಆತನಿರವೇ ಅವಿಮುಕ್ತಿ ಕ್ಷೇತ್ರ." "ಕುಲಮದ, ವಿಧಿವಶ, ಹಮ್ಮು ಸಂಬಂಧ ಬಿಟ್ಟು ಕಿಂಕರರ ಕಿಂಕರನಾಗಬೇಕು ಶರಣ." "ಅಹೋರಾತ್ರಿ ನಿಮ್ಮ ಶರಣರ ಸೇವೆಯಲ್ಲಿರಿಸು ಕೂಡಲ ಸಂಗಮದೇವ." "ತೆರಹಿಲ್ಲದ ವಿಚಾರ ಕೂಡಲ ಸಂಗಮದೇವಾ ನಿಮ್ಮ ಶರಣಂಗೆ." "ದೇವಲೋಕ ಮರ್ತ್ಯಲೋಕವೆಂಬ ಸೀಮೆಯುಳ್ಳನ್ನಕ್ಕ ಶರಣನಾಗಲರಿಯ." "ಸರ್ವದಲೂ ದಾಸೋಹ ಬೇಕು."

## ಬಸವಣ್ಣನ ಸೇವಾಧರ್ಮದ ವಿಶಿಷ್ಟ ಸ್ವರೂಪ.

ಮೇಲಿನ ವಚನಗಳನ್ನು ಸೂಕ್ಷ್ಮ ವಿಚಾರದಿಂದ ಅವಲೋಕಿಸಿದರೆ ಬಸವಣ್ಣನ ಸೇವಾಧರ್ಮದ ಅನುಕರಣೀಯ ಸ್ವರೂಪವು ವ್ಯಕ್ತವಾಗುವದು. ತೊತ್ತುತನವ ಮಾಡಿದರೆ ಪರಮಾತ್ಮನು ತನ್ನನ್ನೇ ಸೇವಕನಿಗೆ ಅರ್ಪಿಸುವನು. ಅಂದರೆ ಪರಮಾತ್ಮನು ಸೇವಕನ ದೇಹದಲ್ಲಿ ಸ್ಫುರಿಸುವನು. ಆಮೇಲೆ ಪರಮಾತ್ಮನ ಅರಿವಿನಿಂದ ಎಲ್ಲ ಕ್ರಿಯೆಗಳು ನಡೆಯುತ್ತವೆ. ಪರಮಾತ್ಮ ಪ್ರೇರಣೆಯಿಂದ ಸೇವಕನು ಕಾರ್ಯ ಮಾಡಹತ್ತಿದನೆಂದರೆ ಸಿದ್ಧಿಯು ಸಿದ್ಧವಾದ ಮಾತು. ಅಂಗಕ್ಕೆ ಲಿಂಗ ಸಂಬಂಧವಾಗುವದೆಂದರೂ ಇದೇ ಅರ್ಥ.

ಸೇವಕರಿಗೆ ಸರಿಯಾದ ನಡೆನುಡಿಗಳು ಇರಬೇಕು. ಸ್ವಭಾವ ಸಭ್ಯವಾಗಿರಬೇಕು. ಗುಣ ಚೆನ್ನಾಗಿರಬೇಕು. ಅಂದರೆ ಇಲ್ಲಿ— ಈ ಪ್ರಪಂಚದಲ್ಲಿ— ಸಲ್ಲುವರು. ಪರಮಾತ್ಮನಿಗೆ ಸಲ್ಲುವರು. ಜನರಿಗೆ ಉಪಯೋಗ ಬೀಳುವರು. ಸಭ್ಯತೆಯಿಲ್ಲದ ಸೇವೆ ಯಾವ ಲೋಕದಲ್ಲಿಯೂ ಸರಿಯಾಗುವದಿಲ್ಲ.

ಪರಮಾತ್ಮನ ತೊತ್ತುಗೆಲಸವನ್ನು ಮಾಡದವನ ಸಂಸಾರವು ವ್ಯರ್ಥವಾದುದು. ಪರಮಾತ್ಮನ ದೃಶ್ಯ ಸ್ವರೂಪವಾದ ಈ ವಿಶ್ವದ ಸೇವೆ ಮಾಡಿದರೆ— ಜೀವಾತ್ಮರ ಸೇವೆ ಮಾಡಿದರೆ— ಜೀವಾತ್ಮರಿಗೆ ಉನ್ನತರಾಗುವಂತೆ, ಲಿಂಗವಾಗುವಂತೆ, ದಾರಿಯನ್ನು ಸೇವೆಯ ಮೂಲಕ ತೋರಿಸಿದರೆ, ಅಂಥವನ ಸಂಸಾರವು— ಬದುಕು— ಅರ್ಥಪೂರ್ಣವಾದುದಾಗಿದೆ. ಅಂತಲ್ಲದವರ ಸಂಸಾರ ನಿಸ್ಸಾರ, ನಿರರ್ಥಕ. ಅವರ ಬಾಳು ಹಾಳು.

ದೊಡ್ಡ ದೊಡ್ಡ ಶಾಸ್ತ್ರ, ವೇದ, ಪುರಾಣ, ಆಗಮ, ತರ್ಕ, ಗೀತ, ಭಾಷಣ, ಸಂಭಾಷಣ, ಮಾತು ಇತ್ಯಾದಿಗಳನ್ನು ಬರೀ ಹೇಳುತ್ತ ಮಂದಿಗೆ ಭೂಷಣರಾಗಿ ತೋರುವದರಿಂದ ಏನೂ ಕಲ್ಯಾಣವಾಗುವದಿಲ್ಲ. ಅದೆಲ್ಲ ಮಾತಿನ ಮಾತೆ. ಆದರೆ ಕೃತಿ ಬೇಕು. ಕೃತಿಯಲ್ಲಿ ಲಿಂಗಸ್ಫೂರ್ತಿ ಇರಬೇಕು. ಅಂದರೆ ಎಲ್ಲ ಸಾಧ್ಯ.

ತನುವಿನಿಂದ ಕಾಯಕ ಮಾಡಬೇಕು. ಮನದಿಂದ ಪರಮಾತ್ಮನ ಲಿಂಗದ ಧ್ಯಾನ ಮಾಡಬೇಕು. ಕಾಯಕದಿಂದ ಬಂದ ದುಡ್ಡನ್ನು ಜಗತ್ತಿನ ಸೇವೆಗೆ ಅರ್ಪಿಸಬೇಕು. ತನ್ನ ಸಂಸಾರವನ್ನು ಸಾಗಿಸಬೇಕು. ಇದೇ ತ್ರಿವಿಧ ದಾಸೋಹ. ಈ ದಾಸೋಹದಲ್ಲಿ— ನಿರಹಂಕಾರದ, ಸ್ವಾವಲಂಬನೆಯ, ತ್ಯಾಗದ, ಭೋಗದ ಈ ಸೇವೆಯಲ್ಲಿ— ಪರಮಾತ್ಮನನ್ನು ಕಾಣಬಹುದು. ಅಂದರೆ ಪರಮಾತ್ಮ ಸಾಕ್ಷಾತ್ಕಾರಕ್ಕೆ ಇದೇ ಸಾಧನ ಕ್ರಮ.

ಸೇವಕನು ಆಗಾಗ್ಗೆ ತನ್ನ ಮನಸ್ಸಿಗೆ ಬುದ್ಧೀ ಹೇಳುತ್ತಿರಬೇಕು. ಇಲ್ಲದಿದ್ದರೆ ತಾನು ಹೆಚ್ಚು ಎಂಬ ಭಾವನೆ ಬರುವದು. ಹೆಚ್ಚು ಎಂಬ ಭಾವನೆ ಬಂದರೆ ಅಹಂಕಾರ ಬೆಳೆಯುವದು. ಸ್ವಯಂ

ಮಾನ್ಯತೆಯು ಪಂಡಿತರಿಂದಲೇ ಜಗತ್ತಿಗೆ ಅಡ್ಡ ದಾರಿ ತೋರುವದು. ಅಹಂಕಾರ ಮಮಕಾರದ ಸೇವಕರ ಮನದಲ್ಲಿ ನಿಜವಾದ ಬದುಕಿನ ವಿಚಾರಗಳು ಬರದೇ ಕುರುಡು ಬದುಕಿನ ವಿಚಾರಗಳೇ ಬರುತ್ತವೆ. ಆದ್ದರಿಂದ ಕಿಂಕರನಾಗಿರು ಮನವೇ ಎಂದು ಹೇಳುತ್ತಿರಬೇಕು. ಹೀಗೆ ಹೇಳಬೇಕಾದರೆ ಆತ್ಮನಿರೀಕ್ಷಣೆ ಬೇಕು. ಆತ್ಮನಿರೀಕ್ಷಣೆಯಿಲ್ಲದಿದ್ದರೆ ನಿಜವಾದ ಬದುಕಿನ ಹಾದಿಯು ತಿಳಿಯದೇ ಭಕ್ತಿ ಭಾಂಡಾರಿಗಳಾದ ಮಹಾ ವಿಶ್ವಪುರುಷರನ್ನೂ ಮಹಾನುಭಾವರನ್ನೂ ಪ್ರತ್ಯಕ್ಷಾಪ್ರತ್ಯಕ್ಷ ರೀತಿಯಿಂದ ನಿಂದಿಸುವ ಪ್ರವೃತ್ತಿ ಉಂಟಾಗುವದು. ತನ್ನ ಎಡೆಯಲ್ಲಿ ಕತ್ತೆ ಸತ್ತು ಬಿದ್ದರೂ ಪರರ ಎಡೆಯಲ್ಲಿ ನೊಣವನ್ನು ಆರಿಸುವ ಹೀನ ಮನೋವೃತ್ತಿಯುಂಟಾಗುವದು. ಆದ್ದರಿಂದ ಭಕ್ತಿಭಾಂಡಾರಿಗಳಾದ ಬಸವಣ್ಣನು ಕಿಂಕರನಾಗಿ ಬದುಕು ಮನವೇ ಎಂದು ಮನಸ್ಸಿಗೆ ಉಪದೇಶಿಸಿರುವನು. ಇದೇ ನಿಜವಾದ ಆತ್ಮನಿರೀಕ್ಷಣೆಯಲ್ಲದೆ ಅಹಂಮನ್ಯರ ಆತ್ಮನಿರೀಕ್ಷಣೆಯು ಯೋಗ್ಯವಲ್ಲ.

ಪರಮಾತ್ಮನ ಭಕ್ತರೇ ದೊಡ್ಡವರು. ಪರಮಾತ್ಮನನ್ನು ನಂಬದವರೇ ಹೊಲೆಯರು. ಇಂಥ ಹೊಲೆಯರಿಂದಲೇ ಜಗತ್ತು ಹಸಗೆಡುವದು. ಲಿಂಗ ಅಥವಾ ಪರಮಾತ್ಮನ ಭಕ್ತರು ಹೇಳಿದಂತೆ ನಡೆಯುತ್ತ ಹೆಚ್ಚು ಅನುಭವವನ್ನು ದೊರಕಿಸುತ್ತ ನಾನೇ ಎಲ್ಲಕ್ಕೂ ಸಣ್ಣವನು ಎನ್ನುತ್ತ ನಡೆಯಬೇಕು. ಸಮಾಜ ಸೇವಕರಿಗೆ ಈ ಮಾತು ಅತ್ಯಂತ ಮಾರ್ಗದರ್ಶನವಾಗಿದೆ.

ಎಂಥ ಪದವಿ, ಅಧಿಕಾರ, ಐಶ್ವರ್ಯ ಬಂದರೂ ಭೃತ್ಯಭಾವ ಬಿಡಬಾರದು. ಈ ಭಾವವೇ ಮಹಾಭಾವವಾಗಿ ಮಹಾನುಭವವನ್ನು ದಯಪಾಲಿಸುವದು.

ನಾನು ಪರಮಾತ್ಮನ ಭಕ್ತನು. ನಾನು ಒಳ್ಳೆಯವನು. ಎಂದು ಮನದಲ್ಲಿ ಹಿಗ್ಗಿದರೆ ಸೇವಕನಿಗೆ ಗೊತ್ತಾಗದಂತೆ ಸೂಕ್ಷ್ಮವಾಗಿ ಅಹಂಕಾರ ಪ್ರವೇಶವಾಗುವದು. ಭಕ್ತಿಯು ನೆಲೆಗೊಳ್ಳುವದಿಲ್ಲ.

ಸೇವಕನು ಸತ್ಯದ ಸೇವಕರಾದ ಶರಣರಲ್ಲಿ ಪ್ರೇಮವನ್ನಿಡಬೇಕು. ಅಚಲಭಕ್ತಿಯನ್ನಿಡಬೇಕು. ಅಂದರೆ ಸತ್ಯಾಗ್ರಹಿಗಳಾದ ಶರಣರಿಗೆ ಒಳಿತಾದರೆ ತನಗೇನೇ ಒಳಿತಾದಂತೆ ಎಂಬ ದಿವ್ಯಭಾವನೆ ಬರುವದು.

ತಾನೂ ಶರಣನಾಗುವನು. ಶರಣನು ಲಿಂಗಾಂಗ ಸಾಮರಸ್ಯ ಸಂಸ್ಕೃತಿಯಲ್ಲಿ ಮಿಂದವನು, ಮೆರೆದವನು. ಅಂಗವೆಂದರೆ ದೇಹ, ಪ್ರಾಣ, ಮನ, ಜೀವಾತ್ಮಗಳಿಂದ ಕೂಡಿದ್ದು. ನಮಗಿದ್ದಂತೆ ಈ ವಿಶ್ವಕ್ಕೂ ದೇಹವಿದೆ, ಪ್ರಾಣವಿದೆ, ಮನವಿದೆ, ಜೀವಾತ್ಮವಿದೆ. ಲಿಂಗವೆಂದರೆ ಚಿತ್ಕಲಾ ಚೈತನ್ಯ. ಈ ಚಿತ್ಕಲಾ ಚೈತನ್ಯವು ಮನುಷ್ಯನಲ್ಲಿಯೂ ಇದೆ. ವಿಶ್ವದಲ್ಲಿಯೂ ಇದೆ. ಶರಣನ ದೇಹ ಲಿಂಗದೇಹವಾಗುವದು. ಶರಣನ ಪ್ರಾಣವು ಲಿಂಗಪ್ರಾಣವಾಗುವದು. ಶರಣನ ಮನವು ಲಿಂಗಮನವಾಗುವದು. ಶರಣನ ಜೀವಾತ್ಮವು ಲಿಂಗಜೀವಾತ್ಮವಾಗುವದು. ಆಗ ಶರಣನೇ ಶಕ್ತಿಸ್ವರೂಪನಾಗುತ್ತಾನೆ, ಜ್ಞಾನಸ್ವರೂಪನಾಗುತ್ತಾನೆ ಕಳೆಯು ಅಂಗಾಂಗಗಳಲ್ಲಿ ವ್ಯಾಪಿಸುವದು. ಆಗ ಶರಣನಿಗೆ ಲಿಂಗಾಂಗ ಸಾಮರಸ್ಯದ ಸುಖ-ಶಾಂತಿಯು ಅಂಗವಿಸುವದು. ಶರಣನ ಜ್ಞಾನ, ಇಚ್ಛಾ ಕ್ರಿಯಾಶಕ್ತಿಗಳು ಅತ್ಯಂತ ತೀಕ್ಷ್ಣವಾಗಿ ಅವನಿಂದ ಅನೇಕ ಮಹಾನುಭಾವದ ಸಂಶೋಧನೆಗಳೂ, ಮಹಾ ಕಾರ್ಯಗಳೂ ಸಾಂಗವಾಗುತ್ತವೆ. ಇದೇ ಲಿಂಗಾಂಗ ಸಾಮರಸ್ಯ ಸಂಸ್ಕೃತಿ. ಆಗ ಶರಣನು ವಿಶ್ವದಲ್ಲಿಯೂ ದೇಹದಲ್ಲಿಯೂ ಅದ್ಭುತ ಶಕ್ತಿಗಳ ಆವಿಷ್ಕರಣಮಾಡಿ ಲಿಂಗಗುಣಗಳಾದ ಉತ್ಸಾಹ, ಶಾಂತಿ, ದಯೆ, ಪ್ರೇಮ, ಮುಂತಾದ ಗುಣಗಳನ್ನು ಹೊರಸೂಸುವನು. ಶರಣನೇ ವೈಜ್ಞಾನಿಕ ಆಧ್ಯಾತ್ಮಿಕ ಶಕ್ತಿಗಳನ್ನು ಸಮರಸಗೊಳಿಸಿ, ಇಡೀ ಭೂಮಂಡಲಕ್ಕೆ ಶಾಂತಿಯನ್ನೀಯುವನು. ಇದೇ ಲಿಂಗಾಂಗ ಸಾಮರಸ್ಯ ಸಂಸ್ಕೃತಿ.

ಈ ಪ್ರಕಾರ ಶರಣ ಅಥವಾ ಪ್ರಾಣಲಿಂಗಿ ಅಥವಾ ಜಂಗಮನಾಗುವದೇ ಎಲ್ಲ ಮನುಷ್ಯರ ಧ್ಯೇಯವಾಗಬೇಕು. ಜಂಗಮರೆಂದರೆ ಈಗಿನ ವೇಷಧಾರಿಗಳಲ್ಲ. ಷಟ್‌ಸ್ಥಲದಲ್ಲಿ ನೆಲೆಯಾಗಿ ನಿಂತ ಶರಣನೇ ಜಂಗಮನು. ಲಿಂಗಾಂಗ ಸಾಮರಸ್ಯ ಸಂಸ್ಕೃತಿ, ಪ್ರಭಾವದಿಂದ ಪ್ರಭಾವಾನ್ವಿತವಾದ ನೀತಿ, ಸಮಾಜ, ಧರ್ಮ, ಭಾಷೆ, ಸಾಹಿತ್ಯ, ಜೀವನಗಳನ್ನೇ ಸುಸಂಸ್ಕೃತಗೊಳಿಸಿ ಜಗತ್ತಿಗೇನೇ ಶಾಂತಿಯನ್ನೀಯುವ ಶರಣನ ನಿಲವು ಸಾಧಾರಣ ಬುದ್ಧಿಯವರಿಗೆ ವೇದ್ಯವಾಗಲಾರದು. ತಳಕ್ಕೆ ಇಳಿದರೆ ರತ್ನ ಸಿಗುವಂತೆ, ಮೇಲೆಯೇ ಈಸಾಡಿದರೆ ರತ್ನ ಸಿಗದಿರುವಂತೆ, ವಚನಸಾಹಿತ್ಯಸಮುದ್ರದಲ್ಲಿ ಆಳವಾಗಿ ತಳಕ್ಕೆ ಹೋದರೇನೇ ಅಮೋಘ ಜಾಜ್ವಲ್ಯವಾದ ವಿಚಾರ ಆಚಾರ-ಉಚ್ಚಾರದ ರತ್ನಗಳು ಸಿಗುತ್ತವೆ.

ಇಂಥ ಕಾರಣಪುರುಷನಾದ ಶರಣನಾಗುವದು ಮನಸ್ಸು ಮಾಡಿದರೆ ಎಲ್ಲರಿಗೂ ಸಾಧ್ಯ. ಮನಸಂಯಮನ, ಮನೋನಿರ್ಬಂಧದಿಂದ ಸಾಗ ಬೇಕು. ಶರಣನಾಗುವ ನಿರ್ಬಂಧವೇ ಬೇಡವೆಂದರೆ ಮಾನವರನ್ನು ಕಾಡ ಪ್ರಾಣಿಗಳನ್ನಾಗಿ ಮಾಡಲಿಕ್ಕೆ ಪ್ರೋತ್ಸಾಹಿಸಿದಂತೆಯೇ ಸರಿ. ಆದಕಾರಣ ಆತ್ಮನಿರೀಕ್ಷಣೆಯು ಈ ದಿಸೆಯಲ್ಲಿ ನಡೆಯಬೇಕಲ್ಲದೆ ಕೇವಲ ಔಪಚಾರಿಕವಾಗಿ ಸಾಗಿದರೆ ನಾಸ್ತಿಕತನದ, ಹೇಡಿತನದ, ದಾಸ್ಯ ಮನೋವೃತ್ತಿಯು ಮಾತ್ರ ಕಟ್ಟಿಟ್ಟದ್ದು. ಸಮಾಜಸೇವಕನು ಮಾತಾ ಡಿದಂತೆ ನಡಿಯಬೇಕು. ಅಂದರೆ ದೇವರು ಮೆಚ್ಚುವನು. ಜನರು ಮೆಚ್ಚುವರು. ಜನರ ಮೇಲೆ ವರ್ಚಸ್ಸು ಬಿದ್ದು ಕಾರ್ಯಗಳಾಗುತ್ತವೆ.

ಸಮಾಜಸೇವಕರು ಶರಣರು. ಅವರ ಮನೆಯಲ್ಲಿ ಕಿಂಕರಭಾವ ದಿಂದ ಸೇವಕನು ನಡೆಯಬೇಕು.

ಸಮಾಜಸೇವಕನಾದ ಭಕ್ತನ ಮನವು ಹೀನವಾಗಬಾರದು. ದೃಢ ನಿಶ್ಚಯ ಬಿಡದೇ ಸೇವೆ ಮಾಡಬೇಕು. ದೃಢನಿಶ್ಚಯ, ತಾಳ್ಮೆ, ಸಹಿ ಷ್ಣುತೆ, ಸಮತೆ ಇಲ್ಲದೇ ಹೋದರೆ ಸೇವೆಯೇ ನಿಲ್ಲುವದು.

ವೇಷ, ಮಾತು, ವಿಚಾರಗಳಲ್ಲಿ ಡಾಂಭಿಕತೆ ಇದ್ದರೆ ಸೇವೆ ಸಾಧ್ಯವಿಲ್ಲ. ಡಾಂಭಿಕ ಸೇವಕರಿಂದಲೇ ಜಗದಲ್ಲಿ ಹಾಹಾಕಾರವು ಏಳ ಲನುವಾಗುವದು. ನಿಷ್ಕಪಟ, ಸರಳ, ಲಿಂಗಸಾಕ್ಷಿಯ ನಿರ್ಡಾಂಭಿಕ ಸೇವ ಕರೇ ಭಕ್ತರು. ಉಳಿದವರು ಭವಿಗಳು.

ಪರಮಾತ್ಮನ ಸೇವಕನಾಗಿ, ಶರಣರ ಕಿಂಕರನಾಗಿ, ಸಮಾಜ ಸೇವೆ ಮಾಡುವ ಭಕ್ತನಿಗೆ ಭಯವೇ ಇರುವದಿಲ್ಲ. ಅತನು ನಿರ್ಭಯನು.

ಪರಮಾತ್ಮನ ರಾಜತೇಜದಲ್ಲಿದ್ದುದರಿಂದ ಸತ್ಯಶರಣನು ಹೆದ ರುವ ಕಾರಣವೇ ಇಲ್ಲ.

ಸಮಾಜ ಸೇವಕರಾದ ಸತ್ಯಶರಣರು ಪರಮಾತ್ಮನ, ಲಿಂಗದ ಪ್ರತಿಬಿಂಬದಂತಿಪ್ಪರು ಎಂದು ನಮ್ಮ ಜಗದಂಣ ಬಸವಂಣನು ಎಷ್ಟು ಮಾರ್ಮಿಕವಾಗಿ ಹೇಳಿರುವನು ನೋಡಿರಿ! ಪರಮಾತ್ಮನ ಅಥವಾ ಲಿಂಗದ ಜ್ಞಾನ, ಇಚ್ಛಾ, ಕ್ರಿಯಾ ಶಕ್ತಿಗಳೆಲ್ಲವೂ, ಶಾಂತಿ, ಮೊದಲಾದ ಎಲ್ಲ ಕಲೆಗಳೂ ಸತ್ಯಶರಣನಾದ ಸಮಾಜ ಸೇವಕನ

ಮೂಲಕವೇ ಬಾಹ್ಯ ಜಗತ್ತಿನಲ್ಲಿಯೂ ಒಳಬಾಳಿನಲ್ಲಿಯೂ ಹೊಳೆಯುತ್ತ ಪ್ರಚಂಡ ಅಸಾಧ್ಯ ಕಾರ್ಯ ಮಾಡುತ್ತವೆ. ಅಂದವೇಲೆ ಪರಮಾತ್ಮನ ಲಿಂಗದ, ಕೂಡಲ ಸಂಗನ, ಪ್ರತಿಬಿಂಬದಂತಾಗುವದೇ ಜೀವನದ ರಹಸ್ಯವೂ ಧ್ಯೇಯವೂ ಆಗಬೇಕು. ಈ ಧ್ಯೇಯವಿಲ್ಲದೆ ಸೇವೆ ಮಾಡಿದರೆ ಮಹತ್ತರವಾದ ಸೇವೆಯಾಗುವದಿಲ್ಲವೇ ಇಲ್ಲ. ಈ ತೆರನಾದ ಶರಣರಾಗುವ ನಿರ್ಬಂಧವಿರಬಾರದು ಎಂದು ಹೇಳುತ್ತ ಬರೆಯುತ್ತ ಹೋದರೆ ಜಗತ್ತನ್ನು ಅಸಂಸ್ಕೃತ, ಅನಾಗರಿಕ, ಕಾಡು, ಪಾಶವೀ ವೃತ್ತಿಯ ದಾರಿಯಲ್ಲಿ ಒಯ್ದಂತೆಯೇ ಸರಿ. ಕನ್ನಾಡಿನ ಆತ್ಮ ನಿರೀಕ್ಷಣೆಯನ್ನು ಮಾಡುವವರು ಮೊದಲು ತಮ್ಮ ನಿರೀಕ್ಷಣೆಯನ್ನು ಮಾಡಿಕೊಳ್ಳಲಿ.

ಸಮಾಜ ಸೇವಕರಾದವರು ಕರ್ತವ್ಯದಕ್ಷತೆಯಿಂದ ಸೇವಾ ಕಾರ್ಯವನ್ನು ಸಾಗಿಸಬೇಕು. ಅಂದರೆ ಕರ್ತವ್ಯಕ್ಕೆ ತಕ್ಕ ಫಲ ಬರುವದು. ಆಗ ಮಾತ್ರ ಅಹಂಕಾರ ಪಡದೇ ಇರಬೇಕು. ಕರ್ತವ್ಯದ ಫಲವನ್ನೂ ತನ್ನ ಜೀವಾತ್ಮವನ್ನೂ ಪರಮಾತ್ಮನಿಗೆ ನಿವೇದಿಸಬೇಕು. ಅಂದರೆ ಅವನು ಧನ್ಯನಾಗುವನು. ಲಿಂಗದ ಪ್ರತಿಬಿಂಬವಾಗುವನು. ಸರ್ವಾರ್ಪಣದ ಪೂರ್ಣ ಯೋಗವೆಂದರೆ ಇದು. ಲಿಂಗಾಂಗ ಸಾಮರಸ್ಯ ಸಂಸ್ಕೃತಿಯೆಂದರೂ ಇದೇ. ಇದರಿಂದ ಜಗತ್ತಿನಲ್ಲಿ ಹೊಸ ಜೀವನ ಸಂಚಾರವಾಗುವದು. ಅಂಗ ಲಿಂಗವಾಗುವದೆಂದರೂ ಇದೇ.

ಸಮಾಜ ಸೇವಕರು ದೇಹವನ್ನು ಅಲಕ್ಷಿಸಬಾರದು. ದೇಹವು ಪ್ರಸಾದ ಕಾಯವು. ಲಿಂಗದ ಅನುಗ್ರಹ ರೂಪವಾಗಿರುವದೀ ದೇಹವು. ಈ ದೇಹವನ್ನು ತಪ್ಪು ಧಾರ್ಮಿಕ, ವಿರಕ್ತಿಯ ಕಲ್ಪನೆಯಿಂದ ಕೆಡಿಸಬಾರದು. ಆರೋಗ್ಯ, ತೇಜಸ್ಸು, ಗಟ್ಟಿತನ, ಕರ್ತೃತ್ವಶಕ್ತಿ ಬರುವಂತೆ ದೇಹವನ್ನು ಭದ್ರಪಡಿಸಬೇಕು. ಆದರೆ ಶರೀರ ಸುಖವೇ ಶ್ರೇಷ್ಠವೆಂಬ ಪಾಶ್ಚಿಮಾತ್ಯ ಸಂಸ್ಕೃತಿಯ ತಪ್ಪು ಕಲ್ಪನೆಗೆ ಇಂಬುಗೊಡಬಾರದು. ದೇಹ ಭದ್ರವಿಲ್ಲದಿದ್ದರೆ ಯಾವ ಸೇವೆಯೂ ಸಾಧ್ಯವಿಲ್ಲ. ನೋಡಿರಿ! ಜಗದಂಣನು ಎಷ್ಟು ವ್ಯಾವಹಾರಿಕ ವಿಚಾರ ಸರಣಿಯುಳ್ಳವನಿರುವನು! ಬಸವಂಣನು ಆದರ್ಶವಾದಿಯಿದ್ದಂತೆಯೇ ವ್ಯಾವಹಾರಿಕನೂ ಇದ್ದಾನೆ!

ಅಹಂಕಾರದ ಮನಸ್ಸುಳ್ಳವರು ಲಿಂಗವಂತರಲ್ಲ. ಸ್ವಲ್ಪ ಸೇವೆ ಮಾಡಿದ ಕೂಡಲೇ ಅಹಂಕಾರದ ಸಮಾಧಾನ ಬರುವದು. ಆಗ ಜೀವಾತ್ಮನು "ನಾನು" ಮಾಡಿದೆನು ಅನ್ನುವನು. ಅರ್ಥಾತ್ ಅಲ್ಪ ಸಂತುಷ್ಟಿಯುಳ್ಳವನಾಗುವನು. ಮುಂದೆ ಪ್ರಗತಿಯಾಗುವದಿಲ್ಲ. ವೈಯುಕ್ತಿಕ, ಕೌಟುಂಬಿಕ, ಸಾಮಾಜಿಕ, ರಾಷ್ಟ್ರೀಯ, ಅಂತರರಾಷ್ಟ್ರೀಯ ಜೀವನದಲ್ಲಿ ಅರ್ಥಾತ್ ಜಗದ ಜೀವನದಲ್ಲಿ ಹೊಸ ಕಳೆ, ಹೊಸ ಜ್ಞಾನ, ಹೊಸ ಚೈತನ್ಯ ಅರ್ಥಾತ್ ಚಿತ್ಕಲಾ ಚೈತನ್ಯ ಅಂಗವಿಸುವದಿಲ್ಲ.

ವ್ಯಸನಿಗಳಾದರೆ ಸಮಾಜ ಸೇವೆ ಸಾಧ್ಯವಿಲ್ಲ. ವ್ಯಸನಿಗಳಾದ ಸಮಾಜ ಸೇವಕರು ಬರೀ ಕೀರ್ತಿವಾರ್ತೆಗಾಗಿ ಮಾಡುವರು. ಡಾಂಭಿಕರು ಡಾಂಭಿಕತನವನ್ನೇ ಸಮಾಜದಲ್ಲಿ ಹಬ್ಬಿಸುವರು. ಇವರನ್ನು ನಂಬಿದವರೂ ಹಾಳಾಗುವರು. ಸಮಾಜ ಸೇವಕರಾದ ಸತ್ಯಶರಣರು ವ್ಯಸನಿಗಳಿರುವದಿಲ್ಲ. ಸದಾಚಾರದಿಂದ ನಡೆಯುವರು. ಸದಾಚಾರವೆಂದರೆ ಕೇವಲ ಮಡಿ ಮೈಲಿಗೆಯ ಕರ್ಮಜಾಲವಲ್ಲ. ಸದಾಚಾರವು ಪಂಚಾಚಾರಗಳಲ್ಲಿ ಒಂದಾಗಿರುವದು. ಸದಾಚಾರವೆಂದರೆ ಸತ್ಯಶುದ್ಧ ಕಾಯಕದಿಂದ ಧನ ಸಂಪಾದಿಸಿ ಸೇವೆ ಮಾಡುವ ಪದ್ಧತಿ. ಪರಾವಲಂಬನೆಗಾಗಲಿ ಭಿಕ್ಷಾವೃತ್ತಿಗಾಗಲಿ ಇಲ್ಲಿ ಸ್ಥಾನವಿಲ್ಲ. ಈ ಸದಾಚಾರದಿಂದಲೇ ವ್ಯಸನಗಳ ಉಚ್ಚಾಟನೆಯಾಗಬಲ್ಲುದು. ಬೇರೆ ಮಾರ್ಗವಿಲ್ಲ.

ಸಮಾಜ ಸೇವಕರು ತೀರ್ಥಕ್ಷೇತ್ರಗಳಿಗೆ ಅಂಡಲೆಯುವ ಕಾರಣವಿಲ್ಲ. ಆದರ್ಶ ಮತ್ತು ವ್ಯಾವಹಾರಿಕ ಸಮಾಜಸೇವಕರಾಗಿರುವ ಸತ್ಯಶರಣರು ಪರತಂತ್ರರಲ್ಲ. ಸ್ವತಂತ್ರರು. ಅವರು ಹೇಗೆ ಸ್ವತಂತ್ರರಾದರೆಂಬಂಶವನ್ನು ಅವರ ಸನ್ನಿಧಾನದಲ್ಲಿ ಕಲಿಯಬೇಕು. ಅಂದರೆ ಅಲ್ಲಿಯೇ ಜೀವನ್ಮುಕ್ತಿ ಸಿಗುವದು. ದೈವವಾದ, ಕುಲಮದ, ವರ್ಣಭ್ರಮೆ, ಜಾತಿಭೇದ, ಈರ್ಷೆಯ ಪಕ್ಷಪಂಗಡ— ಇವೆಲ್ಲವನ್ನು ಶರಣನು ಅಳಿಯಲೇಬೇಕು. ಅಂದರೇನೇ ಶರಣನಾಗುವನು. ಇಂಥ ಶರಣನ ಸೇವೆಯನ್ನು ಮಾಡುವದೆಂದರೆ ಜಗತ್ತಿನ ಸೇವೆಯನ್ನು ಮಾಡಿದಂತೆಯೇ ಸರಿ. ಆದ್ದರಿಂದಲೇ ಹಗಲಿರುಳೂ ಶರಣಸೇವೆಯಲ್ಲಿರಿಸೆಂದು ಬಸವಂಣನು ಲಿಂಗ ಅಥವಾ ಪರಮಾತ್ಮನನ್ನು ಪ್ರಾರ್ಥಿಸಿರು

ವನು. ನರಗುರಿಗಳಿಗೆ ಶರಣರ ಮಹತ್ವ ತಿಳಿಯದು. ಶರಣನು ಯಾವಾಗಲೂ ವಿಮರ್ಶಾತ್ಮಕ ವಿಚಾರದಲ್ಲಿರುವನು. ಕಾರಣ ಸಮಾಜ ಸೇವಕರು ಅವರ ಮಹಾನುಭಾವ ಪ್ರಸಾದವನ್ನು ಅನುಭವ ಮಂಟಪದಲ್ಲಿ ಪಡೆದು ಕಲ್ಯಾಣ ಮಾಡಬೇಕು.

ಸತ್ತಮೇಲೆ ಸ್ವರ್ಗವನ್ನು ಪಡೆಯಲಿಕ್ಕಾಗಲಿ, ಕೈಲಾಸಕ್ಕೆ ಹೋಗುವದಕ್ಕಾಗಲಿ, ಸಮಾಜ ಸೇವೆಯನ್ನು ಮಾಡಬೇಕೆಂದು ತಿಳಿಯುವದು ಮಹಾ ಮೂರ್ಖತನವೇ ಸರಿ. ಸ್ವರ್ಗ ಕೈಲಾಸ ಬೇರಿಲ್ಲ. ದೇವಲೋಕ, ಮರ್ತ್ಯಲೋಕ ಬೇರಿಲ್ಲ. ಇಲ್ಲಿಯೇ, ಈ ಪ್ರಪಂಚದಲ್ಲಿಯೇ ಇವು ಇವೆ. ಸಮಾಜಸೇವಕರಾದ ಸತ್ಯಶರಣರ ವಾಸಸ್ಥಾನವೇ ಸ್ವರ್ಗ ಅಥವಾ ಕೈಲಾಸ. ಶರಣರ ಧ್ಯೇಯವು ಕಾಲ್ಪನಿಕ ಕೈಲಾಸಕ್ಕೆ ಹೋಗುವದಲ್ಲ. ಆ ಕಾಲ್ಪನಿಕ ಸುಖದ ಕಲ್ಪನೆಯನ್ನು ತರುವಂತಿಲ್ಲ. ಕೈಲಾಸವನ್ನೇ ಬೇಕಾದರೆ ಇಲ್ಲಿ ಸ್ಥಾಪಿಸುವದು. ಅಲ್ಲಲ್ಲ. ಈ ಪ್ರಪಂಚವನ್ನೇ ಕೈಲಾಸವನ್ನಾಗಿ ಪರಿವರ್ತಿಸುವದು. ಪುರಂದರದಾಸ ಮೊದಲಾದ ದಾಸಕೂಟದಂತೆ ಇಹಲೋಕವನ್ನು ಮರೆಯುವಂತಿಲ್ಲ. ಅಂಗವನ್ನೇ — ಈ ಜಗತ್ತನ್ನೇ ಲಿಂಗವನ್ನಾಗಿಸುವದೇ ಶರಣರ ಧ್ಯೇಯ. ಲಿಂಗಾಂಗ ಸಾಮರಸ್ಯ ಸಂಸ್ಕೃತಿ ಅರ್ಥಾತ್ ಆಧ್ಯಾತ್ಮಿಕ ವೈಜ್ಞಾನಿಕ ಜೀವನಗಳನ್ನೊಳಗೊಂಡ ಅತ್ಯುನ್ನವಾದ ಮತ್ತು ಅತಿ ಆಳವಾದ ಸಂಸ್ಕೃತಿಗನುಸರಿಸಿ ಹೊಸ ಜಗತ್ತನ್ನು ಆವಿರ್ಭವಿಸುವದೇ ಶರಣರ ಧ್ಯೇಯ. ಈ ಧ್ಯೇಯವು ಸರ್ವದಲ್ಲೂ ದಾಸೋಹ ಭಾವದಿಂದಲೇ ಸಾಧ್ಯ. ಇದನ್ನು ಚೆನ್ನಾಗಿ ತಿಳಿದುಕೊಂಡು ಸಮಾಜ ಸೇವಕರು ಜನದ ಸೇವೆ ಮಾಡಬೇಕು.

---

# ಪತ್ರಿಕೆಯ ವಿಷಯವಾಗಿ ಕೆಲವು ಸೂಚನೆಗಳು.

( ಸಂಪಾದಕ )

ಈಗಿನ ಸಂಚಿಕೆಯಲ್ಲಿ ಪಾದೋದಕ ವಿಷಯವನ್ನು ಮುಂದುವರಿಸಿದ್ದು ಇದರಲ್ಲಿ ಚನ್ನಬಸವ, ಪ್ರಭುದೇವರು ಮೊದಲಾದ ಮಹಾತ್ಮರ ವಚನಗಳು ಸೇರ್ಪಟ್ಟಿವೆ. ಪಾದೋದಕ, ಪ್ರಸಾದ, ವಿಭೂತಿ, ರುದ್ರಾಕ್ಷಿ, ಮಂತ್ರ ಇವುಗಳ ವಿವರಣೆಗಳಲ್ಲಿ ಬಹು ಗೂಢ ವಿಷಯಗಳು ತುಂಬಿವೆ. ನಮ್ಮ ಹಿಂದಿನವರು ಅವುಗಳ ಮರ್ಮಗಳನ್ನು ಯಾರಿಗೂ ತಿಳಿಯಗೊಡದೆ ಗುಪ್ತವಾಗಿಡುತ್ತ ಬಂದರು. ಅದರಂತೆಯೇ ನಾವೂ ಪ್ರಕಟಿಸಬಾರದೆಂದು ಬಯಸಿದ್ದೆವು. ಒಂದು ವೇಳೆ ಪ್ರಕಟಿಸುವದಾದರೆ ಅವುಗಳ ವಿಷಯವಾಗಿ ಸ್ವತಂತ್ರ ಗ್ರಂಥವನ್ನೇ ಏರ್ಪಡಿಸಿ ಈ ಗ್ರಂಥವು ಯಾರಿಗೆ ಬೇಕೋ ಅವರಿಗೆ ಮಾತ್ರ ಅದನ್ನು ಕಳಿಸಬೇಕೆಂದಿದ್ದೆವು. ಆದರೆ ಗ್ರಂಥ ಪ್ರಕಟನೆಗೆ ಅವಶ್ಯವಿರುವ ಸಹಾಯವು ನಮಗೆ ಈ ವರೆಗೆ ದೊರೆಯದೆ ಹೋದದ್ದರಿಂದ ಇದೇ ಸ್ಥಿತಿಯು ಮುಂದೆ ಉಳಿದಲ್ಲಿ ಶಿವಾನುಭವದ ಮಹತ್ವದ ವಿಚಾರಗಳು ಪ್ರಕಟವಾಗದೆ ಹೋಗಿ ಅವು ನಷ್ಟವಾಗಬಹುದಾದ್ದರಿಂದ ನಾವು ಈಗ ಈ ವಿಷಯಕ್ಕೆ ಸಂಬಂಧಿಸಿದ ವಚನಗಳನ್ನು ಪತ್ರಿಕೆಯಲ್ಲಿ ಪ್ರಸಿದ್ಧಿಸಲು ಪ್ರಾರಂಭಿಸಿದ್ದೇವೆ.

**ಶಿವಶರಣರ ಚರಿತ್ರೆಗಳು:**— ವಚನಶಾಸ್ತ್ರದ ಈ ಮೂರನೆಯ ಭಾಗದ ಕಾರ್ಯದಲ್ಲಿ ನಾವು ತೊಡಗಿದ್ದರಿಂದ ಶಿವಶರಣರ ಚರಿತ್ರೆಗಳ ಸಂಶೋಧನ ಕಾರ್ಯವನ್ನು ನಾವು ಕೆಲವು ದಿವಸ ತಡೆಹಿಡಿಯಬೇಕಾಗಿ ಬಂದಿದೆ. ಆದರೆ ಈ ಕಾರ್ಯವನ್ನು ತೀವ್ರವಾಗಿ ಮುಂದುವರಿಸುವದೇ ನಮ್ಮ ಧ್ಯೇಯವಾಗಿದೆ. ಬರೆಯಬೇಕಾದ ಮಹತ್ವದ ಶಿವಶರಣರ ಚರಿತ್ರೆಗಳು ಇನ್ನೂ ಮುಂದೆ ಇವೆ. ಇವು ಮುಗಿದ ಬಳಿಕ ಬಸವೇಶ್ವರನ ಚರಿತ್ರೆಯನ್ನೂ ಆ ಮೇಲೆ ಚನ್ನಬಸವೇಶ್ವರನು ಮಾಡಿದ ಮಹತ್ಕ್ರಾಂತಿಯ ಇತಿಹಾಸವನ್ನೂ ವಾಚಕರ ಮುಂದಿಡುವೆವು.

**ಶಿವಾನುಭವದ ಬಗ್ಗೆ ಲೇಖಗಳು:--** ವಚನಶಾಸ್ತ್ರದ ವಿಷಯ ವಾಗಿ ಪ್ರೀತಿಯನ್ನು ಹೊಂದಿ ಅದನ್ನು ಅಭ್ಯಾಸ ಮಾಡಿ ಸ್ವತಂತ್ರ ಲೇಖಗಳನ್ನು ಬರೆಯುವಂಥ ಜನರ ಸಂಖ್ಯೆಯು ಇನ್ನೂ ಬಹಳ ಕಡಿಮೆ ಇದೆ. ಆದ್ದರಿಂದ ನಮ್ಮಲ್ಲಿಯ ವಿದ್ಯಾವಂತರೂ ಪಂಡಿತರೂ ಶಾಸ್ತ್ರಿಗಳೂ ಸ್ವಾಮಿಗಳೂ ಇತ್ತಕಡೆಗೆ ಲಕ್ಷಹಾಕಿ ಸ್ವತಂತ್ರ ಲೇಖಗ ಳನ್ನು ಬರೆದಲ್ಲಿ ವೀರಶೈವ ಸಂಸ್ಕೃತಿಯ ಪ್ರಕಾಶವು ಹೆಚ್ಚುತ್ತ ಹೋಗದೆ ಇರಲಾರದು. ಅಂಥವರು ತಮ್ಮ ಲೇಖಗಳನ್ನು ಪತ್ರಿಕೆಗೆ ಕಳಿಸಿದರೆ ಅವು ಅದರಲ್ಲಿ ಪ್ರಸಿದ್ಧಿಸಲ್ಪಡುವವು ಈ ಪತ್ರಿಕೆಯು ಯಾವ ಪಕ್ಷಕ್ಕೂ ಹೊಂದಿರದೆ ಸತ್ಯಾನ್ವೇಷಣ ಬುದ್ಧಿಯಿಂದ ಬರೆದ ಎಲ್ಲತರದ ಲೇಖ ಗಳಿಗೂ ಆದು ಸ್ಥಳಕೊಡುತ್ತ ಬಂದಿದೆಂಬುದನ್ನು ಅವರ ಲಕ್ಷಕ್ಕೆ ತರಲು ನಾವು ಇಚ್ಛಿಸುತ್ತೇವೆ.

**ಶಿವಾನುಭವಕ್ಕೆ ಸಹಾಯ:-** ಶಿವಾನುಭವ ಪತ್ರಿಕೆಯು ಹೋದ ೨೧ ವರ್ಷಗಳಿಂದಲೂ ವೀರಶೈವ ಸಮಾಜದ ಸೇವೆ ಮಾಡುತ್ತ ಬಂದರೂ ಅದರಲ್ಲಿಯ ವಿದ್ಯಾವಂತರೂ ಸ್ವಾಮಿಗಳೂ ಧನವಂತರೂ ಕೆಲವು ಅಪ ವಾದಗಳನ್ನುಳಿದು ಯಾವ ರೀತಿಯಿಂದಲೂ ಅದಕ್ಕೆ ಸಹಾಯ ಮಾಡಿಲ್ಲ. ಆದರೂ ಅಲ್ಲಲ್ಲಿ ಇರುವ ಅದರ ಹಿತೈಷಿಗಳು ಅದಕ್ಕೆ ಚಂದಾದಾರ ರಾಗಿ ನಮಗೆ ಸಹಾಯ ಮಾಡುತ್ತ ಬಂದಿದ್ದಾರೆ. ಇವರನ್ನು ನಾವು ಕೃತಜ್ಞತಾಪೂರ್ವಕವಾಗಿ ವಂದಿಸುತ್ತೇವೆ. ಈಗಿನ ಕಠಿಣ ಕಾಲದಲ್ಲಿ ನಮಗೆ ಸಮಾಜದಿಂದ ಹೆಚ್ಚಿಗೆ ಸಹಾಯವು ಒಂದು ವೇಳೆ ದೊರೆತಿ ದ್ದರೆ ಪತ್ರಿಕೆಯನ್ನು ಇನ್ನೂ ಹೆಚ್ಚಿಗೆ ಬೆಳಿಸಿ ಆದನ್ನು ಆಕರ್ಷಕವಾಗಿ ಮಾಡಬಹುದಾಗಿತ್ತು. ಆದರೆ ಇದು ಸಾಧ್ಯವಾಗದ್ದರಿಂದ ನಾವು ಬಹಳ ವಿಷಾದ ಪಡುತ್ತೇವೆ. ಈಗಾದರೂ ಪತ್ರಿಕೆಯ ಹಿತೈಷಿಗಳು ಪತ್ರಿಕೆಯ ಮಹತ್ವವನ್ನು ತಮ್ಮ ಮಿತ್ರರಿಗೆ ತಿಳಿಸಿ ಅವರೂ ಕೂಡ ಚಂದಾದಾರ ರಾಗುವಂತೆ ಮಾಡಿದಲ್ಲಿ ನಾವು ಅವರಿಗೆ ಅತ್ಯಂತ ಋಣಿಯಾಗುವೆವು.

೭. ಕಲ್ಪಿತೋದಕ ಒಂದು, ಅರ್ಪಣೋದಕ ಮೂರು, ಲಿಂಗೋದಕವು ತ್ರಯುವಾಗಿ ಮಿಕ್ಕ ಪ್ರಸಾದೋದಕ ಅವು ಮೂರು ಸತ್ವ ರಜ ತಮುವನತಿಗಳೆದವರಿಗಲ್ಲದೆ ಹತ್ತು ಪಾದೋದಕವನರಿಯಲರಿದು. ತಾನು ಚಿತ್ತಶುದ್ಧನಾಗಿ ಗುರುಕರುಣದಿಂದಲೇ ಹತ್ತು ಪಾದೋದಕವ ಗ್ರಹಿಸುವ ಭಕ್ತರಿಗೆ ಸಂದಿಲ್ಲದಿಹೆ. ಅವರು ನೀನು, ಮುತ್ತು ನೀರನು ಕೂಡಿದಾನಂದದ ಭೇದದವೊಲು ತತ್ವಪುಸಿಯುಪ್ಪನೇ ಶ್ರೀಗುರುಮಲ್ಲಿಕಾರ್ಜುನಾ.

೮. ಮುಖದಿಂದ ಹುಟ್ಟಿಪ್ಪ ಮೂರು ಅರ್ಪಿತೋದಕದ ಒಳಗೆ ಹುಟ್ಟಿತ್ತು ಶುದ್ಧ ಪ್ರಸಾದೋದಕ. ಸದಮಲ ಜ್ಞಾನದಂಘ್ರಿಯಲ್ಲಿ ಹುಟ್ಟಿತ್ತೊಂದುದಕ. ವಪನವೈದರಲ್ಲಿ ಉದ್ಭವಿಸಿದವು ತಾವು ಕರಣೇಂದ್ರಿಯಗಳನತಿಗಳೆದು ಹತ್ತನೆಯ ಪಾದೋದಕ ಕ್ರಮವಿಂತುಟು ಕಪಿಲಸಿದ್ಧ ಮಲ್ಲಿಕಾರ್ಜುನಾ.

೯. ಪ್ರಥಮದಲ್ಲಿ ಪಾದೋಧಕ, ದ್ವಿತೀಯದಲ್ಲಿ ಲಿಂಗೋದಕ, ತೃತೀಯದಲ್ಲಿ ಮಜ್ಜನೋದಕ, ಚತುರ್ಥದಲ್ಲಿ ಸ್ಪರ್ಶನೋದಕ, ಪಂಚಮದಲ್ಲಿ ಅವಧಾನೋದಕ, ಷಷ್ಠಮದಲ್ಲಿ ಆಪ್ಯಾಯನೋದಕ, ಸಪ್ತಮದಲ್ಲಿ ಹಸ್ತೋದಕ, ಅಷ್ಟಮದಲ್ಲಿ ಪರಿಣಾಮೋದಕ, ನವಮದಲ್ಲಿ ನಿರ್ನಾಮೋದಕ, ದಶಮದಲ್ಲಿ ಸತ್ಯೋದಕವಾದಲ್ಲಿ ಉಪಮಿಸಲಿಲ್ಲದ ಕಾರಣ ಇಂತಿದು ದಶವಿಧ ಪಾದೋದಕ ನಿರ್ಣಯವನರಿದು ಕೊಳಬಲ್ಲ, ಕೊಡಬಲ್ಲ, ಗೌರೇಶ್ವರ ನಿಮ್ಮ ಶರಣ.

ಟೀಕು:— ಸರ್ವಾಂಗ ಲಿಂಗ ಸಂಬಂಧಿಯಾದ ಶರಣನು ಪ್ರಾತಃಕಾಲದಲ್ಲಿ ಶಿವಸ್ಮರಣೆಯಿಂದ ಕಣ್ಣ ಹೊಸೆವುತೆದ್ದು ಮೊತ್ತ ಮೊದಲಲ್ಲಿ ಸುವರ್ಣ ತಾಮ್ರದ ಭಾಂಡವ ತೆಗೆದುಕೊಂಡು ಹೋಗಿ ಕೆರೆ, ಕಟ್ಟೆ, ಹಳ್ಳ, ಹೊಳೆ, ಭವಿಗಳು ಹೊಕ್ಕು ಮೊಗೆವಲ್ಲಿ ಚರಣ ಸೋಂಕಿನಿಂ ಪವಿತ್ರವಾದೊಂದುದಕವೆಂಬುದೀಗ ಪ್ರಥಮದಲ್ಲಿ ಪಾದೋದಕವೆಂಬ ಶಬ್ದಕ್ಕರ್ಥ.

ಚರಣ ಸೋಂಕಿನಿಂ ಪವಿತ್ರವಾದ ಬಳಿಕ ಎರಡನೆಯಲ್ಲಿ ನಮ್ಮ ಲಿಂಗಕ್ಕಭಿಷೇಕವನೆರೆಯಬೇಕೆಂದು ಕಲ್ಪಿಸಿದುದು ಒಂದುದಕವೆಂಬುದೀಗ ದ್ವಿತೀಯದಲ್ಲಿ ಲಿಂಗೋದಕವೆಂದು ಸ್ವಯ ಸಂಕಲ್ಪಿಸಿದ ಬಳಿಕ ಮೂರನೆಯದಲ್ಲಿ ಲಿಂಗಕ್ಕಭಿಷೇಕವನೆರೆದು ಒಂದುದಕವೆಂಬುದೀಗ ತೃತೀಯದಲ್ಲಿ

ಮಜ್ಜನೋದಕವೆಂಬ ಶಬ್ದಕ್ಕರ್ಥ. ಅಭಿಷೇಕವಾದ ಬಳಿಕ ನಾಲ್ಕನೆಯಲ್ಲಿ ಮೂರ್ಧ್ನಿಯದ ಮೇಲೆ ಸಂಪ್ರೋಕ್ಷಣಂಗೆಯ್ವುದೊಂದುಕವೆಂಬುದೀಗ ಚತುರ್ಥದಲ್ಲಿ ಸ್ಪರ್ಶನೋದಕವೆಂಬುದರ್ಥ. ಐದನೆಯಲ್ಲಿ ಎರಡು ಹಸ್ತದೊಳಿರ್ದುದೆ ಮೂರು ವೇಳೆ ಖಂಡಿಸಿ ಉಳಿದುದ ಹಸ್ತಕ್ಕೆ ತೆಗೆದುಕೊಂಡು ಲಿಂಗಕ್ಕೆ ತೋರಿಕೊಂಬುದೊಂದುದಕವೆಂಬುದೀಗ ಪಂಚಮದಲ್ಲಿ ಅವಧಾನೋದಕವೆಂಬ ಭಾಷಾರ್ಥ. ಆರನೆಯದಲ್ಲಿ ತೃಷೆಯಾದ ಬಳಿಕ ತಟ್ಟೆ ಬಟ್ಟಲು ತಂಬುಗೆಯ ಲ್ಲಿ ಲಿಂಗಕ್ಕೆ ತೋರಿ ಎತ್ತಿ ತೆಗೆದುಕೊಂಬುದೊಂದುಕವೆಂಬುದೀಗ ಷಷ್ಠಮದಲ್ಲಿ ಆಪ್ಯಾಯನೋದಕ. ಏಳನೆಯದಲ್ಲಿ ಪ್ರಸಾದವ ಸ್ವೀಕಾರವ ಮಾಡಿದ ಬಳಿಕ ಹಸ್ತ ಬಟ್ಟಲ ಪ್ರಕ್ಷಾಲನಂಗೈಯ್ವುದಕ್ಕೆ ನೀಡಿಕೊಂಬುದೊಂದುಕವೆಂಬುದೀಗ ಸಪ್ತಮದಲ್ಲಿ ಹಸ್ತೋದಕವೆಂಬ ಶಬ್ದಕ್ಕರ್ಥ. ಎಂಟನೆಯಲ್ಲಿ ಲಿಂಗಾಂಗ ಸಮರಸಾನಂದದ ಸುಖಭೋಗವೆನಿಸುವದೊಂದುದಕವು. ಅಂತುಮಲ್ಲದೆ ಕೆರೆ, ಕಟ್ಟೆ, ಬಾವಿ, ಹಳ್ಳ, ಹೊಳೆಯಲ್ಲಿ ನಿರ್ಮಲವಾಗಿ ನಿಂದುದೊಂದುದಕವ ಕಂಡು ಸಂತೋಷಂ ಬಟ್ಟು ಬಿಡಲಾರದೆ ಒಕ್ಕುಡುತೆಯನಾದರೂ ಲಿಂಗಕ್ಕೆ ತೋರಿಕೊಂಬುದೊಂದುಕವೆಂಬುದೀಗ ಅಷ್ಟಮದಲ್ಲಿ ಪರಿಣಾಮೋದಕವೆಂಬ ಶಬ್ದಕ್ಕರ್ಥ. ಒಂಭತ್ತನೆಯಲ್ಲಿ ನಾನು ಶರಣ, ಇದು ಲಿಂಗ, ಇದು ಭಕ್ತಿ, ಎಂಬ ನಾಮ ರೂಪು ಕ್ರಿಯಾ ಕಾಯುವಳಿದೊಂದುದಕವೆಂಬುದೀಗ ನವಮದಲ್ಲಿ ನಿರ್ನಾಮೋದಕವೆಂಬ ಶಬ್ದಕ್ಕರ್ಥ. ಹತ್ತನೆಯಲ್ಲಿ ತನ್ನ ಲಿಂಗೈಕ್ಯವ ತಿಳಿದುದೊಂದುಕವೆಂಬಲ್ಲಿ ಅಂತಿಂತೆಂದು ನುಡಿಯಲಿಲ್ಲದ ಕಾರಣವೆಂಬುದೀಗ ದಶಮದಲ್ಲಿ ಸತ್ಯೋದಕವಾದಲ್ಲಿ ಉಪಮಿಸಲಿಲ್ಲದ ಕಾರಣವೆಂಬ ಶಬ್ದಕ್ಕರ್ಥ.

ಹಿಂದೆ ಹೇಳಿದ ಹತ್ತು ತೆರದ ಪಾದೋದಕದ ನಿರ್ಣಯವನರಿದುಕೊಳಬಲ್ಲ, ಕೊಡಬಲ್ಲ ಗೌರೇಶ್ವರ ನಿಮ್ಮ ಶರಣ ಪ್ರಭುವೆಂಬುದು ಶಬ್ದಾನ್ವಯವು.

## ಬೇರೆ ಬೇರೆ ಪಾದೋದಕಗಳ ಕಾರ್ಯಗಳು.

೧. ಶ್ರೀ ಗುರುಲಿಂಗ ಜಂಗಮದ ಧೂಳ ಪಾದೋದಕದಿಂದ ಸಮಸ್ತ ಲೋಕದ ಪ್ರಾಣಿಗಳ ಭವತ್ವವಳಿದು ಭೃತ್ಯ ಭಕ್ತಿ ಮಾರ್ಗವ ತೋರುವುದಯ್ಯಾ. ಶ್ರೀ ಗುರುಲಿಂಗ ಜಂಗಮದ ದೀಕ್ಷಾ ಪಾದೋದಕ ದಿಂದ ಸಮಸ್ತ ಪದಾರ್ಥಂಗಳೆಲ್ಲವ ಶಿವಗಣಪದಕ್ಕೆ ಯೋಗ್ಯವಾಗುವಂತೆ ಮಾಡುವುದಯ್ಯಾ. ಶ್ರೀ ಗುರುಲಿಂಗ ಜಂಗಮದ ಶಿಕ್ಷಾ ಪಾದೋದಕ ದಿಂದ ಬ್ರಹ್ಮನುತ್ಪತ್ತಿ, ವಿಷ್ಣುವಿನ ಸ್ಥಿತಿ, ರುದ್ರನ ಲಯು, ಈಶ್ವರನ ತಿರೋಧಾನ, ಸದಾಶಿವನ ಅನುಗ್ರಹವನು ಕೊಡುವದು. ಶಿವಶರಣ ಗಣಂಗಳ ನಿಜ ನಿವಾಸವ ತೋರುವುದಯ್ಯಾ. ಶ್ರೀ ಗುರುಲಿಂಗ ಜಂಗ ಮದ ಮಹಾ ಜ್ಞಾನ ಪಾದೋದಕದಿಂದ ಷಡ್ವಿಧ ದೀಕ್ಷಾತ್ರಯುವ ಕರು ಣಿಸಿ ಷಟ್‌ಸ್ಥಲ ಮಾರ್ಗವ ತೋರುವುದಯ್ಯಾ. ಶ್ರೀ ಗುರುಲಿಂಗ ಜಂಗ ಮದ ಹಸ್ತೋದಕ, ಪರಿಣಾಮೋದಕ, ನಿರ್ನಾಮೋದಕದಿಂದ ಷಡ್ವಿಧ ಲಿಂಗಾಂಗ ಸಮರಸಾಚರಣೆಯು ಮಾರ್ಗವ ಮೀರಿದ ಕ್ರಿಯಾ ಜ್ಞಾನವ ತೋರುವುದಯ್ಯಾ. ಶ್ರೀ ಗುರುಲಿಂಗ ಜಂಗಮದ ಸತ್ಯೋದಕ ಕರುಣ ಜಲ ವಿನಯು ಜಲ ಸಮತಾ ಜಲದಿಂದ ಸಮಸ್ತ ಪ್ರಮಥ ಗಣಂಗಳೆಲ್ಲ ಜ್ಯೋತಿರ್ಮಯುರಾದವು ನೋಡಾ. ಅದೆಂತೆಂದೊಡೆ ಸಾ|| ಅಂಗುಷ್ಠಾಗ್ರೇ ಅಷ್ಟಾಷಷ್ಟಿ ತೀರ್ಥಾನಿ ನಿತ್ಯ ಸಂತಿ ವೈ। ಸಪ್ತಸಾಗರ ಪಾದಾರ್ಥೆ ತದರ್ಥ ಕುಲ ಪರ್ವತಃ ॥ ಸಪ್ತ ಸಾಗರ ಪರ್ಯಂತಂ ತೀರ್ಥ ಸ್ನಾನ ಫಲಂ ಯಥಾ । ಗುರೋರಂಘ್ರಿ ಜಲೇ ಬಿಂದು ಸಹಸ್ರಾಂಶೇನ ಪೂರಯೇತ್ ॥ ಪಾದೋದಕ ಪರಬ್ರಹ್ಮಂ ನಿರ್ಮಲಂ ಅಘನಾಶನಂ । ಅಜಡಂ ಜಡ ಮಿಚ್ಛಂತಿ ಸ ಪಾಪಿ ಬ್ರಹ್ಮಘಾತಕಃ ॥ ಭವ ಭೂಜ ಕುಠಾರಾಯು ರೋಗ ಪಂಕಸ್ಯ ಭಾನುವೆ ॥ ಆಪ್ಯಾಯುನಂ ವಜ್ರಾಯು ಪಾದ ತೀರ್ಥಾಯು ತೇ ನಮಃ ॥ ಇಂತೆಂದುದಾಗಿ ಶ್ರೀ ಗುರುಲಿಂಗ ಜಂಗಮದ ಪಾದೋ ದಕವೇ ಪರಮಾರಾಧ್ಯ ಶರಣ ಗಣಂಗಳಾಚಾರ ಸಂಪದಕ್ಕೆ ಪರಬ್ರಹ್ಮ ಜ್ಯೋತಿರ್ಮಯು ವಸ್ತು ನೋಡಾ ಸಂಗನ ಬಸವೇಶ್ವರಾ

# ಪಾದೋದಕ ವಿಧಿ.

೧. ಚನ್ನಬಸವೇಶ್ವರ ದೇವರು ನಿರೂಪಿಸಿದ ದಶವಿಧ ಪಾದೋದಕದ ನಿರ್ಣಯದ ವಚನವ ಬರೆವುದಕ್ಕೆ ಶುಭವುಸ್ತು.

ದೀಕ್ಷಾ ಪಾದೋದಕ, ಶಿಕ್ಷಾ ಪಾದೋದಕ, ಜ್ಞಾನ ಪಾದೋದಕವೆಂದು ಮೂರು ತೆರನುಂಟು. ಅದೆಂತೆಂದೊಡೆ:—

## ದೀಕ್ಷಾಪಾದೋದಕ.

ಅಡಿ ಪಾದದಿಂದೆ ಮೂರು ವೇಳೆ ಸ್ಪರ್ಶನವ ಮಾಡಿಕೊಳ್ಳುವುದೇ ಧೂಳ ಪಾದೋದಕವು, ಅದೇ ದೀಕ್ಷಾ ಪಾದೋದಕವೆನಿಸುವುದು. ಅದರಿಂದೆ ಜಳಕ ಮುಖ ಪ್ರಕ್ಷಾಲನ ಅಭಿಷೇಕವ ಮಾಡಿಕೊಂಬುವುದು. ಇದಕ್ಕೆ ಸಾಕ್ಷಿ. ಶಿವಾಗಮೇ॥ ವ॥ ಚೀಪ್ಸ್ಪಟಂತು ಗಿರಿಜಾನಾಂ। ಪಾನೀಯಾತ್ ಕದಾಚನ॥ ಸ್ನಾತವ್ಯಂ ಮೂರ್ಧ್ನಿ ದಂತವ್ಯ। ಪ್ರೋಕ್ಷಿತವ್ಯಂ ಚಾಂಗಾಯ ಎಂದುದಾಗಿ, ಈ ರೀತಿಯಲ್ಲಿ ನಡೆಯಬಲ್ಲರೆ ಆತನೇ ಅಚ್ಚ ಶರಣನೆಂಬೆ ಕೂಡಲ ಚನ್ನಸಂಗಮದೇವಾ.

ಧೂಳ ಪಾದೋದಕವೆಂದರೂ, ಗುರು ಪಾದೋದಕವೆಂದರೂ, ದೀಕ್ಷಾ ಪಾದೋದಕವೆಂದರೂ ಮೂರೂ ಒಂದೇ ನಾಮವು. ಇದಕ್ಕೆ ವಿವರ. ಭಾಜನದಲ್ಲಿ ಅಗ್ಗವಣಿಯ ತೆಗೆದುಕೊಂಡು ಬಂದು ಪಾದೋದಕವ ಮಾಡಿಕೊಂಬುವಂಥ ಭಕ್ತನು ತನ್ನ ಎಡದ ಹಸ್ತದಿಂದ ಆ ಜಂಗಮದ ಮೂರ್ತಿಯ ಪಾದವನ್ನು ಹಿಮ್ಮಡದಿಂದ ಮೇಲಕ್ಕೆ ಹಿಡಿದುಕೊಂಡು ತನ್ನ ಬಲ ಹಸ್ತವನು ಅಗ್ಗವಣಿಯೊಳಗೆ ಮಡಗಿ, ಆ ಜಂಗಮ ಮೂರ್ತಿಯ ಹಿಮ್ಮಡದಿಂದ ತುದಿ ಅಂಗುಷ್ಠದ ಪರಿಯಂತರ ಸ್ಪರ್ಶನವ ಮಾಡಿಕೊಂಬುವಂಥಾದ್ದೇ ಗುರುಪಾದೋದಕವೆನಿಸುವುದು. ಹೀಗೆ ಮೂರು ವೇಳೆ ಮಾಡಿದಲ್ಲಿಗೆ ಲಿಂಗ ಪಾದೋದಕ, ಜಂಗಮ ಪಾದೋದಕವೆನಿಸುವುದು. ನಾಲ್ಕನೇ ವೇಳೆಯಲ್ಲಿ ಐದಂಗುಲಿಯ ಸ್ಪರ್ಶನವ ಮಾಡಿದಲ್ಲಿಗೆ ಅವಧಾನೋದಕವಾಗುವುದು. ಆ ಪಾದಗಳನು ನಮಸ್ಕರಿಸಿ ದ್ರವವ ತೆಗೆದಲ್ಲಿಗೆ ಆಪ್ಯಾಯನೋದಕವಾಗುವುದು. ಅದೇ ಉದಕವ ತಾನು ತೆಗೆದುಕೊಂಡು ಲಿಂಗವನ್ನು ಹಸ್ತದಲ್ಲಿ ಮೂರ್ತವ ಮಾಡಿ

ಕೊಂಡು, ಆ ಲಿಂಗದ ಮಸ್ತಕದ ಮೇಲೆ ನೀಡಿದಲ್ಲಿಗೆ ಹಸ್ತೋದಕವಾಗುವುದು. ಅದೇ ಲಿಂಗೋದಕವನ್ನು ಮುಖ ಪ್ರಕ್ಷಾಲನವ ಮಾಡಿದಲ್ಲಿಗೆ ಪರಿಣಾಮೋದಕವಾಗುವುದು. ಆ ಉಳಿದ ಉದಕದಿಂದ ದಂತ ಜಿಹ್ವೆ ಮುಕ್ಕಳಿಸಿದಲ್ಲಿಗೆ ನಿರ್ನಾಮೋದಕವಾಗುವುದು. ತಾನು ಮುಖಮಜ್ಜನ ಜಳಕವನ್ನು ಮಾಡಿಕೊಂಡು ಆಚೆಗೆ ತಾ ನೆನೆದಲ್ಲಿಗೆ ಸತ್ಯೋದಕವೆನಿಸುವುದು. ಈ ಹತ್ತು ಉದಕವು ದೀಕ್ಷಾ ಪಾದೋದಕದಲ್ಲಿ ಸಂಬಂಧವೆಂದರಿದು ಆಚರಿಸಿದಾದನೇ ನಿತ್ಯ ಮುಕ್ತನು ಕಾಣಾ ಕೂಡಲ ಚನ್ನ ಸಂಗಮದೇವಾ.

## ಶಿಕ್ಷಾ ಪಾದೋದಕ.

ಪಾದ ಪೂಜೆಯು ಮಾಡಿ ಅಂಗುಷ್ಠ ಎರಡು, ಅಂಗುಲಿ ಎಂಟು ಉಭಯ ಹತ್ತಿರಲ್ಲಿ ಮಾಡಿಕೊಂಬುವುದೇ ಶಿಕ್ಷಾಪಾದೋದಕ. ಇದಕ್ಕೆ ಸಾಕ್ಷಿಃ— ಯೋಗಜಾಗಮೆ ॥ ಲಿಂಗಧಾರೀ ಮಹಾಯೋಗೀ । ಚರಪಾದೋದಕ ವಿನಾ। ದಿನೇನ ದಶಜನ್ಮಾನಿ । ಮಾಸೇನ ಶತಜನ್ಮಾನಿ । ವರ್ಷೇ ಸಹಸ್ರ ಜನ್ಮಾನಿ । ವರುಷಾರ್ಧ ಘೂಕವಾಯುಸಃ ॥ ದ್ವಿವರುಷೆ ಸೂಕರೆ ಗರ್ಭೇ । ಜಾಯತೆ ನಾತ್ರ ಸಂಶಯಃ ॥ ಎಂದುಂಟಾಗಿ ಆ ಶಿಕ್ಷಾಪಾದೋದಕವನೇ ವಿಭೂತಿಯಲ್ಲಿ ಸಮ್ಮಿಶ್ರವಂ ಮಾಡಿ ಲಲಾಟ ಮೊದಲಾದ ನಾಲ್ವತ್ತೆಂಟು ಸ್ಥಾನಂಗಳಲ್ಲಿ ಧಾರಣವ ಮಾಡುವುದು. ಇದು ವೀರ ಶೈವರಿಗೆ ಸಲ್ಲುವ ನಡತೆಯು. ಶುದ್ಧ ಶೈವರಿಗೆ ಗಿಂಡಿಯಲ್ಲಿ ತುಂಬುವ ನಡತೆಯು. ವಿಶೇಷ ವೀರಶೈವರು ಗಿಂಡಿಯು ಮಡಗಲಾಗದು. ಏನು ಕಾರಣವೆಂದರೆ, ಅವರಿಗೆ ಮೂರು ಪಾದೋದಕವು ನಿತ್ಯದಲ್ಲಿ ಸಂಬಂಧ ವಾಗುವದು ಎಂದು ಅರಿದಾಚರಿಸುವಂಥಾತನೇ ನಿತ್ಯ ಮುಕ್ತನಯ್ಯ ಕೂಡಲಚನ್ನಸಂಗಮದೇವಾ.

ಎರಡು ಅಂಗುಷ್ಠ ಎಂಟು ಅಂಗುಲಿಗಳಿಂದ ಮಾಡಿದಂಥ ಶಿಕ್ಷಾ ಪಾದೋದಕದಲ್ಲಿ ಹತ್ತು ಪ್ರಕಾರವಾಗುವವು. ಅದಕ್ಕೆ ವಿವರಃ— ವೀರ ಶೈವ ಸಂಪನ್ನರಾದ ಸದ್ಭಕ್ತ ಶರಣ ಗಣಂಗಳಾದರೂ ವೀರ ಮಾಹೇಶ್ವರರಾದರೂ ಕ್ರಿಯಾಪಾದೋದಕ ಮಾಡಬೇಕಾದರೆ, ತನ್ನ ಎರಡು ಅಂಗುಲಿಗಳಿಂದ ಆ ಮಾಹೇಶ್ವರರ ಎರಡು ಅಂಗುಷ್ಠ ಎಂಟು ಅಂಗುಲಿಗಳಲ್ಲಿ ತರ್ಜನಿಯು ಬೆರಳಿನಿಂದ ಬಲದ ಪಾದಾಂಗುಷ್ಠದ ಮೇಲೆ

ಮೂರು ವೇಳೆ ಸ್ಪರ್ಶನವ ಮಾಡಿ, ನಾಲ್ಕನೆಯ ವೇಳೆಗೆ ಅದೇ ಬಲದ ಪಾದದ ನಾಲ್ಕು ಬೆರಳುಗಳನ್ನು ಒಂದೇ ವೇಳೆ ಸ್ಪರ್ಶನವ ಮಾಡಿದಡೆ ಗುರುಪಾದೋದಕವೆನಿಸುವುದು. ಇದೇ ರೀತಿಯಲ್ಲಿ ಎಡದ ಪಾದವ ಮಾಡಿದಲ್ಲಿಗೆ ಲಿಂಗೋದಕವೆನಿಸುವುದು. ಈ ಎರಡರ ಕೂಟವೇ ಜಂಗಮ ಪಾದೋದಕವೆನಿಸುವುದು. ತನ್ನ ಹಸ್ತದಿಂದ ಪಾದವ ಮುಟ್ಟಿ ಮಾಡಿ ದಂಥಾದ್ದೇ ಸ್ಪರ್ಶನೋದಕವೆನಿಸುವುದು. ಆ ಪಾದದ ಮೇಲಣ ದ್ರವವ ತೆಗೆದಂಥಾದ್ದೇ ಅವಧಾನೋದಕವೆನಿಸುವುದು. ಅದರ ಮೇಲಣ ಅಪೇಕ್ಷೆ ಮುಂದುಗೊಂಡು ತಾನು ಮಾಡಿಕೊಂಡಂಥಾದ್ದೇ ಆಪ್ಯಾಯನೋದಕ ವೆನಿಸುವುದು. ಹಸ್ತದಿಂದ ಮುಟ್ಟಿ ಮಾಡಿದಂಥಾದ್ದೇ ಹಸ್ತೋದಕವೆ ನಿಸುವುದು. ಆ ಭಾಜನವ ತನ್ನ ಕೈಯ್ಯಲ್ಲಿ ತೆಗೆದುಕೊಂಡು ಆ ಜಂಗ ಮಕ್ಕೆ ನಮಸ್ಕರಿಸುವಂಥಾದ್ದೇ ನಿರ್ವಾಣೋದಕವೆನಿಸುವುದು. ಆ ಜಂಗ ಮಕ್ಕೆ ತಾಂ ನಮಸ್ಕರಿಸಿ ಆ ಭಾಜನವನ್ನು ತನ್ನ ಕ್ರಿಯಕ್ಕೆ ಇಟ್ಟು ಕೊಂಡಂಥಾದ್ದೇ ಸತ್ಯೋದಕವೆನಿಸುವುದು. ಈ ಪ್ರಕಾರದಲ್ಲಿ ಹತ್ತು ಪಾದೋದಕವು ಶಿಕ್ಷಾಪಾದೋದಕದಲ್ಲಿ ಆಗುವವು ಎಂದು ಅರಿದಾಚ ರಿಸುವುದು. ಆಚರಿಸಲಾಗದೆಂಬ ಹುಚ್ಚು ಮಾನವರನೇನೆಂಬೆನಯ್ಯ ಕೂಡಲಚನ್ನಸಂಗಮದೇವಾ.

## ಜ್ಞಾನಪಾದೋದಕ.

ಜ್ಞಾನಪಾದೋದಕದಲ್ಲಿ ಮೂರು ಸಂಬಂಧವಾಗುವವು. ಅದೆಂ ತೆಂದೊಡೆ ಮಹಾಂತನ ಪಾದವನ್ನು ಪಡೆದುಕೊಂಬಂಥ ಭಕ್ತನು ಆ ಮಾಹೇಶ್ವರನ ಉನ್ನತಾಸನದಲ್ಲಿ ಮೂರ್ತಗೊಳಿಸಿ ಪಾದಪ್ರಕ್ಷಾಲ ನೆಯ ಮಾಡಿದ ನಂತರದಲ್ಲಿ ದೀಕ್ಷಾಪಾದೋದಕವ ಮಾಡಿ, ಶುಭ್ರ ವಸ್ತ್ರದಿಂದ ದ್ರವವ ತೆಗೆದು ಅಷ್ಟವಿಧಾರ್ಚನೆಯಿಂದ ಲಿಂಗಪೂಜೆಯ ಮಾಡಿಸಿ ಮರಳಿ ತಾನು ಶ್ಲೋ॥ ಚೈತನ್ಯಂ ಶಾಶ್ವತಂ ಶಾಂತಂ। ವ್ಯೋಮಾತೀತಂ ನಿರಂಜನಂ। ನಾದ ಬಿಂದು ಕಲಾತೀತಂ। ತಸ್ಮೈ ಶ್ರೀಗುರವೇ ನಮಃ॥ ಎಂದು ಅಷ್ಟಾಂಗಯುಕ್ತನಾಗಿ ವಂದನಂಗೈದು ಪಾದಪೂಜೆಗೆ ಅಪ್ಪಣೆಯಂ ತೆಗೆದುಕೊಂಡು, ಅವರ ಸಮ್ಮುಖದಲ್ಲಿ ಗದ್ದುಗೆಯ ಹಾಕಿಕೊಂಡು, ಅದರ ಮೇಲೆ ಮೂರ್ತವ ಮಾಡಿಕೊಂಡು, ತನ್ನ ಲಿಂಗವ ನಿರೀಕ್ಷಿಸಿ ವಾಮ ಹಸ್ತದಲ್ಲಿ ನಿರಂಜನ ಪ್ರಣಮವ

ಲಿಖಿಸಿ, ಪೂಜೆಯು ಮಾಡಿ, ಆ ಮೇಲೆ ಜಂಗಮದ ಪಾದವ ಹಿಡಿದು ಪೂಜೆಯು ಮಾಡಿ, ಆ ಪೂಜೆಯು ನಿಳುಹಿ, ಆದೇ ಉದಕದ ಪಾತ್ರೆಯಲ್ಲಿ ಶಿಕ್ಷಾಪಾದೋದಕವ ಮಾಡಿ, ಪಾದದ ದ್ರವವ ತೆಗೆದು, ಐದಂಗುಲಿಗಳಲ್ಲಿ ಪಂಚಾಕ್ಷರವ ಲೇಖನವ ಮಾಡಿ, ಮಧ್ಯದಲ್ಲಿ ಮೂಲ ಪ್ರಣಮವ ಬರೆದು, ಅಷ್ಟವಿಧಾರ್ಚನೆ ಷೋಡಶೋಪಚಾರದಿಂದ ಪೂಜೆಯು ಮಾಡಬೇಕಾದರೆ ಶಿವಧರ್ಮೋತ್ತರೆ, ಗ್ರಂಥ ॥ ಲಿಂಗಾರ್ಪಿತ ಪ್ರಸಾದಂಚ। ಚರಲಿಂಗಕೆ। ನರದ್ಯಾಚಪಾರ್ಪಿತ ಪ್ರಸಾದಂಚ ಸದ್ಯಾಚ್ಚಲಿಂಗಾಯ ॥ ಶಿವರಹಸ್ಯೆ ॥ ಅನಾದಿ ಜಂಗಮಶ್ಚೈವ। ಆದಿ ಲಿಂಗಸ್ಥಲಂ ಭವೇತ್। ಅನಾದಿ ಸ್ಥಾವರೋದೇವ। ಇಷ್ಟೋಚ್ಛಿಷ್ಟಂತು ಕಿಲ್ಬಿಷಂ। ಎಂದುದಾಗಿ ಲಿಂಗಕ್ಕೆತೋರಿ ಪಾದವ ಪೂಜಿಸಲಾಗದು. ಅದೆಂತೆಂದೊಡೆ ಗುರುವಿಂಗೂ ಲಿಂಗಕ್ಕೂ ಚೈತನ್ಯ ಸ್ವರೂಪು ಜಂಗಮವಾದ ಕಾರಣ ಆ ಜಂಗಮದ ಪ್ರಸಾದವ ಲಿಂಗಕ್ಕೆ ತೋರಬೇಕಲ್ಲದೆ ಲಿಂಗಪ್ರಸಾದವ ಪಾದಕ್ಕೆ ತೋರಲಾಗದು. ಅದೇನು ಕಾರಣವೆಂದಡೆ:— ಗುರು, ಲಿಂಗ, ಜಂಗಮಕ್ಕೆ ಅನಾದಿ ಜಂಗಮವೇ ಚೈತನ್ಯ ಸ್ವರೂಪವಾದ ಕಾರಣ ಆ ಜಂಗಮವೇ ಮುಖ್ಯ ಸ್ವರೂಪು. ಇಂತಪ್ಪ ಜಂಗಮಪಾದವೇ ಪರಬ್ರಹ್ಮಕ್ಕೆ ಆಧಾರವಾಗಿಹುದು. ಆ ಪಾದವಂ ಬಿಟ್ಟು ಪರವ ಕಂಡುದಿಲ್ಲವೆಂದು ಶ್ರುತಿ ಪೊಗಳುತ್ತಿರ್ದ ಕಾರಣ ಇಂತಪ್ಪ ಚರಮೂರ್ತಿಯ ಶ್ರೀಪಾದವನ್ನು ಅಷ್ಟವಿಧಾರ್ಚನೆ ಷೋಡಶೋಪಚಾರದಿಂದ ಅರ್ಚಿಸಿದಂಥಾದ್ದೇ ಲಿಂಗ ಪೂಜೆ.

ಆಮೇಲೆ ಆ ಮೂರ್ತಿಯ ಉಭಯ ಪಾದಗಳ ಹಿಮ್ಮಡ ಸೋಂಕುವಂತೆ ಹಸ್ತವ ಮಡಗಿ, ಲಲಾಟವ ಮುಟ್ಟಿ ನಮಸ್ಕರಿಸಿ, ಆ ಪೂಜೆಯು ನಿಳುಹಿ, ಆ ಶಿಕ್ಷಾ ಪಾದೋದಕವನ್ನು ಬಲದಂಗುಷ್ಠದ ಮೇಲೆ ಷಡಕ್ಷರ ಮಂತ್ರವ ಆರು ವೇಳೆ ಸ್ಮರಿಸುತ್ತ ನೀಡಿ, ಅಲ್ಲಿ ಇಷ್ಟಲಿಂಗವೆಂದು ಭಾವಿಸಿ, ಎಡದಂಗುಷ್ಠದ ಮೇಲೆ ಪಂಚಾಕ್ಷರೀ ಮಂತ್ರವ ಐದು ವೇಳೆ ಸ್ಮರಿಸುತ್ತ ನೀಡಿ, ಅಲ್ಲಿ ಪ್ರಾಣಲಿಂಗವೆಂದು ಭಾವಿಸಿ, ಮಧ್ಯದಲ್ಲಿ ಓಂ ಬಸವಾಯ ನಮಃ ಎಂದು ಒಂದು ವೇಳೆ ಒಂದು ಪುಷ್ಪವ ಧರಿಸಿ ಸ್ಮರಿಸುತ್ತ ನೀಡಿ, ಅಲ್ಲಿ ಭಾವಲಿಂಗವೆಂದು ಭಾವಿಸಿ, ನೀಡಿದ ಉದಕವೇ ಬಟ್ಟಲಲಿ ನಿಂದು ಮಹತ್ಪಾದವೆಂದೆನಿಸುವುದು. ಈ ಮಹತ್ಪಾದದಲ್ಲಿ ಪಾದದ ದ್ರವವ ತೆಗೆದು ಮತ್ತೆ ಪೂಜೆಯು ಮಾಡಬೇಕಾದರೆ, ಬಹು

ಪುಷ್ಪವ ಧರಿಸದೆ ಒಂದೇ ಪುಷ್ಪವ ಧರಿಸಬೇಕು. ಅದೇನು ಕಾರಣವೆಂದಡೆ, ಪಶ್ಚಿಮ ಚಕ್ರದಲ್ಲಿ ಸಂಬಂಧವಾದ ನಿರಂಜನ ಜಂಗಮಕ್ಕೆ ಏಕದಳವನುಳ್ಳ ಒಂದೇ ಪುಷ್ಪವೇ ಮುಖ್ಯವಾದ ಕಾರಣ. ಏಕ ಕುಸುಮವನೇ ಧರಿಸಿ ಪೂಜೆಯ ಮಾಡಿ ನಮಸ್ಕರಿಸುವುದೇ ಜಂಗಮ ಪೂಜೆ.

ಆ ಪೂಜೆಯ ತೆಗೆದಂಥ ಶಿಷ್ಯನು ಶರಣಾರ್ಥಿ ಸ್ವಾಮಿ ಎಂದು ಬಟ್ಟಲವನೆತ್ತಿಕೊಟ್ಟಲ್ಲಿ ಕರ್ತೃವಾದಂಥ ಜಂಗಮವು ಆ ಬಟ್ಟಲಲ್ಲಿರ್ದಂಥ ತೀರ್ಥವನ್ನು ತಮ್ಮ ಪಂಚಾಂಗುಲಿಗಳೇ ಪಂಚ ಪ್ರಣವುವೆಂದು ಭಾವಿಸಿ ಮೂಲ ಮಂತ್ರದಿಂದ ಮೂರು ವೇಳೆ ಪ್ರದಕ್ಷಿಣವ ಮಾಡಿ ನಮಸ್ಕರಿಸಿ ಲಿಂಗದ ಮಸ್ತಕವ ಮೇಲೆ ಮೂರು ವೇಳೆ ಪಂಚಾಂಗುಲಿಗಳಿಂದೆ ಚತುರಂಗುಲ ಪ್ರಮಾಣದಲ್ಲಿ ಲಿಂಗವ ಮುಟ್ಟದೆ ನೀಡಿ, ಆ ಪಂಚಾಂಗುಲಿಗಳನ್ನು ತಮ್ಮ ಜಿಹ್ವೆಯಲ್ಲಿ ಸ್ವೀಕರಿಸುವಲ್ಲಿ ಗುರುಪಾದೋದಕವೆನಿಸುವುದು. ಅದೇ ದೀಕ್ಷಾ ಪಾದೋದಕವೆನಿಸುವುವು. ತಾವು ಲಿಂಗವನೆತ್ತಿ ಸಲಿಸಿದ್ದೇ ಲಿಂಗಪಾದೋದಕವೆನಿಸುವುದು. ಅದೇ ಶಿಕ್ಷಾ ಪಾದೋದಕವೆನಿಸುವುದು. ಬಟ್ಟಲವೆತ್ತಿ ಸಲಿಸಿದಲ್ಲಿ ಜಂಗಮ ಪಾದೋದವೆನಿಸುವುದು. ಅದೇ ಜ್ಞಾನ ಪಾದೋದಕವು.

ಈ ರೀತಿಯಲ್ಲಿ ಮಾಹೇಶ್ವರನು ಸಲಿಸಿದ ಬಳಿಕ, 'ಶರಣಾರ್ಥಿ ಎಂದು ಶಿಷ್ಯೋತ್ತಮನು ಎದ್ದು, ಗ್ರಂ॥ ಲಲಾಟಂ ಚ ಭುಜ ದ್ವಂದ್ವಂ ಪಾಣಿಯುಗ್ಮಂ ಉರಸ್ತಥಾ । ಅಂಗುಷ್ಠ ಯುಗಳಂ ಪ್ರೋಕ್ತಂ । ಪ್ರಣಮ್ಯಾಷ್ಟಾಂಗ ಮುಚ್ಯತೆ ॥ ಎಂದು ಭೃತ್ಯೋಪಚಾರಗಳಿಂದ ಪ್ರಣುತಂಗೈದು ಅಪ್ಪಣೆಯ ತೆಗೆದುಕೊಂಡು ಬಂದು, ಆ ಜಂಗಮದ ಮರ್ಯಾದೆಯಲ್ಲಿಯೇ ತಾನು ಸ್ವೀಕರಿಸುವುದು.

ಇದೇ ರೀತಿಯಲ್ಲಿ ಗುರುಶಿಷ್ಯರೀರ್ವರು ಸಮರಸ ಭಾವದಿಂದ ಸೇವನೆ ಮಾಡಿದಲ್ಲಿ ಆ ಶಿಷ್ಯೋತ್ತಮನೇ ನಿಜ ತಚ್ಛಿಷ್ಯನಾದ ಕಾರಣ ಗುರುವೇ ಶಿಷ್ಯ, ಶಿಷ್ಯನೇ ಗುರುವು ಈ ಎರಡರ ಮರ್ಮವು ಆದ ಬಗೆ ಹೇಗೆಂದಡೆ, ಆ ಶಿಷ್ಯನು ಪಡೆದುಕೊಂಡಂಥ ಪಾದೋದಕವನು ಈ ಗುರುವು ಭಕ್ತಿ ಮುಖದಿಂದ ತೆಗೆದುಕೊಂಡಲ್ಲಿ ಗುರುವೇ ಶಿಷ್ಯನಾಗಿರ್ಪನು. ಆ ಗುರುವು ಸೇವನೆಯ ಮಾಡಿ ಉಳಿದ ಉದಕವನ್ನು ಭಕ್ತಿ ಭಾವದಿಂದ ಶಿಷ್ಯ ಸೇವನೆ ಮಾಡಿದಲ್ಲಿಗೆ ತಚ್ಛಿಷ್ಯನಾದನು. ಈ ಮರ್ಮ

ವನ್ನು ತಿಳಿದು ಗುರು ಶಿಷ್ಯರೀರ್ವರು ಸಲಿಸಿದ ಬಳಿಕ, ಕೆಲವು ಭಕ್ತ ಮಾಹೇಶ್ವರರು ಸಲಿಸುವುದು. ಇನ್ನು ನಿಚ್ಚ ಪ್ರಸಾದಿಗಳು, ಸಮಯ ಪ್ರಸಾದಿಗಳು ಆಯಾಯ ತತ್ಕಾಲದಲ್ಲಿ ತ್ರಿವಿಧೋದಕವಾಗಿರುವುದು. ಇದೇ ಆಚರಣೆ. ಇದನರಿಯದಾಚರಿಸುವವರಿಗೆ ನಿಮ್ಮ ನಿಲವನರಿಯ ಬಾರದು ಕಾಣಾ ಕೂಡಲ ಚನ್ನ ಸಂಗಮದೇವಾ.

ಬಟ್ಟಲೊಳಗಣ ಉದಕವ ತೆಗೆದುಕೊಂಡು ಲಿಂಗದ ಮೇಲೆ ನೀಡಿ ತಾವು ಜಿಹ್ವೆಯಲ್ಲಿ ಸ್ವೀಕರಿಸಿದಲ್ಲಿಗೆ ಗುರುಪಾದೋದಕವಾಗುವುದು. ಮೊದಲು ಸಲಿಸಿದ ಗುರುಪಾದೋದಕದಿಂದ ಯಾವ ಪದವಿಯಾಗುವು ದೆಂದರೆ, ಧರೆಯ ಜನನದ ಅಜ್ಞಾನ ಭವತ್ವವಳಿದು ಶಿವ ಜ್ಞಾನವ ಕರು ಣಿಸಿ ಕೊಡುವುದು. ಲಿಂಗ ಪಾದೋದಕದಿಂದ ಯಾವ ಪದವಿಯಾಗು ವುದೆಂದರೆ, ಇಹಲೋಕದ ತನುಭೋಗವಪ್ಪ ಪ್ರಾರಬ್ಧಕರ್ಮವಳಿವುದು. ಶಿವಲೋಕದಲ್ಲಿ ಇತ್ತ ಬಾ ಎಂದೆನಿಸಿಕೊಂಬ ಮನ್ನಣೆಯ ಪದವಿಯಾಗು ವುದು. ಆ ಬಟ್ಟಲೆತ್ತಿ ಸಲಿಸಿದ ಜಂಗಮ ಪಾದೋದಕದಿಂದ ಯಾವ ಪದವಿಯಾಗುವುದೆಂದಡೆ, ಇಹ ಪರಕ್ಕೆ ಎಡೆಯಾಡುವ ಅವಸ್ಥೆಗಳನು ಪರತತ್ವವಾದ ಜಂಗಮವನು ಐಕ್ಯತ್ವವಾಗಿ ಅಳವಡಿಸಿಕೊಂಡಿಪ್ಪನು. ಇಲ್ಲಿಗೆ ಗುರು ಪಾದೋದಕ ಲಿಂಗ ಪಾದೋದಕ ಜಂಗಮ ಪಾದೋದಕ ಈ ತ್ರಿವಿಧೋದಕವು ಆದವು. ಆ ಉಳಿದ ಏಳು ಉದಕದೊಳಗೆ ಸ್ಪರ್ಶ ನೋದಕ, ಅವಧಾನೋದಕ, ಇವೆರಡು ಆ ಲಿಂಗದ ಮಸ್ತಕದ ಮೇಲೆ ನೀಡಿ ಅಂಗುಲಿಗಳ ಜಿಹ್ವೆಯಲ್ಲಿ ಇಟ್ಟುಕೊಂಡಂಥ ಗುರುಪಾದೋದಕ ದಲ್ಲಿ ಸಂಬಂಧವು. ಆಪ್ಯಾಯನೋದಕ, ಹಸ್ತೋದಕ ಇವೆರಡು ಲಿಂಗ ವೆತ್ತಿ ಸಲಿಸಿದಂಥ ಲಿಂಗಪಾದೋದಕದಲ್ಲಿ ಸಂಬಂಧವು. ಪರಿಣಾಮೋ ದಕ, ನಿರ್ನಾಮೋದಕ ಇವೆರಡು ಬಟ್ಟಲವೆತ್ತಿ ಸಲಿಸಿದಂಥ ಜಂಗಮ ಪಾದೋದಕದಲ್ಲಿ ಸಂಬಂಧವು. ಸತ್ಯೋದಕ ಬಟ್ಟಲ ಖಂಡಿತ ಮಾಡಿ ದಲ್ಲಿಗೆ ಸಂಬಂಧವು. ಇವು ಹತ್ತು ಪಾದೋದಕವು ಮಹತ್ಪಾದದಲ್ಲಿ ಸಂಬಂಧವು. ಧೂಳ ಪಾದೋದಕ ಹತ್ತುದಕವು ಸಂಬಂಧವು ಕ್ರಿಯಾ ಪಾದೋದಕದಲ್ಲಿ ನೋಡಾ ಕೂಡಲ ಚನ್ನ ಸಂಗಮದೇವಾ.

ಇದರ ಮರ್ಮವನು ಶಿವಾನುಭಾವಿಗಳಾದ ಜ್ಞಾನ ಜಂಗಮಗಳಿಗೆ ತಿಳಿವುದು. ಅವರಿಂದ ಉಪದೇಶ ಪಡೆದ ಸದ್ಭಕ್ತ ಶರಣ ಗಣಂಗಳು

ಅದರ ಮರ್ಮವನರಿದು ಆಚರಿಸುವುದು. ಇದರ ಮರ್ಮವು ಪುರಾತನರ ವಾಕ್ಯಕ್ಕೆ ಸಮಾನವಾಗಿ ಆಚರಣೆಗೈದಲ್ಲಿ ಇಪ್ಪುದಲ್ಲದೆ, ಬೇರೆ ಇರಲಾರದು. ಅಲ್ಲಿದ್ದರೂ ಭಿನ್ನವಾಗಿಪ್ಪುದಲ್ಲದೆ ಪುರಾತನರ ವಾಕ್ಯಕ್ಕೆ ಸಮಾನವಾಗಿ ಆಚರಣೆಗೆ ಕೊರತೆ ಬಾರದ ಹಾಗೆ ಇರುವುದು. ಅದೇನು ಕಾರಣವಾಗಿ, ಈ ಕವಿಗಳು ಹೇಳಿದ ಶ್ರುತಿಮತಿ ವಾಕ್ಯಕ್ಕು ನಮ್ಮ ಪುರಾತನರು ನಿರೂಪಿಸಿದ ಪ್ರಸಾದ ವಾಕ್ಯಕ್ಕು ಅಜಗಜನ್ಯಾಯವು. ಅದು ಹೇಗೆಂದಡೆ ನಮ್ಮ ಪುರಾತನರ ಪ್ರಸಾದ ವಾಕ್ಯದಲ್ಲಿ ತ್ರಾಸಿನ ಬಟ್ಟಿಲದ ಲೋಕದ ನಾಣ್ನುಡಿಗಳಲ್ಲಿ ಇಲ್ಲ. ತಥಾಪಿ ಇದ್ದರೂ ಶ್ರುತಿ ಮತಿ ಜ್ಞಾನ ಗುಂಡಿನೋಪಾದಿಯಲ್ಲಿ ನಡೆ ನುಡಿ ಒಂದಣು ಮಾತ್ರ ಕುಂದು ಬಾರದ ಹಾಗೆ ಹೆಚ್ಚು ಕುಂದಿಲ್ಲದೆ ಸಮಾನವಾಗಿರುವುದು. ಇದು ಅಚ್ಚ ಪ್ರಸಾದಿ ನಿಚ್ಚ ಪ್ರಸಾದಿ ಸಮಯ ಪ್ರಸಾದಿಗಳಾದ ಸದ್ಭಕ್ತ ಶರಣಗಣಂಗಳಿಗೂ, ಸನ್ಮತರಪ್ಪ ಜ್ಞಾನಿಗಳಾದ ಶಿವಾನುಭಾವಿಗಳಿಗೂ ಸಂತೋಷ. ಶ್ರುತಿ ಜ್ಞಾನಿಗಳಿಗೆ ಅಹುದೋ ಅಲ್ಲವೊ ಎಂಬಂಥ ಸಂಕಲ್ಪ ಉಂಟಾದ ನಿಮಿತ್ಯ ಅವರಿಗೆ ಶ್ರುತಿ ಬಲವು ಹೆಚ್ಚಾಗಿರುವುದು. ಅದು ಕಾರಣ ಮನಸ್ಸು ಸ್ಥಿರವಾಗಿ ನಿಲ್ಲದು. ಮಾತಿನ ಚಪಲತ್ವ ಬಿಡದು. ಜಾರ ಸ್ತ್ರೀಯೋಪಾದಿಯಲ್ಲಿ ವಾಕ್ಯ ಚಾಪಲ್ಯದಿಂದ ಸಮಸ್ತ ಶಾಸ್ತ್ರವನ್ನು ಹೇಳಿ ಬಾಯ ಬಡಿವುತ್ತ ಈ ಶ್ರುತಿ ವಾಕ್ಯವ ನುಡಿಯಲಿಲ್ಲವೇ? ಅದೆಂತೆಂದೊಡೆ— ಕೌಶಿಕಾದಿ ಪಂಚಋಷಿಗಳಿಗೆ ಕೈಲಾಸ ತಪ್ಪಲಲ್ಲಿ ಒಪ್ಪುವ ವಟವೃಕ್ಷದ ಕೆಳಗೆ ಮೂರ್ತವ ಮಾಡಿಕೊಂಡು ಶಂಭುಭಟ್ಟರೆಂಬ ಅಭಿಧಾನದಿಂದೆ ಆಗಮಂಗಳ ಬೋಧಿಸಲಿಲ್ಲವೇ? ಪುರಾತನರ ವಾಕ್ಯದ ಹೆಚ್ಚೇನು, ಹರನ ವಾಕ್ಯದ ಕಡಿಮೆ ಏನು? ಎಲ್ಲಿಯ ಮಾತು? ಎಂದು ಮನಸ್ಸಿಗೆ ಬಂದಂತೆ ನುಡಿವರಲ್ಲದೆ, ಆ ಪುರಾತನರ ವಾಕ್ಯದ ಮರ್ಮವ ಅದಾವ ಕಡೆ ಅರಿದಿಪ್ಪರು? ಅರಿಯರು. ಅವರೋದು ಐದು ಗುಡ್ಡಕ್ಕೆ ನರಿ ಕೂಗಿ ಹೊಟ್ಟೆ ಬಾತು ಸತ್ತಂತೆ ಆ ಶ್ರುತಿ ಜ್ಞಾನಿಗಳ ಮಾತು. ಪುರಾತನರ ವಾಕ್ಯವು ಅವರಿಗೆ ಅಶಕ್ಯವಾಗಿಪ್ಪುದು ಎಂದು ಕಲ್ಯಾಣ ಪಟ್ಟಣದ ಅನುಭವ ಮಂಟಪದ ಶೂನ್ಯ ಸಿಂಹಾಸನದಲ್ಲಿ ಚಿಕ್ಕದಂಡ ಪ್ರಮಥರು ಎಲ್ಲ ಪ್ರಮಥರಿಗೆ ಅರುಹಿ ಕೊಟ್ಟಿಪರು. ಇದೇ ನಿರ್ಣಯವ ಉತ್ತಂಡ ಮಾರ್ತಂಡರೆಂಬ ಸದ್ಭಕ್ತ ಶರಣಗಣಂಗಳಿಗೆ ಉಂಟಾದ ಸಿದ್ಧಲಿಂಗ ಪ್ರಭು ನಿರೂಪಿಸುತ್ತಿದ್ದರು.

ಇಂತೀ ಚನ್ನಬಸವೇಶ್ವರ ದೇವರು ನಿರೂಪಿಸಿದ ದಶವಿಧ ಪಾದೋದಕದ ನಿರ್ಣಯದ ವಚನ ಸಮಾಪ್ತ.

೧. ಗುರುಲಿಂಗ ಜಂಗಮದ ಪ್ರಕ್ಷಾಲನೆಯ ಮಾಡಿದ ಪಾದವನ್ನು ಮೂರು ವೇಳೆ ಅಡಿ ಪಾದ ಸ್ಪರ್ಶನವ ಮಾಡಿ ನಾಲ್ಕನೇ ವೇಳೆಗೆ ದಶಾಂಗುಲಿಗಳ ಒಂದು ವೇಳೆ ಸ್ಪರ್ಶನವ ಮಾಡಿದ ಉದಕವನ್ನು ಭಾಂಡ ಭಾಜನದಲ್ಲಿ ತುಂಬಿ ಸ್ವಸಾಕವ ಮಾಡುವುದು. ಆ ಸಮಯದಲ್ಲಿ ಬಂದ ಮಾತ್ರ ಇಷ್ಟಲಿಂಗ ಬಾಹ್ಯವಾದ ಭವಿಗಳಿಗೆ ಹಾಕಲಾಗದು. ಇನ್ನು ಜಂಗಮದ ಅಂಗುಷ್ಠ ಎರಡು ಅಂಗುಳಿ ಎಂಟರಲ್ಲಿ ತನ್ನ ತರ್ಜನಿ ಬೆರಳಿಂದ ಮೊದಲಂತೆ ಪಾದೋದಕವ ಮಾಡಿ ಬಟ್ಟಲಲ್ಲಿ ಮಡುಗಿದ ಲಿಂಗ ಪಾದೋದಕದಲ್ಲಿ ಸಮ್ಮಿಶ್ರವ ಮಾಡಿ ೨೧ ಪ್ರಣಮವ ಲಿಖಿಸಿ ಶ್ರೀ ಗುರುಲಿಂಗ ಜಂಗಮವು ತಾನು ಮಂತ್ರ ಸ್ಮರಣೆಯಿಂದ ಸ್ನಾನ ಧೂಳನ ಧಾರಣವ ಮಾಡಿ ಲಿಂಗಾರ್ಚನೆ ಕ್ರಿಯೆಗಳ ಮುಗಿಸಿಕೊಂಡು ಆ ಮೇಲೆ ತೀರ್ಥವ ಪಡೆದುಕೊಂಬುವಂಥ ಲಿಂಗ ಭಕ್ತನು ಆ ಜಂಗಮ ಲಿಂಗ ಮೂರ್ತಿಗಳ ಸಮ್ಮುಖದಲ್ಲಿ ಗದ್ದುಗೆಯ ರಚಿಸಿಕೊಂಡು ಅಷ್ಟಾಂಗಯುಕ್ತವಾಗಿ ಶರಣಾರ್ಥಿ ಸ್ವಾಮಿ ಜಂಗಮ ಲಿಂಗಾರ್ಚನೆಗೆ ಅಪ್ಪಣೆಯ ಪಾಲಿಸಬೇಕೆಂದು ಬೆಸಗೊಂಡು, ಆ ಗದ್ದುಗೆಯ ಮೇಲೆ ಮೂರ್ತವ ಮಾಡಿಕೊಂಡು ಆ ಕ್ರಿಯಾ ಜಂಗಮ ಮೂರ್ತಿಯ ಕರಕಮಲ ಮಧ್ಯದಲ್ಲಿ ನೆಲಸಿರುವ ಪರಾತ್ಪರ ಜ್ಞಾನ ಜಂಗಮಲಿಂಗ ಮೂರ್ತಿಯ ಅಷ್ಟ ವಿಧಾರ್ಚನೆ ಷೋಡಶೋಪಚಾರಂಗಳ ಸಮರ್ಪಿಸಿ ಆ ಮೇಲೆ ತನ್ನ ವಾಮಕರದಂಗುಲಿ ಮಧ್ಯದಲ್ಲಿ ಷಡಕ್ಷರಂಗಳ ಲಿಖಿಸಿಕೊಂಡರ್ಚಿಸಿ, ತನ್ನ ಹೃನ್ಮಂದಿರಾಲಯದಲ್ಲಿ ನೆಲಸಿರುವ ಜ್ಯೋತಿರ್ಮಯ ಇಷ್ಟ ಮಹಾಲಿಂಗವ ನಿರೀಕ್ಷಿಸಿ, ಆ ಪರಶಿವ ಜಂಗಮಲಿಂಗ ದೇವನ ಚರಣಾಂಗುಷ್ಠವ ತನ್ನ ವಾಮ ಕರಸ್ಥಲದಲ್ಲಿ ಸತ್ತು ಚಿತ್ತಾನಂದ ನಿತ್ಯ ಪರಿಪೂರ್ಣ ಅವಿರಳ ಪರಂಜ್ಯೋತಿ ಸ್ವರೂಪವಾದ ಪ್ರಾಣಲಿಂಗವೆಂದು ಭಾವಿಸಿ, ಅಷ್ಟವಿಧಾರ್ಚನೆ ಷೋಡಶೋಪಚಾರ ಕ್ರಿಯೆಗಳ ಮಾಡಿ, ಆ ಮೇಲೆ ಇಷ್ಟಲಿಂಗ ಜಪಪ್ರಣವ ಒಂದು ವೇಳೆ, ಪ್ರಾಣಲಿಂಗ ಜಪಪ್ರಣವ ಒಂದುವೇಳೆ, ಭಾವಲಿಂಗ ಜಪಪ್ರಣವ ಒಂದುವೇಳೆ ಪ್ರದಕ್ಷಿಣವ ಮಾಡಿ, ಜಂಗಮ ಸ್ತೋತ್ರದಿಂದ ಶರಣು ಮಾಡಿ ಪೂಜೆಯನಿಳುಹಿ ಪಾತ್ರೆಯಲ್ಲಿರುವ ಗುರುಪಾದೋದಕದಲ್ಲಿ

ಬಿಂದುಯುಕ್ತವಾಗಿ ಮೂಲಪ್ರಣವ ಲಿಖಿಸಿ ಬಲದಂಗುಷ್ಠದಲ್ಲಿ ನೀಡು ವಾಗ ಷಡಕ್ಷರ ಮಂತ್ರವ ಆರು ವೇಳೆ ಸ್ಮರಿಸಿ ನೀಡುವಾಗ ಅಲ್ಲಿ ಅನಾದಿ ಗುರುವೆಂದು ಭಾವಿಸುವುದು. ಎಡದಂಗುಷ್ಠದ ಮೇಲೆ ನೀಡುವಾಗ ಪಂಚಾಕ್ಷರಿಯು ಐದು ವೇಳೆ ಸ್ಮರಿಸಿ ನೀಡುವಾಗ ಅನಾದಿ ಲಿಂಗವೆಂದು ಭಾವಿಸುವದು. ಎರಡಂಗುಷ್ಠದ ಮಧ್ಯದಲ್ಲಿ ನೀಡುವಾಗ ಒಂಬತ್ತಕ್ಷರವ ಸ್ಮರಿಸಿ ನೀಡುವಾಗಳಲ್ಲಿ ತ್ರಿಕೂಟ ಸಂಗಮ ಅನಾದಿ ಜಂಗಮವೆಂದು ಭಾವಿಸುವುದು. ಈ ಪ್ರಕಾರ ನೀಡಿದ ಮೇಲೆ ದ್ರವವನಾರಿಸಿ ಭಸ್ಮ ಧಾರಣವ ಮಾಡಿ ಒಂದೇ ಪುಷ್ಪವ ಧರಿಸಿ, ನಿರಂಜನ ಪೂಜೆಯಿಂದ ಪ್ರದಕ್ಷಿಣವ ಮಾಡಿ ನಮಸ್ಕರಿಸಿ ಆ ತೀರ್ಥದ ಬಟ್ಟಲೆತ್ತಿ ಆ ಜಂಗಮ ಲಿಂಗಕ್ಕೆ ಶರಣಾರ್ಥಿ ಎಂದು ಅಭಿವಂದಿಸಿ ಅವರು ಸಲಿಸಿದ ಮೇಲೆ ತಾನಾ ಗದ್ದುಗೆಯು ಬಿಟ್ಟಿದ್ದ ಪರಾತ್ಪರ ಬ್ರಹ್ಮ ಸ್ವರೂಪ ಜಂಗಮ ತೀರ್ಥದ ಸ್ತೋತ್ರವ ಮಾಡಿ, ಅಷ್ಟಾಂಗ ಹೊಂದಿ ಶರಣು ಹೊಕ್ಕು ನಿಮ್ಮ ಪ್ರಸಾದೋದಕಕ್ಕೆ ನಿರೂಪವ ಪಾಲಿಸಬೇಕು ಸ್ವಾಮಿ ಎಂದು ಬೇಡಿ ಕೊಂಡು ಬಂದು ಮೊದಲ ಹಾಗೆ ಗದ್ದುಗೆಯಲ್ಲಿ ಮೂರ್ತವ ಮಾಡಿ ಆ ಜಂಗಮ ಮೂರ್ತಿಗಳು ಸಲಿಸಿದೋಪಾದಿಯಲ್ಲಿ ತಾನು ಸಲಿಸುವುದು. ಆಮೇಲೆ ಷಟ್‌ಸ್ಥಲ ಮಾರ್ಗವರಿಯದ ಲಿಂಗಧಾರಕ ಶಿಶುವಾಗಲಿ, ಶಕ್ತಿಯಾಗಲಿ, ದೊಡ್ಡವರಾಗಲಿ ಆ ಗದ್ದುಗೆಯು ತೆಗೆದು ಲಿಂಗಕ್ಕೆ ಅರ್ಪಿಸಿ ಕೊಳಬೇಕಲ್ಲದೆ, ಬಟ್ಟಲ ಎತ್ತಲಾಗದು. ಅದೇನು ಕಾರಣವೆಂದಡೆ, ಅವರಿಗೆ ಶಿಗ ದೀಕ್ಷೆ,' ಷಟ್‌ಸ್ಥಲ ಮಾರ್ಗ, ಸದಾಚಾರ ಸಂಪತ್ತಿನಾಚರಣೆ ಮುಂದಿದ್ದರಿಂದ ಬಟ್ಟಲವ ಎತ್ತಲಾಗದು. ಹೀಗೆ ಸಮಸ್ತರು ಸಲಿಸಿದ ಮೇಲೆ ಕೊಟ್ಟು ಕೊಂಡ ಭಕ್ತ ಜಂಗಮವು ಈರ್ವರು ಕೂಡಿ ಮುಕ್ತಾಯವ ಮಾಡಿದಲ್ಲಿಗೆ ದಶವಿಧ ಪಾದೋದಕವಾಗುವುದು. ಆಮೇಲೆ ಗುರು ಪಾದೋದಕದಿಂದ ಪಾಕವ ಮಾಡಿದ ಭಾಂಡ ಭಾಜನಗಳು ತಾಂಬೂಲ ಪದಾರ್ಥ ಮುಂತಾಗಿ ಈರ್ವರು ಕೂಡಿ ಮೌನ ಮಂತ್ರ ಧ್ಯಾನದಿಂದ ಹಸ್ತ ಸ್ಪರ್ಶನವ ಮಾಡಿ ಶುದ್ಧ ಪ್ರಸಾದವೆಂದು ಭಾವಿಸಿ ಬಹು ಸುಯಿಧಾನದಿಂದ ಸಮಸ್ತ ಜಂಗಮ ಭಕ್ತ ಮಾಹೇಶ್ವರ ಶರಣ ಗಣಾರಾಧ್ಯಂಗೆ ಎಡೆ ಮಾಡಿ ಅಷ್ಟಾಂಗ ಹೊಂದಿ ಎಡ ಬಲ ಗಣ ತಿಂಥಿಣಿಯು ನೋಡಿ ನಿರೀಕ್ಷಿಸಿ, ಶರಣಾರ್ಥಿ ಸ್ವಾಮಿ ಮಹಾಲಿಂಗಾರ್ಪಿತವ ಮಾಡಬೇಕೆಂದು ಅಭಿವಂದಿಸಿ ಪತಿವ್ರತತ್ವದಿಂದ ಜಂಗಮಕ್ಕೆ

ನಿರ್ವಂಚಕವಾಗಿ ಭಕ್ತ ಜಂಗಮವೆಂಬ ಉಭಯನಾಮವಳಿದು ಕ್ಷೀರ ಕ್ಷೀರ ಬೆರೆದಂತೆ ನಿರಾಕಾರ ಲೀಲೆ ಪರಿಯಂತರವು ಶ್ರೀ ಗುರುಲಿಂಗ ಜಂಗಮ ಪಾದೋದಕ ಪ್ರಸಾದನ ಸಪ್ತವಿಧ ಭಕ್ತಿಯಿಂದ ಸಾವಧಾನಿಯಾಗಿ ಆಚರಿಸುವಾತನೇ ಜಂಗಮ ಭಕ್ತನಾದ ಕಾರಣ ಅಚ್ಚ ಪ್ರಸಾದಿ ಎಂಬೆ ಕಾಣಾ ಗುಹೇಶ್ವರ ಲಿಂಗದಲ್ಲಿ.

೩. ಗುರುಪಾದೋದಕವೆಂದು ಕ್ರಿಯಾಪಾದೋದಕವೆಂದು ಜ್ಞಾನ ಪಾದೋದಕವೆಂದು ಮೂರು ತೆರನುಂಟು. ಗುರುಪಾದೋದಕವೆಂದರೆ, ಅಯ್ಯಗಳ ಪಾದಗಳ ಎರಡಂಗುಲಿಗಳಲ್ಲಿ ಪಾದಗಳೆಡರ ಮೂಲಾಂಗುಲಿ ಹಿಮ್ಮಡಗಳ ಅಗ್ರದಲ್ಲಿ ತನ್ನ ಪಂಚಾಂಗುಲಿಯಿಂದ ಉದಕವನೆದ್ದಿ ಮಂತ್ರದಿಂದಿಳುಹುವುದೇ ಗುರುಪಾದೋದಕ. ಕ್ರಿಯಾಪಾದೋದಕವೆಂದರೆ, ಪಾದದ್ವಯದ ಅಂಗುಲಿಗಳಲ್ಲಿ ಶಿವಶಕ್ತಿಯ ಪ್ರಣವುವ ಬರೆದು ಭಸ್ಮವ ಧರಿಸಿ ನೇತ್ರದಳಗಳ ಅರ್ಪಣಂಗೈದು ತನ್ನ ತರ್ಜನಿಯ ಮೂರು ವೇಳೆ ಮೂಲಶಕ್ತಿ ಪ್ರಣವು ಸಹಿತ ಪಂಚಾಕ್ಷರೀ ಮಂತ್ರದಿಂ ಗುರುಪಾದೋದಕವನೆದ್ದಿ ಎಳೆಯುವದೇ ಕ್ರಿಯಾಪಾದೋದಕ. ಜ್ಞಾನ ಪಾದೋದಕವೆಂದರೆ, ದಶಾಂಗುಲಿಗಳಲ್ಲಿ ದಶಪ್ರಣವ ಮಂತ್ರದಿಂದ ಸಹಿತ ಭಸ್ಮದಿಂ ಲಿಖಿಸಿ ಷೋಡಶೋಪಚಾರದಿಂ ಪೂಜೆಯ ಮಾಡಿ ಎರಡಂಗುಲಿ ಮಧ್ಯದಲ್ಲಿ ಮೂರು ಸ್ಥಾನಂಗಳಲ್ಲಿ ಪಂಚಾಕ್ಷರೀತ್ರಯದಿಂದ ಎರೆಯುವುದೇ ಜ್ಞಾನಪಾದೋದಕ. ಇಂತಪ್ಪ ಪಾದೋದಕತ್ರಯಗಳ ಸೇವಿಸಿ ಸುಖಿಸಬಲ್ಲಡೆ ಆತನೇ ಪರಾತ್ಪರ ವಸ್ತು ಕಪಿಲಸಿದ್ಧ ಮಲ್ಲಿಕಾರ್ಜುನದೇವ.

೪. ಪರಮಗುರು ಸ್ವತಂತ್ರ ಕರ್ತೃಜಗತ್ಪಾವನ ಮೂರ್ತಿಯಾದ ಸಂಗನಬಸವೇಶ್ವರನ ಕರಕಮಲ ಸಂಜಾತರಾದ ಚಿತ್ಕಲಾಪ್ರಸಾದ ಸ್ವರೂಪ ಚನ್ನಬಸವೇಶ್ವರ ಸ್ವಾಮಿಯವರು ತಮ್ಮ ಸ್ವಲೀಲಾನಂದ ಸ್ವಾತ್ಮಜ್ಞಾನ ಸ್ವಾನುಭಾವ ಪ್ರಸನ್ನ ವಾಕ್ಯಗಳಿಂದ ನಿರೂಪಿಸಿದ ಏಕಾದಶಪ್ರಸಾದ ನಿರ್ಣಯವನ್ನು ಮರ್ತ್ಯಲೋಕದ ಮಹಾಗಣಂಗಳು ಅರಿದು ಆಚರಿಸುವದಕ್ಕೆ ಅಶಕ್ಯವಾಗಿರ್ಪುದರಿಂ ಪುಲಿಗೆರೆಯ ಸೋಮನಾರಾಧ್ಯರ ಶಾಂತವೀರ ಗುರುವರೇಣ್ಯನು. ತಮ್ಮ ವಂಶೀಭೂತರಾದ ಸದ್ಭಕ್ತ ಶರಣ

ಗಣಂಗಳು ಅರಿದು ಆಚರಿಸಿಕೊಂಡು ನಿತ್ಯಸುಖಿಗಳಾಗಲೆಂದು ದಯ ವಿಟ್ಟು ಆಚರಣೆ ಸಂಬಂಧ ಸ್ವರೂಪವನು ವ್ಯಾಖ್ಯಾನವಾಗಿ ನಿರೂಪಿ ಸುತ್ತಿಹರು. ಅದರ ವಿಸ್ತಾರವೆಂತೆಂದೊಡೆ:—

ಜಂಗಮವು ಮನೆಗೆ ಆಗಮಿಸಲು, ಅಲ್ಲಿ ಉನ್ನತಾಸನವನಿಕ್ಕಿ, ಗದ್ದುಗೆಯ ಮೇಲೆ ಮುಹೂರ್ತವಂ ಮಾಡಿಸಿ ಆ ಜಂಗಮ ಮೂರ್ತಿ ಗಳ ಹೃದಯ ಸೆಜ್ಜೆಯೊಳಗಿರ್ದ ಇಷ್ಟಲಿಂಗವನ್ನು ಅವರ ವಾಮಭಾಗ ಕರಸ್ಥಲಕ್ಕೆ ದಶವಿಧ ಪಾದೋದಕದಿಂ ಆ ಲಿಂಗಕ್ಕೆ ಅಭಿಷೇಕವಂ ಗೈದು ಸತ್ಕ್ರಿಯಾ ವಿಭೂತಿ ಧಾರಣಂ ಗೈದು ಲಿಂಗಪೂಜೆ ಆದಬಳಿಕ, ಮುಂದೆ ಆ ಜಂಗಮದ ಪಾದಪೂಜೆಯಂ ಮಾಡಿ ಪಾದ ತೀರ್ಥವ ತೆಗೆದು ಕೊಂಬುವ ಕ್ರಮವೆಂತೆಂದೊಡೆ: —

ಆ ಪಾದಪೂಜೆಯ ಮುಹೂರ್ತವ ಮಾಡುವ ಭಕ್ತನು ಸಮಸ್ತ ಪೂಜೋಪಕರಣಂಗಳ ತನ್ನ ಸ್ವತಂತ್ರಕ್ಕೆ ಸಂಗ್ರಹಿಸಿಕೊಂಡು, ಆ ಜಂಗ ಮದ ಸಮ್ಮುಖದಲ್ಲಿ ಗದ್ದುಗೆಯ ಹಾಕುವುದು. ಹಾಕಿದಲ್ಲಿ ಆವನೊಬ್ಬ ನಿರ್ಲಜ್ಜನು ಗುರುಗದ್ದುಗೆಯ ಮುಂದೆ ಪರಗದ್ದುಗೆಯುಂಟೇ? ಈ ಗದ್ದುಗೆಯ ಹಾಕಲಾಗದು ಎಂದು ಅಲಕ್ಷವಂ ಮಾಡುವನು. ಮಾಡಿ ದಲ್ಲಿ 'ಉತ್ತಮಂ ಕಂಬಲಾಸನಂ, ಮಧ್ಯಮಂ ಕಪಟಾಸನಂ, ಕಾಷ್ಠಾ ಸನಂ ಕನಿಷ್ಠಂ ಚ ನಿರಾಸನಂ ನಿಃಫಲಂ ಭವೇತ್' ಎಂದುದಾಗಿ ಆಸನ ವಿಲ್ಲದೆ ಲಿಂಗಪೂಜೆಯ ಮಾಡಲುಂಟೇ? ಇಲ್ಲವಾಗಿ, ಉತ್ತಮೋತ್ತ ಮವಾದ ಕಂಬಳಿಯ ಗದ್ದುಗೆಯ ಹಾಕಿಕೊಂಡು, ಲಿಂಗ ಪೂಜೆಯ ಮಾಡುವ ಲಿಂಗಕ್ರಿಯಾ ಸಂಪನ್ನನಾದ ಸದ್ಭಕ್ತನು ಜಂಗಮದ ಪಾದ ಪೂಜೆಯ ಮಾಡಬೇಕಾದರೆ ಗದ್ದುಗೆಯ ಹಾಕಲೇಬೇಕು. ಹೀಗೆ ಗದ್ದು ಗೆಯ ಹಾಕಿ ಆ ಜಂಗಮದ ಸಮ್ಮುಖದಲ್ಲಿ ಹಸ್ತಾಂಜುಲಿತವಾಗಿ ನಿಂದು 'ಪ್ರಣಮ್ಯ ದಂಡ ಮದ್ಭೂಮ್ಯೆ ಇಷ್ಟ ಮಂತ್ರಂ ಚರಾಚರೇ। ಗುರು ಶ್ರೀಪಾದ ಪದ್ಮಸ್ಯ ಗಂಧ ಪುಷ್ಪಾಕ್ಷತಾದಿಭಿಃ ॥' ಎಂದು ದೀರ್ಘದಂಡಪ್ರಣತವಾಗಿ ಪಾದಪೂಜೆಗೆ ಅಪ್ಪಣೆಯಂ ತೆಗೆದುಕೊಂಡು, ಆ ಗದ್ದುಗೆಯ ಮೇಲೆ ಮುಹೂರ್ತವ ಮಾಡಿ, ತನ್ನ ಇಷ್ಟಲಿಂಗವ ನಿರೀಕ್ಷಣೆಯಂ ಮಾಡಿ ತನ್ನ ವಾಮಕರಸ್ಥಲದಲ್ಲಿ ಶ್ರೀವಿಭೂತಿಯಿಂದ ಅಕಾರ ಪ್ರಣಮವಂ ಲೇಖನವಂ ಮಾಡಿಕೊಂಡು, ಗುರುಲಿಂಗ ಜಂಗಮವೇ ನಿಮ್ಮ ಷಡ್ಗುಣ್ಯೆ

ಶ್ವರ್ಯಾಕಾರವನುಳ್ಳ ಶ್ರೀಪಾದವ ಕರುಣಿಸಬೇಕೆಂದ: ಆ ಜಂಗಮದ ಉಭಯ ಪಾದದಂಗುಷ್ಠವನ್ನು ಲಿಂಗದೋಪಾದಿಯಲ್ಲಿ ಕರಕವ ಲದಲ್ಲಿ ಮುಹೂರ್ತವಂ ಮಾಡಿಸಿಕ್ಕೊಂಡು, ತಾನು ಮಂತ್ರ ಸ್ಮರಣೆಯಿಂದ ಆ ಉಭಯ ಪಾದಂಗಳನ್ನು ವಿಭೂತಿಯ ಸ್ನಾನದೊಳು ಧಾರಣಂಗೈದು, ಬಳಿಕ ಬಲದಂಗುಷ್ಠದಲ್ಲಿ ಬಕಾರ ಪ್ರಣವ, ಎಡದಂಗುಷ್ಠದಲ್ಲಿ ಸಕಾರ ಪ್ರಣವು ಎರಡಂಗುಷ್ಠದ ಮಧ್ಯದಲ್ಲಿ ವಕಾರ ಪ್ರಣವು ನ್ಯಾಸವಂ ಮಾಡಿ, 'ಬಕಾರಂ ಗುರು ರೂಪಂಚ, ಸಕಾರಂ ಲಿಂಗಮೂರ್ತಯೇ। ವಕಾರಂ ಚರಮುಖ್ಯಂ ತು ತ್ರಿವಿಧಂ ತತ್ವ ನಿರ್ಣಯಂ' ಎಂದು, ಬಕಾರವೇ ಗುರು, ಸಕಾರವೇ ಲಿಂಗ, ವಕಾರವೇ ಜಂಗಮ, ಇಂತೀ ಗುರುಲಿಂಗ ಜಂಗಮದ ಸಂಬಂಧವನುಳ್ಳ ಶ್ರೀಪಾದಕ್ಕೆ ಅಷ್ಟವಿಧಾರ್ಚನೆ ಷೋಡಶೋ ಪಚಾರಗಳಿಂದ ಪೂಜೆಯಂ ಮಾಡಿ, ಉಭಯ ಪಾದವ ಮಧ್ಯಂಗಳಲ್ಲಿ ತನ್ನ ದಕ್ಷಿಣ ಹಸ್ತವ ನಿರೀಕ್ಷಿಸಿ ಹಣೆ ಮುಟ್ಟಿ ನಮಸ್ಕಾರವಂ ಮಾಡಿದ ಬಳಿಕ, ಪೂಜೆಯನಿಳುಹಿ ಬಟ್ಟಲಲ್ಲಿ ಮೂಲ ಪ್ರಣಮವಂ ಲಿಖಿಸಿ, ಧೂಳ ಪಾದೋದಕ ಪಾತ್ರೆಯಲ್ಲಿ ಕ್ರಿಯಾ ಭಸಿತವ ಮಿಶ್ರವ ಮಾಡಲು ಅದು ಕ್ರಿಯಾ ಪಾದೋದಕವೆನ್ನುವುದು. ಇದು ಬ್ರಹ್ಮರಂಧ್ರದಲ್ಲಿದ್ದ ಸತ್ಯೋದಕವೆಂದು ಭಾವಿಸಿ, ಬಲದಂಗುಷ್ಠದ ಮೇಲೆ ನೀಡುವಾಗ, ಆರು ವೇಳೆ, ಷಡಕ್ಷರಿಯ ನುಡಿದು, ಇದು ಇಷ್ಟಲಿಂಗವೆಂದು ಭಾವಿಸಿ ದಲ್ಲಿ ಗುರು ಪಾದೋದಕವೆನಿಸುವದು. ಎಡದಂಗುಷ್ಠದ ಮೇಲೆ ನೀಡುವಾಗ ಐದು ವೇಳೆ ಪಂಚಾಕ್ಷರಿಯ ನುಡಿದು ಇದು ಪ್ರಾಣಲಿಂಗ ವೆಂದು ಭಾವಿಸಿದಲ್ಲಿ ಲಿಂಗ ಪಾದೋದಕವೆನಿಸುವುದು. ಎಡದಂಗುಷ್ಠದ ಮಧ್ಯದಲ್ಲಿ ನೀಡುವಾಗ, ಓಂ ಬಸವಲಿಂಗಾಯನಮಃ ಎಂದು ಭಾವ ಲಿಂಗವೆಂದು ಭಾವಿಸಿದಲ್ಲಿ ಜಂಗಮ ಪಾದೋದಕವೆನಿಸುವುದು. ಇಂತೀ ತ್ರಿವಿಧೋದಕ ಉತ್ಪತ್ಯವಾದ ಬಳಿಕ, ಆ ದ್ರವವನೆಲ್ಲ ತೆಗೆದು ಪುನಃ ಪೂಜಿಸಬೇಕಾದರೆ, ಒಂದೇ ಪುಷ್ಪದಿಂದ ಪೂಜಿಸಬೇಕು. ಅದೇನು ಕಾರಣವೆಂದರೆ, ಪ್ರಥಮದಲ್ಲಿ ಮಾಡಿದ ಲಿಂಗ ಪೂಜೆಯು ಗುರುಪೂಜೆ ಯೆನಿಸುವುದು. ಎರಡನೆಯದಲ್ಲಿ ಮಾಡಿದ ಪಾದ ಪೂಜೆಯು ಲಿಂಗ ಪೂಜೆಯೆನಿಸುವುದು. ಮುಂದೆ ಮಾಡುವ ಜಂಗಮ ಪೂಜೆಗೆ ಒಂದೇ ಪುಷ್ಪವ ಧರಿಸಬೇಕು. ಅದೆಂತೆಂದೊಡೆ ಗುರುವಿಂಗೆ ಗುರುವುಂಟು, ಲಿಂಗವುಂಟು, ಜಂಗಮವುಂಟು. ಲಿಂಗಕ್ಕೆ ಗುರುವುಂಟು, ಲಿಂಗವುಂಟು,

ಜಂಗಮವುಂಟು. ಜಂಗಮಕ್ಕೆ ಗುರುವಿಲ್ಲ, ಲಿಂಗವಿಲ್ಲ. ಜಂಗಮವಿಲ್ಲ. ಅದೇನು ಕಾರಣವೆಂದಡೆಃ— ಗುರು ಲಿಂಗ ಜಂಗಮಕ್ಕೆ ತಾನೇ ಸಚ್ಚೈತನ್ಯ ಚಿತ್ಕಲಾ ಸ್ವರೂಪವಪ್ಪ ಪರಮ ಗುರುವಾದ ಕಾರಣ. ಮತ್ತಂತು ಮಲ್ಲದೆ ಏಕೋದೇವ ಪರಬ್ರಹ್ಮವೆಂದು, ಆ ಪರಬ್ರಹ್ಮವೇ ನಿರಂಜನ ಜಂಗಮವೆಂದು, ಏಕದಳ ಪದ್ಮ ನಿವಾಸಿಯಾಗಿಪ್ಪ ಕಾರಣ, ಒಂದೇ ಜಲ, ಒಂದೇ ಭಸಿತ, ಒಂದೇ ಪುಷ್ಪ. ಒಂದೇ ಧೂಪ, ಒಂದೇ ದೀಪಗಳಿಂದ ಪೂಜೆಯ ಮಾಡಿ ನಮಸ್ಕರಿಸಿ, ಇಂತೀ ಪೂಜೆಯಾದ ಬಳಿಕ, ಆ ಜಂಗಮ ಮೂರ್ತಿಗಳು ತೀರ್ಥವ ಸಲಿಸಬೇಕಾದರೆ, ಆ ಭಕ್ತಂಗೆ ನಮಸ್ಕಾರವಂ ಮಾಡಿ ಸಲಿಸಬೇಕು. ಅದೇನು ಕಾರಣವೆಂದಡೆಃ— ಅದು ಪಡೆಕೊಂಡಾತನ ಪದಾರ್ಥವಾದ ಕಾರಣ. ಭಕ್ತಿಯಿಂದ ನಮಸ್ಕಾರವಂ ಮಾಡಿ, ಆ ತೀರ್ಥದ ಬಟ್ಟಲಿಗೆ ಹಸ್ತವ ಕೊಟ್ಟು ಎತ್ತಿಕೊಂಡು, ತಮ್ಮ ತೊಡೆಯ ಮೇಲೆ ಮುಹೂರ್ತವ ಮಾಡಿಸಿಕೊಂಡು ತಮ್ಮ ಪಂಚಾಂಗುಲಿಗಳೇ ಪಂಚ ಪ್ರಣವವೆಂದು ಮೂಲ ಮುದ್ರೆಯಿಂದ ಮೂರು ವೇಳೆ ಪ್ರದಕ್ಷಿಣವಂ ಮಾಡಿ ನಮಸ್ಕರಿಸಿ, ಆ ತೀರ್ಥವನ್ನು ಸಲಿಸುವುದು.

ಆ ತೀರ್ಥವ ಸಲಿಸಬೇಕಾದರೆ, ಆ ಬಟ್ಟಲೊಳಗೆ ಗುರು ಪಾದೋದಕ, ಲಿಂಗ ಪಾದೋದಕ, ಜಂಗಮ ಪಾದೋದಕ, ಈ ತ್ರಿವಿಧೋದಕ ಸಂಬಂಧವಾಗಿ ಇರುತ್ತಿಹವು. ಆ ತೀರ್ಥದಲ್ಲಿ ತಮ್ಮ ಪಂಚಾಂಗುಲಿಗಳು ಸ್ಪರ್ಶನವಾದುದೇ ನಾಲ್ಕನೆಯದರಲ್ಲಿ ಸ್ಪರ್ಶನೋದಕವೆನಿಸುವುದು. ಆ ತೀರ್ಥವಂ ತಮ್ಮ ಪಂಚಾಂಗುಲಿಗಳಿಂದ ಮೂರು ವೇಳೆ ಲಿಂಗದ ಮಸ್ತಕದ ಮೇಲೆ ಧಾರೆಗಟ್ಟಿಯೆರೆಯಲು ಐದನೆಯದರಲ್ಲಿ ಅವಧಾನೋದಕವೆನಿಸುವುದು. ಇಂತೀ ಮೂರು ವೇಳೆ ನೀಡಿದ ಬಳಿಕ, ತಮ್ಮ ಜಿಹ್ವೆಯಲ್ಲಿ ಆ ಪಂಚಾಂಗುಲಿಗಳ ಸ್ವೀಕರಿಸಲು ಆರನೆಯಲ್ಲಿ ಆಪ್ಯಾಯನೋದಕವೆನಿಸುವುದು. ಆ ಲಿಂಗವ ಎತ್ತಿ ಅಂಗೈಯ್ಯೊಳಗಣ ತೀರ್ಥವ ಸಲಿಸಲು ಏಳನೆಯಲ್ಲಿ ಹಸ್ತೋದಕವೆನಿಸುವುದು. ಬಟ್ಟಲೆತ್ತಿ ತೀರ್ಥವ ಸಲಿಸಲು, ಎಂಟನೆಯಲ್ಲಿ ಪರಿಣಾಮೋದಕವೆನಿಸುವುದು. ಈ ಪ್ರಕಾರ ಲಿಂಗ ಹಸ್ತಂಗಳ ದ್ರವವನಾರಿಸುವುದೇ ಒಂಬತ್ತನೆಯಲ್ಲಿ ನಿರ್ನಾಮೋದಕವೆನಿಸುವುದು. ಇಂತೀ ದ್ರವವನಾರಿಸಿ ಲಿಂಗಕ್ಕೆ ವಿಭೂತಿಯ ಧಾರಣ




ವರ್ಷ ೨ ] ಫೆಬ್ರುವರಿ ೧೯೪೮ [ ಸಂಚಿಕೆ ೫

# ಅನುಕ್ರಮಣಿಕೆ.


| ವಿಷಯಗಳು. | ಪುಟ. |
|---|---|
| ೧. ಸಮಾಜ ಸೇವೆಯೇ ಪರಮ ಯೋಗ—<br>ಶ್ರೀ. ಅನ್ನದಾನೀಶ್ವರ ವಿರಕ್ತಮಠ | ೧೨೫ |
| ೨. ಮ. ಬಸವಣ್ಣನವರ ಒಂದು ವಚನದ ಭಾವ—<br>ಶ್ರೀ. ವಿ. ಸಿ. ಕಂಬಿ, ಕೊಪ್ಪ. | ೧೩೮ |
| ೩. ವಚನಶಾಸ್ತ್ರಸಾರ–ಭಾಗ ೩<br>ಉತ್ತರಾರ್ಧ—<br>ರಾ॥ ಬ॥ ಫ. ಗು. ಹಳಕಟ್ಟಿ | ೩೩–೪೮ |
| ೪. ಶಿವಶರಣರ ಚರಿತ್ರೆಗಳು. ಭಾಗ—೩<br>ರಾ॥ ಬ॥ ಫ. ಗು. ಹಳಕಟ್ಟಿ. | ೯೫–೧೦೨ |

# ಶಿವಶರಣರ ಚರಿತ್ರೆಗಳು.

## ಭಾಗ ೨

( ಪುಟಗಳು ೪೫೮ ಬೆಲೆ ೬-೫-೦ )

ಈ ಭಾಗವು ಪುಸ್ತಕ ರೂಪದಿಂದ ಈಗ ಪ್ರಸಿದ್ಧವಾಗಿದ್ದು ಇದರಲ್ಲಿ ೬೩ ಜನ ಶಿವಶರಣ, ಶರಣೆಯರ ಚರಿತ್ರೆಗಳು ಬಂದಿವೆ. ಇವರಲ್ಲಿ ೩೪ ಜನ ವಚನಕಾರರಿದ್ದಾರೆ. ಅವರ ಚರಿತ್ರೆಗಳನ್ನು ಐತಿಹಾಸಿಕ ದೃಷ್ಟಿಯಿಂದ ಸಂಶೋಧಿಸಿ ಗ್ರಂಥವನ್ನು ಸಿದ್ಧಪಡಿಸಿದ್ದಾಗಿದೆ. ಇಂಥ ಪ್ರಯತ್ನವು ಈವರೆಗೆ ಆದದ್ದು ಇದೇ ಮೊದಲನೆಯದೆಂದು ಹೇಳಬಹುದು. ಈ ಚರಿತ್ರೆಗಳಿಂದ ವೀರಶೈವ ಧರ್ಮ ಪ್ರಸಾರ ಕಾರ್ಯಗಳು ಆರಂಭದಲ್ಲಿ ಹೇಗೆ ನಡೆದುವೆಂಬುದನ್ನು ವಾಚಕರು ಸ್ಪಷ್ಟವಾಗಿ ಅರಿಯಬಹುದಾಗಿದೆ. ಇದರ ವಿವರಣೆಗಳು ಪ್ರಸ್ತಾವನೆಯಲ್ಲಿ ಬಹು ವಿಸ್ತಾರವಾಗಿ ನಿರೂಪಿಸಲ್ಪಟ್ಟಿವೆ. ಪ್ರಸ್ತಾವನೆಯು ೮೮ ಪುಟವುಳ್ಳದಾಗಿದೆ. ಗ್ರಂಥದ ಪ್ರತಿಗಳ ಸಂಖ್ಯೆಯು ಬಹಳ ಸ್ವಲ್ಪ ಇದ್ದು ಗ್ರಾಹಕರು ಇದನ್ನು ಅವಶ್ಯವಾಗಿ ಸಂಗ್ರಹಿಸಬೇಕೆಂದು ನಮ್ಮ ಸೂಚನೆ ಇದೆ.

ಹಿತಚಿಂತಕ ಪ್ರಿಂಟಿಂಗ ಪ್ರೆಸ್,

ವಿಜಾಪುರ.

# ಶಿವಾನುಭವ

| ವರ್ಷ ೨೨ | ಫೇಬ್ರುವರಿ ೧೯೪೪ | ಸಂಚಿಕೆ ೫ |
|---|---|---|

## ಸಮಾಜ ಸೇವೆಯೇ ಪರಮ ಯೋಗ!

ಬರೆದವರು:— ಶ್ರೀ. ಅನ್ನದಾನೀಶ್ವರ ವಿರಕ್ತಮಠ.

( ಮು. ರಾಣೇಬೆನ್ನೂರ )

### ೧

ವೇದಕಾಲದ ಋಷಿ-ಮುನಿಗಳು ಜನ-ಸಮಾಜವನ್ನು ಬಿಟ್ಟು ಅಡವಿಗಳಲ್ಲಿ ಇರುತ್ತಿದ್ದರು. ಸಮಾಜ ಸೇವೆಯ ಮೂಲಕ ಸಮಾಜವನ್ನು ಕಟ್ಟುವ ವಿಚಾರ ಅವರಿಗೆ ಬರಲಿಲ್ಲ. ಪೂರ್ಣ ಸಮಾಜವನ್ನು ಕಟ್ಟುವದು ಪರಮಯೋಗವೆಂಬುದು ಅವರಿಗೆ ತಿಳಿದಿರಲಿಲ್ಲ. ಆತ್ಮವನ್ನು ನಿರ್ಬಂಧಗಳಿಂದಲೂ, ವಿಧಿ-ನಿಷೇಧಗಳಿಂದಲೂ ಕಟ್ಟಿ, ಅಡವಿಗಳಲ್ಲಿ ತಪಸ್ಸು ಮಾಡುವದೇ ಪರಮಯೋಗವೆಂದು ಅವರು ನಂಬಿದ್ದರು. ಆದಕಾರಣ ಸಮಾಜ ಸೇವೆ ಸ್ವಾಸ್ಥ್ಯಗಳ ಬಗ್ಗೆ ವೇದದ ಋಷಿಗಳಿಂದ ಮಾನವ ಜನಾಂಗಕ್ಕೆ ಬೇಕಾದ ಬೆಳಕು ದೊರೆಯಲಿಲ್ಲ. ಸಮಾಜ ಕಲ್ಯಾಣದ ಬಗ್ಗೆ ಅಲ್ಲಿಷ್ಟು ಇಲ್ಲಿಷ್ಟು ಮಂತ್ರಗಳನ್ನಾಗಲೀ ಶ್ಲೋಕಗಳನ್ನಾಗಲೀ ಹೇಳಿದ ಮಾತ್ರಕ್ಕೆ ಪೂರ್ಣ ಸಮಾಜದ ಸರ್ವಾಂಗ ಸುಂದರ ಚಿತ್ರವು ನಮ್ಮೆದುರು ಬಂದು ನಿಲ್ಲುವದಿಲ್ಲ. ಸಾಮೂಹಿಕ ಕಲ್ಯಾಣದ ಬಗ್ಗೆ ಯತ್ನಿಸುತ್ತಾ ಅದೇ ಕಾಲಕ್ಕೆ ಆತ್ಮದ ವಿಕಾಸವನ್ನು ಮಾಡಿಕೊಳ್ಳುತ್ತ, ವ್ಯಕ್ತಿ ಮತ್ತು ಸಮಾಜಗಳ ಅಭ್ಯುದಯ ನಿಃಶ್ರೇಯಸ್ಸುಗಳನ್ನು ಸಾಧಿಸುತ್ತ ಪೂರ್ಣ ಸಮಾಜವನ್ನು ಕಟ್ಟುವದೇ

ಋಷಿಗಳ ಧ್ಯೇಯವಾಗಿದ್ದರೆ ಅವರು ಜನ ಸಮಾಜವನ್ನು ಬಿಟ್ಟು ಅಡವಿಯನ್ನು ಸೇರುತ್ತಿದ್ದಿಲ್ಲ. ಇಷ್ಟೇ ಅಲ್ಲ, ವೈಯ್ಯಕ್ತಿಕ ತಪಸ್ಸನ್ನಾದರೂ ಆಚರಿಸುತ್ತಿದ್ದಿಲ್ಲ. ವೈಯ್ಯಕ್ತಿಕ ತಪಸ್ಸಾದರೂ ಬಳಲಿಕೆ-ತೊಳಲಿಕೆಯ ಮಾರ್ಗವೇ ವಿನಃ ಮಾನವರಿಗೆ— ಸಮಾಜಕ್ಕೆ— ಆದರ್ಶವೂ ಅಲ್ಲ, ಸಾಧ್ಯವೂ ಅಲ್ಲ.

ಆದರೆ ೧೨ ನೇ ಶತಮಾನದ ಶರಣ-ಶರಣೆಯರ ವಚನಗಳಲ್ಲಿ – ಕನ್ನಡ ವಚನಗಳಲ್ಲಿ— ಸರ್ವಾಂಗ ಸುಂದರವಾದ ಪೂರ್ಣ ಸಮಾಜದ ಚಿತ್ರವು ನಮ್ಮ ಕಣ್ಣು ಮುಂದೆ ನಿಲ್ಲುವದು. ಇಷ್ಟೇ ಅಲ್ಲ, ಅವರು ಪೂರ್ಣ ಸಮಾಜವನ್ನು ಕಟ್ಟುವ ಮಹಾಕಾರ್ಯದಲ್ಲಿಯೇ ತಮ್ಮ ಪ್ರಾಣಗಳನ್ನು ಅರ್ಪಿಸಿದ್ದು ಕಂಡುಬರುವದು. ಶರಣ-ಶರಣೆಯರಿಗೆ ವೈಯ್ಯಕ್ತಿಕ ತಪಸ್ಸಿನಲ್ಲಿ ನಂಬಿಗೆ ಇದ್ದಿಲ್ಲ. ಆದಕಾರಣ ಸುಲಭವಾದ, ಸಾಮೂಹಿಕವಾದ ಲಿಂಗಯೋಗವನ್ನು ಅವಲಂಬಿಸಿದರು. ಅವರ ಸಾಮೂಹಿಕ ಲಿಂಗಯೋಗದಲ್ಲಿ ಪರಸ್ಪರರ ತಪ್ಪುಗಳನ್ನು ತಿದ್ದಿಕೊಂಡು ನಿರಹಂಕಾರದಿಂದ ಪ್ರಗತಿ ಹೊಂದಲು ಸಾಕಷ್ಟು ಅವಕಾಶವಿದ್ದುದು ಶೂನ್ಯ ಸಂಪಾದನೆಯು ಅಮರ ಗ್ರಂಥದಿಂದ ತಿಳಿದುಬರುತ್ತದೆ. ಸಮಾಜ ಸೇವೆಯು ಕಡಿಮೆ ತರದ ಜನರು ಮಾಡುವ ಕೆಲಸವೆಂದು ಆರ್ಯರು ತಿಳಿದುಕೊಂಡಿದ್ದಂತೆ ಶರಣರು ತಿಳಿದಿರಲಿಲ್ಲ. ಇಷ್ಟೇ ಅಲ್ಲ, ಸಮಾಜ ಸೇವೆಯೇ ಪರಮ ಯೋಗವೆಂದು ಅವರು ನೆರೆ ನಂಬಿ ಆಚರಿಸಿ ಮಾರ್ಗದರ್ಶಕರಾಗಿ ಹೋಗಿರುವರು.

## ಶರಣ ಬಸವಂಣನ ಮಾರ್ಗ.

ಶರಣ ಮಾರ್ಗ ಸಂಚಾಲಕನೂ ಮುಂದಾಳುವೂ ಆಗಿದ್ದ ಬಸವಂಣನ ಮಾರ್ಗವು ನಿಚ್ಚಳವಾಗಿದೆ. “ಆಡಿದರೇನು? ಹಾಡಿದರೇನು? ಓದಿದರೇನು? ತ್ರಿವಿಧ ದಾಸೋಹವಿಲ್ಲದನ್ನಕ್ಕ?” ಎಂದು ಸಮಾಜ ಸೇವೆಯಲ್ಲಿ ಅಗ್ರಗಣ್ಯನಾದ ಬಸವಂಣನು ಪ್ರಶ್ನೆ ಕೇಳಿರುವನು. ಅಡವಿಯಲ್ಲಿದ್ದು ತಪಸ್ಸು ಮಾಡುವವರಿಗೆ ಮಾತ್ರ ಈ ಪ್ರಶ್ನೆ ಕೇಳಿಲ್ಲ. ಜನಸಮಾಜದಲ್ಲಿದ್ದು ಸಮಾಜ ಸೇವೆಯನ್ನು ಮಾಡದೆ ಕೇವಲ ಬಾಹ್ಯಾಡಂಬರದ ನಡತೆಯ ಭಕ್ತರಿಗೆ ಈ ಪ್ರಶ್ನೆ ಕೇಳಿರುವನು. ದೇವರ ಮುಂದೆ ಕುಣಿದಾಡಿದರೇನು ಫಲ? ದೇವರ ಸ್ತೋತ್ರಗಳನ್ನು

ಹಾಡಿದರೇನು ಫಲ? ವೇದ-ವೇದಾಂತಾದಿ ನಾನಾ ಶಾಸ್ತ್ರಗಳನ್ನು ಓದಿದರೇನು ಫಲ? ತ್ರಿವಿಧ ದಾಸೋಹವಿಲ್ಲದೇ ಅವೆಲ್ಲವೂ ವ್ಯರ್ಥ. ತ್ರಿವಿಧ ದಾಸೋಹವೇ ಮಹತ್ವವಾದುದು. ತ್ರಿವಿಧ ದಾಸೋಹವೆಂದರೇನು? ಗುರು, ಲಿಂಗ, ಜಂಗಮ ಈ ತ್ರಿವಿಧ ವಸ್ತುಗಳಿಗೆ ತನು, ಮನ, ಧನಗಳನ್ನು ಅನುಕ್ರಮವಾಗಿ ಅರ್ಪಿಸುವದೇ ತ್ರಿವಿಧ ದಾಸೋಹವು. ಗುರುವಿಗೆ ತನುವನ್ನೂ, ಲಿಂಗಕ್ಕೆ ಮನವನ್ನೂ, ಜಂಗಮಕ್ಕೆ ಧನವನ್ನೂ ಅರ್ಪಿಸಬೇಕು.

ಈ ಗುರು, ಜಂಗಮರು ಯಾರು? ಅವರು ಸಮಾಜದ ಸೇವಕರು. ಪವಿತ್ರ ಹೃದಯದ, ಜ್ಞಾನದ, ಕರ್ತವ್ಯದಕ್ಷತೆಯ ಸೇವಕರು. ಜನ್ಮದಿಂದ ಯಾರೂ ಗುರು, ಜಂಗಮರಾಗುವದಿಲ್ಲ. ಸದ್ಗುಣ-ಸದಾಚಾರಗಳಿಂದಲೂ, ಸೇವಾಭಾವನೆಯಿಂದಲೂ ಗುರು ಜಂಗಮರಾಗುತ್ತಾರೆ. ಗುರುಜಂಗಮರ ಮಠಗಳೆಂದರೆ ಸಮಾಜಸೇವೆಯ ಸದನಗಳು. ಅಪವಿತ್ರ ಹೃದಯವುಳ್ಳವರಿಗೂ, ಅಜ್ಞಾನಿಗಳಿಗೂ, ಕರ್ತವ್ಯಶೂನ್ಯರಿಗೂ, ಗುರು, ಜಂಗಮರೆಂದು ಬಸವಣ್ಣನು ಕರೆದಿಲ್ಲ. ಇಷ್ಟೇ ಅಲ್ಲ. "ಲಾಂಛನಕ್ಕೆ ತಕ್ಕ ಆಚರಣೆಯಿಲ್ಲದಿದ್ದರೆ ನೀ ಸಾಕ್ಷಿಯಾಗಿ ಛೀ ಎಂಬೆನು;" ಎಂದು ಅಂಥ ಹೀನಾತ್ಮರನ್ನು ಧಿಃಕ್ಕರಿಸುವನು, ಭಕ್ತರೆಂದರೆ ಕಡಿಮೆಯೆಂದೂ, ಗುರು-ಜಂಗಮರೆಂದರೆ ಹೆಚ್ಚೆಂದೂ ತಿಳಿದಿಲ್ಲ. ಭಕ್ತರದೊಂದು ಜಾತಿಯಿಲ್ಲ. ಭಕ್ತರ ಮನೆಗಳಿಗೂ ಮಠಗಳೆಂದು ಶರಣರು ಕರೆದಿರುವರು. ಕಾರಣ ಭಕ್ತ, ಗುರು, ಜಂಗಮ, ಲಿಂಗ, ಶರಣ, ಅಯ್ಯ, ಮಹೇಶ್ವರ ಇವೆಲ್ಲ ತತ್ವತಃ ಒಂದೇ ಆಗಿವೆ.

ಸಮಾಜ ಸೇವಕರಾದ ಗುರುಗಳಿಗೆ ತನುವಿನಿಂದ ಸೇವೆಮಾಡುವದೆಂದರೆ ಸಮಾಜಸೇವೆಗೆ ಸಹಾಯಮಾಡಿದಂತಲ್ಲವೇ? ಸಮಾಜ ಸೇವಾನಿರತನಾದ ಗುರುವು, ತನಗೆ ಪ್ರಿಯವಾದ ಸಮಾಜದ ಸೇವೆಯನ್ನು ಮಾಡಲೂ ಭಕ್ತನಿಗೆ ಹೇಳಬಹುದು. ಆಗ ದೇಹದಿಂದ ವ್ಯಗ್ರನಾಗದೆ ಭಕ್ತನು ಸಂಪೂರ್ಣ ದೈಹಿಕ ಶಕ್ತಿಯನ್ನುಪಯೋಗಿಸಿ ಕಾಯಕ ಮಾಡಿದರೆ ಅದು ಗುರುವಿಗೆ ತನುವನ್ನರ್ಪಿಸಿದಂತೆಯೇ ಸರಿ.

ಮೋಡವು ಸಮುದ್ರದ ನೀರನ್ನು ಒಯ್ದು ಜಗತ್ತಿಗೇನೇ ನೀಡುವಂತೆ ಜಂಗಮನು ಭಕ್ತರ ದುಡ್ಡನ್ನು ತಕ್ಕೊಂಡು ಸಮಾಜಕ್ಕೇನೇ—ಅದರ

ಉದ್ಧಾರಕ್ಕಾಗಿಯೇ ವಿನಿಯೋಗಿಸುವನು. ಎಂದಮೇಲೆ ಜಂಗಮರಿಗೆ ಧನವನ್ನರ್ಪಿಸುವದೆಂದರೆ ಸಮಾಜಸೇವೆಗೆ ಅನುಕೂಲವಾದಂತಲ್ಲವೇ! ಗುರುವಿಗೆ ತನುವನ್ನರ್ಪಿಸಿದರ್ರೆ ಕಾಯಕ ಮಾತಲಿಕ್ಕೆ ಹಚ್ಚುವನು. ಆದ್ದರಿಂದಲೇ ವೈಲಾರ ಬಸಪ್ಪನವರೆಂಬ ಶರಣರು ತಮ್ಮ ಶಿವಾನ ಭವದರ್ಪಣದಲ್ಲಿ "ಗುರುಕೊಟ್ಟ ಕಾಯಕ" ಎಂದು ಹಾಡಿರುವರು. ಕಾಯಕದಿಂದ ಧನ; ಆ ಧನವು ಜಂಗಮನಿಗೆ ಅರ್ಪಿತವು. ಕಾಯಕ ಮಾಡಲಿಕ್ಕೆ ಬೇಕಾದ ಶರೀರ ಸಾಮರ್ಥ್ಯವನ್ನೂ, ಸಮಾಜ ಸುಖಕ್ಕೆ ಬೇಕಾದ ದುಡ್ಡನ್ನೂ ಗುರುಜಂಗಮರಿಗೆ ಕೊಡಲಿಕ್ಕೆ ಹೇಳಿರುವರೇ ವಿನಃ ಲಿಂಗಕ್ಕೆ ಕೊಡಲಿಕ್ಕೆ ಹೇಳಿಲ್ಲ. ಲಿಂಗಕ್ಕೆ ಕೇವಲ ಮನವನ್ನು ಕೊಡಿರೆಂದು ಹೇಳಿರುವರು. ಲಕ್ಷಾಂತರ ರೂಪಾಯಿಗಳನ್ನ ದೇವಾಲಯಕ್ಕೆ ಖರ್ಚುಮಾಡುವದು ಅನವಶ್ಯಕ. ದೇಹವನ್ನು ದಂಡಿಸಿ ಅಡವಿಯಲ್ಲಿ ತಪಸ್ಸ ಮಾಡುವದೂ ಅನವಶ್ಯಕ. ಲಿಂಗಕ್ಕೆ ಮನಸ್ಸನ್ನು ಕೊಟ್ಟರೆ ಸಾಕು. ಮನವು ಲಿಂಗಮನವಾಗುವದು. ಲಿಂಗಮನವಾದಾತನೇ ಲಿಂಗಾಂಗಿಯು. ಲಿಂಗಕ್ಕೆ ಮನ ಕೊಟ್ಟ ಲಿಂಗ-ಮನವಾದವನು ಭಕ್ತನೇ ಆಗಿರುವನು. ಅಲ್ಲಿಗೇ ಅವನ ಕೆಲಸ ತೀರಲಿಲ್ಲ. ದೇಹ, ಧನಗಳನ್ನು ಗುರು, ಜಂಗಮರಿಗೆ ಕೊಡಲೇಬೇಕು. ಲಿಂಗದ ಪ್ರಾಣವು ಜಂಗಮ. ಲಿಂಗವು ಜಂಗಮದ ಅಂಗ. ಯಜ್ಞದ ಬೆಂಕಿಯಲ್ಲಿ ತುಪ್ಪ ಸುರಿಯುವುದು ಅನವಶ್ಯಕ. ಏಕಾದಶ ರುದ್ರಪೂಜೆಯ ನೆವದಿಂದ ಲಿಂಗದ ಮೇಲೆ ಪಂಚಾಮೃತಾಭಿಷೇಕ ಮಾಡಿ ದುಡ್ಡ ಹಾಳುಮಾಡಿಕೊಳ್ಳುವದು ಅನವಶ್ಯಕ. ಪಂಚಾಚಾರಗಳಲ್ಲೊಂದಾದ ಲಿಂಗಾಚಾರವು ಭಕ್ತನ ಪ್ರಾಣವಾಗಿದೆ. ಅರ್ಥಾತ್ ಲಿಂಗವು ಭಕ್ತನ ಪ್ರಾಣವು. ಅಂಗದ ಪ್ರಾಣವು ಲಿಂಗ. ಆದ್ದರಿಂದ ಜಂಗಮನು ಪ್ರಾಣಲಿಂಗಿಯು. ಜಂಗಮಲಿಂಗನು ಪ್ರಾಣಲಿಂಗಿಯು. ಆದ್ದರಿಂದ ಪ್ರಾಣಲಿಂಗಿ ಸ್ಥಲದಲ್ಲಿ ಜಂಗಮಲಿಂಗವನ್ನು ಸಂಬಂಧಿಸಿರುವರು. ಪ್ರಾಣಲಿಂಗಿ ಅಥವಾ ಜಂಗಮಲಿಂಗ ಆಗುವದೇ ಭಕ್ತನ ಧ್ಯೇಯವು. ಗುರುವಿಗೆ ಕಾಯ ಕೊಟ್ಟರೆ ಗುರು–ಕಾಯವಾಯಿತು. ಗುರು–ಕಾಯದಿಂದ ಮಾಡಿದ ಕೆಲಸ ಕಾಯಕ. ಕಾಯಕದಿಂದ ಬಂದ ಧನವು ಗುರುಧನವು. ಇಂಥ ಗುರು-ಧನವೇ ಜಂಗಮನಿಗೆ ಅರ್ಪಿತ. ಆದ್ದರಿಂದ "ಗುರುವಿನ ಗುರು ಜಂಗಮ ಇಂತೆಂದುದು ಕೂಡಲ ಸಂಗನ ವಚನ" ಎಂದು ಬಸವಣ್ಣನು ಹೇಳಿರುವನು.

ಲಿಂಗಕ್ಕೆ ಮನ ಕೊಟ್ಟರೆ ಮನವು ಲಿಂಗವಾಯಿತು. ಲಿಂಗ-ಮನದ ಭಕ್ತನ ಅಂಗವು ಲಿಂಗವಾಗಬೇಕಾದರೆ, ಲಿಂಗದ ಪ್ರಾಣವು ಭಕ್ತನಾಗಬೇಕಾದರೆ ಅರ್ಥಾತ್ ಭಕ್ತನು ಜಂಗಮ ಲಿಂಗನಾಗಬೇಕಾದರೆ ಧನ ಅರ್ಪಿಸಲೇ ಬೇಕು. ಆ ಜಂಗಮನಾದರೋ ಎಲ್ಲ ಧನವನ್ನು ಇಡೀ ಸಮಾಜಕ್ಕೇನೇ ಅರ್ಪಿಸಿ ಸಮಾಜೋದ್ಧಾರಮಾಡುವನು. ಜಂಗಮನು ಪ್ರಾಣಲಿಂಗಿಯಾಗಿರುವದರಿಂದ ಪ್ರಾಣಿಮಾತ್ರರಿಗೆಲ್ಲ ಶಾಂತಿಯನ್ನು ಕೊಡುವದೇ ಅವನ ಕರ್ತವ್ಯವು ಪ್ರಾಣಲಿಂಗಿಯಾದ ಜಂಗಮನು ವಿಶ್ವಪ್ರೇಮಿಯಾಗಿರುವನು.

ಮನುಷ್ಯನಿಗೆ ವೀರಶೈವನಾಗಲಿಕ್ಕೆ ಬರುವದು. ವೀರಶೈವನಿಗೆ ಭಕ್ತನಾಗಲು ಬರುವದು. ಭಕ್ತನಾಗಿ ಗುರು ಆಗಲು ಗುರುವಾಗಿ ಜಂಗಮನಾಗಲು ಬರುವದು. ಜಂಗಮರಿಗೆ ವಿಶ್ವಪ್ರೇಮಿಯಾಗಲಿಕ್ಕೆ ಬರುವದು. ವಿಶ್ವಪ್ರೇಮಿಯೇ ನಿಜಲಿಂಗಾಂಗಿಯು. ಲಿಂಗವೇ ಅಂಗವಾಗಬೇಕಾದರೆ ಅರ್ಥಾತ್ ಭಕ್ತನು ಜಂಗಮನಾಗಬೇಕಾದರೆ ಸಮಾಜವು ಬೇಕು. ಸಮಾಜವಿಲ್ಲದೇ ಇದು ಸಾಧ್ಯವಿಲ್ಲ. ಸಮಾಜ ಸೇವೆಯು ಬೇಕು. ಸಮಾಜ ಸೇವೆಯೇ ಪರಮ ಯೋಗವೆಂದು ಹೇಳುವದರ ಅರ್ಥವು ಇದು.

ಅಷ್ಟಾವರಣ ಅಂಗವಾಗಬೇಕು ಅಂದರೂ ಒಂದೇ, ಲಿಂಗವು ಅಂಗವಾಗಬೇಕೆಂದರೂ ಒಂದೇ. ಗುರು ಅಂಗವಾಗಬೇಕು, ಅಂದರೆ ಗುರು ಕಾಯವಾಗಬೇಕು. ಲಿಂಗ ಅಂಗವಾಗಬೇಕು, ಅಂದರೆ ಲಿಂಗ-ಮನವಾಗಬೇಕು. ಜಂಗಮ ಅಂಗವಾಗಬೇಕು ಅಂದರೆ ಪ್ರಾಣವು ಲಿಂಗವಾಗಬೇಕು. ಅಷ್ಟಾವರಣ ಅಂಗವಾಗಬೇಕಾದರೂ ಸಮಾಜ ಸೇವೆಯೇ ಬೇಕು. ಸಮಾಜವೇ ಬೇಕು.

ತ್ರಿವಿಧ ದಾಸೋಹವನ್ನು ಭಕ್ತನೇ ಮಾಡಬೇಕೆಂದಲ್ಲ. ಗುರುವೂ ಮಾಡಬೇಕು. ಜಂಗಮನೂ ಮಾಡಬೇಕು. ಲಿಂಗವು ಭಕ್ತನಿಗೂ ಬೇಕು. ಗುರುವಿಗೂ ಬೇಕು. ಜಂಗಮನಿಗೂ ಬೇಕು. ಕಾರಣ ಭಕ್ತನೇ ಗುರು. ಭಕ್ತನೇ ಜಂಗಮ. ಭಕ್ತ, ಗುರು, ಜಂಗಮರಿಂದ ಕೂಡಿದ ಸಮಾಜಸೇವೆಯೇ ಪರಮಯೋಗ.

---

೨

ಜಗದಂಣ ಬಸವಂಣನು ತನ್ನ ಒಂದು ವಚನದಲ್ಲಿ ಹೀಗೆ ಹೇಳಿರುವನು:—" ಅಹೋ ರಾತ್ರಿಯಲ್ಲಿ ನಿಮ್ಮ ಶರಣರ ಸೇವೆಯಲ್ಲಿರಿಸು ಕೂಡಲ ಸಂಗಮದೇವ. ಪರಮಾತ್ಮನೇ, ಹಗಲೂ ಇರುಳೂ ಶರಣ ಸಮಾಜ ಸೇವೆಯಲ್ಲಿಯೇ ನನ್ನನ್ನು ಇಡು. ಅಂಥ ಸಮಯ ಸಂದರ್ಭ ಗಳನ್ನೇ ಒದಗಿಸಿಕೊಡು. ಈ ಪ್ರಕಾರ ಮಹಾ ಶಿವಯೋಗಿಯಾದ ಬಸವಂಣನು ಹಾಡಿರುವನು. ಇದನ್ನು ನೋಡಿದರೆ ಇಪ್ಪತ್ತುನಾಲ್ಕು ತಾಸು ಸಮಾಜ ಸೇವೆಯನ್ನು ಮಾಡುವದೇ ಪರಮಯೋಗವೆಂದು ಅವರು ನಂಬಿದ್ದರೆಂದು ಸಿದ್ಧವಾಗುತ್ತದೆ. ಶರಣರ ಮಾರ್ಗವೇ ಇದು.

ಶರಣರು ಸಮಾಜ ಸೇವೆಯೇ ಮುಕ್ತಿಯು ನಿಜಾನಂದವೆಂದು ನೆರೆನಂಬಿ ಆಚರಿಸಿರುವರು. ಅವರ ಚರಿತ್ರೆಗಳಿಂದ ಇದೇ ಮಾತು ಸಿದ್ಧವಾಗುತ್ತದೆ. ಸಮಾಜ ಸೇವೆಯಲ್ಲಿಯೇ ನಿಜ ಕೈವಲ್ಯವಿದೆಯೇ ವಿನಃ ಅದನ್ನು ಬಿಟ್ಟು ಇಲ್ಲ. ಏಕೆಂದರೆ ನಿಜ ಕೈವಲ್ಯ ಸಾಧನೆ ಯಲ್ಲಿಯ ವಿಘ್ನ-ವಿರುದ್ಧಗಳನ್ನೂ ಎಡರು-ತೊಡರುಗಳನ್ನೂ ದೂರ ಮಾಡುವದಕ್ಕೆ ಶರಣರು ಸಮಾಜದಲ್ಲಿ ಇರುವರು. ಪರಸ್ಪರರ ತಪ್ಪು ಗಳನ್ನು ತಿದ್ದಿಕೊಳ್ಳಲಿಕ್ಕೂ ತಪ್ಪು ಒಪ್ಪಿಕೊಂಡು ಶುದ್ಧವಾಗಲಿಕ್ಕೂ ಶ್ರೇಷ್ಠ ವಿಚಾರ ತತ್ವಗಳನ್ನು ಸ್ವೀಕರಿಸಲಿಕ್ಕೂ ಈ ಪ್ರಕಾರ ಪ್ರಗತಿ ಹೊಂದಲಿಕ್ಕೂ ಸಮಾಜದಲ್ಲಿದ್ದು ಸಮಾಜ ಸೇವೆಯನ್ನು ಮಾಡುತ್ತಿ ದ್ದರೇನೇ ಸಾಧ್ಯ. ಒಬ್ಬನೇ ಅಡವಿಯಲ್ಲಿ ತಪಸ್ಸು ಮಾಡಿದರೆ ತನ್ನ ತಪ್ಪುಗಳನ್ನು ತೋರಿಸುವವರಾರು? ವ್ಯಕ್ತಿಯು ತಪ್ಪು ಮಾಡುವದೇ ಇಲ್ಲವೇ? ವ್ಯಕ್ತಿಯು ಎಷ್ಟೇ ಶ್ರೇಷ್ಠನಾಗಿದ್ದರೂ ಸಮಾಜದಲ್ಲಿಯೇ ಅವನ ಶ್ರೇಷ್ಠತೆಯು ಒರೆಗಲ್ಲಿಗೆ ತಿಕ್ಕಲ್ಪಡುವದು.

ಶಿಕ್ಷಣ ಶಾಸ್ತ್ರದಲ್ಲಿಯಾದರೂ ಸಮಾಜದಲ್ಲಿದ್ದೇ ಶಿಕ್ಷಣ ಪಡೆಯ ಬೇಕೆಂದೇ ತಜ್ಞರು ಪ್ರತಿಪಾದಿಸಿರುವರು. ಶರಣರ ಸಮಾಜ ಸೇವೆಯು ಆಧುನಿಕ ಈ ಶಿಕ್ಷಣ ಶಾಸ್ತ್ರಜ್ಞರನ್ನು ಬೆರಗುಗೊಳಿಸುವಂಥ ವಿಚಾರಗಳಿಂದ ಕೂಡಿದೆ.

ಈ ದೃಷ್ಟಿಯಿಂದ ವಿಚಾರಿಸಿದರೆ "ನಮ್ಮ ಸೇವೆಯನ್ನೇ ಅನ್ಯರು ಮಾಡಬೇಕು. ಅನ್ಯರ ಸೇವೆಯನ್ನು ನಾವು ಮಾಡಬಾರದು"

ಎಂದು ತಿಳಿದುಕೊಂಡಿರುವ ಈಗಿನ ಕೆಲವು ಸ್ವಾಮಿಗಳ ಆಚರಣೆಯು ಬಸವಂಣನ ಮಾರ್ಗಕ್ಕೆ ವಿರೋಧವಾದುದಾಗಿದೆಯೆಂದು ಸುಲಭವಾಗಿ ಹೇಳಬಹುದು. ಆದರೆ ಅವರು ಬಸವಂಣನ ಮಾರ್ಗದ ಕಡೆಗೆ ಲಕ್ಷ ಹೊರಳಿಸಿದರೆ, ಮನಸ್ಸಿನಲ್ಲಿ ದೃಢನಿಶ್ಚಯ ಮಾಡಿ ಸಮಾಜ ಸೇವಾನಿರತರಾದರೆ, ಈಗಿನ ಪ್ರಜಾಪ್ರಭುತ್ವದ, ಸ್ವತಂತ್ರ್ಯದ, ರಾಷ್ಟ್ರೀಯತೆಯ ಕಾಲದಲ್ಲಿ ಪ್ರಕಾಶಿಸಬಲ್ಲರಲ್ಲದೆ ಕೇವಲ ನಾಲ್ಕಾರು ಆಳುಗಳನ್ನಿಟ್ಟುಕೊಂಡು ತಮ್ಮ ಸೇವೆಯನ್ನು ಮಾಡಿಸಿಕೊಳ್ಳುತ್ತ ಪಲ್ಲಕ್ಕಿಯಲ್ಲಿ ಕುಳಿತು ಮೆರೆಯುವದರಿಂದ ಎಂದೂ ಕೀರ್ತಿವಂತರಾಗುವದಿಲ್ಲ. ಇಷ್ಟೇ ಅಲ್ಲ, ಇದ್ದ ಕೀರ್ತಿಯನ್ನೂ ಕಳೆದುಕೊಳ್ಳುವರು. ಈ ಕ್ರಾಂತಿಯ ಕಾಲದಲ್ಲಿ ಸಮಾಜವು ಸಮಾಜ ಸೇವಕರಿಗೆ ಮನ್ನಣೆ ಕೊಡುವದಲ್ಲದೇ ಬರೀ ಶಾಸ್ತ್ರ ಹೇಳುವ ಭಟ್ಟರಿಗಲ್ಲ. ಶರಣರ ವಚನ ಶಾಸ್ತ್ರಕ್ಕಿಂತ ಶ್ರೇಷ್ಠ ಶಾಸ್ತ್ರವನ್ನು ಯಾರೂ ಹೇಳಲಾರರಷ್ಟೇ! ಶರಣರ ಅನುಭವಕ್ಕಿಂತ ಶ್ರೇಷ್ಠ ಅನುಭವವನ್ನು ಯಾರೂ ನಮಗೆ ಕೊಡಲಾರರಷ್ಟೇ!

ಸಮಾಜಸೇವೆಯು ಕೀಳೆಂದು ತಿಳಿದು ನಡೆಯುವದು ವಿಷಮತೆಯ ವರ್ಣವಾದಿಗಳ ಕಲ್ಪನೆಯೇ ವಿನಾ ಶರಣರ ತತ್ವವಲ್ಲ. ವರ್ಣವಾದವನ್ನು ಹಿಡಿದರೆ ನಾವು ಎಂದೂ ಸಮಾಜದಲ್ಲಿ ಸಮತೆ, ಶಾಂತಿ, ಪುಷ್ಟಿಗಳನ್ನುಂಟುಮಾಡಲಾರೆವು.

ಜಗದಣ್ಣ ಬಸವಣ್ಣನು ಮತ್ತೊಂದು ವಚನದಲ್ಲಿ ಹೇಳಿದ್ದು ಹೀಗಿದೆ:—"ಕೂಡಲ ಸಂಗಮದೇವಾ, ನಿಮ್ಮ ಶರಣರ ಲೇಸೇ ಎನ್ನ ಲೇಸಯ್ಯಾ."

ಪರಮಾತ್ಮನೇ ಶರಣ ಸಮಾಜದ ಕಲ್ಯಾಣವೇ ನನ್ನ ಕಲ್ಯಾಣವೆಂದು ಇಲ್ಲಿ ತಿಳಿದುಕೊಂಡಿರುವೆನು. ಸಮಾಜಕ್ಕೆ ಯಾವದು ಹಾನಿಕರವೋ ಅದನ್ನು ಮಾತುವದಿಲ್ಲ, ಸಮಾಜಕ್ಕೆ ಕಲ್ಯಾಣಕರವಾದದ್ದನ್ನೇ ಮಾಡುತ್ತೇನೆಂದು ಬಸವಂಣನು ಪ್ರತಿಜ್ಞೆ ಮಾಡಿದ್ದಾನೆ. ವ್ಯಕ್ತಿಯ ವ್ಯಕ್ತಿತ್ವವು ವಿಕಸಿತವಾಗಬೇಕಾದರೆ ಶರಣ ಸಮಾಜದಲ್ಲಿಯೇ ವಿನಃ ಬೇರೆ ಅಲ್ಲ. ಅದು ಶರಣ ಸಮಾಜವಿರುವದರಿಂದ ವ್ಯಕ್ತಿಯ ವ್ಯಕ್ತಿತ್ವವನ್ನು ನಾಶಮಾಡುವದಿಲ್ಲ. ಆದರೆ ವ್ಯಕ್ತಿಯು ಸಮಾಜಕ್ಕಿಂತ ನಾನು ಶ್ರೇಷ್ಠ

ನೆಂದು ತಿಳಿಯುಕೂಡದು. ಲಿಂಗವಂತ ಸಮಾಜದ ಕಲ್ಯಾಣದಲ್ಲಿ ನನ್ನ ಕಲ್ಯಾಣವು ಅಡಕವಾಗಿದೆಯೆಂದು ತಿಳಿದು ಆಚರಿಸುವದೇ ಪ್ರತಿಯೊಬ್ಬ ಲಿಂಗಾಂಗಿಯ ಕರ್ತವ್ಯವೆಂಬಂಶವನ್ನು ಜಗದಂಣ ತನ್ನ ನಡೆನುಡಿಗಳಿಂದ ತೋರಿಸಿರುವನು. "ಸಮಾಜ ಕಲ್ಯಾಣವು ನನ್ನ ಕಲ್ಯಾಣವು ಎಂದು ಬಸವಂಣನು ತಿಳಿದು ನಡೆದದ್ದರಿಂದಲೇ ಲೋಕೋತ್ತರವಾದ ಸಮಾಜವನ್ನು ಕಟ್ಟುವದು ಅವನಿಗೆ ಸಾಧ್ಯವಾಯಿತು. ಈಗಿನ ಮಹಾಸಭೆ, ಸಮ್ಮೇಲನ, ಪರಿಷತ್ತುಗಳು ಬಸವಣ್ಣನ ಸಮಾಜ ದೃಷ್ಟಿಯನ್ನಿಟ್ಟುಕೊಂಡು ನಡೆದರೆ ಅವುಗಳ ಕಾರ್ಯವು ಜಯವಾಗುವದೇ ವಿನಾ ಕೇವಲ ಠರಾವುಗಳ ಸಿವುಡುಗಳಿಂದಲ್ಲ ಸಮಾಜಶಾಸ್ತ್ರದ ತತ್ವಗಳ ರೀತ್ಯಾ ಸಮಾಜ ಸೇವೆಯಲ್ಲಿ ತೊಡಗಿಸಿ ಸಮಾಜ ಕಲ್ಯಾಣವನ್ನು ಮಾಡಲಿಕ್ಕೆ ಕಲಿಸುವ ಮಹಾಕಾರ್ಯಕ್ಕೆ ಬಸವಂಣನಂಥ ಆದರ್ಶ ಸಮಾಜಶಾಸ್ತ್ರಜ್ಞರು ಈಗ ಬೇಕು. ಅಂದರೆ ಸಮಾಜದೃಷ್ಟಿ ಬಲಿತು ವ್ಯಕ್ತಿಯು ವ್ಯಕ್ತಿತ್ವ ವಿಕಾಸಗೊಳ್ಳಲು ಸಾಧ್ಯವಾಗುತ್ತದೆ.

ಬಸವಂಣನಂಥ ಯೋಗ್ಯತೆಯುಳ್ಳವರು ಸಿಗದಿದ್ದರೂ ಅವನ ಸಮಾಜ ರಚನೆಯಲ್ಲಿ ನಿಷ್ಠೆಯುಳ್ಳ ಸಮಾಜ ಸೇವಕರಾದರೂ ಬೇಕು. ಅಂಥ ಸೇವಕರಿಂದ ಸಾಗಿಸಲ್ಪಡುವ ಸಮಾಜಶಾಸ್ತ್ರದ ಶಾಲೆ ಬೇಕು.

ಜಗದಂಣ ಬಸವಂಣನ ಇನ್ನೊಂದು ವಚನವಿದು; "ತನುವ ನೋಯಿಸಿ ಮನವ ಬಳಲಿಸಿ ನಿಮ್ಮ ಪಾದವ ಪಿಡಿವರೊಳರೇ? ಈ ನುಡಿ ಸುಡದಿಹುದೇ? ಕೂಡಲ ಸಂಗಮದೇವಾ ಶಿವಭಕ್ತರ ನೋವೇ ಅದೇ ಲಿಂಗದ ನೋವು."

ಶಿವ ಸಮಾಜದಲ್ಲಿಯ ಭಕ್ತರ ತನು-ಮನಗಳನ್ನು ಹಿಂಸೆಯ ಕೃತಿಗಳಿಂದಲೂ ಹಿಂಸೆಯ ಮಾತುಗಳಿಂದಲೂ ನೋಯಿಸಿ ಪರಮಾತ್ಮನ ಪಾದವನ್ನು ಕಾಣುತ್ತೇನೆಂದು ಯಾರಾದರೂ ಹೇಳುತ್ತಿದ್ದರೆ ಅದು ವ್ಯರ್ಥ. ಶಿವಸಮಾಜದ ಭಕ್ತರಿಗಾಗುವ ನೋವೇ ಪರಮಾತ್ಮನ ನೋವು. ಈ ಪ್ರಕಾರ ಜಗದಣ್ಣ ಬಸವಣ್ಣನು ಆಚರಿಸಿದ್ದರಿಂದಲೇ ಅವನ ದ ಸಮಾಜದ ಪ್ರಗತಿಯಾಯಿತು ಮತ್ತು ಬೆಳೆಯಿತು.

ಸಮಾಜದ ದುಃಖವನ್ನು ಕಳೆಯಲಿಕ್ಕೆ ಯತ್ನಿಸುವದು ಲಿಂಗಪೂಜೆಯಾಗಿದೆ. ಅಜ್ಞಾನದಿಂದ ಸಮಾಜದ ಮನವು ಬಳಲುತ್ತದೆ. ಬಡತನದಿಂದ ಸಮಾಜದ ತನುಮನ ಕೆರಡೂ ಬಳಲುತ್ತವೆ. ಈ ಅಜ್ಞಾನ ದಾರಿದ್ರ್ಯಗಳನ್ನು ನಿವಾರಿಸುವದು ಲಿಂಗಾಂಗಿಯ ಪ್ರಥಮ ಕರ್ತವ್ಯವು. ಇದನ್ನು ಬಿಟ್ಟು ಕೇವಲ ಲಿಂಗಪೂಜೆಯಲ್ಲಿಯೇ ಕಾಲಕಳೆಯುತ್ತ ತಾವು ಒಳ್ಳೇ ಲಿಂಗಪೂಜಕರಾದ ಶಿವಯೋಗಿಗಳೆಂದು ಹೇಳಿಸಿಕೊಳ್ಳಲಿಕ್ಕೆ ಹವಣಿಸುವವರು ಬಸವಂಣನಿಗೆ ವಿರೋಧವಾಗಿ ನಡೆದಂತೆಯೇ ಸರಿ. ಸಮಾಜದ ಅನಿಷ್ಟವನ್ನು ಕಳೆಯದೆ ಇಷ್ಟಲಿಂಗ ಪೂಜೆಯು ಅದೆಂತು ಸಾಧ್ಯ?

---

೩

ಜಗದಣ್ಣ ಬಸವಣ್ಣನು ತನ್ನ ಒಂದು ವಚನದಲ್ಲಿ ಹೀಗೆ ಹೇಳಿದ್ದಾನೆಃ—"ಉತ್ತಮ ಕುಲದಲ್ಲಿ ಹುಟ್ಟಿದೆನೆಂಬ ಕಷ್ಟತನದ ಹೊರೆಯ ಹೊರಿಸದಿರಯ್ಯ." ನಾಲ್ಕು ವರ್ಣಗಳಲ್ಲಿ ಶ್ರೇಷ್ಠವೆಂದು ಕರೆಯಲ್ಪಡುವ ಬ್ರಾಹ್ಮಣ ವರ್ಣದಲ್ಲಿ ಬಸವಣ್ಣನು ಹುಟ್ಟಿದ್ದನು. ಆದರೆ ಬ್ರಾಹ್ಮಣರ ವಿಧಿನಿಷೇಧಗಳುಳ್ಳ ಕರ್ಮಮಾರ್ಗವು, ಜನ್ಮವಿಶಿಷ್ಟ ಜಾತಿಯ ಕರ್ಮಮಾರ್ಗವು, ವಿಷಮತೆಯ ವರ್ಣಗಳ ಮೇಲೆ ನಿಂತ ಕರ್ಮಮಾರ್ಗವು, ಸ್ತ್ರೀ ಶೂದ್ರರ ಉನ್ನತಿಗೆ ವಿಘ್ನಕಾರಿಯಾದ ಕರ್ಮಮಾರ್ಗವು, ಉದ್ಯೋಗಗಳ ಮೂಲಕ ಮೇಲು-ಕೀಳುಗಳನ್ನೆಣಿಸಿ ಜನಾಂಗದ ಆರ್ಥಿಕ ಪ್ರಗತಿಗೆ ವೈರಿಯಾದ ಕರ್ಮಮಾರ್ಗವು, ಸಹಭೋಜನ-ಶರೀರ ಸಂಬಂಧಾದಿಗಳಿಗೆ ವಿರೋಧಿಯಾಗಿದ್ದ ಕರ್ಮಮಾರ್ಗವು, ಸ್ವಾತಂತ್ರ್ಯ, ಸಮತೆ, ಸಹೋದರ ಭಾವನೆಗಳಿಗೂ ಸಂಘಟನೆಗೂ ಪ್ರತಿಕೂಲವಾಗಿದ್ದ ಕರ್ಮಮಾರ್ಗವು, ವಿಚಾರಸ್ವಾತಂತ್ರ್ಯಕ್ಕೆ ಅಡ್ಡಿಯಾಗಿರುವ ಮೂಢಭಾವಿಕತನ, ಜೊಳ್ಳು ಅಶಿಧಶ್ರದ್ಧೆ, ಪೊಳ್ಳು ಮೂಢಭಕ್ತಿಗೆ ತವರುಮನೆಯಾಗಿರುವ ಕರ್ಮಮಾರ್ಗವು, ನಾನಾ ದೇವತೋಪಾಸನೆಯ, ಯಜ್ಞದ ಹಿಂಸೆಯ ಕರ್ಮಮಾರ್ಗವು—ಇಂಥ ಅಸಮಂಜಸವಾದ ಕರ್ಮಮಾರ್ಗವು ಜಗದಂಣ ಬಸವಂಣನಿಗೆ—ಹೇಗೆ ಸರಿದೋರಬೇಕು? ಆದಕಾರಣ ವರ್ಣವನ್ನು ಅವರು ಬಿಟ್ಟರು. ಜನ್ಮವಿಶಿಷ್ಟಜಾತಿ, ವರ್ಣಗಳಿಲ್ಲದ,

ಸಮಾನತೆಯು, ಭಕ್ತಿಯ ಬಂಧುತ್ವದ, ದಿವ್ಯ ಮಾರ್ಗವನ್ನು ಸ್ವೀಕರಿಸಿದರು. ಆ ಪ್ರಕಾರ ಸುಂದರವಾದ, ಲೋಕ ಕಲ್ಯಾಣಕರವಾದ ಭಕ್ತಿಯ ಸಮಾನತೆಯ ಸಮಾಜವನ್ನು ಜಾತಿಭೇದಗಳಿಲ್ಲದ ಸಮಾಜವನ್ನು ರಚಿಸಿ ಜಗತ್ತಿನ ಮಹಾಪುರುಷರಿಗೆ ದಾರಿಯನ್ನು ತೋರಿದರು. ಬ್ರಾಹ್ಮಣ ವರ್ಣವು ಉತ್ತಮ ಕುಲವೆಂಬ ನುಡಿಯು ಬಸವಣ್ಣನವರಿಗೆ ಅಸಹ್ಯವಾಗಿದ್ದಿತು. ದೊಡ್ಡ ಹೊರೆಯನ್ನ ಹೊರಿಸಿದರೆ ಹೇಗೆ ಮನುಷ್ಯನಿಗೆ ಕಷ್ಟವಾಗುತ್ತದೆಯೋ ಹಾಗೆಯೇ ಉತ್ತಮ ಕುಲದಲ್ಲಿ ಹುಟ್ಟಿದ್ದೇನೆಂಬ ಕಲ್ಪನೆಯು ನನಗೆ ಅತ್ಯಂತ ಕಷ್ಟವನ್ನು ಕೊಡುತ್ತದೆ, ಆದಕಾರಣ ಶಿವನೇ ಆ ಕಲ್ಪನೆಯು ನನ್ನಲ್ಲಿ ಎಂದೂ ಬರದಂತೆ ಮಾಡೆಂದು ಬೇಡಿಕೊಂಡಿರುವದನ್ನು ನೋಡಿದರೆ ಜನ್ಮವಿಶಿಷ್ಟ ಜಾತಿಯ ಕಲ್ಪನೆಯು ಎಷ್ಟು ವಿಘಾತುಕವಾಗಿದೆಂಬುವುದು ಎಲ್ಲರಿಗೂ ಹೊಳೆಯುವದು. ನಾವು ವೈದಿಕರು, ಬ್ರಾಹ್ಮಣರು, ನಮ್ಮದು ಶ್ರೇಷ್ಠ ಕುಲ, ನಾವು ಹೆಚ್ಚು, ಅವರು ಹೊಲೆಯರು- " ಎಂದು ಅನ್ನುವವರು ಮತ್ತು ಭಾವನೆಯುಳ್ಳವರು ತಪ್ಪು ದಾರಿಯಲ್ಲಿರುವರು. ಈ ಬಗ್ಗೆ ಜಗದಣ್ಣನು ಹೇಳುವದೇನೆಂದರೆ:—

ಶೆಟ್ಟಿಯೆಂಬೆನೆ ಸಿರಿಯಾಳನ? ಮಡಿವಾಳನೆಂಬೆನೆ ಮಾಚಯ್ಯನ? ಡೋಹರನೆಂಬೆನೆ ಕಕ್ಕಯ್ಯನ ? ಮಾದರನೆಂಬೆನೆ ಚನ್ನಯ್ಯನ ? ಆನು ಹಾರುವನೆಂದಡೆ ಕೂಡಲ ಸಂಗಮದೇವ ನಗುವನಯ್ಯ "

ಸಿರಿಯಾಳನು ಶೆಟ್ಟಿ. ಅವನು ಕಡಿಮೆ ಕುಲದವನು ಮಾಚಯ್ಯನು ಅಗಸನು. ಅವನು ಹೀನನು. ಕಕ್ಕಯ್ಯನು ಡೋಹರನು. ಅವನು ನೀಚ ಕುಲದವನು. ಚೆನ್ನಯ್ಯನು ಮಾದರನು. ನಾನು ಹಾರುವನು, ಬ್ರಾಹ್ಮಣನು. ನಾನು ಶ್ರೇಷ್ಠ. ' ಹೀಗೆ ಮೇಲಿನಂತೆ ನಾನು ನುಡಿದರೆ ಕುಲಮದದಿಂದ ಕೂಡಿ ಮಾತಾಡಿದರೆ ದೇವರು ನಗುತ್ತಾನೆ. ಎಂದು ಹೇಳುತ್ತಾನೆ. ಕುಲದಿಂದ ಯಾರೂ ದೊಡ್ಡವರಾಗುವದಿಲ್ಲ. ಸದ್ಗುಣ, ಸದಾಚಾರ, ಸದ್ಭಕ್ತಿಗಳಿಂದ ದೊಡ್ಡವರಾಗುತ್ತಾರೆ. ಜ್ಞಾನದಿಂದ, ಭಕ್ತಿಯ ಬಂಧುತ್ವದಿಂದ ದೊಡ್ಡತನ ಬರುವದು. ಪರಮಾತ್ಮನ ರಾಜ್ಯದಲ್ಲಿ--ಈ ಸೃಷ್ಟಿಯಲ್ಲಿ--ಕುಲಗಳ ಹೆಚ್ಚುಕಡಿಮೆಯ ಜಗಳವು

ಹಾಸ್ಯಾಸ್ಪದವಾದದ್ದೂ ವಿಚಾರವಿಲ್ಲದ್ದೂ ಆಗಿರುವದು. ಇದೇ ಬಸವಣ್ಣನ ವಚನದ ಮರ್ಮವು.

ಮಾದಾರ ಚೆನ್ನಯ್ಯ, ಡೋಹರ ಕಕ್ಕಯ್ಯ, ಮಡಿವಾಳ ಮಾಚಯ್ಯ, ಸಮಗಾರ ಹರಳಯ್ಯ, ಕಿನ್ನರಿಯ ಬ್ರಹ್ಮಯ್ಯ ಮುಂತಾದವರು ಶರಣ ಸಮಾಜದಲ್ಲಿ ಪೂಜ್ಯರಾದರು. ವರ್ಣವ್ಯವಸ್ಥೆಯ ಸಮಾಜದಲ್ಲಿ ಅವರು ಕೀಳರೆಂದು ಎಣಿಸಲ್ಪಡುತ್ತಿದ್ದರು. ಎಂದಮೇಲೆ ವ್ಯಕ್ತಿಯ ವ್ಯಕ್ತಿತ್ವವು ಹೂವಿನಂತೆ ಅರಳಿ ಪ್ರಕಾಶಮಾನವಾಗಬೇಕಾದರೆ ಬಸವನ ಶರಣಸಮಾಜದ ರಚನೆಯೇ ಬೇಕು. ಚೆನ್ನಯ್ಯ, ಕಕ್ಕಯ್ಯ ಮುಂತಾದ ಶರಣರು ತನ್ನ ತಂದೆ ಅಜ್ಜಂದಿರೆಂದು ಬಸವಣ್ಣನು ಹೇಳಿಕೊಂಡಿರುವನು. ಇಷ್ಟೇ ಅಲ್ಲ. ಆ ಪ್ರಕಾರ ಅವರ ಕೂಡ ಸಹಭೋಜನ, ಶರೀರ ಸಂಬಂಧವನ್ನು ಕೂಡಾ ಬೆಳಸಿದ್ದು ಇತಿಹಾಸದಿಂದ ತಿಳಿಯುತ್ತದೆ.

ಬಸವಣ್ಣನ ವಿಶಾಲ ಹೃದಯವುಳ್ಳವರಿಗೆ ಮಾತ್ರ ಇಂಥ ಸುವ್ಯವಸ್ಥೆಯ ಸಮಾಜವನ್ನು ಕಟ್ಟಲಿಕ್ಕೆ ಬರುವದು. ಸಂಕುಚಿತ ಜಾತಿಯ ವರ್ಣಗಳ ವಿಷಮತೆಯು ವ್ಯಾಪಿಸಿದವರಿಗೆ ಸಮಾಜ ಕಟ್ಟಲಿಕ್ಕೆ ಸುಸಂಘಟಿತ ಸಮಾಜವನ್ನು ಕಟ್ಟಲಿಕ್ಕೆ ಬರುವದಿಲ್ಲ. ಜಗದಣ್ಣ ಬಸವಣ್ಣನು ತನ್ನ ಒಂದು ವಚನದಲ್ಲಿ ಹೀಗೆ ಹೇಳಿರುವನು. ಏನೆಂದರೆಃ ಅಪ್ಪನು ನಮ್ಮ ಮಾದಾರ ಚೆನ್ನಯ್ಯ. ಬೊಪ್ಪನು ನಮ್ಮ ಡೋಹರ ಕಕ್ಕಯ್ಯ. ಚಿಕ್ಕಯ್ಯ ನೆಮ್ಮಯ್ಯ ಕಾಣಿರಯ್ಯ. ಅಣ್ಣನು ನಮ್ಮ ಕಿನ್ನರಿಯ ಬೊಮ್ಮಯ್ಯ. ಎನ್ನನೇತಕ್ಕೆ ಅರಿಯಿರಿ ಕೂಡಲ ಸಂಗಮ ದೇವ ? ”

ಜನ್ಮ ವಿಶಿಷ್ಟ ಜಾತಿ, ವರ್ಣ, ಕುಲ, ಗೋತ್ರಗಳು ಸಮಾಜ ಸೇವಕರಿಗೆ ಪ್ರಗತಿಯ ವೈರಿಗಳೆಂಬುದು ತಟ್ಟನೆ ಹೊಳೆಯದಿರದು. ಕುಲಮದದ ಪ್ರತಿಗಾಮೀ ಧೋರಣವನ್ನು ಬಸವಣ್ಣನು ತೀಕ್ಷ್ಣವಾಗಿ ಖಂಡಿಸಿದಂತೆ ಸಮಾಜ ಸೇವಕರೂ ನಿಷೇಧಿಸಬೇಕು. ಬರೀ ನುಡಿಯಲ್ಲಿ ಅಲ್ಲ. ನಡೆಯಲ್ಲಿಯೂ ಕುಲಮದದ ಕಲ್ಪನೆಯು ಕೂಡಾ ಇರಬಾರದು. ತೋರಿಸಬಾರದು.

ಜನ್ಮ ವಿಶಿಷ್ಟ ಜಾತಿ, ವರ್ಣ, ಕುಲ, ಗೋತ್ರಗಳ ಅಸಮಂಜಸ, ವಿಷಮತೆಯ ಭೇದದ ಮತ್ತು ಪ್ರತಿಗಾಮೀ ತತ್ವಗಳ ತಳ

ಹದಿಯ ಮೇಲೆ ನಿಂತ ಯಾವದೇ ಸಮಾಜವು ಮಾನವರನ್ನು ಉದ್ಧಾರ ಮಾಡಲಾರದು. ಇದು ಮಾನವರನ್ನ ಅವನತಿಗೆ ಮಾತ್ರ ಗುರಿ ಮಾಡುವದು. ಹಿಂದುಸ್ತಾನದ ಏಳು ಕೋಟಿ ಅಸ್ಪೃಶ್ಯರೆಂದು ಕರೆಯಲ್ಪಡುವವರ ಹೀನ, ದೀನ, ಕರುಣಾಜನಕ ಸ್ಥಿತಿಯೇ ಈ ಮಾತಿಗೆ ಪ್ರಬಲ ಸಾಕ್ಷಿಯಾಗಿದೆ.

"ಎನ್ನವರಾದರೆ ಜನ್ಮಕ್ಕೆ ನಡೆವರೇ? ಎನ್ನವರಲ್ಲ ಕೂಡಲ ಸಂಗಮದೇವ ನಿಮ್ಮಾಣೆ." ನನ್ನ ಕುಲದವರು ನನ್ನನ್ನ ಈ ಜನ್ಮದಲ್ಲಿ ಉದ್ಧಾರ ಮಾಡುವರೇ? ತಾವೇ ಹೆಚ್ಚೆಂದೂ, ತಮ್ಮ ಕುಲವೇ ಹೆಚ್ಚೆಂದೂ ಹೇಳಿ, ಹಿಂದುಳಿದವರನ್ನು ಮುಂದೆ ತರಲು ಯತ್ನಿಸದವರು, ಕೇವಲ ತಮ್ಮ ಸ್ವಾರ್ಥವನ್ನೇ ನೋಡುವವರು, ಎಂದಾದರೂ ನನ್ನವರಾಗುವದಿಲ್ಲ. ಹೀಗೆ ಬಸವಂಣನು ಕುಲಮದವನ್ನು ಹೀಯಾಳಿಸಿದ್ದಾನೆ. ಭಕ್ತಿ, ಸದಾಚಾರ, ಸದ್ಗುಣ, ನೀತಿ, ಜ್ಞಾನ, ಪರೋಪಕಾರ, ದಯೆ, ಸಮಾನತೆ, ಬಂಧುಪ್ರೇಮ, ತತ್ವಪ್ರೇಮಗಳುಳ್ಳವರೇ ನನ್ನವರು ಇಂಥ ತತ್ವನಿಷ್ಠ ಲೋಕ ಕಲ್ಯಾಣಕರವಾದ ಸಮಾಜವೇ ನನ್ನದು ಎಂದು ಪ್ರತಿಜ್ಞೆ ಮಾಡಿ ಬಸವಂಣನು ಹೇಳಿರುವದು ಸಮಾಜ ಸೇವಕರಿಗೆ ಆದರ್ಶವಾಗಿದೆ.

ಕುಲಮದದಿಂದ, ರಕ್ತಸಂಬಂಧಿಗಳ ಮೇಲಿನ ಅಭಿಮಾನದಿಂದ, ವಂಶಪರಂಪರೆಯ ಮೇಲಿನ ಮೋಹದಿಂದ, ಸಮಾಜ ಸೇವೆ ಮಾಡ ಹೊರಟ ಹಿಂದುಸ್ತಾನದ ಮುಂದಾಳುಗಳೆಂದು ಹೇಳಿಸಿಕೊಳ್ಳುವ ಕೆಲವು ಜನರಿಂದ ಹಿಂದುಸ್ತಾನಕ್ಕೆ ಕಲ್ಯಾಣವಾಗಲಾರದು.

"ಅಂಣ ತಮ್ಮ ಹೆತ್ತಪ್ಪ ಗೋತ್ರವಾದೊಡೇನು? ನಂಟ. ಭಕ್ತಿ ನಾಯಕ ನರಕ ಕೂಡಲ ಸಂಗಮದೇವ.

ಬಸವಂಣನ ಸಮಾಜ ರಚನೆಯಲ್ಲಿ ಜನ್ಮ ವಿಶಿಷ್ಟ ಜಾತಿ ಗೋತ್ರ ಮೊದಲಾದವುಗಳು ಅಸಮಂಜಸ. ವಿಪ್ರಕರ್ಮ, ವರ್ಣ ಕಲ್ಪನೆ, ಅಪವಿತ್ರ. ವಿಪ್ರರ ಯಜ್ಞ-ಯಾಗಗಳ ಕರ್ಮಮಾರ್ಗವು ಅಮಂಗಲ. "ವಿಪ್ರಕರ್ಮವ ಬಿಡಿಸಿ ಅಶುದ್ಧನ ಶುದ್ಧನ ಮಾಡಿದನು ಕೂಡಲ ಸಂಗಮದೇವ" ಎಂದು ಬಸವಂಣನವರು ಹೇಳಿದ್ದಾರೆ.

ಜಗದಂಣ ಬಸವಂಣನು ಬ್ರಾಹ್ಮಣರ ದ್ವೇಷಿಯಲ್ಲ. ಆದರೆ ಬ್ರಾಹ್ಮಣ್ಯದ ದ್ವೇಷಿಯು. ವ್ಯಕ್ತಿಯ ಹೇಯ ತತ್ವಗಳನ್ನು ಅಲ್ಲಗಳೆದು ಆ ವ್ಯಕ್ತಿಯನ್ನು ಪ್ರೀತಿಸಲಿಕ್ಕೆ ಬರುವದು. ಬ್ರಾಹ್ಮಣರ ದ್ವೇಷಿಯಾಗಿದ್ದರೆ ಬ್ರಾಹ್ಮಣನಾಗಿದ್ದ ವೇದವೇದಾಂತಾದಿ ನಾನಾ ಶಾಸ್ತ್ರಗಳನ್ನು ಓದಿದ ಪಂಡಿತನಾದ ಮಧುವಯ್ಯನು ವಿಷಮತೆಯ ಹೇಯ ತತ್ವವನ್ನು ಬಿಟ್ಟು ಸಮಾನತೆಯ ತತ್ವ ಸ್ವೀಕರಿಸಿದ ಕೂಡಲೇ ಬಸವಂಣನವರು ಏಕೆ ವಂದಿಸಿದರು? ಅನೇಕ ಬ್ರಾಹ್ಮಣರೂ ಬಸವಂಣನ ಸಮಾನತೆಯ ಸಮಾಜದಲ್ಲಿ ಸೇರಿರುವರೆಂಬುದು ಇತಿಹಾಸದಿಂದ ತಿಳಿದುಬರುತ್ತದೆ. ಆದಕಾರಣ ಬ್ರಾಹ್ಮಣರ ಮೇಲೆ ಮಾಡುವ ದ್ವೇಷ ತಪ್ಪು. ಬ್ರಾಹ್ಮಣ್ಯದ ಮೇಲೆ ದ್ವೇಷ ಮಾಡಬೇಕು.

"ವಿಪ್ರ ಮೊದಲು ಅಂತ್ಯಜ ಕಡೆಯಾಗಿ ಭಕ್ತರಾದವರನೆಲ್ಲರನೊಂದೇ ಎಂಬೆ." ಇದು ಬಸವಂಣನ ಪ್ರತಿಜ್ಞೆ. ದೃಢ ನಿರ್ಧಾರ. ವಿಪ್ರ ಹೆಚ್ಚು ಅಂತ್ಯಜ ಕಡಿಮೆ ಎಂಬ ಮಾತನ್ನು ಬಸವಂಣನು ನಂಬುವದಿಲ್ಲ ವಿಪ್ರನು ಕರ್ಮ ಮಾರ್ಗವನ್ನು ಬಿಟ್ಟು ಭಕ್ತಿ ಮಾರ್ಗ ಸ್ವೀಕರಿಸಿದರೆ, ಅಂತ್ಯಜನು ಕರ್ಮ ಮಾರ್ಗ ಬಿಟ್ಟು ಭಕ್ತಿ ಮಾರ್ಗ ಸ್ವೀಕರಿಸಿದರೆ, ಇಬ್ಬರೂ ಒಂದೇ ಅಂದರೆ ಭಕ್ತ-ಬಂಧುಗಳಾದರು. ಭಕ್ತ-ಬಂಧುಗಳಲ್ಲಿ ಹೆಚ್ಚು-ಕಡಿಮೆಯಿಲ್ಲ. ಕುಲಮದವಿಲ್ಲ. ವೀರಶೈವ ಸಮಾಜವು ಭಕ್ತ ಬಂಧುಗಳ ಸಮಾಜವು. ಈ ಸಮಾಜದಲ್ಲಿ ಹೆಚ್ಚು ಕಡಿಮೆಯೆಂಬ ಘಾತುಕ ಕಲ್ಪನೆಗೆ ಅವಕಾಶವಿಲ್ಲ. ಎಲ್ಲರೂ ಸಮಾನರು.

ಈ ಪ್ರಕಾರ ಲಿಂಗವಂತರೆಲ್ಲರೂ ಸಮಾನರೆಂದ ಮೇಲೆ ಪರಸ್ಪರ ಸಹ-ಭೋಜನ, ಶರೀರ-ಸಂಬಂಧಾದಿ ಸಹಕಾರ ತತ್ವಗಳಂತೆ ಸಂಘಟಿತರಾಗಿ ನಡೆಯಬೇಕು. ಇದಕ್ಕೆ ವಿಪರೀತವಾಗಿ ನಡೆದರೆ ಅವರು ಲಿಂಗವಂತರಲ್ಲ. ತಾವು ಲಿಂಗವಂತರೆಂದು ಹೇಳಿ ಕುಲಮದವನ್ನು ಬಿಡದಿದ್ದರೆ, ಇಂಥವರು ಜೀವಗಳ್ಳರು. ಇಂಥವರಿಗೆ ಬಸವಂಣನವರು ಹೀಗೆ ನುಡಿದಿದ್ದಾರೆ:—

"ಉಂಬಲ್ಲಿ ಉಡುವಲ್ಲಿ ಕುಲವಳಿಯಿತೆಂಬರು. ಕೊಂಬಲ್ಲಿ ಕೊಡುವಲ್ಲಿ ಕುಲವನರಸುವರು. ಎಂತಯ್ಯಾ ಅವರ ಭಕ್ತರೆಂತೆಂಬೆ? ಎಂತಯ್ಯಾ ಅವರ ಯುಕ್ತರೆಂತೆಂಬೆ? ಕೂಡಲ ಸಂಗಮದೇವ ಕೇಳಯ್ಯಾ ಹೊಲತಿ ಶುದ್ಧನೀರ ಮಿಂದಂತಾಯಿತ್ತಯ್ಯಾ."

ಕುಲಮದದಿಂದ ಸಹ-ಭೋಜನ ಶರೀರ-ಸಂಬಂಧವನ್ನು ಮಾಡ ದಿದ್ದರೆ ಅವರು ಭಕ್ತರೂ ಅಲ್ಲ; ಜ್ಞಾನಿಗಳೂ ಅಲ್ಲ. ಅವರು ಹೊಲೆ ಗುಣಗಳುಳ್ಳ ಹೊಲತಿಯು ಹೊರಗೆ ಜಳಕ ಮಾಡಿ ಮಡಿಯಾದಂ ತೆಯೇ ಸರಿ. ಅಂದರೆ ಅವರು ಹೊಲತಿಯರು. ಹರಳಯ್ಯನು ಸಮಗಾರನಿದ್ದರೂ, ಮಧುವಯ್ಯನು ಬ್ರಾಹ್ಮಣನಿದ್ದರೂ ಇಬ್ಬರೂ ಕುಲಛಲ ಬಿಟ್ಟು ಶರಣ ಸಮಾಜದಲ್ಲಿ ಬಂದ ಮೇಲೆ ಶರೀರ-ಸಂಬಂಧ ಬೆಳಸಿದರು. ಇದೇ ಲಿಂಗವಂತರ ಸಹಜವಾದ ಆಚಾರ. ಹೀಗೆ ನಡೆ ಯುವವರೇ ಲಿಂಗವಂತರು.

---

# ೫. ಬಸವಣ್ಣನವರ ಒಂದು ವಚನದ ಭಾವ.

( ಲೇಖಕಃ— ವೀ. ಶಿ. ಕಂಬಿ. ಸಾಹಿತ್ಯ ಭೂಷಣ
ಕ. ಕ. ಕೊಪ್ಪ ಜಿ॥ ಬೆಳಗಾವಿ )

ವಚನದಲ್ಲಿ ನಾಮಾಮೃತ ತುಂಬಿ
ನಯನದಲ್ಲಿ ನಿಮ್ಮ ಮೂರುತಿ ತುಂಬಿ
ಕಿವಿಯಲ್ಲಿ ನಿಮ್ಮ ಕೀರ್ತಿಯು ತುಂಬಿ
ಮನದಲ್ಲಿ ನಿಮ್ಮ ನೆನಹು ತುಂಬಿ
ಕೂಡಲ ಸಂಗಮದೇವ ನಿಮ್ಮ
ಚರಣ ಕಮಲದೊಳಗಾನು ತುಂಬಿ

ಸಾಹಿತ್ಯವು ಮಾನವನ ಆತ್ಮೋನ್ನತಿಗೆ, ಅಥವ ಮಾನವನನ್ನು ಅಂತರಿಕ ಜಗತ್ತಿನಲ್ಲಿ ( Internal world ) ಕೊಂಡೊಯ್ದು ಅನಂತ ಶಾಂತಿ ಸುಖದ ನಿತ್ಯತೆಯಲ್ಲಿ ನೆಲೆಯಿಸುವದಕ್ಕೆ ಮಾರ್ಗದರ್ಶಿಯಾಗ ಬೇಕು. ಅಂದರೇನೇ ಅದು ಶ್ರೇಷ್ಠ ಸಾಹಿತ್ಯವೆಂದು ಕರೆಯಿಸಿಕೊಳ್ಳಲ್ಪ ಡುವುದು. ಜೀವನದ ಗುರಿಯು ಆತ್ಮ ಸಾಕ್ಷಾತ್ಕಾರವೆಂದ ಮೇಲೆ ಸಾಹಿತ್ಯದ ಗುರಿಯು ಅದನ್ನು ಸಾರ್ಥಕಗೊಳಿಸುವುದಲ್ಲವೆ? ಇಂಥಕಾ ರ್ಯವು ಕಾವ್ಯದಿಂದ ವಿಶೇಷವಾಗಿ, ಪರಿಣಾಮಕಾರಿಯಾಗಿ, ಫಲಕಾ

ರಿಯಾಗಿ ಆಗುವುದು. ಅದಕ್ಕೆಂತಲೇ "I touch by the far spreading wing of my song thy feet which I could newly aspire to reach" ಎಂದು ಕಾವ್ಯದ ಮಹತ್ವವನ್ನು ಶ್ರೀ ಗುರುದೇವರು ಗೀತಾಂಜಲಿಯಲ್ಲಿ ಹೇಳಿದ್ದಾರೆ. ಕಾವ್ಯದ ರೀತಿಗಳು ಹಲವು ಉಂಟು. ಆದರೆ ಅವೆಲ್ಲವುಗಳಲ್ಲಿರುವ ಪ್ರಾಣ ಮಾತ್ರ ಒಂದೇ. "ವಾಕ್ಯಂ ರಸಾತ್ಮಕಂ ಕಾವ್ಯಂ" ಎಂದು ಪಂಡಿತರು ಹೇಳಿದ್ದಾರೆ. ಕಾವ್ಯಂ ಪ್ರಾಣ ರಸವಹುದು. ಆದರೆ ಆ ರಸವನ್ನು ವಿವಿಧ ದೇಹಗಳಲ್ಲಿ ತುಂಬಿ ಬೇರೆ ಬೇರೆ ರೀತಿಯಲ್ಲಿ ತುಂಬುವುದು ಕವಿಯ ಕಾರ್ಯ. ಆಗ್ಗೆ ಕಾವ್ಯ ದೇವಿಗೆ ಹಲವು ಬಗೆಯ ಉಡುಗೆಗಳನ್ನು, ತೊಡುಗೆಗಳನ್ನು, ಉಡಿಸಿ, ತೊಡಿಸಿ ಶೃಂಗಾರ ಮಾಡುತ್ತಾರೆ

ಇವುಗಳನ್ನೆ ಲಾಕ್ಷಣಿಕರು ಹಲವು ಕಟ್ಟುಗಳನ್ನಾಗಿ ಮಾಡಿದರು. ಕಾವ್ಯದ ವಿಷಯವು ಜ್ಞಾನವಾಗಿರಬಹುದು, ವೀರಶ್ರೀಯನ್ನುಂಟುಮಾಡುವಂಥದಾಗಿರಬಹುದು, ಆಸೆ ಆಕಾಂಕ್ಷೆಗಳನ್ನು ಹುಟ್ಟಿಸುವಂಥದಾಗಿರಬಹುದು, ಚರಿತ್ರೆಯಾಗಿರಬಹುದು, ನೀತಿಬೋಧೆಯಾಗಿರಬಹುದು. ಇನ್ನೂ ಏನೇನೋ ಆಗಿರಬಹುದು. ಪ್ರಾರ್ಥನೆಯನ್ನು ಇವುಗಳನ್ನು ಹೇಳುವ ರೀತಿಯಲ್ಲಿ ಹೇಳುವುದು ಕಠಿಣ. ಇಂಥ ಶೃಂಗಾರಮಯ ಕಾವ್ಯರೀತಿಯು ಸ್ತೋತ್ರದಲ್ಲಲ್ಲದೆ ಪ್ರಾರ್ಥನೆಗೆ ಉಪಯೋಗವಾಗಲಾರದು. ಸ್ತೋತ್ರವು ವರ್ಣನೆಗಳಿಂದ ಕೂಡಿರುತ್ತದೆ. ಪ್ರಾರ್ಥನೆಯು ಹಾಗಲ್ಲ. ತನ್ನ ದುರ್ಬಲತೆಯನ್ನೋ, ಆಸೆ ಆಕಾಂಕ್ಷೆಗಳನ್ನೋ ಕೇಳಿಕೊಳ್ಳುವುದು ಇಡುವುದು ಇರುತ್ತದೆ. ಅಲ್ಲಿ ಅಂತರಂಗವನ್ನು ದೇವರ ಮುಂದೆ ಇದ್ದಂತೆ ಇಡುತ್ತಾನೆ ಭಕ್ತ. ದೇವರನ್ನು ಸ್ತೋತ್ರದಲ್ಲಿ ವಿವಿಧ ರೀತಿಯಿಂದ ವರ್ಣಿಸುತ್ತಾನೆ. ಸ್ತೋತ್ರದಲ್ಲಿ ಪ್ರಾರ್ಥನೆಯ ಅಂಶವಿರಬಹುದು. ಆದರೆ ಪ್ರಾರ್ಥನೆಯಲ್ಲಿ ಸ್ತೋತ್ರದ ಲವಲೇಶವೂ ಕಂಡು ಬರುವದಿಲ್ಲ. "ಅಸತೋ ಮಾ ಸದ್ಗಮಯ ತಮಸೋ ಮಾ ಜ್ಯೋತಿರ್ಗಮಯ ಮೃತ್ಯೋರ್ಮಾ ಅಮೃತಂಗಮ" "ಭಕ್ತಿ ಇಲ್ಲದ ಬಡವ ನಾನಯ್ಯ, ದಾಸಯ್ಯನ ಮನೆಯಲ್ಲಿ ಬೇಡಿದೆ, ಕಕ್ಕಯ್ಯನ ಮನೆಯಲ್ಲಿ ಬೇಡಿದೆ. ಎಲ್ಲ ಪುರಾತನರು ನೆರೆದು ಭಕ್ತಿ ಭಿಕ್ಷೆಯನಿತ್ತರಾಗಿ ಎನ್ನ ಪಾತ್ರೆ ತುಂಬಿತ್ತು ಕೂಡಲ ಸಂಗಮ ದೇವ." "ಮಲಗಿಸೆನ್ನನು ತಾಯೆ ನಲ್ಜೋಗಳವ ಪಾಡಿ ಅಳಲಳಲಿ ತೊಳತೊಳಲಿ ಬಂದಿರುವೆನು!...

ನಿನ್ನ ಕರುಣೆಯ ದಿಟ್ಟಿ ಜೊನ್ನದಲಿ ಮಿಂದೆನ್ನ ಬಾಡಿರುವ ಹೃತ್ಕಮಲದ ದಳವರಳಲಿ!'' "ಮೊಲೆಹಾಲು ಸಾಕಮ್ಮ ಸವಿ ಲಾಲಿ ಬೇಕಮ್ಮ! ಮುದ್ದಾಡಿ ರಮಿಸಿ ಪ್ರೈದಡವಿ ಏಳಮ್ಮ ಮಲಗಿರುವ ಪೃಥವಿತಾಯಿ. ಹೊಟ್ಟೆಗಿ ಹಸುವಿಲ್ಲ. ಕರುಳಿಗಿ ಸೊಗಸಿಲ್ಲ. ಮೊಲೆಸಾಕು ಮುದ್ದುಕೊಡತಾಯಿ" ಇಲ್ಲಿ ಕಾವ್ಯದ ಕಟ್ಟುನಿಟ್ಟಿನ ಸೊಗಸು ಬಂಧನವಾದೀತು. ಅದು ಅಷ್ಟೊಂದು ಪ್ರಯೋಜನಕಾರಿಯೂ ಫಲಕಾರಿಯೂ ಆಗಲಾರದು. ಈ ರೀತಿಯ ಕಾವ್ಯದೇವಿಯು ಸುಂದರಿಯುಹುದು. ನಿರಾಭರಣ ಸುಂದರಿ. ಇಂಥ ಕಾರ್ಯವನ್ನು ವಚನಕಾವ್ಯದಲ್ಲಿ ಮಾಡಲು ಸುಲಭಸಾಧ್ಯ. ಯಾಕಂದರೆ ವಿಶ್ವಕವಿ, ಕವಿಗಳ ಗುರುವು ಆದ ಪರಮಾತ್ಮನ ನುಡಿಗಳಿಗೆ ಯಾವನ ಹೃದಯವು ಮಾರುತ್ತರಿಸುವಲ್ಲಿ ಇವನ ಕಾವ್ಯದೇವಿಯು ನೂಪುರದ ಝಣತ್ಕಾರವು ಅಲ್ಲಿ ಗುಂಜಾರವನ್ನೆಬ್ಬಿಸಿ ಆ ತನ್ಮಯತೆಯನ್ನು ಕೆಡಿಸುತ್ತದೆ. ಕಾರಣ ಇಂಥ ಪರಿಪೂರ್ಣ ಶುದ್ಧ ಪ್ರೇಮಪೂರಿತ ಕಾವ್ಯಗಳನ್ನು ವಚನಗಳನ್ನಾಗಿ ಆರಿಸಿಕೊಂಡಿದ್ದಾರೆ ದೇವಮಾನವರು. "My song has no pride of dress and decoration. Ornaments would mar our union; they would come between Thee and me; their jingling would drown thy whispers." ಎಂದು ಲಕ್ಷಣಸಹಿತ ಗುರುದೇವರು ಹೇಳಿದ್ದಾರೆ.

### "ವಚನದಲ್ಲಿ ನಾಮಾಮೃತ ತುಂಬಿ"

ಈ ವಚನವು ಬಹಳ ಗೂಢವಾದುದಿದೆ. ಸಾಮುದಾಯಿಕ ಪ್ರಾರ್ಥನೆಯಲ್ಲಿ ಬಹಳ ಉಪಯೋಗವಾಗುತ್ತಿದೆ ಈ ವಚನ. ವಚನ ಕಾವ್ಯದ ಪ್ರಯೋಜನ, ಅದರ ವಿಶಿಷ್ಟ ಗುರಿ ಮುಂತಾದವುಗಳ ಬಗ್ಗೆ ಹೇಳಿದುದಾಯಿತು. ಇನ್ನು ಈ ವಚನದಲ್ಲಿ ಮೊದಲನೆಯ ಪಾದದಲ್ಲಿ ಹೇಳಿದಂತೆ ಮಹಾತ್ಮಾ ಬಸವಣ್ಣನವರು ಸಾಧಕನ ಸ್ಥಿತಿಯಲ್ಲಿ ನಿಂದು, ಸಾಧಕರಾದ ನಮ್ಮೆಲ್ಲರಿಗೆ ಹೇಳಿಕೊಂಡಿದ್ದಾರೆ ತಮ್ಮ ಮುಖಾಂತರ. "ವಚನ"ವೆಂದೊಡನೆ ನಮ್ಮಲ್ಲಿ ಮೂಡುವುದು ಮೇಲೆ ಹೇಳಿದಂತೆ ಅತ್ಯಂತ ಶ್ರೇಷ್ಠತಮ ಅಂತರಂಗ ಭಾಷೆಯೆಂದು. ಆದರೆ ಇನ್ನಷ್ಟು ನಾವು ಒಳಹೊಕ್ಕು ಬೆರೆದರೆ ಅಲ್ಲಿ ಮನ ಮಾತುಗಳು ಬೆರೆತುಕೊಂಡಿವೆ ಎಂಬುದು ಗೊತ್ತಾಗುತ್ತಿದೆ. ಆ ಶುದ್ಧ ಪ್ರೇಮಮಯ ಮನಸ್ಸು, ಮಾತುಗಳ ಮಿಲನವೇ ದೇವಸ್ತೋತ್ರವು. ಅದುವೇ ದೇವ ಸಾಕ್ಷಾತ್ಕಾರಕ್ಕೆ ಕಾರಣವು.

"He would reveal him-self in the poetry" ಎಂದಂತೆ ವಚನದಿಂದ ತನ್ನ ಸಾಕ್ಷಾತ್ಕಾರವಾಗುವದೆಂದರೆ ಏನೂ ನಷ್ಟವಿಲ್ಲ. ತನಗೆ ತಾನೇ ಪ್ರಕಟಪಡಿಸಿಕೊಳ್ಳುವದೆಂದರೆ, ಜೀವನನ್ನ ದೇವನನ್ನಾಗಿ ಮಾರ್ಪಡಿಸುವದು. ಆಗಲೇ ತನಗೆ ತಾನು ಕಂಡುಕೊಂಡಾನು. ಹೀಗೆ ಮಾರ್ಪಡಿಸಿಕೊಳ್ಳುವಾಗಿನ ಅನುಭವಮಯ ರಸಭರಿತ ಮಾತೇ ಕಾವ್ಯ. ಇದನ್ನು ಮೇಲ್ವಾಯ್ಸು 'ಮಾತೇ ಜ್ಯೋತಿರ್ಲಿಂಗ'ವೆಂದು ದುಂಟು. ಕಾರಣ ಹೇ ದೇವನೇ ನಿನ್ನ ಸಾಕ್ಷಾತ್ಕಾರಕ್ಕೆ ತೀರ ಸಮೀಪ ವಾದ ಪರಿಶುದ್ಧಾಂತರಂಗದಿಂದುಣ್ಮುವಂತೆ ನನ್ನಿಂದ ನುಡಿಸು ಎಂದು ಹೇಳಿ ಸಾಹಿತಿಗಳಿಗೆ, ಸಾಧಕರಿಗೆ, ಜನಸಾಮಾನ್ಯರ ಭಾಷೆಯು ವಚನ ವಾಗಬೇಕು. ಅದರಲ್ಲಿ ನಾಮಾಮೃತ ತುಂಬಿರಬೇಕೆಂಬ ಹಂಬಲ ವನ್ನು ಹೊರಗೆಡಹಿದ್ದಾರೆ. ಪ್ರಗತಿಶೀಲರಿಗೆ, ರಾಷ್ಟ್ರಧುರೀಣರಿಗೆ, ಮುಂದಾಳುಗಳಿಗೆ ಮಂಗಲಮಯ ಭಾಷೆ (ವಚನ) ಇರಲೆಂದು ಹೇಳಿಕೊಂಡಿದ್ದಾರೆ.

**"ನಯನದಲ್ಲಿ ನಿಮ್ಮ ಮೂರುತಿ ತುಂಬಿ"**

ಜಗತ್ತು ಮಂಗಲಮಯ ಶಿವನಿಂದ ಆವರಿಸಲ್ಪಟ್ಟಿದೆ. ಆದರೆ ಆಸುರೀ ವೃತ್ತಿಗಳು ಬಂದು ಕೂಡಿ ಕೆಲವು ಕಡೆ ಅಮಾನುಷ ಕೃತಿ ಗಳನ್ನು ಅಂದರೆ ರಾಕ್ಷಸೀ ಕೃತಿಗಳನ್ನು ನಡಿಸಿ ಕೋಮಲ ಹೃದಯಿ ಗಳಾದ ದೇವವೃತ್ತಿಯ ಮಾನವರನ್ನು ನೋಯಿಸುತ್ತವೆ. ಆದುದರಿಂದ ಅವರು ವಿಶ್ವಪ್ರೇಮಿ ದೇವರಲ್ಲಿ ಬೇಡಿಕೊಳ್ಳುತ್ತಾರೆ. ಎಲ್ಲವೂ ಮಂಗಲ ಮಯ ಕಾರ್ಯದಿಂದ ಜಗತ್ತು ತುಂಬಿ ಉನ್ನತವಾದ ನಿನ್ನ ಪ್ರತೀಕದ ಗುಡಿಗಳು ಪ್ರತಿಮಾನವನಲ್ಲಿ ಹಾರಾಡಲಿ. ಅಂದರೆ ಪ್ರತಿಮಾನವನು ವಿಶ್ವಮಾನವನಾಗಿ ಕಂಡುಕೊಳ್ಳಲಿ. ಪ್ರತಿಯೊಂದರಲ್ಲಿಯ ಶ್ರೇಷ್ಠತೆಯೂ ತಾನೇ ಎಂದು ಹೇಳಿದ್ದಾನೆ ದೇವರು. ಆದುದರಿಂದ ಮಾನವನು ಅಂಥ ಉದಾತ್ತ ಕಾರ್ಯಗಳನ್ನು ಮಾಡಿ ಅತಿಮಾನವತೆಯಿಂದ, ದೇವತ್ವದಿಂದ ತುಂಬಿಕೊಂಡು ಕಂಗೊಳಿಸಲಿ ಎಂಬ ಭಾವವು ಈ ಪಾದದಲ್ಲಿದೆ.

## " ಕಿವಿಯಲ್ಲಿ ನಿಮ್ಮ ಕೀರ್ತಿಯು ತುಂಬಿ "

ಪ್ರಾಣವು ಉಳಿಯಬೇಕಾದರೆ ಭಾಷೆಯು ಬೇಕು. ಪ್ರಾಣಕ್ಕೆ ಭಾಷೆಯೇ ಆಹಾರ. ಭಾಷೆ ಇಲ್ಲದೆ ಪ್ರಾಣವು ಬಾಳಲಾರದು. ಭಾಷೆಯೇ ಜೀವನದ ಪ್ರತಿಬಿಂಬವೆಂದು ಬಲ್ಲವರು ಹೇಳುತ್ತಾರೆ. ಭಾಷೆಯನ್ನು ಮಂಗಲವನ್ನಾಗಿ ಕರಿಸಬೇಕು. ಪ್ರಾಣಪ್ರಿಯವಾದುದಿರ ಬೇಕು ಭಾಷೆ. ಸಮಾಜ, ದೇಶಗಳ ಏಳಿಗೆಯು ಭಾಷೆಯಿಂದ ಆಗ ಬೇಕು. ಇಲ್ಲವಾದಲ್ಲಿ ಅದು ಪ್ರಾಣಕ್ಕೆ ಪ್ರಿಯವಾದುದಲ್ಲ. ಪ್ರಾಣಕ್ಕೆ ಪ್ರಿಯವಾಗದೇ ಇರುವುದು ಸುಶ್ರಾವ್ಯವಲ್ಲ. ಕಾರಣ ಸುಶ್ರಾವ್ಯ ಭಾಷೆಯು ಕೀರ್ತನೆಯು. ಇಂಥ ಕೀರ್ತನೆಯು ಕೇಳುವಂತೆ ನಾಡೆಲ್ಲ ಶ್ರೇಷ್ಠ ಜೀವನದಿಂದ ತುಂಬಿಕೊಂಡು, ಅದರ ಪ್ರತಿಬಿಂಬವಾದ ಭಾಷೆಯು ಶ್ರೇಷ್ಠವಾಗಿರಲೆಂಬುದೇ ಈ ಪಾದದ ಗುಟ್ಟು.

## " ಮನದಲ್ಲಿ ನಿಮ್ಮ ನೆನಹು ತುಂಬಿ "

ಮನಸ್ಸು ಬಹಳೇ ದೊಡ್ಡದು. ಯಾಕಂದರೆ ಭಗವದ್ಗೀತೆಯಲ್ಲಿ ಶ್ರೀಕೃಷ್ಣನೇ " ಇಂದ್ರಿಯಾಣಾಂ ಮನಶ್ಚಾಸ್ಮಿ ಎಂದು ಹೇಳಿದ್ದಾನೆ. ಇದಕ್ಕಿಂತಲೂ ಮುಂದೆ ಹೋಗಿ ಮಹಾತ್ಮಾ ಬಸವಣ್ಣನವರು ದೇವ ರನ್ನು ಶರಣರು ಮನದ ಕೊನೆಯ ಮೇಲಿರಿಸಿಕೊಂಡಿದ್ದಾರೆ, ಕಾರಣ ಸಾಗರ, ಭೂಮಿ, ನಾಗೇಂದ್ರನ ಫಣಾಮಣಿ, ಕಾಳಿ ( ಪಾರ್ವತಿ ), ಶಿವನಿಗಿಂತ ದೊಡ್ಡದು ಎಂದು ಹೇಳಿದ್ದುಂಟು. ಮನಸ್ಸು ದೇವರಾ ದಾಗ್ಯೂ, ದೇವರಕಿಂತ ದೊಡ್ಡದಿದಾಗ್ಯೂ ಮಾಯೆ ಮುಸಿಕಿಕೊಂಡ ಮನಸ್ಸಲ್ಲ. ಯಾಕಂದರೆ ಮಾಯೆ ದೇವರಲ್ಲ. ಕಾರಣ ಅವಿದ್ಯೆಯಿಂದ ಬಿಡುಗಡೆ ಹೊಂದಲಿಕ್ಕೆಬೇಕು. ಅವಿದ್ಯೆ ( ಮಾಯೆ ) ಯಿಂದ ದುಷ್ಕೃತಿ ಗಳಾಗುತ್ತವೆ. ಅವಿದ್ಯೆಯು ಪ್ರೇಮ, ಸತ್ಕಾರ್ಯ ಮೊದಲಾದವುಗಳಿಂದ ಬಿಡುಗಡೆ ಮಾಡಿಸಿ, ಮೋಹ, ಅಪನಂಬಿಕೆ, ದುಷ್ಕೃತ್ಯ ಮೊದಲಾದವು ಗಳಲ್ಲಿ ಸಿಲುಕಿಸುತ್ತದೆ. ಕಾರಣ ಮಾನವರ ಮನಸ್ಸು ದೇವಾಂಶವಾದ ಪವಿತ್ರ ಪ್ರೇಮ, ನಂಬುಗೆ, ಸತ್ಕಾರ್ಯಗಳನ್ನು ಮಾಡಬೇಕೆಂಬ ಉತ್ಕ ಟೇಚ್ಛೆ, ದಯೆ ಮೊದಲಾದವುಗಳಿಂದಾವರಿಸಲ್ಪಡಲೆಂಬುದೇ ಈ ಪಾದದ ಪಲ್ಲವಿಯು.

## " ಕೂಡಲ ಸಂಗಮದೇವ ನಿಮ್ಮ ಚರಣಕಮಲದೊಳಗಾನು ತುಂಬಿ "

ದೇವರ ಪಾದಕಮಲದಲ್ಲಿಯ ಬಂಡುಂಬುವ ತುಂಬಿಯಾಗ ಬೇಕೆಂದಿದ್ದಾರೆ ಮ. ಬಸವಣ್ಣನವರು. ದೇವರ ಕರ್ಮ ( ಸತ್ಕಾರ್ಯ ) ಇವರಿಗಲ್ಲದೆ ಒಲಿಯನು. "Our master him-self has joy-fully taken up on him the bonds of creation. He is bound with us all for ever ..... meet him and stand by him in toil and in sweat thy brow." ಯಾಕಂದರೆ ದೇವರೇ ಸ್ವತಃ ಕರ್ಮಶೀಲನಾಗಿದ್ದಾನೆ ಹೇಡಿಗಳನ್ನು ದೇವರು ಪ್ರೀತಿಸಲಾರನು. ಅವನನ್ನು ನಾವು ಪ್ರೀತಿಸ ಬೇಕಾದಲ್ಲಿ ಅವನಿಗೆ ಪ್ರಿಯವಾದ ಕರ್ಮವನ್ನು ನಾವು ಮಾಡಲೇಬೇಕು. ಅವನೇ ಒಂದೆಡೆಗೆ "ಕ್ಲೈಬ್ಯಂ ಮಾ ಸ್ಮಗಮಃ ಪಾರ್ಥ ನೈತತ್ವಯ್ಯುಪಪದ್ಯತೇ। ಕ್ಷುದ್ರಂ ಹೃದಯ ದೌರ್ಬಲ್ಯಂ ತ್ಯಕ್ತ್ವೋತ್ತಿಷ್ಠ ಪರಂತಪ " ಎಂದು ಹೇಳಿದ್ದುಂಟು. ಇಂಥ ಪರಮಾತ್ಮನ ಪಾದಕಮಲ ಬಂಡುಣಿಯಾಗಬೇಕೆಂಬಲ್ಲಿ, ಆತನ ಸೇವೆಯೆಂದರೆ ವಿಶ್ವಸೇವೆ, ಆತನ ಪೂಜೆಯೆಂದರೆ ವಿಶ್ವಪೂಜೆ, ಆತನ ಮೇಲಿನ ಪ್ರೇಮವೆಂದರೆ ವಿಶ್ವಪ್ರೇಮ ಗೈದರೇನೇ ಆತನ ಪಾದ ಕಮಲದಲ್ಲಿಯ ಬಂಡು ದೊರೆಯುವುದು. ಅಂಥ ಬಂಡು ದೊರೆ ವಂತೆ ನನ್ನಲ್ಲಿ ಬುದ್ಧಿಯನ್ನು ಪ್ರೇರೇಪಸಿ ಚರಣ ಕಮಲದಲ್ಲಿ ತುಂಬಿ ಯಾಗಿರಿಸಯ್ಯಾ ಎಂದು ಹೇಳಿಕೊಂಡಿದ್ದಾರೆ.

ಇನ್ನು ಒಟ್ಟಿನ ಮೇಲೆ ಈ ವಚನವನ್ನು ನಾವು ಭಾಷಾ ಚತುಷ್ಟಯವನ್ನರಿಯಲು ಕೇಳಿಕೊಳ್ಳೋಣ. ( ಪರಾ—ವೃಕ್ಷಗಳಲ್ಲಿ, ಪಶ್ಯತಿ—ಹಾವುಗಳಲ್ಲಿ, ಮಧ್ಯಮೆಯು— ಪಶುಗಳಲ್ಲಿ, ವೈಖರಿಯು—ಮಾನವನಲ್ಲಿ ಹುಟ್ಟುತ್ತವೆ ಎಂದು ವೇದ ಶ್ಲೋಕ ಹೇಳುತ್ತಿದೆ. ) ಆದರೆ 'ಶಿವಾನುಭವ ಶಬ್ದಕೋಶ' ಶ್ರೀ. ಹಳಕಟ್ಟಿಯವರು ಬರೆದದ್ದರ ಪ್ರಕಾರ ಇದು ಹೀಗೆ ಹೇಳುತ್ತಿದೆ.

೧) ವಚನದಲ್ಲಿ ನಾಮಾವೃತ = ನಾಲಗೆಗೆ ಸಂಬಂಧ. ಇದು ಮಧ್ಯಮೆಯ ಕುರುಹು ಹೇಳುತ್ತದೆ

೨) ನಯನದಲ್ಲಿ ನಿಮ್ಮ ಮೂರ್ತಿ = ರೂಪು ಕಣ್ಣಿಗೆ ಸಂಬಂಧ. ಆದುದರಿಂದ ಇದು **ಪಶ್ಯತಿ.**

೩) ಕಿವಿಯಲ್ಲಿ ಕೀರ್ತಿಯು = ನಾದ ಕಿವಿಗೆ ಸಂಬಂಧ. ಆದುದರಿಂದ ಇದು **ವೈಖರಿ.**

೪) ಮನದಲ್ಲಿ ನಿಮ್ಮ ನೆನಹು = ಸೂಕ್ಷ್ಮತೆ (ಪರಿಶುದ್ಧ ಶೂನ್ಯತೆ) ಹೃದಯಕ್ಕೆ ಸಂಬಂಧ. ಇದು **ಪರಾ.**

ಕೊನೆಯದಾಗಿ ನಿಮ್ಮ ಚರಣಕಮಲದೊಳಗಾನು ತುಂಬಿ ಎಂಬದರಲ್ಲಿ ಪರೆ, ಪಶ್ಯತಿ, ಮಧ್ಯಮೆ, ವೈಖರಿಗಳೆಲ್ಲವೂ ಉಂಟು. ಹೇಗೆಂದರೆ:— ನೆನಹು = ಪರಾ. ರಸ ಸವಿವುದು = ಮಧ್ಯಮೆ. ಪ್ರಕಟಣೆ = ಪಶ್ಯತಿ. ಬೆರೆಯುವುದು = ವೈಖರಿ.

---

## ಶಿವಾನುಭವ ಪತ್ರಿಕೆಗೆ ಸಹಾಯ.

ಶಿವಾನುಭವ ಪತ್ರಿಕೆಗೆ ಡಗ್ಗಿ ಬಸವಾಪುರ ಗ್ರಾಮದ ಮ॥ ರಾ॥ ರಾ॥ ಗೌಡೆ ಹನಮಪ್ಪನವರು ಮತ್ತು ಮ॥ ರಾ॥ ರಾ॥ ಪಾನಪ್ಪ ಪಂಪಣ್ಣ ಈ ಉಭಯತರು ೨೩ ರೂಪಾಯಿ ಕಳಿಸಿದ್ದಾರೆ. ಶಿವಮೊಗ್ಗಾ ಜಿಲ್ಲಾ ಚನ್ನಗಿರಿ ತಾಲೂಕಿನಲ್ಲಿಯ ಮರವಂಜಿಯ ಮ॥ ರಾ॥ ರಾ॥ ಗೌಡ ನಂಜಪ್ಪನವರು ೫ ರೂಪಾಯಿಗಳು ಮತ್ತು ಅದೇ ತಾಲೂಕಿನ ಮಲಿಹಾಳ ಸ್ಕೂಲ್ ಮಾಸ್ತರ ಚಿಕ್ಕಪ್ಪನವರು ೧ ರೂಪಾಯಿ ಈ ಪ್ರಕಾರ ಸಹಾಯ ಧನವನ್ನು ನಮಗೆ ಕಳಿಸಿದ್ದು ನಾವು ಅದನ್ನು ಕೃತಜ್ಞತಾ ಪೂರ್ವಕವಾಗಿ ಸ್ವೀಕರಿಸುತ್ತೇವೆ.

ಸಂಪಾದಕರು:—
" ಶಿವಾನುಭವ. "

---

ಮಾಡಲು ಹತ್ತನೆಯಲ್ಲಿ ಸತ್ಯೋದಕವೆನಿಸುವದು. ಇಂತೀ ದಶವಿಧೋದಕವ ಸಲಿಸುವುದು.

ಹೀಗೆ ಸಲಿಸಿದ ಬಳಿಕ ಆ ತೀರ್ಥದ ಬಟ್ಟಲ ಗದ್ದುಗೆಯ ಮೇಲೆ ಇಳುಹಿಕೊಂಡು, ಆ ಭಕ್ತನು ಇದೇ ಮರ್ಯಾದೆಯಲ್ಲಿ ಸಲಿಸಬೇಕು.

ಸಲಿಸಿದ ಬಳಿಕ ಆ ಗದ್ದುಗೆಯಂ ತೆಗೆದು ಆ ಭಕ್ತನ ಸತಿ ಸುತ ಮಿತ್ರ ಬಾಂಧವರು ಸಲಿಸುವುದು. ಎಲ್ಲರೂ ಸಲಿಸಿದ ಬಳಿಕ ಖಂಡಿತವಂ ಮಾಡುವುದು.

ಖಂಡಿತವಾದ ಬಳಿಕ ಆ ಜಂಗಮ ಮೂರ್ತಿಗಳ ಪರಿಯಾಣದಲ್ಲಿ ವೃಷ್ಟಾನ್ನವನ್ನು ಎಡೆ ಮಾಡಿದ ಬಳಿಕ, ಆ ಭಕ್ತನು ದೀರ್ಘದಂಡ ಪ್ರಣತನಾಗಿ, ಸ್ವಾಮಿ ಲಿಂಗಾರ್ಪಿತವಾಗಲೆಂದು ಭಕ್ತಿಯಿಂದ ಸಾಷ್ಟಾಂಗವೆರಗಲೊಡನೆ ಆ ಲಿಂಗ ಜಂಗಮ ಮೂರ್ತಿಗಳು ತಮ್ಮ ದಕ್ಷಿಣ ಹಸ್ತ ಪಂಚಾಂಗುಲಿಗಳಲ್ಲಿ ವಿಭೂತಿಯಂ ಧರಿಸಿಕೊಂಡು, ಪಂಚಾಂಗುಲಿಗಳಲ್ಲಿ ಪಂಚಪ್ರಣಮನ್ಯಾಸವಂ ಮಾಡಿ, ಮಧ್ಯದಲ್ಲಿ ಮೂಲ ಪ್ರಣವ ಪ್ರಸಾದ ಮಂತ್ರನ್ಯಾಸಂಗೈವುದು.

ಹೀಗೆ ನ್ಯಾಸಂಗೈದು ಹಸ್ತ ಸ್ಪರ್ಶ, ಲಿಂಗ ದೃಷ್ಟಿ, ವಾಕ್ಯೇಲ ಮಂತ್ರ ಧ್ಯಾನದಿಂದ ಪದಾರ್ಥದ ಪೂರ್ವಾಶ್ರಯವಳಿಯಲು ಗುರು ಕರದಿಂದ ಶುದ್ಧವಾಯಿತ್ತಾಗಿ ಪ್ರಥಮದಲ್ಲಿ ಶುದ್ಧ ಪ್ರಸಾದವೆನಿಸುವುದು. ಇಂತಪ್ಪ ಶುದ್ಧಪ್ರಸಾದವನ್ನು ತಮ್ಮ ಇಷ್ಟಲಿಂಗಕ್ಕೆ ಪಂಚಾಂಗುಲಿಗಳಿಂದ ಮೂರು ವೇಳೆ ನೈವೇದ್ಯವಂ ಮಾಡಲು ಆ ಪ್ರಸಾದದ ಕಳೆ ಲಿಂಗಕ್ಕೆ ವೇಧಿಸಿ ದ್ವಿತೀಯದಲ್ಲಿ ಸಿದ್ಧಪ್ರಸಾದವೆನಿಸುವುದು. ಅಂತಪ್ಪ ಸಿದ್ಧಪ್ರಸಾದವನ್ನು ತಮ್ಮ ಇಷ್ಟ ಲಿಂಗಕ್ಕೆ ಪಂಚಾಂಗುಲಿಗಳಿಂದ ತೋರಿ, ಎರಡು ವೇಳೆ ಜಿಹ್ವೆಯಲ್ಲಿ ಸ್ವೀಕರಿಸಿ, ಮೂರನೇ ವೇಳೆಯಲ್ಲಿ ಭೋಜ್ಯಗಟ್ಟಿ ಮುಗಿದಲ್ಲಿ ಜಂಗಮ ಮುಖದಿಂದ ಪ್ರಸಿದ್ಧಪ್ರಸಾದವಾಯಿತ್ತಾಗಿ ಮೂರನೆಯಲ್ಲಿ ಪ್ರಸಿದ್ಧ ಪ್ರಸಾದವೆನಿಸುವುದು. ಇಂತೀ ಶುದ್ಧ ಸಿದ್ಧ ಪ್ರಸಿದ್ಧ ಪ್ರಸಾದವು ಭಕ್ತಿ ಮುಖದಿಂ ಬಂದು ಲಿಂಗದಾಪ್ಯಾಯನಕ್ಕೆ ಅನುಕೂಲವಾದುದಲ್ಲಾ ಎಂದು ನಿಶ್ಚಯಿಸಿದಲ್ಲಿ ನಾಲ್ಕನೆಯಲ್ಲಿ ಅಪ್ಯಾಯನ ಪ್ರಸಾದವೆನಿಸುವುದು. ಇಂತೀ ಆಪ್ಯಾಯನ ಪ್ರಸಾದವ ಮುಗಿವ ವೇಳೆಯಲ್ಲಿ ತಮ್ಮ ಎಡಬಲದಲ್ಲಿ ಹಾಲು ಹಣ್ಣು ತುಪ್ಪ ಮೃದು ಮಧುರವಾದ ರಸ

ಸಾರಾಯುವನು ಉಣ್ಣುತ್ತಿರಲು ಅದನ್ನು ಕಂಡು ಅಪೇಕ್ಷಿಸಲಾಗದು. ಅದೇನು ಕಾರಣವೆಂದಡೆ, ಅಂಗಭೋಗವನರ್ಪಿತ ಲಿಂಗಭೋಗ ಶಿವಾರ್ಪಿತ ಎಂದು ಬಯಸಿ ಬಂದಂಗ ಭೋಗವೇ ಅನರ್ಪಿತವೆಂದು ಬಯಸದೆ ಬಂದ ಲಿಂಗಭೋಗವೇ ಶಿವಾರ್ಪಿತವೆಂದು ಉಂಟಾಗಿ, ತಾನಾಗಿ ಲಿಂಗಾಣತಿ ವಿಡಿದು, ಆಂಬಲಿ ಬರಲಿ ಅಮೃತ ಬರಲಿ ಲಿಂಗದ ಸಮಯಾಚಾರಕ್ಕೆ ಒದಗಿದುದೇ ಮಹಾಪ್ರಸಾದ. ಉಳಿದುದೆಲ್ಲ ಅನರ್ಪಿತವೆಂದು ನಿರಾಕರಿಸುವುದೇ ಐವನೆಯುಲ್ಲಿ ಸಮುಯ ಪ್ರಸಾದವೆನಿಸುವದು. ಇಂತೀ ಸಮಯಪ್ರಸಾದವ ಮುಗಿವಲ್ಲಿ ಘ್ರಾಣ ಜಿಹ್ವೆ ನೇತ್ರ ತ್ವಕ್ಕು, ಶ್ರೋತ್ರ, ಪಂಚೇಂದ್ರಿಯಂಗಳು ಸೋಂಕಿ ಬಂದ ಇಂದ್ರಿಯೋಚ್ಛಿಷ್ಟವು ಲಿಂಗಕ್ಕೆ ಅಯೋಗ್ಯವೆಂದು ಆ ಪಂಚೇಂದ್ರಿಯಂಗಳು ಮುಟ್ಟದ ಮುನ್ನ ಲಿಂಗಾರ್ಪಿತವ ಮಾಡುತ್ತಿಪ್ಪನಾಗಿ, ಆರನೆಯುಲ್ಲಿ ಪಂಚೇಂದ್ರಿಯ ವಿರಹಿತ ಪ್ರಸಾದವೆನಿಸುವದು. ಅಂತಪ್ಪ ಪಂಚೇಂದ್ರಿಯ ವಿರಹಿತ ಪ್ರಸಾದವ ಮುಗಿವಲ್ಲಿ ಆಂಗದ ಕರಣಂಗಳ ಗುಣಂಗಳಿಗೆ ವಿಲಕ್ಷಣವಾಗಿ ಲಿಂಗಪ್ರಸಾದವ ಮುಗಿವುತ್ತಿರ್ಪುದರಿಂದ ಏಳನೆಯುಲ್ಲಿ ಅಂತಃಕರಣ ಚತುಷ್ಟಯ ವಿರಹಿತ ಪ್ರಸಾದವೆನಿಸುವದು. ಇಂತಪ್ಪ ಪ್ರಸಾದಿಯು ಲಿಂಗ ಜಂಗಮ ಪ್ರಸಾದವನೇ ಜಂಗಮಲಿಂಗಕ್ಕೆ ಕೊಟ್ಟು ಸಮರಸ ಭೋಗವ ಮಾಡುತ್ತಿಪ್ಪನಾಗಿ, ಎಂಟನೆಯುಲ್ಲಿ ಪ್ರಸಾದಿಯು ಪ್ರಸಾದವೆನಿಸುವುದು. ಇಂತಪ್ಪ ಪ್ರಸಾದಿಯು ಪ್ರಸಾದದಲ್ಲಿ ತೃಪ್ತಿ ಪಡೆದ ಬಳಿಕ, ಪ್ರಸಾದ ವಿಮುಖದೋರದೆ ಪ್ರಸಾದ ಭಾವಿಸುವ ಭಾವವು ಪ್ರಸಾದದ ಸದ್ಭಾವವಾಯಿತ್ತಾಗಿ ಒಂಬತ್ತನೆಯುಲ್ಲಿ ಸದ್ಭಾವ ಪ್ರಸಾದವೆನಿಸುವುದು. ಇಂತಾದ ಬಳಿಕ ಹಸಿವಿನ ಉಪತಾಪವಡಗಿ, ಶಮೆ ದಮೆ ಶಾಂತಿಸೈರಣೆಯುಳ್ಳಾತನಾಗಿಪ್ಪನಾಗಿ ಹತ್ತನೆಯುಲ್ಲಿ ಸಮತ ಪ್ರಸಾದವೆನಿಸುವುದು. ಇಂತಿಪ್ಪ ಸಮತ ಪ್ರಸಾದದಲ್ಲಿ ತೃಪ್ತಿಪಡೆದು ಆ ಕ್ರಿಯಾ ಪ್ರಸಾದವ ಖಂಡಿತವ ಮಾಡುವಲ್ಲಿ, ತಾನು ಅಖಂಡ ಪರಿಪೂರ್ಣ ಪ್ರಸಾದಿಯಾಗಿಪ್ಪನಾಗಿ, ಏಕಾದಶದಲ್ಲಿ ಜ್ಞಾನಪ್ರಸಾದವೆನಿಸುವದು.

ಇಂತೀ ಸದ್ವೀರ ಮಾಹೇಶ್ವರರಾಚರಣೆಯ ನಿರೂಪಾಗ್ರದಲ್ಲಿ ಮುಂದೆ ಸದ್ಭಕ್ತರು ಆಚರಿಸುವ ಏಕಾದಶ ಪ್ರಸಾದದ ಆಚರಣೆಯ ವಿಚಾರವು, ಅದರ ವಿಸ್ತಾರವೆಂತೆನಲು:—

ಆ ಜಂಗಮ ಮೂರ್ತಿಗಳು ಪ್ರಸಾದವ ಖಂಡಿತ ಮಾಡುವ ಸಮಯದಲ್ಲಿ ಆ ಸದ್ಭಕ್ತನು ಸ್ವಾಮಿ ನಿಮ್ಮ ಒಕ್ಕುಮಿಕ್ಕ ಪ್ರಸಾದವ ನಿಕ್ಕಿ ನಿಮ್ಮ ಭೃತ್ಯನ ಸಲಹಬೇಕೆಂದು ಸಾಷ್ಟಾಂಗವೆರಗಲೊಡನೆ ಆಗ ಮೂರ್ತಿಗಳಿಗೆ ಕೃಪೆ ಹುಟ್ಟಿ, ಎಲಾ ಮಗನೇ ಈ ಪ್ರಸಾದವ ಮುಗಿಯಬೇಕಾದರೆ ಬಹಳ ಸುಯಿಧಾನಿಯಾಗಬೇಕು. ಅದೆಂತೆಂದೊಡೆ, ಉಂಡು ಉಳಿಸದೆ, ಕೊಂಡು ಮರಳದೆ ತುಂತುರ ಹನಿ ಹಾರದೆ ಮುಖವಿಲೀನ ಅಂಗಲೇಪನ ದ್ರವ ಖಂಡಿತವೆಂಬ ಸಪ್ತ ವಿಧ ಭಕ್ತಿಗಳಿಂದ ಈ ಪ್ರಸಾದವ ಖಂಡಿತ ಮಾಡು ಮಗನೇ ಎಂದು ತಮ್ಮ ಪ್ರಸಾದದ ಬಟ್ಟಲ ಕರುಣಿಸಿ ಕೊಡುವುದು.

ಕೊಟ್ಟಲ್ಲಿ ಆ ಬಟ್ಟಲಲ್ಲಿ ತಾನು ಪರುಷಹಾರ ಪ್ರಮಾಣಿನಲ್ಲಿ ಗಡಣಿಸಿಕೊಂಡು, ತಾನು ತನ್ನ ಪಂಚಾಂಗುಲಿಗಳ ಮೂಲ ಮುದ್ರೆಯಿಂದ ತನ್ನ ಇಷ್ಟ ಲಿಂಗಕ್ಕೆ ಮೂರು ವೇಳೆ ರೂಪನರ್ಪಿಸಲು ಆ ರೂಪೇ ಪ್ರಥಮದಲ್ಲಿ ಶುದ್ಧ ಪ್ರಸಾದವೆನಿಸುವದು. ಮುಂದೆ ಎರಡು ವೇಳೆ ಲಿಂಗಕ್ಕೆ ತೋರಿ ಪಂಚಾಂಗುಲಿಗಳ ಸ್ವೀಕರಿಸಲು ಆ ರೂಪಿನೊಳಗಣ ರುಚಿಯೇ ದ್ವಿತೀಯದಲ್ಲಿ ಸಿದ್ಧ ಪ್ರಸಾದವೆನಿಸುವುದು. ಕಡೆಯ ವೇಳೆಯಲ್ಲಿ ಆ ಪಂಚಾಂಗುಳಿಗಳಿಂದ ಬೋಜೆಗಟ್ಟಿ ಮುಗಿವಲ್ಲಿ ಆ ರೂಪು ರುಚಿ ಎರಡರ ತೃಪ್ತಿಯೇ ತೃತೀಯದಲ್ಲಿ ಪ್ರಸಿದ್ಧ ಪ್ರಸಾದವೆನಿಸುವುದು. ಇಂತೀ ಶುದ್ಧ ಸಿದ್ಧ ಪ್ರಸಿದ್ಧ ಪ್ರಸಾದವ ಕರುಣಿಸಿದ ಗುರುಲಿಂಗ ಜಂಗಮದ ಆಪ್ಯಾಯನವನಿಕ್ಕಿ ತನ್ನ ಹಸಿವಿನ ಆಪ್ಯಾಯನಕ್ಕೆ ಅವರ ಕೃಪಾ ಪದಾರ್ಥವ ಪಡೆದು ಕೊಂಬುವುದೇ ನಾಲ್ಕನೆಯಲ್ಲಿ ಆಪ್ಯಾಯನ ಪ್ರಸಾದವೆನಿಸುವುದು. ಇಂತಪ್ಪ ಪ್ರಸಾದಿಯು ಸಮಯ ಭೇದವ ಮಾಡಲಾಗದು. ಅದೇನು ಕಾರಣವೆಂದಡೆ, ಕಂಚಿನ ಸಮಯ, ಕಬ್ಬಿಣದ ಸಮಯ, ಲೋಹದ ಸಮಯ, ಮರದ ಸಮಯ ಮುಂತಾದ ಅನಂತ ಸಮಯಂಗಳ ಮೇಲೆ ಕಾಣಿಸುವ ಜ್ಯೋತಿ ಒಂದೇ ಹೇಗೆ ಮುಖ್ಯವಾಗಿ ಇರ್ಪುದೋ ಹಾಗೆ, ಮುರಿಗೆ ಸಮಯ, ಚೀಲಾಳ ಸಮಯ, ಕೆಂಪಿನ ಸಮಯ, ಕುಮಾರ ಸಮಯ ಮುಂತಾದ ಅನಂತ ಸಮಯಗೊಳಗಾಗಿ ಭಕ್ತಿ ಜ್ಞಾನ ವೈರಾಗ್ಯವನುಳ್ಳ ನಿರಂಜನ ಜಂಗಮವು ಆವ ಸಮಯದಲ್ಲಿದ್ದರೂ ಅವರೇ ಕರ್ತೃಗಳೆಂದು ಅವರ ಕರುಣ ಪ್ರಸಾದವ ಪಡೆದುಕೊಂಬುವುದೇ

ಐದನೆಯಲ್ಲಿ ಸಮಯ ಪ್ರಸಾದವೆನಿಸುವುದು. ಇಂತೀ ಪ್ರಸಾದವ ಮುಗಿವಲ್ಲಿ ಆ ಪ್ರಸಾದವು ಮುಗಿವ ಶಬ್ದವ ಲಾಲಿಸುವದು ಶ್ರೋತ್ರ, ಆ ಪ್ರಸಾದವ ಮರಳಿ ಬೋಜೆಗಟ್ಟುವುದು ತ್ವಕ್ಕು, ಆ ಪ್ರಸಾದವ ಪರೀಕ್ಷೆ ನಿರೀಕ್ಷೆ ಮಾಡುವುದು ನೇತ್ರ, ಆ ಪ್ರಸಾದವ ಸ್ವೀಕರಿಸುವುದು ಜಿಹ್ವೆ, ಆ ಪ್ರಸಾದದ ಗಂಧವನರಿವುದು ಘ್ರಾಣ, ಇಂತೀ ಪಂಚೇಂದ್ರಿಯಂಗಳ ಆ ಪ್ರಸಾದದಲ್ಲಿ ಗತವಾಗಿ ಉಳಿದ ವಿಷಯಂಗಳಿಗೆ ಎರಗುವುದಕ್ಕೆ ತೆರಪಿಲ್ಲದ ಕಾರಣ ಆರನೆಯಲ್ಲಿ ಪಂಚೇಂದ್ರಿಯ ವಿರಹಿತ ಪ್ರಸಾದವೆನಿಸುವುದು. ಇಂತೀ ಪ್ರಸಾದದ ನೆನಹಿನಲ್ಲಿಪ್ಪುದು ಮನಸ್ಸು, ಈ ಪ್ರಸಾದವ ನಿಶ್ಚಯಿಸುವುದೇ ಬುದ್ಧಿ, ಇಂತೀ ಪ್ರಸಾದವ ದೃಢೀಕರಿಸುವುದೇ ಅಹಂಕಾರ, ಇಂತೀ ಅಂತಃಕರಣ ಚತುಷ್ಟಯಂಗಳು ಆ ಪ್ರಸಾದದಲ್ಲಿ ಮುಳುಗಿ ಇನ್ನುಳಿದ ದ್ರವ್ಯಹಾರಕ್ಕೆ ಎಡೆ ತೆರಪಿಲ್ಲದ ಕಾರಣ ಏಳನೆಯಲ್ಲಿ ಅಂತಃಕರಣ ಚತುಷ್ಟಯ ವಿರಹಿತ ಪ್ರಸಾದವೆನಿಸುವುದು. ಈ ಪ್ರಸಾದವ ಭೋಗಿಸುವಲ್ಲಿ ತನ್ನ ಪ್ರಸಾದವ ಲಿಂಗಕ್ಕೆ ಕೊಟ್ಟು ಲಿಂಗ ಪ್ರಸಾದವ ತಾನು ಅನುಭವಿಸುತ್ತಿಪ್ಪನಾಗಿ ಎಂಟನೆಯಲ್ಲಿ ಪ್ರಸಾದಿಯ ಪ್ರಸಾದವೆನಿಸುವುದು. ಇಂತಪ್ಪ ಪ್ರಸಾದಿಯ ಪ್ರಸಾದವನನುಭವಿಸುವ ಪ್ರಸಾದಿಯ ಭಾವವೆಲ್ಲ ಪ್ರಸಾದಮಯವಾಗಿ ಸದ್ಭಾವವಾಯಿತ್ತಾಗಿ, ಒಂಬತ್ತನೆಯಲ್ಲಿ ಸದ್ಭಾವ ಪ್ರಸಾದವೆನಿಸುವುದು. ಇಂತಪ್ಪ ಪ್ರಸಾದವ ಸವಿದು ಹಸಿವಡಗಿ ತೃಷೆ ಮುಂದೆ ತೋರುತ್ತಿರಲು ಸಿತಾಳ ಶಿವದಾನ ಎಳೆ ಅಗ್ಗಣಿ ಕಬ್ಬಿನಹಾಲು ಮುಂತಾದ ಪಾನ್ಯ ದ್ರವ್ಯಂಗಳುಂಟಿ ಸರ್ವಾಂಗದಲ್ಲಿ ಶಾಂತಭರಿತನಾಗಿ ಇರುತ್ತಿರಲು ಹತ್ತನೆಯಲ್ಲಿ ಸಮಯಪ್ರಸಾದವೆನಿಸುವದು. ಇಂತೀ ಪ್ರಸಾದದ ಮದೋನ್ಮತ್ತವು ತಲೆಗೇರಿ ಕಣ್ಣುಚ್ಚುತ್ತ ತೆರೆವುತ್ತ ಜಾಗ್ರತ್ ಸ್ವಪ್ನವ ಮೀರಿ, ಸುಷುಪ್ತಾವಸ್ಥೆಯ ಭಾವಲಿಂಗ ಸಮಯವಾಗಬೇಕೆನ್ನುತ್ತಿರಲು ಹನ್ನೊಂದನೆಯಲ್ಲಿ ಜ್ಞಾನಪ್ರಸಾದವೆನಿಸುವುದು. ಇಂತಪ್ಪ ಏಕಾದಶ ಪ್ರಸಾದವನನುಭವಿಸಿದ ಭಕ್ತಂಗೆ ಹಸಿಯಾದ ಭೂಮಿಯ ಸಸಿ ಕಳೆ ಏರುವಂತೆ ಚಿತ್ಕಳೆ ಮೊಳೆದೋರುತ್ತಿರಲು, ಅದು ಚಿತ್ಕಲಾ ಪ್ರಸಾದವೆನಿಸುವದು. ಇಂತಪ್ಪ ಚಿತ್ಕಲಾ ಪ್ರಸಾದ ಸ್ವರೂಪಿಗಳಾದ ಭಕ್ತ ಮಹೇಶ್ವರರುಗಳಲ್ಲಿ ಈ ಏಕಾದಶ ಪ್ರಸಾದವು ಸಂಬಂಧವಾಗಿರುತ್ತಿಹವು. ಅದರ ವಿಸ್ತಾರವೆಂತೆಂದೊಡೆ—

ದೀಕ್ಷಾತ್ರಯಗಳಿಂದ ತನುತ್ರಯಂಗಳ ಪೂರ್ವಾಶ್ರಯವಂ ಕಳೆದು ಅಂಗತ್ರಯಂಗಳ ಮೇಲೆ ಲಿಂಗತ್ರಯಂಗಳ ಆ ಅನುಗ್ರಹವಾಗಲಲ್ಲಿ ತನು ಶುದ್ಧವಾಯಿತ್ತಾಗಿ, ಅದು ಪ್ರಥಮದಲ್ಲಿ ಶುದ್ಧ ಪ್ರಸಾದವೆನಿಸುವುದು. ಅಂತಪ್ಪ ಇಷ್ಟಲಿಂಗವನ್ನು "ಮಂತ್ರ ಮಧ್ಯೋದ್ಭವೇ ಲಿಂಗಂ । ಲಿಂಗ ಮಧ್ಯೋದ್ಭವೇ ಮಂತ್ರಂ ಲಿಂಗ ಮಂತ್ರೋಭಯೋರೈಕ್ಯ ಇಷ್ಟಲಿಂಗಂ ತು ಶಾಂಕರೀ" ಎಂದು ಮಂತ್ರ ಸ್ವರೂಪವಂ ನೆನೆವುತ್ತಿರಲು, ಆ ನೆನೆವ ಮನಸ್ಸಿನಲ್ಲಿ ಮಂತ್ರ ಸಿದ್ಧಿಸಿ, ಆ ಮನವೇ ದ್ವಿತೀಯದಲ್ಲಿ ಸಿದ್ಧ ಪ್ರಸಾದವೆನಿಸುವದು. ಇಂತೀ ತನುಶುದ್ಧಪ್ರಸಾದವಾಯಿತ್ತು, ಮನವೇ ಸಿದ್ಧ ಪ್ರಸಾದನಾಯಿತ್ತು, ಎಂಬ ಭಾವವೇ ಪ್ರಸಿದ್ಧ ಪ್ರಸಾದವೆನಿಸುವುದು. ಇಂತೀ ಮೂರಕ್ಕೆ ಮೂಲಿಗನಾದ ಆತ್ಮನ ಈ ತ್ರಿವಿಧ ಪ್ರಸಾದದ ಕಳೆ ವೇಧಿಸಿ ಮೋಕ್ಷಾಪೇಕ್ಷೆ ನಷ್ಟವಾಗಿ ಹೋಯಿತ್ತೆಂಬುದೀಗ ನಾಲ್ಕನೆಯಲ್ಲಿ ಆಪ್ಯಾಯನ ಪ್ರಸಾದವೆನಿಸುವುದು. ಇಂತಪ್ಪ ಮೋಕ್ಷಾಪೇಕ್ಷೆಯ ಕೆಡಿಸಿ ನಿತ್ಯತ್ವವನುಂಟುಮಾಡುವ ಗುರುಕಾರುಣ್ಯ ಪ್ರಸಾದವ ನಮ್ಮ ಶಿವಾಚಾರ ಶಿವಸಮಯಕಲ್ಲದೆ ಮಿಕ್ಕ ಮತಾಂತರಗಳಿಗೆ ಈ ವರ್ತನೆ ಇಲ್ಲವೆಂಬುದೀಗ ಐದನೆಯಲ್ಲಿ ಸಮಯಪ್ರಸಾದವೆನಿಸುವುದು. ಘ್ರಾಣದಲ್ಲಿ ಗಂಧಪ್ರಸಾದ, ಜಿಹ್ವೆಯಲ್ಲಿ ರಸಪ್ರಸಾದ, ನೇತ್ರದಲ್ಲಿ ರೂಪು ಪ್ರಸಾದ, ತ್ವಕ್ಕಿನಲ್ಲಿ ಸ್ಪರ್ಶನ ಪ್ರಸಾದ, ಶ್ರೋತ್ರದಲ್ಲಿ ಶಬ್ದಪ್ರಸಾದ, ಇಂತೀ ಪಂಚೇಂದ್ರಿಯಂಗಳಲ್ಲಿ ಪಂಚಪ್ರಸಾದವ ಸಂಬಂಧಿಸಿಕೊಂಡು, ಪಂಚವಿಷಯ ವಿರಹಿತನಾಗಿರುತಿಪ್ಪನಾಗಿ, ಆರನೆಯಲ್ಲಿ ಪಂಚೇಂದ್ರಿಯ ವಿರಹಿತ ಪ್ರಸಾದವೆನಿಸುವುದು. ಮನ ಮಂತ್ರಪ್ರಸಾದ ಬುದ್ಧಿ ನಿಜಪ್ರಸಾದ ಚಿತ್ತ ಸ್ವಯಪ್ರಸಾದ ಅಹಂಕಾರ ಮಹಾಪ್ರಸಾದವಾಗಲೊಡನೆ ಅಂಗ ಕರಣಂಗಳೆಲ್ಲವು ಲಿಂಗ ಕರಣಂಗಳಾಗಿರುತ್ತಿಹ ಕಾರಣ ಏಳನೆಯಲ್ಲಿ ಅಂತಃಕರಣ ಚತುಷ್ಟಯ ವಿರಹಿತ ಪ್ರಸಾದವೆನಿಸುವುದು. ಇಂತೀ ಸರ್ವಾಂಗವು ಲಿಂಗಮಯವಾಗಿ ಲಿಂಗವ ಭಜಿಸುತ್ತ ಲಿಂಗಭೋಗೋಪಭೋಗಿಯಾಗಿ ಇರುತ್ತಿಹ ಕಾರಣ ಎಂಟನೆಯಲ್ಲಿ ಪ್ರಸಾದಿಯ ಪ್ರಸಾದವೆನಿಸುವುದು. ಇಂತಪ್ಪ ಸದ್ಭಾವಿಯಾದ ಸತ್ಪುರುಷನು ಒಬ್ಬರಂದಲ್ಲಿ ಆಡಿದಲ್ಲಿ ಕೊಂದಲ್ಲಿ ಬಡಿದಲ್ಲಿ ಜರಿದಲ್ಲಿ ಧಿಃಕ್ಕರಿಸಿದಲ್ಲಿ ಹೇಯವಿಟ್ಟು ನುಡಿದಲ್ಲಿ ಸರ್ವಸಮತಾಭಾವಿಯಾಗಿಪ್ಪದೇ ಒಂಬತ್ತನೆಯಲ್ಲಿ ಸಮತಪ್ರಸಾದವೆನಿಸುವದು. ಇಂತೀ ಸರ್ವಸಮತಾಭಾವವೇ ಅಂಗ

ವಾದ ಶರಣನು ಗಾಳಿಇಲ್ಲದ ದೀಪದಂತೆ, ಕಾಲಿಲ್ಲದ ಕಪಿಮರಿಯಂತೆ, ರೆಕ್ಕೆ ಇಲ್ಲದ ಪಕ್ಷಿಯಂತೆ, ನೆರೆ ಕೆರೆ ಬುದ್ಬುದಾಕಾರವಿಲ್ಲದ ಸಮುದ್ರ ದಂತೆ, ಸಹಜ ಸುಜ್ಞಾನ ತರಹರವಾಗಿಪ್ಪುದೇ ಏಕಾದಶದಲ್ಲಿ ಜ್ಞಾನಪ್ರ ಸಾದವೆನಿಸುವುದು.

ಇಂತೀ ಏಕಾದಶ ಪ್ರಸಾದ ನಿರೂಪಣಾಗ್ರದಲ್ಲಿ ಸ್ವರೂಪಾರ್ಥವಂ ನಿವೇದಿಸುತ್ತಿಹೆವು. ಅದೆಂತೆಂದೊಡೆಃ—ಬಕಾರ ಮಂತ್ರವೇ ಶುದ್ಧಪ್ರಸಾ ದವು. ಅದು ಇಷ್ಟಲಿಂಗ ಸ್ವರೂಪವಾಗಿ ತ್ಯಾಗಾಂಗದಲ್ಲಿ ಸಂಬಂಧವಾಗಿ ರುತ್ತಿಹುದು. ಸಕಾರ ಮಂತ್ರವೇ ಸಿದ್ಧಪ್ರಸಾದವು. ಅದು ಪ್ರಾಣಲಿಂಗ ವಾಗಿ ಭೋಗಾಂಗದಲ್ಲಿ ಸಂಬಂಧವಾಗಿರುತ್ತಿಹುದು. ವಕಾರಮಂತ್ರವೇ ಪ್ರಸಿದ್ಧ ಪ್ರಸಾದವು. ಅದು ಭಾವಲಿಂಗವಾಗಿ ಯೋಗಾಂಗದಲ್ಲಿ ಸಂಬಂ ಧವು. ನಕಾರವೇ ಅಸ್ವಾಯುನ ಪ್ರಸಾದವು. ಅದೇ ಆಚಾರಲಿಂಗವಾಗಿ ಭಕ್ತಾಂಗದಲ್ಲಿ ಸಂಬಂಧವು. ಮಕಾರವೇ ಸಮಯ ಪ್ರಸಾದವು. ಅದೇ ಗುರುಲಿಂಗ ಜಂಗಮವಾಗಿ ಮಹೇಶ್ವರನ ಅಂಗದಲ್ಲಿ ಸಂಬಂಧವು. ಶಿಕಾ ರವೇ ಪಂಚೇಂದ್ರಿಯ ವಿರಹಿತ ಪ್ರಸಾದವು. ಅದೇ ಶಿವಲಿಂಗವಾಗಿ ಪ್ರಸಾದಿಯ ಅಂಗದಲ್ಲಿ ಸಂಬಂಧವು ವಕಾರವೇ ಅಂತಃಕರಣ ಚತುಷ್ಟಯ ವಿರಹಿತ ಪ್ರಸಾದವು. ಅದೇ ಜಂಗಮಲಿಂಗವಾಗಿ ಪ್ರಾಣಲಿಂಗಿಯ ಅಂಗ ದಲ್ಲಿ ಸಂಬಂಧವು. ಯಕಾರವೇ ಪ್ರಸಾದಿಯ ಪ್ರಸಾದವು. ಅದೇ ಪ್ರಸಾದ ಲಿಂಗವಾಗಿ ಶರಣನ ಅಂಗದಲ್ಲಿ ಸಂಬಂಧವು. ಓಂಕಾರವೇ ಸದ್ಭಾವ ಪ್ರಸಾದವು. ಅದೇ ಮಹಾಲಿಂಗವಾಗಿ ಐಕ್ಯನ ಅಂಗದಲ್ಲಿ ಸಂಬಂಧವು. ಅಕಾರವೇ ಸಮತಾಪ್ರಸಾದವು. ಅದೇ ನಿಃಕಲ ಲಿಂಗವಾಗಿ ಸ್ಥೂಲಾಂಗದಲ್ಲಿ ಸಂಬಂಧವು. ಉಕಾರವೇ ಜ್ಞಾನಪ್ರಸಾದವು. ಅದೇ ಶೂನ್ಯ ಲಿಂಗವಾಗಿ ಸೂಕ್ಷ್ಮಾಂಗದಲ್ಲಿ ಸಂಬಂಧವು. ಮಕಾರವೇ ಚಿತ್ಕಲಾ ಪ್ರಸಾದವು. ಅದೇ ನಿರಂಜನ ಲಿಂಗವಾಗಿ ಕಾರಣಾಂಗದಲ್ಲಿ ಸಂಬಂಧವು ಇಂತೀ ಆಚಾರ ಸಂಬಂಧ ಸ್ವರೂಪವಾಗಿ ಭಕ್ತ ಮಹೇಶ್ವರ ಪ್ರಸಾದಿ ಪ್ರಾಣಲಿಂಗಿ ಶರಣ ಐಕ್ಯರೆಂಬ ಷಟ್‌ಸ್ಥಲ ಬ್ರಹ್ಮಿಗಳಲ್ಲಿ ವಿರಾಜಿಸುವ ಏಕಾದಶ ಪ್ರಸಾದ ಒಂದು ವಿಗ್ರಹವಾಗಿ ಪ್ರಸಾದ ಸ್ವಾಮಿಗಳೆಂಬ ಅಭಿಧಾನದಿಂದ ಮರ್ತ್ಯ ಲೋಕದಲ್ಲಿ ಅವತರಿಸಿ, ಕರಣ ಹಸಿಗೆ, ಮಂತ್ರ ಗೋಪ್ಯ ಮುಂತಾದ ತತ್ವ ಶಾಸ್ತ್ರಂಗಳಿಗೆ ಅತಿ ಬಾಹುಳ್ಯವಾಗಿ ವ್ಯಾಖ್ಯಾನವಂ ನಿರೂಪಿಸಿದ

ಪ್ರಸಾದ ಸ್ವಾಮಿಗಳವರ ಸಾಂಪ್ರದಾಯಕರಾದ ಅವಿರಳ ಪರಂಜ್ಯೋತಿ ಸ್ವರೂಪಾಯಮಾನ ನಿರಂಜನ ಜಂಗಮ ಹಾಲವರ್ತಿ ಚನ್ನವೀರ ದೇಶಿ ಕೇಂದ್ರನ ಕೃಪಾಬಲದಿಂ ಶಾಸನಪತಿ ಹುಲಿಗೆರಿಯವರಾದ ಸೋಮಾ ರಾಧ್ಯರ ಶಾಂತವೀರ ಗುರುವರೇಣ್ಯನಿಂದ ನಿರೂಪಿತಮಪ್ಪ ಏಕಾದಶ ಪ್ರಸಾದ ನಿರ್ಣಯ ಸಮಾಪ್ತ ಮಂಗಳ ಮಹಾ ಶ್ರೀ.

---

# ಪ್ರಸಾದ

## ಅರ್ಪಣಕ್ರಮ.

(೧) ಪೃಥ್ವಿ ಅಂಗವಾದ ಭಕ್ತಂಗೆ ಸುಚಿತ್ತವೆಂಬ ಹಸ್ತ, ಆ ಹಸ್ತಕ್ಕೆ ಕ್ರಿಯಾಶಕ್ತಿ, ಆ ಶಕ್ತಿಗೆ ಆಚಾರಲಿಂಗ, ಅದಕ್ಕೆ ಘ್ರಾಣೇಂದ್ರಿಯವೇ ಮುಖ, ಆ ಮುಖಕ್ಕೆ ಸುಗಂಧ ಪದಾರ್ಥವನ್ನು ಘ್ರಾಣದಲ್ಲಿಹ ಆಚಾರಲಿಂಗಕ್ಕೆ ಭಕ್ತಿಯಿಂದರ್ಪಿಸಿ ಸುಗಂಧಪ್ರಸಾದವನ್ನು ಪಡೆದು ಸುಖಿಸುವಾತನೇ ಸದ್ಭಕ್ತನು.

ಅಪ್ಪುವೇ ಅಂಗವಾದ ಮಹೇಶ್ವರಂಗೆ ಸುಬುದ್ಧಿಯೇ ಹಸ್ತ, ಆ ಹಸ್ತಕ್ಕೆ ಜ್ಞಾನಶಕ್ತಿ, ಆ ಶಕ್ತಿಗೆ ಗುರುಲಿಂಗ, ಆ ಲಿಂಗಕ್ಕೆ ಜಿಹ್ವೇಂದ್ರಿಯವೇ ಮುಖ, ಆ ಮುಖಕ್ಕೆ ಸುರಸ ಪದಾರ್ಥವನ್ನು ಜಿಹ್ವೆಯಲ್ಲಿಹ ಆ ಲಿಂಗಕ್ಕೆ ನೈಷ್ಠಿಕಾ ಭಕ್ತಿಯಿಂದರ್ಪಿಸಿ ಆ ಸುರಸ ಪ್ರಸಾದವನ್ನು ಪಡೆದು ಸುಖಿಸುವಾತನೇ ಮಹೇಶ್ವರನು.

ಅಗ್ನಿ ಅಂಗವಾದ ಪ್ರಸಾದಿಗೆ ನಿರಹಂಕಾರವೆಂಬ ಹಸ್ತ, ಆ ಹಸ್ತಕ್ಕೆ ಇಚ್ಛಾಶಕ್ತಿ, ಆ ಶಕ್ತಿಗೆ ಶಿವಲಿಂಗ, ಆ ಲಿಂಗಕ್ಕೆ ನಯನೇಂದ್ರಿಯವೇ ಮುಖ. ಅದಕ್ಕೆ ಸುರೂಪು ಪದಾರ್ಥ, ಆ ಪದಾರ್ಥವನ್ನು ನೇತ್ರದಲ್ಲಿ ಶಿವಲಿಂಗಕ್ಕೆ ಸಾವಧಾನ ಭಕ್ತಿಯಿಂದರ್ಪಿಸಿ ಆ ಸುರೂಪು ಪ್ರಸಾದವ ಪಡೆದು ಸುಖಿಸುವಾತನೇ ಪ್ರಸಾದಿ.

ಪವನಾಂಗವಾದ ಪ್ರಾಣಲಿಂಗಿಗೆ ಸುಮನವೆಂಬ ಹಸ್ತ, ಆ ಹಸ್ತಕ್ಕೆ ಆದಿ ಶಕ್ತಿ, ಆದಿ ಶಕ್ತಿಗೆ ಜಂಗಮಲಿಂಗ, ಆ ಲಿಂಗಕ್ಕೆ ತ್ವಗಿಂದ್ರಿಯವೇ ಮುಖ, ಆ ಮುಖಕ್ಕೆ ಸುಸ್ಪರ್ಶ ಪದಾರ್ಥ, ಆ ಪದಾರ್ಥವನ್ನು ತ್ವಕ್ಕಿನಲ್ಲಿಹ ಜಂಗಮಲಿಂಗಕ್ಕೆ ಅನುಭಾವ ಭಕ್ತಿಯಿಂದರ್ಪಿಸಿ ಆ ಸುಸ್ಪರ್ಶ ಪದಾರ್ಥವ ಪಡೆದು ಸುಖಿಸುವಾತನೇ ಪ್ರಾಣಲಿಂಗಿ.

ಗಗನಾಂಗವಾದ ಶರಣಂಗೆ ಸುಜ್ಞಾನವೆಂಬ ಹಸ್ತ, ಆ ಹಸ್ತಕ್ಕೆ ಪರಾಶಕ್ತಿ, ಆ ಶಕ್ತಿಗೆ ಪ್ರಸಾದಲಿಂಗ, ಆ ಲಿಂಗಕ್ಕೆ ಶ್ರವಣೇಂದ್ರಿಯ ಮುಖ, ಆ ಮುಖಕ್ಕೆ ಸುಶಬ್ದ ಪದಾರ್ಥ, ಆ ಪದಾರ್ಥವನ್ನು ಕರ್ಣದಲ್ಲಿಹ ಪ್ರಸಾದಲಿಂಗಕ್ಕೆ ಆನಂದ ಭಕ್ತಿಯಿಂದರ್ಪಿಸಿ, ಆ ಸುಶಬ್ದ ಪ್ರಸಾದವ ಪಡೆದು ಸುಖಿಸುವಾತನೇ ಶರಣನು.

ಆತ್ಮನೇ ಅಂಗವಾದ ಐಕ್ಯಂಗೆ ಸದ್ಭಾವವೆಂಬ ಹಸ್ತ, ಆ ಹಸ್ತಕ್ಕೆ ಚಿತ್‌ಶಕ್ತಿ, ಆ ಚಿತ್‌ಶಕ್ತಿಗೆ ಮಹಾಲಿಂಗ, ಆ ಲಿಂಗಕ್ಕೆ ಹೃದಯೇಂದ್ರಿಯವೇ ಮುಖ, ಆ ಮುಖಕ್ಕೆ ಸ್ವತೃಪ್ತಿಯೇ ಪದಾರ್ಥ, ಆ ಪದಾರ್ಥವನ್ನು ಹೃದಯದಲ್ಲಿ ಮಹಾಲಿಂಗಕ್ಕೆ ಸಮರಸ ಭಕ್ತಿಯಿಂದರ್ಪಿಸಿ ಆ ತೃಪ್ತಿ ಪ್ರಸಾದವ ಪಡೆದು ಸುಖಿಸುವಾತನೇ ಐಕ್ಯನು.

ಇಂತೀ ಆರುವಿಧ ಸಂಬಂಧದ ಅರ್ಪಿತಾವಧಾನವನರಿದು ಆನಂದಿಸುವ ಮಹಾ ಪ್ರಸಾದಿಗಳ ತೋರಿ ಬದುಕಿಸಯ್ಯ ಅಖಂಡೇಶ್ವರಾ.

೨. ಎನ್ನ ನೇತ್ರ ಪ್ರಸಾದವಯ್ಯ, ಎನ್ನ ಶ್ರೋತ್ರ ಪ್ರಸಾದವಯ್ಯ, ಎನ್ನ ಘ್ರಾಣ ಪ್ರಸಾದವಯ್ಯ, ಎನ್ನ ಜಿಹ್ವೆ ಪ್ರಸಾದವಯ್ಯ, ಎನ್ನ ತನು ಪ್ರಸಾದವಯ್ಯ, ಎನ್ನ ಮನ ಪ್ರಸಾದವಯ್ಯ, ಎನ್ನ ಪ್ರಾಣ ಪ್ರಸಾದವಯ್ಯ, ಎನ್ನ ಜೀವ ಪ್ರಸಾದವಯ್ಯ. ಎನ್ನ ಸಕಲ ಕರಣೇಂದ್ರಿಯಂಗಳೆಲ್ಲ ಪ್ರಸಾದವಯ್ಯ. ಅಖಂಡೇಶ್ವರಾ ನಿಮ್ಮ ಮಹಾಪ್ರಸಾದದ ಬೆಳಗಿನೊಳಗೆ ಓಲಾಡುತಿರ್ದೆನಯ್ಯ.

೩. ಎನ್ನ ಪ್ರಾಣದ ಕೊನೆಯಲ್ಲಿ ಕುಳ್ಳಿರ್ದು ಷಡ್ವಿಧ ಗಂಧವೆಂಬ ಭಕ್ತಿ ಪದಾರ್ಥವ ಕೈಕೊಂಡು ಎನಗೆ ಮುಕ್ತಿಯ ಪ್ರಸಾದವನ್ನು ಕರುಣಿಸುವಾತನು ನೀನೇ ಅಯ್ಯ. ಎನ್ನ ಜಿಹ್ವೆಯ ಕೊನೆಯಲ್ಲಿ ಕುಳ್ಳಿರ್ದು ಷಡ್ವಿಧರಸವೆಂಬ ಭಕ್ತಿಯ ಪದಾರ್ಥವ ಮುಖಕ್ಕೆ ಕೈಕೊಂಡು ಎನಗೆ ಮುಕ್ತಿಪ್ರಸಾದವನ್ನು ಕರುಣಿಸುವಾತನು ನೀನೇ ಅಯ್ಯ. ಎನ್ನ ನೇತ್ರಂಗಳ ಕೊನೆಯಲ್ಲಿ ಕುಳ್ಳಿರ್ದು ಷಡ್ವಿಧ ರೂಪೆಂಬ ಭಕ್ತಿ ಪದಾರ್ಥವ ಕೈಕೊಂಡು ಎನಗೆ ಮುಕ್ತಿ ಪ್ರಸಾದವನ್ನು ಕರುಣಿಸುವಾತನು ನೀನೇ ಅಯ್ಯ. ಎನ್ನ ತ್ವಕ್ಕಿನ ಕೊನೆಯಲ್ಲಿ ಕುಳ್ಳಿರ್ದು ಷಡ್ವಿಧ ಸ್ಪರ್ಶನವೆಂಬ ಭಕ್ತಿ ಪದಾರ್ಥವ ಕೈಕೊಂಡು ಮುಕ್ತಿ ಪ್ರಸಾದವ ಕರುಣಿಸುವಾತನು ನೀನೇ ಅಯ್ಯ. ಎನ್ನ ಶ್ರೋತ್ರಗಳ ಕೊನೆಯಲ್ಲಿ ಕುಳ್ಳಿರ್ದು ಷಡ್ವಿಧ ಶಬ್ದವೆಂಬ ಭಕ್ತಿ ಪದಾರ್ಥವ ಕೈಕೊಂಡು ಎನಗೆ ಮುಕ್ತಿ ಪ್ರಸಾದವನು ಕರುಣಿಸುವಾತನು ನೀನೇ ಅಯ್ಯ. ನನ್ನ ಹೃದಯದ ಕೊನೆಯಲ್ಲಿ ಕುಳ್ಳಿರ್ದು ಷಡ್ವಿಧ ತೃಪ್ತಿಯೆಂಬ ಭಕ್ತಿ ಪದಾರ್ಥವನ್ನು ಕೈಕೊಂಡು ಎನಗೆ ಮುಕ್ತಿ ಪ್ರಸಾದವನ್ನು ಕರುಣಿಸುವಾತ ನೀನೇ ಅಯ್ಯ. ಅಖಂಡೇಶ್ವರಾ.

೪. ಲಿಂಗ ಘ್ರಾಣದಲ್ಲಿ ಲಿಂಗಕ್ಕೆ ಲಿಂಗ ಗಂಧವನರ್ಪಿಸಿ ಲಿಂಗ ಪ್ರಸಾದವ ಗ್ರಹಿಸುತಿರ್ಪನಯ್ಯಾ ನಿಮ್ಮ ಪ್ರಸಾದಿ. ಲಿಂಗ ಜಿಹ್ವೆಯಲ್ಲಿ ಲಿಂಗಕ್ಕೆ ಲಿಂಗ ರುಚಿಯನರ್ಪಿಸಿ ಲಿಂಗಪ್ರಸಾದವ ಗ್ರಹಿಸುತಿರ್ಪನಯ್ಯಾ ನಿಮ್ಮ ಪ್ರಸಾದಿ. ಲಿಂಗ ತ್ವಕ್ಕಿನಲ್ಲಿ ಲಿಂಗಕ್ಕೆ ಲಿಂಗ ಸ್ಪರ್ಶವನರ್ಪಿಸಿ ಲಿಂಗ ಪ್ರಸಾದವ ಗ್ರಹಿಸುತಿರ್ಪನಯ್ಯಾ ನಿಮ್ಮ ಪ್ರಸಾದಿ. ಲಿಂಗ ಶ್ರೋತ್ರದಲ್ಲಿ ಲಿಂಗಕ್ಕೆ ಲಿಂಗ ಶಬ್ದವನರ್ಪಿಸಿ ಲಿಂಗ ಪ್ರಸಾದವ ಗ್ರಹಿಸುತಿರ್ಪನಯ್ಯಾ ನಿಮ್ಮ ಪ್ರಸಾದಿ. ಲಿಂಗ ನೇತ್ರದಲ್ಲಿ ಲಿಂಗಕ್ಕೆ ಲಿಂಗ ರೂಪವನರ್ಪಿಸಿ ಲಿಂಗಪ್ರಸಾದವ ಗ್ರಹಿಸುತಿರ್ಪನಯ್ಯಾ ನಿಮ್ಮ ಪ್ರಸಾದಿ. ಇಂತೀ ಒಳಹೊರಗೆ ತೆರಹಿಲ್ಲದ ಲಿಂಗಕ್ಕೆ ಲಿಂಗವನರ್ಪಿಸಿ ಪ್ರಸಾದವ ಗ್ರಹಿಸಿ ಘನಲಿಂಗವಾಗಿರ್ಪ ಮಹಾ ಪ್ರಸಾದಿಗೆ ನಮೋ ನಮೋ ಎಂಬೆನಯ್ಯಾ ಅಖಂಡೇಶ್ವರಾ.

೫. ಪೃಥ್ವಿ ಎಂಬ ಭೂತಾಂಗದ ಪ್ರಕೃತಿ ವಿಕಾರವಾದ ಗುಣವಳಿದು ಭಿನ್ನ ಗಂಧ ಹಂಗನು ಹರಿದು ಆಚಾರಲಿಂಗಕ್ಕೆ ವದನವಾಗಿರ್ಪುದಯ್ಯಾ ಎನ್ನ ಘ್ರಾಣವು. ಅಪ್ಪುವೆಂಬ ಭೂತಾಂಗದ ಪ್ರಕೃತಿ ವಿಕಾರವಾದ ಗುಣವಳಿದು ಭಿನ್ನರುಚಿಯ ಹಂಗನು ಹರಿದು ಗುರುಲಿಂಗಕ್ಕೆ ವದನವಾಗಿರ್ಪುದಯ್ಯ ಎನ್ನ ಜಿಹ್ವೆಯು. ಅಗ್ನಿ ಎಂಬ ಭೂತಾಂಗದ ಪ್ರಕೃತಿ ವಿಕಾರವಾದ ಗುಣವಳಿದು ಭಿನ್ನರೂಪಿನ ಹಂಗ ಹರಿದು ಶಿವಲಿಂಗಕ್ಕೆ ವದನವಾಗಿರ್ಪುದಯ್ಯಾ ಎನ್ನ ನೇತ್ರ. ಪವನವೆಂಬ ಭೂತಾಂಗದ ಪ್ರಕೃತಿ ವಿಕಾರವಾದ ಗುಣವಳಿದು ಭಿನ್ನ ಸ್ಪರ್ಶನದ ಹಂಗ ಹರಿದು ಜಂಗಮ ಲಿಂಗಕ್ಕೆ ವದನವಾಗಿರ್ಪುದಯ್ಯಾ ಸರ್ವಾಂಗವು. ಆಕಾಶವೆಂಬ ಭೂತಾಂಗದ ಪ್ರಕೃತಿ ವಿಕಾರವಾದ ಗುಣವಳಿದು ಭಿನ್ನ ಶಬ್ದದ ಹಂಗು ಹರಿದು ಪ್ರಸಾದಲಿಂಗಕ್ಕೆ ವದನವಾಗಿರ್ಪುದಯ್ಯಾ ಎನ್ನ ಶ್ರೋತ್ರ. ಇಂತೀ ಷಡ್ವಿಧ ಭೂತಾಂಗದ ಪ್ರಕೃತಿ ವಿಕಾರದ ಗುಣವಳಿದು ಷಡ್ವಿಧ ಭಿನ್ನ ಪದಾರ್ಥದ ಹಂಗು ಹರಿದು ಷಡ್ವಿಧೇಂದ್ರಿಯಗಳ ಷಡ್ವಿಧ ಲಿಂಗಕ್ಕೆ ವದನವಾಗಿ ಅಖಂಡೇಶ್ವರಾ ನಾನೇ ನೀನಾದೆಯಯ್ಯಾ.

---

## ಇಷ್ಟ, ಪ್ರಾಣ, ಭಾವ ಲಿಂಗಾರ್ಪಿತ.

ಇಷ್ಟ ಲಿಂಗಕ್ಕೆ ತನ್ನ ಶರೀರವ ಸಮರ್ಪಿಸುವುದು. ಪ್ರಾಣ ಲಿಂಗಕ್ಕೆ ತನ್ನ ಮನಸ್ಸನ್ನೇ ಸಮರ್ಪಿಸುವುದು. ತನ್ನ ಭಾವಲಿಂಗಕ್ಕೆ ತನ್ನ ಪರಿಣಾಮವನೇ ಸಮರ್ಪಿಸುವುದು ನೋಡಾ ಅಪ್ರಮಾಣ ಕೂಡಲ ಸಂಗಮದೇವಾ.

## ಲಿಂಗಕ್ಕೆ ಗುರು ಪ್ರಸಾದವು.

೧. ನೀ ಹುಟ್ಟಿದೆಯಯ್ಯ ಗುರುವಿನ ಮನಸ್ಥಲದಲ್ಲಿ. ನಾ ಹುಟ್ಟಿದೆನಯ್ಯ ಗುರುವಿನ ಕರಸ್ಥಲದಲ್ಲಿ. ಇದು ಕಾರಣ ನನ್ನ ಅಂಗವ ಮಾಡಿ ನಿನ್ನ ಪ್ರಾಣವ ಮಾಡಿ ಲಿಂಗ ಪ್ರತಿಷ್ಠೆಯ ಮಾಡಿ ದನಯ್ಯ ಶ್ರೀಗುರು. ಶ್ರೀಗುರುವಿನ ಪ್ರಸನ್ನ ಪ್ರಸಾದದಿಂದ ನಾನೂ ನೀನೂ ಹುಟ್ಟಿದೆವಾಗಿ ಎನಗೂ ನಿನಗೂ ಗುರು ಪ್ರಸಾದವೇ ಪ್ರಾಣ ನೋಡಾ. ಇದು ಕಾರಣ ಪ್ರಸಾದವ ಎಲೆ ಲಿಂಗವೇ ನೀನೂ ನಾನೂ ಕೊಳಲೇ ಬೇಕು. ಗುರು ಪ್ರಸಾದವ ಕೊಳದಿದ್ದರೆ ನೀ ಲಿಂಗವಲ್ಲ ನೋಡಾ. ಪ್ರಸಾದವಿಲ್ಲದ ಲಿಂಗಕ್ಕೆ ದೇವತ್ವವೆಲ್ಲಿಯದೋ? ದೇವತ್ವವಿಲ್ಲದದು ಪೂಜೆಗೆ ಸಲುವುದೇ? ಪೂಜೆಗೆ ಸಲ್ಲದೆಂದೆನು ಕಾಣಾ, ಎಲೆ ಶಿವನೇ ನೀ ಸಾಕ್ಷಿಯಾಗಿ. ಇದು ಕಾರಣ ಗುರು ಪ್ರಸಾದವ ನಾನು ಕೊಳಲೇ ಬೇಕು. ಆ ಗುರು ಪ್ರಸಾದವ ಕೊಳ್ಳ ದಿದ್ದರೆ ನಾನು ಪ್ರಸಾದಿಯಲ್ಲ ನೋಡಾ. ಇದು ಕಾರಣ ನಾನು ನೀನು ಗುರು ಪ್ರಸಾದಿಗಳು ಕಾಣಾ. ಕೇಳು, ಗುರು ಮಂತ್ರೋಪ ದೇಶದಿಂದ ಹುಟ್ಟಿದ ಲಿಂಗಕ್ಕೆ ಗುರು ಪ್ರಸಾದವ ಕೊಡಬಾರದು ಎಂಬ ಅನಾಚಾರಿಗಳಿಗೆ ನಾಯಕ ನರಕ ತಪ್ಪದು ನೋಡಾ. ಸಾಕ್ಷಿ ಏವಂ ಭೇದ ಕಳಾದೇವಿ ಸದ್ಗುರು ಶಿಷ್ಯ ಮಸ್ತಕೆ ಹಸ್ತಾಬ್ಜ ಮಥನಂ ಗ್ರಾಹ್ಯಂ ತಸ್ಯ ಭಾವಕರೋದಿತಂ। ವಪುರೇವ ಸಮುತ್ಪನ್ನಂ ತತ್ಪ್ರಾಣಂ ಮಿಶ್ರತೇ ಭವೇತ್ತು ॥" "ಯಥಾ ಗುರು ಕರಜಾತೋ ಲಿಂಗ ಭಕ್ತಿರ್ವಿಭೇದತಃ ॥" ಎಂದುದಾಗಿ ಗುರು ಪ್ರಸಾದ ಎನಗೂ ನಿನಗೂ ಪ್ರಾಣ ಪ್ರತಿಷ್ಠೆ ಎಂದೆನು ಕಾಣಾ ಮಹಾಲಿಂಗ ಗುರುಶಿವ ಸಿದ್ಧೇಶ್ವರ ಪ್ರಭುವೇ.

೨. ಗುರುವಿನ ಮೂರ್ತಿ ನಿರಾಕಾರವು ನೋಡಾ. ಲಿಂಗದ ಮೂರ್ತಿ ಆಕಾರ ನೋಡಾ. ಆ ನಿರಾಕಾರ ಸ್ವರೂಪವಪ್ಪ ಗುರುವಿನ ಪ್ರಸಾದವ ಆಕಾರ ಸ್ವರೂಪವಪ್ಪ ಲಿಂಗಕ್ಕೆ ಕೊಡಬೇಕೆಂಬುದೇ ಶಿವಾಚಾರದ ಪಥ ನೋಡಾ ಆ ಶ್ರೀಗುರು ಪ್ರಸಾದವ ಅಂಗಕ್ಕೆ ಕೊಡಬಹುದು, ಲಿಂಗಕ್ಕೆ ಕೊಡಬಾರದು, ಎಂಬ ಅನಾಚಾರಿಯ ಮುಖವ ನೋಡಲಾಗದು. ಗುರುವಿನಿಂದಲೇ ಲಿಂಗವ ಪಡೆಯ ಬಹುದೆಂದರೆ ಗುರು ಮುಖದಿಂದ ಬಂದ ಪ್ರಸಾದವ ಲಿಂಗಕ್ಕೆ ಕೊಡಬಾರದು ಎಂಬ ಮರುಳು ಮಾನವನ ಭ್ರಾಂತಿಯ ನೋಡಿ ನಾನು ಹೇಸಿದೆನು ಕಾಣಾ. ಅದೆಂತೆಂದೊಡೆ ಸಾ.—"ಅಶರೀರಂ ಗುರೋರ್ಭಾವಂ ಆಕಾರಂ ಲಿಂಗ ಮೂರ್ತಿಷು ॥ ಅನಂಗ ಸಂಗ ಸಂಯುಕ್ತಂ ಗುರೋರ್ಲಿಂಗ ಸಮಾಶ್ರಿತಂ ॥" ಎಂದುದಾಗಿ ಗುರು ಪ್ರಸಾದವ ಲಿಂಗಕ್ಕೆ ಕೊಡಬೇಕು ಕಂಡ್ಯಾ. ಆ ಗುರು ಪ್ರಸಾದದಿಂದ ಲಿಂಗಕ್ಕೆ ಪರಿಣಾಮವಪ್ಪುದು ತಪ್ಪದು ನೋಡಾ ಮಹಾಲಿಂಗ ಗುರು ಶಿವ ಸಿದ್ಧೇಶ್ವರ ಪ್ರಭುವೇ.

೩. ಗುರು ಶಿಷ್ಯರಿಬ್ಬರೂ ಸಹಪಙ್ಕ್ತಿಯಲ್ಲಿ ಲಿಂಗಾರ್ಚನೆಯ ಮಾಡಿಹೆವೆಂಬರಯ್ಯಾ. ಹೋ ಹೋ ಬಾಲ ಭಾಷೆಯ ಕೇಳಲಾಗದು. ಅಲ್ಲಲ್ಲ, ಮಾಡಬಹುದು. ಅದೇನು ಕಾರಣ? ಗುರುವಿನ ಅರಿವಿನ ಇರವನರಿಯಬಲ್ಲಡೆ ಮಾಡಬಹುದು, ಮಾಡಬಹುದು. ಶಿಷ್ಯ ಪ್ರಸಾದ ವೆಂಬುಭಯ ಸಂದೇಹ ಹಿಂದುಳಿಯ ಬಲ್ಲಡೆ ಮಾಡಬಹುದು. ಇದಲ್ಲದೆ ಲಿಂಗ ಪ್ರಸಾದದ ಮೇಲೆ ಗುರು ಪ್ರಸಾದವ ನಿಕ್ಕಿಹೆನೆಂಬ ಶಿವದ್ರೋಹಿಗಳನೇನೆಂಬೆ? ಕೊಂಡಿಹೆನೆಂಬ ಗುರುದ್ರೋಹಿಗಳನೇನೆಂಬೆ? ಇದು ಕಾರಣ ಮಹಾಘನ ಸೋಮೇಶ್ವರ ನಿಮ್ಮಲ್ಲಿ ಇವರಿಬ್ಬರ ಗುರುಶಿಷ್ಯರೆಂದೆನೆಂದಡೆ ಎನ್ನನಿಲ್ಲಿ ನೀನೆದ್ದು ಹೋಗಯ್ಯಾ.

---

## ಗುರು ಲಿಂಗಕ್ಕೆ ಜಂಗಮ ಪ್ರಸಾದವು.

೧. ಆ ಭಕ್ತಂಗೆ ಲಿಂಗವೇ ಪ್ರಾಣ, ಲಿಂಗಕ್ಕೆ ಗುರುವೇ ಪ್ರಾಣ, ಆ ಗುರುವಿಂಗೆ ಜಂಗಮವೇ ಪ್ರಾಣ ನೋಡಾ. ಅದೇನು

ಕಾರಣವೆಂದಡೆ ಆ ನಿತ್ಯ ನಿರಂಜನ ಪರವಸ್ತುವೇ ಘನ ಚೈತನ್ಯವೆಂಬ ಜಂಗಮವು ನೋಡಾ. ಆ ಪರಮ ಜಂಗಮದಿಂದ ನಿಃಕಲ ನಿರಂಜನ ಪರವಸ್ತು ಗುರುಮೂರ್ತಿ ಉದಯವಾದನು ನೋಡಾ. ಆ ನಿಃಕಲ ಗುರುಮೂರ್ತಿಯಿಂದ ಆದಿ ಮಹಾಲಿಂಗ ಉದಯವಾಯಿತ್ತು ನೋಡಾ. ಆದಿ ಮಹಾಲಿಂಗದಿಂದ ಮೂರ್ತಿಗೊಂಡನು ಭಕ್ತನು. ಆ ಗುರುವಿಂಗೆ ಆ ಲಿಂಗಕ್ಕೆ ಆ ಭಕ್ತಂಗೆ ಆ ಜಂಗಮ ಪ್ರಸಾದವೇ ಪ್ರಾಣ ನೋಡಾ. ಇದು ಕಾರಣ ಭಕ್ತನಾದರೂ ಲಿಂಗವಾದರೂ ಗುರುವಾದರೂ ಜಂಗಮ ಪ್ರಸಾದವ ಕೊಳದಿರ್ದೊಡೆ ಆವ ಗುರುವಲ್ಲ, ಅದು ಲಿಂಗವಲ್ಲ, ಆತ ಭಕ್ತನಲ್ಲ ನೋಡಾ. ಆ ಶೈವ ಪಾಷಂಡಿಯ ಕೈಯ್ಯ ಪಡೆದುದು ಉಪದೇಶವಲ್ಲ. ಆತನಿಂದ ಪಡೆದುದು ಲಿಂಗವಲ್ಲ ಆ ಲಿಂಗ ಧರಿಸಿರ್ದಾತ ಭಕ್ತನಲ್ಲ. ಆತ ಭೂತ ಪ್ರಾಣಿ ನೋಡಾ. ಇದು ಕಾರಣ ಜಂಗಮ ಪ್ರಸಾದ ಲಿಂಗಕ್ಕೆ ಕೊಟ್ಟು ಕೊಂಬಾತನೇ ಶಿವಭಕ್ತನು. ಆ ಜಂಗಮದ ಪ್ರಸಾದವ ಲಿಂಗಕ್ಕೆ ಕೊಟ್ಟು ಕೊಳದಿರ್ದಡೆ ಆತ ಭವಿಗಿಂತಲೂ ಕರಕಷ್ಟ ನೋಡಾ. ಆ ಭವ ಭಾರಿಯ ಮುಖವ ನೋಡಲಾಗದು ಕಾಣಾ ಮಹಾಲಿಂಗ ಗುರುಶಿವ ಸಿದ್ಧೇಶ್ವರ ಪ್ರಭುವೇ.

೨ ಭೂತ ಪ್ರಾಣಿಯ ಕಳೆದು ಲಿಂಗ ಪ್ರಾಣಿಯ ಮಾಡಿದ ಬಳಿಕ ಶಿಷ್ಯನೇ ಜಂಗಮವಾಗಿ ಗುರುವಿನ ಮಠಕ್ಕೆ ಗುರುವೆಂಬ ಹಮ್ಮಿಲ್ಲದೆ ಪರಮ ಗುರುವೆಂಬ ಪಾದಾರ್ಚನೆಯಂ ಮಾಡುವುದು ಆಚಾರ. ನಾಚಿ ಮಾಡದಿರ್ದಡೆ ನಾಯಕ ನರಕ. ಆ ಜಂಗಮ ಶಂಕೆ ಇಲ್ಲದೆ ಪಾದಾರ್ಚನೆಯ ಮಾಡಿಸಿಕೊಂಬುದು ಕರ್ತೃತ್ವ ಶಂಕೆಗೊಂಡಡೆ ಪಂಚ ಮಹಾಪಾತಕ. ಹೀಗಲ್ಲದೆ ಗುರುವೆಂಬ ಹಮ್ಮು ಶಿಷ್ಯನೆಂಬ ಶಂಕೆಯುಳ್ಳನ್ನಕ್ಕರ ರೌರವ ನರಕದಲ್ಲಿಕ್ಕುವ ಕೂಡಲ ಚನ್ನಸಂಗಮದೇವಯ್ಯ.

೩. ಆದಿ ಲಿಂಗ ಅನಾದಿ ಶರಣವೆಂಬುದು ತನ್ನಿಂದ ತಾನಾಯಿತ್ತು ಕೇಳಿರಣ್ಣಾ. ಆದಿ ಕಾಯ ಅನಾದಿ ಪ್ರಾಣವೆಂಬ ಈ ಉಭಯದ ಭೇದವ ತಿಳಿದು ವಿಚಾರಿಸಿ ನೋಡಿರಣ್ಣಾ. ಇಂತು ಅನಾದಿಯ ಪ್ರಸಾದ ಆದಿಗೆ ಸಲುವುದು. ಅದೆಂತೆಂದೊಡೆ ಶಿವರಹಸ್ಯೆ ಅನಾದಿ ಜಂಗಮಶ್ಚೈವ ಆದಿಲಿಂಗಸ್ಥಲಂ ಭವೇತ್ । ಅನಾದೇಶ್ಚ

ವಿರೋಧೇನ ಇಷ್ಟೋಚ್ಛಿಷ್ಟಂ ತು ಕಿಲ್ಬಿಷೆ॥ ಎಂದುದಾಗಿ ಇದನರಿತು ಪ್ರಾಣ ಪ್ರಸಾದ ವಿರೋಧವಾಗಿ ಪಿಂಡ ಪ್ರಸಾದವ ಕೊಂಡಡೆ ಕಿಲ್ಬಿಷ ನೋಡಾ ಕೂಡಲ ಚನ್ನಸಂಗಮದೇವಾ.

೪. ತನ್ನ ಲಿಂಗದಲ್ಲಿ ಪದಾರ್ಥದ ಪೂರ್ವಾಶ್ರಯವು ಹೋಗ ದೆಂದು ಅನುಸರಿಸಿ ಜಂಗಮ ಒಕ್ಕುದ ಕೊಂಡೆನೆಂಬುವ ಒಬ್ಬ ಠಕ್ಕ ಭವಿ. ಆಚಾರ ಲಿಂಗ ಜಂಗಮ ಹೋದ ಬಳಿಕ ತನ್ನ ಸ್ವಯ ಲಿಂಗಕ್ಕೆ ಅಷ್ಟವಿಧಾರ್ಚನೆ ಷೋಡಶೋಪಚಾರವಂ ಮಾಡಿ ಆ ಲಿಂಗ ಪ್ರಸಾದವಲ್ಲದೆ ಒಲ್ಲೆನೆಂಬುವನೊಬ್ಬ ಠಕ್ಕ. ಅವಂಗೆ ಲಿಂಗವಿಲ್ಲ. ಲಿಂಗಕ್ಕೆ ತಾನಲ್ಲ. ಅವ ಆಚಾರ ಭ್ರಷ್ಟ. ಅಂತವರ ಕಂಡರೆ ಇರಿದಿರಿದು ಸುಡುವನಲ್ಲದೆ ಮರೆವವನಲ್ಲ ಕೂಡಲ ಚನ್ನಸಂಗಮ ದೇವಾ.

---

## ಗುರು ಲಿಂಗ ಜಂಗಮ ಪ್ರಸಾದಗಳ ಪರಸ್ಪರ ಸಂಬಂಧ.

೧. ಅಯ್ಯಾ, ಗುರುಜಂಗಮದ ಪಾದೋದಕ ಪ್ರಸಾದದ ಚಿದ್ಘನ ಲಿಂಗಕ್ಕೆ ಅರ್ಪಿತವ ಮಾಡಿಕೊಂಬಲ್ಲಿ ಆ ಲಿಂಗ ಮೊದಲೋ ಗುರು ಮೊದಲೋ ಚರ ಮೊದಲೋ ಆ ವಿಚಾರವೆಂತೆಂದೊಡೆ, ಅನಾದಿ ಗುರು ಜಂಗಮದ ಪಾದೋದಕ ಪ್ರಸಾದವ ಚಿದ್ಘನಲಿಂಗಕ್ಕೆ ಅರ್ಪಿತವ ಮಾಡಿ ಕೊಂಬಲ್ಲಿ ಬೀಜಲಿಂಗ. ಆದಿ ಬೀಜ ಗುರು ಚರ ಇಂತೀ ಉಭವನರಿ ತಲ್ಲಿ, ಗುರುಚರಕ್ಕೆ ಚಿದ್ಘನ ಲಿಂಗವೇ ಆದಿ, ಅನಾದಿ ಚಿದ್ಘನ ಲಿಂಗಕ್ಕೆ ಗುರುಚರವೇ ಆದಿ ಅನಾದಿ, ಇಂತೀ ವಿಚಾರವ ತಿಳಿದಲ್ಲಿ, ಚಿದ್ಘನ ಲಿಂಗವ ಬಿಟ್ಟು ಗುರುಚರ ಉಂಟೇ? ಗುರುಚರವ ಬಿಟ್ಟು ಚಿದ್ಘನ ಲಿಂಗ ಉಂಟೇ? ಇವು ಮೂರು ಒಂದೇ ವಸ್ತುವಯ್ಯ. ಅದರಿಂದ ಆಚ ರಣೆಗೋಸ್ಕರ ಗುರುಭಕ್ತನಾಗಿ ಪೂಜೆಗೆ ನಿಂತಿರ್ಪುದಯ್ಯ. ಲಿಂಗ ಜಂಗಮವಾಗಿ ಪೂಜ್ಯಕ್ಕೆ ನಿಂತಿರ್ಪುದಯ್ಯ. ಅದೆಂತೆಂದೊಡೆ ಸಾಕ್ಷಿ—
ಅಕಾಯಂ ಭಕ್ತ ಕಾಯಂ ಚ ಮಹಾ ಕಾಯಸ್ತು ಭಕ್ತಯೋಃ॥" ಇಂತೆಂದುದಾಗಿ ಗುರುಭಕ್ತನಾಗಿರ್ಪುದಯ್ಯ. "ಮಹತೋ ಲಿಂಗ ರೂಪೇಣ ಮಹತೋ ಜಂಗಮಸ್ತಥಾ॥" ಇಂತೆಂದುದಾಗಿ ಲಿಂಗ

ಜಂಗಮವಾಗಿರ್ಪುದಯ್ಯ. ಇಲ್ಲೀ ಆನಿಲ್ಲೀ, ಬೇಕು ಬೇಡೆಂಬುದೇ ಗುರು ಭಕ್ತ ರೂಪು. ಇಲ್ಲೀ ಆನಿಲ್ಲೀ ಬೇಕು ಬೇಡೆನ್ನದೆ, ಗುರು ಭಕ್ತರಿಂದ ಬಂದುದ ಕೈಕೊಂಡು ಸಂತೃಪ್ತಿಯಲ್ಲಿರ್ಪುದೇ ಲಿಂಗ ಜಂಗಮ. ಇದನರಿದ ಮೇಲೆ, ಮತ್ತೊಂದು ಪ್ರಕಾರ ಚಿಕ್ಕ ದಣ್ಣಾಯಕನ ಪ್ರಸಾದವುಂಟು. ಅದರ ವಿಚಾರವೇನೆಂದಡೆ ಗುರುವು ಮುಟ್ಟಿದ್ದು ಪ್ರಸಾದವೆಂಬೆನೇ ? ಅಲ್ಲಲ್ಲ. ಅದೇನು ಕಾರಣವೆಂದೊಡೆ, ಅನಾದಿ ಲಿಂಗ ತೋರಲರಿಯನಾಗಿ. ಲಿಂಗ ಮು ಟ್ಟಿದ್ದು ಪ್ರಸಾದವೆಂಬೆನೇ ? ಅಲ್ಲಲ್ಲ. ಅದೇನು ಕಾರಣವೆಂದೊಡೆ, ಅಷ್ಟ ವಿಧಾರ್ಚನೆ ಷೋಡಶೋಪಚಾರಕ್ಕೆ ಒಳಗಾಯಿತ್ತಾಗಿ. ಜಂಗಮ ಮುಟ್ಟಿದ್ದು ಪ್ರಸಾದವೆಂಬೆನೇ ? ಅಲ್ಲಲ್ಲ. ಅದೇನು ಕಾರಣವೆಂದೊಡೆ, ಆಶೆ ಆಮಿಷಕ್ಕೊಳಗಾಯಿತ್ತಾಗಿ. ಮತ್ತೆಂತುಂಟು ಗುರುಲಿಂಗಜಂಗಮ ಪ್ರಸಾದ ? ಅನಾದಿಲಿಂಗವನರಿತು ಅಷ್ಟತನುವೇ ಅಷ್ಟವಿಧಾರ್ಚನೆಯಾಗಿ. ಮಲಮಾಯಾ ಪಾಶದಾಶೆಯ ನೀಗಿ ನಿಂದಡೆ, ಗುರುಲಿಂಗ ಜಂಗಮ. ಆತ ತಟ್ಟಿದ್ದು ಮುಟ್ಟಿದ್ದೆಲ್ಲಾ ಮಹಾಪ್ರಸಾದ ನೋಡಾ. ಲಿಂಗವಿಲ್ಲದ ಜಂಗಮ; ಜಂಗಮವಿಲ್ಲದ ಲಿಂಗ; ಈ ಲಿಂಗಜಂಗಮ ಜಂಗಮಲಿಂಗ ವೆಂಬ ವಿಚಾರವನರಿಯದ ಗುರುಭಕ್ತರೆಂತೋ ಮರುಳೇ ? ಅದಕ್ಕೆ ಸಾಕ್ಷಿ ॥" ಉಭೌ ಕಾಮಾದಿಚ್ಛಾ ಶಕ್ತಿ ಉಭಯಾಶ್ರಮ ಆಶ್ರಮಃ । ಲಿಂಗ ಜಂಗಮ ತೀರ್ಥಂಚ ಜಂಗಮಂ ಲಿಂಗಶೇಷಯೋಪಿ "॥ ಇಂತೆಂದು ದಾಗಿ ಲಿಂಗ ಜಂಗಮದಲ್ಲಿ ಚಿದ್ಘನ ತೀರ್ಥವ ಕೊಂಡು ಜಂಗಮ ಲಿಂಗ ದಲ್ಲಿ ಚಿದ್ಘನ ಮಹಾಪ್ರಸಾದವ ಮುಗಿಯಬಲ್ಲಾತನೇ ಆದಿ ಅನಾದಿ ಯಿಂದತ್ತತ್ತ ಮೀರಿ ತೋರುವ ಗುರು ಭಕ್ತ, ಶರಣ, ಪ್ರಸಾದಲಿಂಗ ಮೂರ್ತಿ, ತಾನೇ ನೋಡಾ ಸಂಗನ ಬಸವೇಶ್ವರಾ ॥

## ಗುರುಲಿಂಗ ಜಂಗಮ ಪ್ರಸಾದಗಳು ಮತ್ತು ಭಕ್ತ ಇವುಗಳ ಪರಸ್ಪರ ಸಂಬಂಧ.

೧. ಶಿಷ್ಯನ ಮುಖದಿಂದ ಉದಯವಾದ ಗುರುವಿಂಗೆ ಶಿಷ್ಯನ ಪ್ರಸಾದ ಗುರುವಿಂಗಲ್ಲದೆ ಗುರುವಿನ ಮುಖದಿಂದ ಉದಯವಾದ ಲಿಂಗಕ್ಕೆ ಗುರುವಿನ ಪ್ರಸಾದ ಲಿಂಗಕ್ಕಲ್ಲದೆ ಲಿಂಗದ ಪ್ರಸಾದ ಗುರುವಿಂಗಲ್ಲ. ಇದಕ್ಕೆ

ಲಿಂಗವೇ ಸಾಕ್ಷಿ. ಭಕ್ತನ ಮುಖದಿಂದ ಉದಯವಾದ ಜಂಗಮಕ್ಕೆ ಭಕ್ತನ ಪ್ರಸಾದ ಜಂಗಮಕ್ಕಲ್ಲದೆ ಜಂಗಮದ ಪ್ರಸಾದ ಭಕ್ತಂಗಿಲ್ಲ. ಅದಕ್ಕೆ ಜಂಗಮವೇ ಸಾಕ್ಷಿ. ಇಂತೀ ತ್ರಿವಿಧ ಅನುಭಾವ ನಮ್ಮ ಕೂಡಲ ಚನ್ನ ಸಂಗಯ್ಯನಲ್ಲಿ ಬಸವ ಸಂತತಿ ಅಲ್ಲವು ಪ್ರಭುವಿಂಗಲ್ಲದೆ ಆರಿಗೂ ಅಳವಡದು ನೋಡಾ.

೨. ಶಿಷ್ಯನ ಪೂರ್ವಾಶ್ರಯವ ಗುರು ಕಳೆದನೆಂಬುದು ಗುರುವಿನ ಪೂರ್ವಾಶ್ರಯವ ಶಿಷ್ಯ ಕಳೆದನಲ್ಲದೆ ಶಿಷ್ಯನ ಪೂರ್ವಾಶ್ರಯುವ ಗುರು ಕಳೆಯಲರಿಯ. ಶರಣನ ಪೂರ್ವಾಶ್ರಯವ ಲಿಂಗ ಕಳೆಯಿತೆಂಬರು. ಲಿಂಗದ ಪೂರ್ವಾಶ್ರಯವ ಶರಣನ ಕಳೆದನಲ್ಲದೆ ಶರಣನ ಪೂರ್ವಾಶ್ರಯವ ಲಿಂಗ ಕಳೆಯಲರಿಯದು. ಭಕ್ತನ ಪೂರ್ವಾಶ್ರಯವ ಜಂಗಮ ಕಳೆದನೆಂಬರು. ಜಂಗಮದ ಪೂರ್ವಾಶ್ರಯವ ಭಕ್ತ ಕಳೆದನಲ್ಲದೆ ಆ ಭಕ್ತನ ಪೂರ್ವಾಶ್ರಯವ ಜಂಗಮ ಕಳೆಯಲರಿಯದು. ಪ್ರಸಾದಿಯ ಪೂರ್ವಾಶ್ರಯವ ಪ್ರಸಾದಿ ಕಳೆಯಿತೆಂಬರು. ಪ್ರಸಾದದ ಪೂರ್ವಾಶ್ರಯವ ಪ್ರಸಾದಿ ಕಳೆದನಲ್ಲದೆ ಆ ಪ್ರಸಾದಿಯ ಪೂರ್ವಾಶ್ರಯವ ಪ್ರಸಾದಿ ಕಳೆಯಲರಿಯದು. ಆ ಪ್ರಸಾದಿಯ ಪೂರ್ವಾಶ್ರಯವ ಕಳೆಯಲಾಗಿ ಮಹಾ ಪ್ರಸಾದಿಯಾದ ಕೂಡಲ ಚೆನ್ನ ಸಂಗಯ್ಯ ನಿಮ್ಮ ಶರಣಾ

---

## ಲಿಂಗ ಜಂಗಮ ಪ್ರಸಾದ ಇವುಗಳಲ್ಲಿ ಪರಸ್ಪರ ಸಂಬಂಧ.

೧. ಲಿಂಗಕ್ಕಲ್ಲದೆ ಮಾಡೆನೀ ಮನವನು. ಜಂಗಮಕ್ಕಲ್ಲದೆ ಮಾಡೆನೀ ಧನವನು. ಪ್ರಸಾದಕ್ಕಲ್ಲದೆ ಮಾಡೆನೀ ತನುವನು. ಇಂತೀ ತ್ರಿವಿಧಕ್ಕೆ ತ್ರಿವಿಧವನರ್ಪಿಸುವೆ. ಅನರ್ಪಿತವಾದಡೆ ತಪ್ಪೆನ್ನದು ಮೂಗ ಕೊಯ್ಯ ಕೂಡಲ ಸಂಗಮದೇವಾ.

೨. ಲಿಂಗ ವಿಕಾರಿಗೆ ಅಂಗವೆಂಬುದಿಲ್ಲ. ಜಂಗಮ ವಿಕಾರಿಗೆ ಧನ ವಿಕಾರವೆಂಬುದಿಲ್ಲ. ಪ್ರಸಾದ ವಿಕಾರಿಗೆ ತನು ವಿಕಾರವೆಂಬುದಿಲ್ಲ. ಇಂತೀ ತ್ರಿವಿಧ ಗುಣವನರಿಯದ ಕಾರಣ ಅಚ್ಚ ಲಿಂಗೈಕ್ಯನು ಕೂಡಲ ಸಂಗಮದೇವಾ.

# ತೆಲುಗು ಜೊಮ್ಮಯ್ಯ.

ತೆಲುಗು ಜೊಮ್ಮಯ್ಯನು ಶಿವಶರಣರಲ್ಲಿ ಪ್ರಸಿದ್ಧನಾಗಿದ್ದು ವೀರ ಶೈವ ಗ್ರಂಥಕಾರರೆಲ್ಲರೂ ಅವನನ್ನು ತಮ್ಮ ಗ್ರಂಥಗಳಲ್ಲಿ ಸ್ತುತಿಸಿದ್ದಾರೆ. ಮಹಾಕವಿಯಾದ ಹರಹರನೂ ಕೂಡ ಅವನ ಸಲುವಾಗಿ ಒಂದು ರಗ ಳೆಯನ್ನು ರಚಿಸಿದ್ದಾನೆ. ಅವನ ಹೆಸರು ಗಣಸಹಸ್ರದಲ್ಲಿಯೂ ಕೂಡ ಬಂದಿರುತ್ತದೆ.

ತೆಲುಗುಜೊಮ್ಮಯ್ಯನು ಕಲ್ಯಾಣ ಪಟ್ಟಣದಲ್ಲಿ ಆಳುತ್ತಿದ್ದ ಪೆರ್ಮಾಡಿ ರಾಯನ ಕಾಲದಲ್ಲಿ ಪ್ರಸಿದ್ಧನಾದನು. ಚಾಲುಕ್ಯ ರಾಜರಲ್ಲಿ ಅತ್ಯಂತ ಪ್ರಸಿದ್ಧನಾಗಿದ್ದ ೬ನೆಯ ವಿಕ್ರಮಾದಿತ್ಯನಿಗೆ ಪೇರ್ಮಾಡಿ ಎಂಬ ಹೆಸ ರಿದ್ದು ಅವನ ಕಾಲದಲ್ಲಿ ಕೇಶಿರಾಜ, ಬಾಹೂರು ಬೊಮ್ಮಯ್ಯ, ಇಳಿಹಾಳಿ ಬೊಮ್ಮಯ್ಯ, ಈ ಶಿವಶರಣರು ಪ್ರಸಿದ್ಧಿಗೆ ಬಂದರು. ತೆಲುಗುಜೊಮ್ಮಯ್ಯನು ಇದೇ ಕಾಲದಲ್ಲಿರಬಹುದು. ವಿಕ್ರಮಾದಿತ್ಯನು ಕ್ರಿ|| ಶ|| ೧೦೭೬ ರಿಂದ೧೧೨೬ ರ ವರೆಗೆ ರಾಜ್ಯವಾಳಿದ್ದರಿಂದ ೧೧೩೨ರ ತರುವಾಯ ಪ್ರಸಿದ್ಧಿಗೆ ಬಂದ ಬಸವೇಶ್ವರನ ಮೊದಲು ಈತನ ಅಸ್ತಿತ್ವವಿರಬೇಕೆಂಬುದು ಸ್ಪಷ್ಟವಾಗುತ್ತಿದೆ. ಬಸವೇಶ್ವರನು ಈತನನ್ನು ತನ್ನ ವಚನಗಳಲ್ಲಿ ಸ್ಮರಿಸಿರುವದರಿಂದ ಅವನಕಿಂತಲೂ ಈತನು ಮೊದಲು ಎಂಬುದು ದೃಢಪಡುತ್ತದೆ. ಆ ವಚನಗಳು ಯಾವವೆಂದರೆ:—

೧, ಕಾಳಿದಾಸಂಗೆ ಕಣ್ಣನಿತ್ತೆ. ವಹಿಲಯ್ಯನ ನಿಜಪುರ ಕೊಯ್ದೆ. ನಂಬಿ ಕರೆದಡೋ ಎಂದೆ. ತೆಲುಗು ಜೊಮ್ಮಯ್ಯಂಗೆ ಒಲಿದೆ ದೇವಾ! ಎನ್ನನೇಕೊಲ್ಲೆಯಯ್ಯ? (ಸಂಖ್ಯೆ ೩೫೨)

(೨) ತೊತ್ತಿಂಗೆ ಬಲ್ಲಹನೊಲಿದರೆ ಪದವಿಯ ಮಾಡದೆ ಮಾಣ್ಬನೇ! ಅಯ್ಯ ಜೇಡರ ದಾಸಯ್ಯಂಗೊಲಿದಾತ ಮತ್ತೊಬ್ಬ ದೇವನೇ ಅಯ್ಯ! ಮಾದರ ಚನ್ನಯ್ಯಂಗೆ ಡೋಹರ ಕಕ್ಕಯ್ಯಂಗೆ ತೆಲುಗು ಜೊಮ್ಮಯ್ಯಂಗೆ ಒಲಿದಾತ ಮತ್ತೊಬ್ಬ ದೇವನೇ ಅಯ್ಯ? ಎನ್ನ ಮನದ ಪಂಚೇಂದ್ರಿಯ ನಿಮ್ಮತ್ತಲಾದರೆ ತನ್ನತ್ತ ಮಾಡುವ ಕೂಡಲಸಂಗಮದೇವ. (ಸಂಖ್ಯೆ ೭೧೬)

ಇವುಗಳಲ್ಲಿ ಜೊಮ್ಮಯ್ಯನು ಭಕ್ತಿಯುಳ್ಳವನೆಂದು ಬಸವೇಶ್ವರನು ಅವನನ್ನು ಸ್ಮರಿಸಿದ್ದಾನೆ. ಹೇಗೆ ಕೇಶಿರಾಜ ಬಾಹೂರು ಬೊಮ್ಮಯ್ಯಗಳು

ಗ್ರಂಥಕಾರರೆಂದು ಪ್ರಸಿದ್ಧರಾಗಿರುವರೋ ಹಾಗೆಯೇ ಜೊಮ್ಮಯ್ಯನು ವಚನಗಳನ್ನು ರಚಿಸಿದವನೆಂದು ಪ್ರಸಿದ್ಧನಾಗಿದ್ದಾನೆ. ಆದರೆ ಅವುಗಳಲ್ಲಿ ನಾಲ್ಕು ಮಾತ್ರ ನಮಗೆ ದೊರಕಿದ್ದು ಅವುಗಳನ್ನು ನಾವು ಕೆಳಗೆ ಉದಹರಿಸಿದ್ದೇವೆ. ಅವು ಯಾವವೆಂದರೆ—

೧. ಗುರು ಕರುಣವ ಪಡೆದುದಕ್ಕೆ ಚಿಸ್ಥವಾವುದೆಂದೊಡೆ ಅಂಗದ ಮೇಲೆ ಲಿಂಗ ಸಹಿತವಾಗಿರಬೇಕು. ಅಂಗದ ಮೇಲೆ ಲಿಂಗ ಸಹಿತವಿಲ್ಲದೆ ಬರೀ ಗುರುಕಾರುಣ್ಯವಾಯಿತ್ತೆಂದೊಡೆ ಅದೆಂತೋ? ಲಿಂಗ ಹೀನವಾಗಿ ಗುರುಕಾರುಣ್ಯ ಉಂಟೇ? ಇಲ್ಲ. ಆ ಮಾತ ಕೇಳಲಾಗದು. ಇದು ಕಾರಣ ಲಿಂಗ ಧಾರಣವುಳ್ಳುದೇ ಸದಾಚಾರ. ಇಲ್ಲದೊಡೆ ಅನಾಚಾರವೆಂಜೆನಯ್ಯಾ ತೇಲುಗೇಶ್ವರಾ.

೨. ಕಾಮ ಸನ್ನಿಧನಾಗಿ ತಾ ಚೆಲುವನಾದೊಡೆ ಕಾಮಿನೀ ಜನವೆಲ್ಲ ಮೆಚ್ಚಬೇಕು. ದಾನ ಗುಣದಲ್ಲಿ ಕರೆದೀವನಾದೊಡೆ ಯಾಚಕ ಜನವೆಲ್ಲ ಮೆಚ್ಚಬೇಕು. ವೀರನಾದೊಡೆ ವೈರಿಗಳು ಮೆಚ್ಚಬೇಕು. ಖೂಳನಾದೊಡೆ ತನ್ನ ತಾ ಮೆಚ್ಚಿಕೊಂಬ. ಎನ್ನ ದೇವ ತೆಲುಗೇಶ್ವರನಲ್ಲಿ ತಾನು ಭಕ್ತನಾದೊಡೆ ದೇವರು ಮೆಚ್ಚುವ, ಜಗವೂ ತಾ ಮೆಚ್ಚುವುದು.

೩. ಅಖಂಡಿತವ ಕಂಡೆನೆಂಬೆ. ಕಂಡರಖಂಡಿಯಾಗಿ ಬ್ರಹ್ಮಾಂಡವಾಗಿರಬೇಕು. ಓದಿದೆ ನೋಡಿದೆನೆಂದೆಂಬೆ, ನಿನ್ನೋದು ವಾದಕ್ಕೆ ಹೋಯಿತ್ತು. ಅರಿದೆನರಿದೆನೆಂದೆಂಬೆ. ಅರಿದುದನೆಲ್ಲವನರಿದೆ. ಅರಿಯದುದಕ್ಕೆಂತೋ? ನವನಾಳವನ್ನು ಕಟ್ಟಿ ವಿಕಳನಾಗಲು ಬೇಡ. ಬಳಸಿ ಬಟ್ಟೆಯ ಕಾಣದೆ ಮಾಯೆಯ ಬಾಗಿಲ ಹೊದ್ದಿಹೆ. ಮಕ್ಕಳ ತೊಟ್ಟಿಲ ಮೇಲೆ ಕಟ್ಟಿದ ಕೆಂಪಿನ ಹಣ್ಣಿರ್ದು ನಿಲುಕಲು ಬಾರದು. ನೆನಹು ನೆಲೆಗೊಳ್ಳದಾಗಿ ನಿಜಭಾವ ನಿಜರೂಪವೆಂತೋ? ಗಜಬಜೆ ಇಲ್ಲದ ಮನಕ್ಕೆ ಸಹಜವ ತೆಲುಗೇಶ್ವರ ತೋರಿಹ.

೪. ಬ್ರಹ್ಮಾಂಡಕೋಟಿಗಳುರುಳಿ ಬೀಳುವಲ್ಲಿ ಕಾಕೆಯ ಹಣ್ಣೊಂದು ಒಬ್ಬ ಮೆಲಿದನಾ ಶರಣನು. ಮುಗಿಲು ಮುಟ್ಟುವನುದ್ದವ ನೋಡಿ ಗಗನವ ನುಂಗುವನ ಬಾಯಗಲವ ನೋಡಾ. ತಾಳಮರನ ಕೀಳುವಂಗೆ ಚೊಗಚೆಯ ಅಗಿವೆನೆಂಬನು. ಇಂತಪ್ಪ ಶರಣರು ತೆಲುಗೇಶ್ವರಾ ನಿಮ್ಮವರು.

ಮೇಲಿನ ವಚನಗಳ ಮೇಲಿಂದ ತೆಲುಗು ಜೊಮ್ಮಯ್ಯನು ಲಿಂಗಾನು ಭಾವಿಯಾಗಿದ್ದನೆಂತಲೂ ಶಿವಾನುಭವದ ತಿಳುವಳಿಕೆಯುಳ್ಳವನಾಗಿದ್ದನೆಂತಲೂ ಸ್ಪಷ್ಟವಾಗುತ್ತದೆ. ಅಲ್ಲದೆ ಅವನಿದ್ದ ಕಾಲದಲ್ಲಿ ಶಿವಶರಣರನೇಕರಾಗಿದ್ದು ಅವರಿಗೋಸ್ಕರ ಅವನು ಭಕ್ತಿಯನ್ನು ವಹಿಸಿದವನಾಗಿದ್ದನೆಂತಲೂ ಸ್ಪಷ್ಟವಾಗುತ್ತದೆ.

ತೆಲುಗು ಜೊಮ್ಮಯ್ಯನು ತನ್ನ ವಚನಗಳಿಗೋಸ್ಕರ ಇಟ್ಟುಕೊಂಡ ಮುದ್ರಿಕೆ ಮತ್ತು ಅವನ ಹೆಸರು ನೋಡಿದರೆ ಅವನು ಮೊದಲು ತೆಲುಗು ದೇಶದವನಾಗಿದ್ದು ಅಲ್ಲಿಂದ ಅವನು ಕರ್ನಾಟಕಕ್ಕೆ ಬಂದಿರಬಹುದೆಂಬ ಅನುಮಾನವು ಉಂಟಾಗುತ್ತದೆ. ಆದರೆ ಅವನ ಪೂರ್ವದ ಹುಟ್ಟುಗ್ರಾಮ ವಾವುದೆಂಬದು ಅವನನ್ನುಲ್ಲೇಖಿಸುವ ಯಾವ ಗ್ರಂಥದಲ್ಲಿಯೂ ಹೇಳಿರುವದಿಲ್ಲ. ಅವನ ಇಷ್ಟದೇವತೆಯು ಭೀಮೇಶ್ವರನೆಂದು ಹೇಳಿದೆ. ಇದು ಶ್ರೀಶೈಲದಲ್ಲಿರುತ್ತಿದೆಂದು ದೇವರದಾಸಿಮಯ್ಯನ ಚರಿತ್ರೆಯಿಂದ ಕಂಡು ಬರುವವರಿಂದ ಅವನು ಶ್ರೀಶೈಲ ಪ್ರಾಂತದವನಿರಬಹುದು. ಆದರೆ ಅವನು ಪೇರ್ಮಾಡಿರಾಯನ ಕಾಲದಲ್ಲಿ ಮಾತ್ರ ಕಲ್ಯಾಣ ಪಟ್ಟಣದಲ್ಲಿದ್ದನೆಂಬ ಉಲ್ಲೇಖಗಳು ದೊರೆಯುತ್ತಿವೆ.

ತೆಲುಗು ಜೊಮ್ಮಯ್ಯನ ವಚನಗಳಿಂದ ಅವನು ವೀರಶೈವನೆಂಬದು ತೋರಿಬಂದರೂ ಬೇಟೆಯಾಡುವದೇ ಅವನ ನಿತ್ಯದ ಕಾಯಕವಾಗಿತ್ತು. ಅವನು ಲಿಂಗಧಾರಿಯಾಗುವ ಮೊದಲು ಈ ಕಾಯಕವನ್ನು ಮಾಡುತ್ತಿರಬಹುದು. ಆದರೆ ಅವನು ಈ ಕಾಯಕವನ್ನು ಮಾಡುತ್ತಿದ್ದರೂ ಅವನು ಅತ್ಯಂತ ಭಕ್ತಿಯುಳ್ಳವನಾಗಿ ಶಿವಜ್ಞಾನಿ ಎಂದು ಪ್ರಸಿದ್ಧನಾಗಿ ಕಲ್ಯಾಣ ಪಟ್ಟಣದಲ್ಲಿ ವಾಸಮಾಡುತ್ತಿದ್ದನು. ಅವನು ಬೇಟೆಯಾಡುತ್ತಿದ್ದುದರ ಬಗ್ಗೆ ಅವನ ಚರಿತ್ರೆಗಳಲ್ಲಿ ಉಲ್ಲೇಖವಾಗಿರುವ ಒಂದು ದಂತಕಥೆಯು ಇರುವದೇನೆಂದರೆ—

ಶಿವಾನಂದನೆಂಬ ಶಿವಯೋಗಿಯು ಶ್ರೀಶೈಲ ಪರ್ವತದಲ್ಲಿ ತಪಸ್ಸನ್ನಾಚರಿಸುತ್ತ ಇದ್ದನು. ಆಗ ಕೆಲವು ಗಂಧರ್ವರು ಅವನ ಸಮೀಪದಲ್ಲಿ ಬಂದು ಜಟಾಭಸ್ಮಧಾರಿಯಾಗಿ ಸಮಾಧಿಯಲ್ಲಿ ಕುಳಿತ ಅವನನ್ನು ಕಂಡು 'ಇವನು ಮುದಿಗರಡಿ ಎಂದು ಹಾಸ್ಯ ಮಾಡಿದರು. ಅವನ ಶಿಷ್ಯರಲ್ಲೊ

ಬ್ಬನಾದ ಪುನೀತಯ್ಯನೆಂಬುವನು ಅವರು ಅಂದದ್ದನ್ನು ಕೇಳಿ ಇಂಥ ಪುಣ್ಯ ಪುರುಷನನ್ನು ನೋಡಿ ನೀವು ಹಾಸ್ಯ ಮಾಡುತ್ತೀರಾ ? ನೀವು ಜಿಂಕೆಗಳಾಗಿರಿ ಎಂದು ಶಾಪವನ್ನಿತ್ತನು. ಆಗ ಅವರು ತಮ್ಮಿಂದ ಅಪ ರಾಧವಾಯಿತು ಕ್ಷಮಿಸಿರಿ, ಎಂದು ಕೇಳಿದ್ದಕ್ಕೆ ಪುನೀತಯ್ಯನು ನೀವು ಕಲ್ಯಾಣ ಕಟಕದ ಸಮೀಪವಾಗಿ ಸಂಚರಿಸುತ್ತಾ ಇರಬೇಕು. ಆಗ ತೆಲುಗು ಜೊಮ್ಮಯ್ಯನೆಂಬ ಶಿವಶರಣನು ನಿಮ್ಮನ್ನು ಸಂಹರಿಸಲು ನೀವು ನಿಮ್ಮ ಪೂರ್ವಪದವಿಯನ್ನು ಹೊಂದುವಿರಿ ಎಂದು ಹೇಳಲು ಅವರು ಹಾಗೆಯೇ ಕಲ್ಯಾಣದಿಂದ ಹತ್ತು ಗಾವುದದ ಮೇಲಿರುವ ಅರಣ್ಯ ಪ್ರದೇಶ ದಲ್ಲಿ ಮೃಗಗಳಾಗಿ ಸಂಚರಿಸುತ್ತಾ ಇದ್ದರು.

ಇತ್ತ ತೆಲುಗು ಜೊಮ್ಮಯ್ಯನು ಅತ್ಯಂತ ಶಿವಭಕ್ತಿಯುಳ್ಳವನಾಗಿ ಕಲ್ಯಾಣ ಪಟ್ಟಣದಲ್ಲಿದ್ದ ಭೀಮೇಶ್ವರನನ್ನು ಭಜಿಸುತ್ತ ಇರುತ್ತಿರಲು ಒಂದು ದಿನ ಭೀಮೇಶ್ವರನು ಅವನ ಸ್ವಪ್ನದಲ್ಲಿ ಬಂದು ಕಾನನದಲ್ಲಿ ಕೆಲವು ಗಂಧರ್ವರು ಜಿಂಕೆಗಳಾಗಿ ನಿನ್ನ ಬರವನ್ನು ಅಪೇಕ್ಷಿಸುತ್ತಿದ್ದಾರೆ. ನೀನು ಅಲ್ಲಿಗೆ ಬೇಟೆಗಾಗಿ ಹೋಗಿ ಅವರನ್ನು ಸಂಹರಿಸು ಎಂದು ಹೇಳಲು ಅವನು ಹಾಗೆಯೇ ಹೋಗಿ ಆ ಮೃಗಗಳನ್ನು ಸಂಹರಿಸಲು ಅವು ಗಂಧರ್ವ ರೂಪವನ್ನು ತಾಳಿ ತಮ್ಮ ತಮ್ಮ ಪೂರ್ವದ ಸ್ಥಾನಕ್ಕೆ ಹೊರಟುಹೋದವು. ಇದನ್ನು ಜನರು ತಿಳಿದು ಜೊಮ್ಮಯ್ಯನು ಮಹಾತ್ಮನೆಂದು ಭಾವಿಸಿ ಅವ ನನ್ನು ಅವರು ಪೂಜಿಸುವವರಾದರು.

ಪಾಪಕರ್ಮ ಮಾಡಿದವರು ಹೀನ ಜನ್ಮಗಳನ್ನು ತಾಳಿ ಪೂರ್ವ ಕರ್ಮಗಳನ್ನು ಉಪಭೋಗಿಸಿದ ಬಳಿಕ ಅವರನ್ನು ಪುನೀತರನ್ನಾಗಿ ಮಾಡು ವದಕ್ಕೋಸ್ಕರ ಇಂಥ ಹಿಂಸಾಚರಣೆಗಳು ಜಗತ್ತಿನಲ್ಲಿ ನಡಿಯುತ್ತವೆಂಬ ತತ್ವವನ್ನು ಈ ಘಟನೆಯು ಸಮರ್ಥಿಸುತ್ತದೆ.

ಜೊಮ್ಮಯ್ಯನು ಶಿವಭಕ್ತಿಯುಳ್ಳವನಾಗಿ ಕಲ್ಯಾಣಪಟ್ಟಣದಲ್ಲಿರುತ್ತಿ ರಲು ಅವನ ಶಿವಭಕ್ತಿಯ ಮಹಿಮೆಯನ್ನೂ ಕೀರ್ತಿಯನ್ನೂ ಕೊಂಡ ಗುಳಿಯಲ್ಲಿರುತ್ತಿದ್ದ ಕೇಶಿರಾಜನೆಂಬ ಶಿವಶರಣನು ಕೇಳಿ ಅವನನ್ನು ಕಾಣ ಬೇಕೆಂದು ಅನೇಕ ಶಿವಭಕ್ತರನ್ನೊಡಗೊಂಡು ಕಲ್ಯಾಣ ಪಟ್ಟಣಕ್ಕೆ ಬಂದನು. ಅಲ್ಲಿ ಜೊಮ್ಮಯ್ಯನು ಶಿವಪುರವೆಂಬಲ್ಲಿ ವಾಸ ಮಾಡುತ್ತಾನೆಂಬುದನ್ನು

ತಿಳಿದು ಅಲ್ಲಿದ್ದ ಅವನ ಮನೆಗೆ ಹೋಗಿ ಮನೆಯಲ್ಲಿ ಅವನನ್ನು ಕಾಣದೆ ಅವನ ಹೆಂಡತಿಯನ್ನು ಕೇಳಲಾಗಿ ಅವಳು ತನ್ನ ಗಂಡನು ಬೇಟೆಗೆ ಹೋಗಿದ್ದಾನೆಂದು ಹೇಳಿದಳು. ಕೇಶಿರಾಜನು ಅಲ್ಲಿ ಮನೆಯಲ್ಲಿ ನೋಡುತ್ತಾನೆಯೇ ಒಳಗೆ ಮಾಂಸ, ಹೊರಗೆ ಮಾಂಸ, ಎಲ್ಲಿ ನೋಡಿದರೂ ಮಾಂಸ ಇರುವದನ್ನು ಕಂಡು ಹೇಸಿಕೊಂಡು ಜೊಮ್ಮಯ್ಯನ ಹೆಂಡತಿಗೆ— ಜೊಮ್ಮಯ್ಯನಿಗೆ ತಾವು ಶರಣಾರ್ಥಿ ಹೇಳಬೇಕು ಎಂದು ನುಡಿದು ಅಲ್ಲಿಯೇ ಶಿವಪುರದಲ್ಲಿದ್ದ ಭೀಮನಾಥಾಲಯಕ್ಕೆ ಬಂದು ಬಿಡಾರಬಿಟ್ಟನು. ಅಲ್ಲಿ ಅವನು ಧ್ಯಾನಿಸುತ್ತ ಶಿವಭಕ್ತರ ಖ್ಯಾತಿಯನ್ನು ದೂರಿಂದಲೇ ಕೇಳಬೇಕೇ ಹೊರ್ತು ಅವರ ಸಮೀಪಕ್ಕೆ ಬರಬಾರದು ಎಂದು ಖಿನ್ನಮನಸ್ಕನಾಗಿ ನುಡಿಯುತ್ತ ಸೋಮನಾಥನೆಂಬ ತನ್ನ ಇಷ್ಟಲಿಂಗದ ಪೂಜಾಸಿದ್ಧತೆಯಲ್ಲಿ ತೊಡಗಿದನು.

ಇತ್ತಕಡೆಗೆ ಜೊಮ್ಮಯ್ಯನು ಬೇಟೆಯಾಡಿ ಮೃಗಗಳನ್ನು ಕೊಂದು ತಂದು ಮನೆಯಲ್ಲಿರಿಸುವಾಗ ಅವನ ಸತಿಯು ಅವನಿಗೆ— ಇಷ್ಟರಲ್ಲಿ ಒಬ್ಬ ಹಿರಿಯ ಶರಣರು ಅನೇಕ ಭಕ್ತರನ್ನೊಡಗೂಡಿ ನಿಮ್ಮನ್ನು ಕಾಣಲು ಇಲ್ಲಿಗೆ ಬಂದಿದ್ದರು. ಅವರು ಈ ಮಾಂಸವನ್ನು ಕಂಡು ಹೇಸಿ ಮೂಗು ಮುಚ್ಚಿಕೊಂಡು ಭೀಮನಾಥಾಲಯದ ಕಡೆಗೆ ಹೊರಟು ಹೋದರು, ಎಂದು ಹೇಳಿದಳು. ಆಗ ಜೊಮ್ಮಯ್ಯನು ಕೇಶಿರಾಜನನ್ನು ಹುಡುಕುತ್ತ ಅವನಿದ್ದೆಡೆಗೆ ಬಂದು ಅವನಿಗೆ ವಂದಿಸಿ— ತಾವು ಮನೆಗೆ ಚಿತ್ತೈಸಬೇಕು ಎಂದು ಬೇಡಿಕೊಂಡನು. ಅದಕ್ಕೆ ಕೇಶಿರಾಜನು— ನಿಮ್ಮನ್ನು ಕಂಡುದೇ ನಮಗೆ ದಿವ್ಯಾಮೃತವನುಂಡ ಹಾಗಾಯಿತು ಎಂದು ನುಡಿಯಲು ಜೊಮ್ಮಯ್ಯನು ಮನಸ್ಸು ನೊಂದವನಾಗಿ ಹಿಂದಿರುಗಿಹೋದನು.

ಇತ್ತ ಕೇಶಿರಾಜನು ತನ್ನ ನಿತ್ಯದ ಪೂಜಾದಿಕಾರ್ಯಗಳಲ್ಲಿ ತೊಡಗಿ ತನ್ನ ಸಜ್ಜೆಯಿಂದ ಲಿಂಗವನ್ನು ಹೊರಗೆ ತೆಗೆಯುತ್ತಿರಲು ಅದರೊಳಗಿಂದ— ಕೇಶಿರಾಜನೇ ನಮಗೆ ಇಲ್ಲಿ ಪೂಜೆ ಬೇಡ, ಜೊಮ್ಮಯ್ಯನ ಮನೆಯಲ್ಲಿ ಅದನ್ನು ಮಾಡು. ಭಕ್ತರಲ್ಲಿ ಛಲವೇಕೆ? ಎಂಬ ಶಬ್ದಗಳು ಹೊರಟವು. ಕೇಶಿರಾಜನು ಅವುಗಳನ್ನು ಕೇಳಿ ಭಯಭೀತನಾಗಿ ತನ್ನಿಂದ ಏನೋ ಪ್ರಮಾದವಾಯಿತು ಎಂದು ಭಾವಿಸಿ— ನನ್ನ ಮೇಲೆ ದೇವರ ಕೋಪವಾಗಿದೆ. ನಾನು ಉಳಿಯಬಹುದೇ ಎಂದು ಚಿಂತಿಸುತ್ತ ಜೊಮ್ಮಯ್ಯನ ಮನೆಗೆ ಬಂದನು.

ಕೇಶಿರಾಜನು ತನ್ನ ಮನೆಗೆ ಬಂದದ್ದನ್ನು ಜೊಮ್ಮಯ್ಯನು ಕಂಡು ಅತ್ಯಂತ ಹರುಷಿತನಾಗಿ ತನ್ನ ಪೂಜಾಗೃಹದಲ್ಲಿ ಅವನನ್ನು ಲಿಂಗಪೂಜೆಗೆಂದು ಕುಳ್ಳಿರಿಸಿದನು. ಅಲ್ಲಿ ಕೇಶಿರಾಜನು ತನ್ನ ಪೂಜಾದಿ ಕಾರ್ಯಗಳನ್ನು ತೀರಿಸಿದ ಬಳಿಕ ಜೊಮ್ಮಯ್ಯನ ಹೆಂಡತಿಯು ಅವನಿಗೆ ನೀಡಲಿಕ್ಕೆ ಬರಲು ಕೇಶಿರಾಜನು ನಡನಡುಗಹತ್ತಿದನು. ಜೊಮ್ಮಯ್ಯನು ಅದನ್ನು ನೋಡಿ ನಗುತ್ತ ತನ್ನ ಸತಿಗೆ— ಕೇಶಿರಾಜನಿಗೆ ಪಕ್ವಾನ್ನಗಳನ್ನು ತಂದು ನೀಡು, ಎಂದು ಹೇಳಲು ತಳಿಗೆಯಲ್ಲಿದ್ದ ಖಂಡಮಾಂಸಗಳೆಲ್ಲವೂ ಕಜ್ಜಾಯ, ಪಳವಳಿಗೆ, ಹೂರಿಗೆ ಮೊದಲಾದ ಪಕ್ವಾನ್ನಗಳಾಗಿದ್ದವು. ಕೇಶಿರಾಜನು ಅವುಗಳನ್ನು ಕಂಡು ಆಶ್ಚರ್ಯಬಟ್ಟು— ಶಿವಭಕ್ತರ ಘನವನ್ನು ಶಿವನೇ ಬಲ್ಲನು ಎಂದು ಜೊಮ್ಮಯ್ಯನನ್ನು ಹೊಗಳುತ್ತ ಅವು ಲಿಂಗಪ್ರಸಾದವೆಂದು ಭಾವಿಸಿ ಆ ಪದಾರ್ಥಗಳನ್ನು ಸ್ವೀಕರಿಸಿದನು.

ಆಮೇಲೆ ಜೊಮ್ಮಯ್ಯ ಕೇಶಿರಾಜಗಳು ಹಗಲಿರುಳು ಶಿವಾನುಭವದ ನಡೆಗಳನ್ನು ಚರ್ಚಿಸುತ್ತ ಕೆಲವು ದಿವಸ ಅಲ್ಲಿಯೇ ಕಾಲಕಳೆದರು. ಆಮೇಲೆ ಕೇಶಿರಾಜನು ತನ್ನ ಗ್ರಾಮವಾದ ಕೊಂಡಗುಳಿಗೆ ತಿರುಗಿಬಂದನು. ಈ ಗ್ರಾಮವು ಸಿಂದಗಿಯಿಂದ ವಿಜಾಪುರ ಜಿಲ್ಲೆಯ ಮೇರೆಯ ಮೇಲೆ ಪೂರ್ವಕ್ಕೆ ೩೦ ಮೈಲುಗಳ ಮೇಲೆ ಕಲಬುರ್ಗಿ ಜಿಲ್ಲೆಯಲ್ಲಿ ಇದೆ.

ಜೊಮ್ಮಯ್ಯನು ಇದೇ ಕಾಲಕ್ಕೆಯೇ ಶಿವಾನುಭವದ ಆಚರಣೆಗಳನ್ನು ತಿಳಿದು ವಚನಗಳನ್ನು ರಚಿಸಿರಬಹುದೆಂದು ತೋರುತ್ತದೆ. ಕೊಂಡಗುಳಿಯ ಕೇಶರಾಜನು ವೀರಶೈವ ಗ್ರಂಥಕಾರರಲ್ಲಿ ಅತ್ಯಂತ ಪ್ರಸಿದ್ಧನೂ ಶಿವಾನುಭವಿಯೂ ಆಗಿದ್ದನು. ಅವನ ಸಹವಾಸದ ಪರಿಣಾಮವಾಗಿ ಜೊಮ್ಮಯ್ಯನು ತನ್ನ ಶಿವಾನುಭವದ ಅನುಭವಗಳನ್ನು ವಚನಗಳ ರೂಪಿನಿಂದ ಈ ಕಾಲದಲ್ಲಿ ನುಡಿದಿರಬಹುದು.

ಈ ಕಾಲದಲ್ಲಿ ಜೊಮ್ಮಯ್ಯನು ಅನುಭವದಿಂದಲೂ ನಿಷ್ಠೆಯಿಂದಲೂ ನಾಡಿನಲ್ಲಿ ಅತ್ಯಂತ ಶ್ರೇಷ್ಠಸ್ಥಾನವನ್ನು ಹೊಂದಿದವನಾಗಿದ್ದನು. ಇದನ್ನು ಪೇರ್ಮಾಡಿ ರಾಜನು ತಿಳಿದು ಅವನನ್ನು ತನ್ನಲ್ಲಿ ಬರಮಾಡಿಕೊಂಡು ಅವನಿಗೆ ತಿಂಗಳಿಗೆ ಒಂದು ಸಾವಿರ ಹೊನ್ನುಗಳ ವೇತನವನ್ನು ಗೊತ್ತುಪಡಿಸಿ ಅವನನ್ನು ತನ್ನ ಮಂತ್ರಿಯಾಗಿ ನೇಮಿಸಿಕೊಂಡನು.

ತೆಲುಗು ಜೊಮ್ಮಯ್ಯನು ಮಂತ್ರಿಯಾದ ಬಳಿಕ ಅರಸನ ಆಜ್ಞೆಯನ್ನು ಶಿರಸಾ ವಹಿಸಿ ಕಾರ್ಯ ಮಾಡತೊಡಗಿದನು. ಅರಸನನ್ನು ಅವನು ಎಂದೂ ವಿರೋಧಿಸನು. ಕಾರ್ಯಗಳನ್ನು ಮರೆತು ಎಂದೂ ಕುಳ್ಳಿರನು. ಅರಸನ ವೇಳೆಯಲ್ಲಿರುವನು. ಆದರೆ ಶಿವಭಕ್ತಿಯುಳ್ಳವನಾದ್ದರಿಂದ ತಾನು ಗಳಿಸಿದ್ದನ್ನೆಲ್ಲ ಗುರು ಲಿಂಗ ಜಂಗಮಕ್ಕರ್ಪಿಸಿ ಬಿಡುವನು. ಅವನು ಗುರು ಲಿಂಗ ಜಂಗಮಕ್ಕೆ ಮಾತ್ರ ನಮಸ್ಕರಿಸುವನು. ಅವರನ್ನು ಬಿಟ್ಟು ಯಾರಾರಿಗೂ ನಮಸ್ಕರಿಸನು. ಅವನು ತನ್ನ ರಾಜನನ್ನು ಸಹ ನಮಸ್ಕರಿಸುತ್ತಿದ್ದಿಲ್ಲ. ಆದರೆ ರಾಜನು ಅವನು ಶಿವನ ತೇಜದ ಕಣಿ ಎಂದು ಭಾವಿಸಿ ಅವನನ್ನು ಮನ್ನಿಸುತ್ತಲೇ ಬಂದನು.

ಹೀಗಿರುವಲ್ಲಿ ಒಂದು ದಿನ ಮುಂಜಾವಿನಲ್ಲಿ ಜೊಮ್ಮಯ್ಯನು ಅರಮನೆಗೆ ಬಂದಿರಲಾಗಿ ವಿಷ್ಣುಭಕ್ತನಾದ ಪೆರ್ಮಾಡಿ ರಾಯನು ಮೇಲ್ಮಹಡಿಯಲ್ಲಿ ವಿಷ್ಣು ಪೂಜೆಯಲ್ಲಿ ಮಗ್ನನಾಗಿ ಕುಳಿತಿದ್ದನು. ಕೆಳಗೆ ಒಬ್ಬ ಪುರಾಣಿಕನು ವಿಷ್ಣು ಪುರಾಣವನ್ನು ಹೇಳುತ್ತಾ ಕುಳಿತಿದ್ದನು. ತೆಲುಗು ಜೊಮ್ಮಯ್ಯನು ಅರಮನೆಯನ್ನು ಪ್ರವೇಶಿಸುತ್ತಿರುವಾಗ ಪುರಾಣಿಕನು ಆಕಾಶದ ಹೆಸರು ವಿಷ್ಣುಪದ, ಗಂಗೆಯು ಅದರಲ್ಲಿದ್ದ ಕಾರಣ ವಿಷ್ಣುಪದಿ ಎಂದು ಗಂಗೆಗೆ ಹೆಸರಿದ್ದು ಹೀಗೆ ಹೇಳುವದನ್ನು ಬಿಟ್ಟು ಅದನ್ನು ಮಾರ್ಪಡಿಸಿ ಗಂಗೆಯು ವಿಷ್ಣುವಿನ ಪಾದದಲ್ಲಿ ಹುಟ್ಟಿದಳು, ಎಂದು ಅಬದ್ಧವಾಗಿ ಹೇಳುತ್ತ ಶಿವನನ್ನು ನಿಂದಿಸ ಹತ್ತಿದನು. ಅದನ್ನು ಜೊಮ್ಮಯ್ಯನು ಕೇಳಿ ಕೋಪಗೊಂಡು ತರಹರಿಸದೆ ಪುರಾಣಿಕನನ್ನು ಅಲ್ಲಿಯೇ ಇರಿದು ಬಿಟ್ಟನು.

ಮಹಡಿಯಲ್ಲಿ ಪೂಜೆಗೆ ಕುಳಿತ ಪೇರ್ಮಾಡಿಯು ಪುರಾಣಿಕನ ದನಿಯು ನಿಂತಿದ್ದನ್ನು ಕೇಳಿ ಹೀಗೇಕಾಯಿತೆಂದು ಕೇಳುತ್ತಿರುವಾಗ ಇದಿರಿಗೆ ಇದ್ದ ವಿಷ್ಣು ಪ್ರತಿಮೆಯ ಕಣ್ಣೊಳಗಿಂದ ನೀರು ಒಸರಹತ್ತಿತು. ಅದನ್ನು ನೋಡಿ ಅರಸನು ಭೀತಿಗೊಂಡನು. ಆಗ ಅವನು ಏನೋ ಪ್ರಮಾದವಾಗಿದೆಂದು ಭಾವಿಸಿ ಮಹಡಿಯ ಕೆಳಗಿಳಿದು ನೋಡಲಾಗಿ ಪುರಾಣಿಕನ ಕೈಯ್ಯಲ್ಲಿದ್ದ ಪುರಾಣ ಒಂದೆಸೆಯಾಗಿದೆ, ಅವನ ಮೃತದೇಹ ಬೇರೊಂದೆಸೆಯಾಗಿದೆ, ಇದನ್ನು ನೋಡಿ ಇದು ಜೊಮ್ಮಯ್ಯನ ಕಾರ್ಯವೆಂದು ಅವನಿಗೆ ಅಲ್ಲಿಯವರು ತಿಳಿಸಲು ಅರಸನು ಒಡ್ಡೋಲಗಕ್ಕೆ ಬರಬೇಕೆಂದು ಜೊಮ್ಮಯ್ಯನಿಗೆ ಹೇಳಿಕಳಿಸಿದನು.

ಪೆರ್ಮಾಡಿರಾಯನ ಹೆಂಡತಿಯ ಹೆಸರು ಲಕುಮಾದೇವಿಯು. ಅವಳು ಶಿವಲಿಂಗಾರ್ಚನೆಯಲ್ಲಿ ಆಸಕ್ತಿಯುಳ್ಳವಳು. ಯಾವಾಗಲೂ ಶಿವನನ್ನೇ ಭಜಿ ಸುವವಳು. ಅವಳು ಮಂತ್ರಿಯಾದ ಜೊಮ್ಮಣ್ಣನಲ್ಲಿದ್ದ ಶಿವಭಕ್ತಿಯನ್ನು ನೋಡಿ ಅವನಿಗೆ ಅತ್ಯಂತ ಒಲಿದವಳಾಗಿ ಅವಳು ಅವನನ್ನು ನೋಡಿ ಸಂತೋಷಪಡುತ್ತಿದ್ದಳು. ಅವಳು ಜೊಮ್ಮಯ್ಯನಿಂದ ಅರಮನೆಯಲ್ಲಿ ಒದಗಿದ ಪ್ರಮಾದವನ್ನು ಅರಿತವಳಾಗಿ ಅವನನ್ನು ಅರಸನು ಕರಿಸಿದ್ದಾ ನೆಂಬುದನ್ನು ತಿಳಿದು ಅವನನ್ನು ಈ ಆಪತ್ತಿನಿಂದ ಉಳಿಸಬೇಕೆಂದು ಬಯಸಿ, ಜೊಮ್ಮಯ್ಯನು ಅರಸನಿಗೆ ಎಂದೂ ನಮಸ್ಕರಿಸುವದಿಲ್ಲ. ಈ ಕಾಲದಲ್ಲಿ ಅವನು ಅವನಿಗೆ ನಮಸ್ಕರಿಸುವಂತೆ ಮಾಡಿದ್ದಾದರೆ ಅರಸನ ಕೋಪವು ಅಡಗಬಹುದು, ಎಂದು ಭಾವಿಸಿ ಶಿವಭಕ್ತೆಯಾದ ಅವಳು ಓಲ ಗಕ್ಕೆ ಬಂದು ಅರಸನ ಹಿಂಬದಿಯಲ್ಲಿ ನಿಂತು ತನ್ನ ಪ್ರಾಣಲಿಂಗವನ್ನು ಸಿಂಗರಿಸಿ ಅರಸನರಿಯದಂತೆ ಅವನ ಹಿಂಬದಿಗೆ ಬಂದು ಅದನ್ನೆತ್ತಿ ಹಿಡಿ ದುಕೊಂಡು ನಿಂತುಕೊಂಡಳು. ಇವರ ಉದ್ದೇಶವು ಜೊಮ್ಮಯ್ಯನು ಅರ ಸನೆದುರಿಗೆ ಬಂದಾಗ ತನ್ನಿದಿರಿಗೆ ಆ ಲಿಂಗವನ್ನು ಕಂಡು ಅದಕ್ಕೆ ನಮ ಸ್ಕರಿಸುವನು. ಹೀಗೆ ನಮಸ್ಕರಿಸಲು ರಾಜನು ತನಗೆಯೇ ನಮಸ್ಕರಿಸಿ ದನೆಂದು ಭಾವಿಸಿ ಅವನಿಗೆ ಪ್ರೀತನಾಗುವನೆಂದು ಭಾವಿಸಿ ಅವಳು ಈ ಉಪಾಯವನ್ನು ಯೋಜಿಸಿದ್ದಳು.

ಸ್ವಲ್ಪ ಹೊತ್ತಿನಲ್ಲಿ ಜೊಮ್ಮಯ್ಯನು ಓಲಗವನ್ನು ಪ್ರವೇಶಿಸಿ ಅರ ಸನ ಸಮ್ಮುಖದಲ್ಲಿ ನಡೆದುಬರುತ್ತಿರಲು ತನ್ನ ಇದಿರಿಗೆ ಲಕುಮಾದೇವಿಯ ಕೈಯ್ಯಲ್ಲಿ ತೇಜಃಪುಂಜವಾದ ಲಿಂಗವು ಹೊಳೆಯುತ್ತಿರುವದನ್ನು ಕಂಡು ಅವನಲ್ಲಿ ನಿಜಭಕ್ತಿಯುಂಟಾಯಿತು. ಅದರ ಭರದಲ್ಲಿ ಅವನು ಸಿಂಹಾಸ ನದೆದುರಿನಲ್ಲಿ ಸಾಷ್ಟಾಂಗವೆರಗಿದನು. ಅರಸನು ಇದನ್ನು ನೋಡಿ ಆಶ್ಚರ್ಯ ಚಕಿತನಾದನು. ಅಷ್ಟರಲ್ಲಿ ಪ್ರಕಾಶಿಸುತ್ತಿದ್ದ ಆ ಲಿಂಗವು ತಾನು ಭವಿಯ ಹಿಂದೆ ಕನಿಷ್ಟ ಸ್ಥಾನದಲ್ಲೇಕೆ ಉಳಿಯಬೇಕು ಎಂದು ಭಾವಿಸಿತೋ ಏನೋ ಎನ್ನುವಂತೆ ಅದು ಮುಂದುವರಿದು ಗಗನವೇ ತನ್ನ ಆಸನವನ್ನಾಗಿಟ್ಟುಕೊಂಡು ಸಭಾಮಧ್ಯದಲ್ಲಿ ಬಂದು ನಿಂತಿತು. ಅರಸನು ಅದನ್ನು ನೋಡಿ ಮೊದಲು ವಿಷ್ಣು ಪ್ರತಿಮೆಯ ಕಣ್ಣಿಂದ ನೀರೊಸರಿತು, ಈಗ ಜೊಮ್ಮಯ್ಯನ ಆತ್ಮ ಶಕ್ತಿಯಿಂದ ಲಿಂಗವು ತನ್ನೆದುರಿಗೆ ಹರಿದುಬಂದು ನಿಂತಿತು. ಅಂತರದಲ್ಲಿ

ಮಾನವನು ಸಚ್ಛೀಲನೂ, ಸದ್ಗುಣಿಯೂ ಆಗಿರಬೇಕು. ಸತ್ಯವಾಗಿಯೂ, ನಿಷ್ಕಳಂಕವಾಗಿಯೂ ಇರುವ ನಡತೆಗಿಂತ ಶ್ರೇಷ್ಠವಾದದ್ದು ಜಗತ್ತಿನಲ್ಲಿ ಮತ್ತಿನ್ನಾವುದೂ ಇಲ್ಲವು. ನೀತಿಶಾಲಿಗೆ ಗೌರವವನ್ನು ಕೊಟ್ಟು ಆತನ ಹಿತೋಪದೇಶವನ್ನು ಜನರು ಲಾಲಿಸಿದರೆ ಜೀವನದ ಉದ್ದೇಶ ಸಾಧನೆಯು ಸಫಲವಾದೀತು ! ನ್ಯಾಯಾನ್ಯಾಯ ವಿಮರ್ಶನ ಶಕ್ತಿಯು ಮಾನವನಿಗಿರಬೇಕು. ಮಾನವನು ಸನ್ಮಾರ್ಗ ಪ್ರವರ್ತಕನಾಗಿಯೂ, ಪರೋಪಕಾರಿಯಾಗಿಯೂ ಬಾಳಬೇಕು. ಉಬ್ಬರವಿಳಿತಗಳಿದ್ದಾಗಲೀ ಜೀವನ ನೌಕೆಯನ್ನು ಎದೆಗಾರಿಕೆಯಿಂದ ನಡೆಯಿಸಬೇಕು. ಕಲಿಯುವುದಕ್ಕೂ, ಅನುಭವವನ್ನು ಹೊಂದುವುದಕ್ಕೂ, ಮನಸ್ಸನ್ನು ಕಾಪಾಡುವುದಕ್ಕೂ ಉಪೇಕ್ಷೆ ಮಾಡದೆ ಅವಕಾಶಗಳನ್ನು ಹುಡುಕಿ ಉಪಯೋಗಿಸಿಕೊಳ್ಳಬೇಕು. ನಮ್ಮ ಬಾಳನ್ನು ಹಸನು ಮಾಡಿಕೊಂಡು ಶ್ರೇಷ್ಠ ಬಗೆಯಲ್ಲಿ ಪ್ರಯೋಜನಕಾರಿಯಾಗುವಂತೆ ಉಪಯೋಗಿಸುವುದನ್ನು ಕಲಿತುಕೊಳ್ಳಬೇಕು. ಜೀವನವು ಸುಖದುಃಖ ಪೂರಕವಾಗಿರುವದರ ಕಾರಣ ಬೇಸರಿಕೆಯಾಗಲೀ, ಗೊಣಗಾಗಲೀ, ಸುಮ್ಮಾನಸಲ್ಲಾಪವಾಗಲೀ ಕೂಡದು. ನಮ್ಮ ನಮ್ಮ ಶಕ್ತಿ ಯುಕ್ತಿ, ಭಕ್ತಿ ಭುಕ್ತಿಗಳಿಗನುಸಾರವಾಗಿ ನಮಗೆ ಸಿದ್ಧಿಯು ಲಭಿಸುವುದು. ಜ್ಞಾನವು ಮೋಕ್ಷದ ತಾಯಿ, ಮೋಕ್ಷವು ವಿರೂಪಾಕ್ಷನ ಬಾಯಿ, ಎಂದಿರುವ ಆತ್ಮಜ್ಞಾನಿಯ ಅಮರತ್ವವನ್ನು ವಿವೇಚಿಸಿ, ಪರಮಾರ್ಥ ಸಂಪಾದನೆಗೆ ಅನುಕೂಲಿಸುವ ವಿದ್ಯಾರ್ಜನೆಗೆ ನಡುಕಟ್ಟಿ ನಿಲ್ಲಬೇಕು.

ನಮ್ಮ ಜೀವನವನ್ನು ಹುಲ್ಲಿಗಿಂತಲೂ ಹೀನವಾಗಿರುವಂತೆ ಮಾಡಿಕೊಳ್ಳಬಾರದು. ನಮ್ಮ ಆಯುರ್ಮಾನವು ಇಷ್ಟೇ ಸರಿಯೆಂದು ಬೆಲೆಗಟ್ಟಲು ಸಾಧ್ಯವಿಲ್ಲವು. ಅತ ಏವ ಕಾಲವನ್ನು ವೃಥಾ ಕಳೆಯಬಾರದು. ಪ್ರತಿಯೊಬ್ಬನೂ ನಿರಾಶಾವಾದಿಯಾಗಿರದೆ ಆಶಾವಾದಿಯಾಗಿರಬೇಕು. ಉತ್ತಮ ರೀತಿಯಲ್ಲಿ ಕಾಲಕಳೆಯುವುದನ್ನು ಬಿಡದೆ ರೂಢಿ ಮಾಡಬೇಕು. ಕಳೆದುಹೋದ ಕಾಲವು ಮರಳಿ ಬಾರದು. ಆದ್ದರಿಂದ ಕಾಲವೆಂಬ ಹಣವನ್ನು ಉಪಯುಕ್ತ ರೀತಿಯಲ್ಲಿ ಖರ್ಚು ಮಾಡಬೇಕು. ಕೆಲವಂ ಬಲ್ಲವರಿಂದ ಕಲ್ತು, ಮತ್ತೆ ಕೆಲವಂ ಸುಜ್ಞಾನಿ ಸಂಗದಿಂ ಕಲ್ತು, ಎಂಬಂತೆ ಸಕಲರಿಂದಲೂ ಒಳ್ಳೆಯ ವಿಚಾರಗಳನ್ನು ಸಂಗ್ರಹಿಸಬೇಕು. ವಿದ್ವಾಂಸರ, ವಿವೇಕಿಗಳ, ಸಜ್ಜನರ, ಸಾಧುಗಳ ಸಂಗಡ ಕಲೆಯಬೇಕು.

ಉತ್ತಮ ಗ್ರಂಥಗಳನ್ನೂ, ಪತ್ರಿಕೆಗಳನ್ನೂ ವ್ಯಾಸಂಗ ಮಾಡುತ್ತಿರಬೇಕು. ಉದ್ಯೋಗವೇ ಪುರುಷ ಲಕ್ಷಣವಾಗಿರುವದರಿಂದ ಸತತವೂ ಉದ್ಯೋಗಿಯಾಗಿರಬೇಕು. ನಲಿವು ಒಲಿವಿಗಾಗಿ ವ್ಯಾಯಾಮ ಮತ್ತು ಆಟಗಳನ್ನು ಅಭ್ಯಾಸಿಸುತ್ತಿರಬೇಕು. ಪ್ರಾರ್ಥನೆಯು ದಿನಚರಿಯ ಊಟವಾಗಿರಲಿ. ಪ್ರತಿದಿನವೂ ನಮ್ಮ ನಮ್ಮ ಕೈಯ್ಯಲ್ಲಾದಷ್ಟು ಮಟ್ಟಿಗೆ ಪರೋಪಕಾರವನ್ನು ಮಾಡುತ್ತಿರಬೇಕು. "ಪರೋಪಕಾರಮಿದಂ ಶರೀರಂ. ಪರೋಪಕಾರವು ಪುಣ್ಯದ ತಾಯಿ, ಪುಣ್ಯವು ಪುರುಷಾರ್ಥದ ತಾಯಿ. ಪರೋಪಕಾರದಂತಹ ಪುಣ್ಯವಿಲ್ಲ. ಪರಪೀಡೆಯಂತಹ ಪಾಪವಿಲ್ಲ" ಎಂಬುದನ್ನು ನೆನಪಿನಲ್ಲಿಟ್ಟುಕೊಂಡು ಬಾಳಬೇಕು ಗುಣಕ್ಕೆ ಮಾತ್ಸರ್ಯವಿಲ್ಲ ಎಂಬ ತತ್ವವನ್ನು ದಿನಚರಿಯ ಜೀವನದಲ್ಲಿ ಕ್ರಿಯಾರೂಪಕ್ಕೆ ತರಬೇಕು.

ಅಹಂಕಾರಕ್ಕೆ ಉದಾಸೀನವೇ ಮದ್ದು. ಯಾರು ಮೊದಲು ಉದಾಸೀನತೆಯಿಂದಿರುವರೋ ಅಂತಹವರು ತಮಗೆ ಬರುವ ಕಷ್ಟಸಂಕಷ್ಟಗಳನ್ನು ಅನುಭವಿಸಿ, ಮುಂದೆ ಪಶ್ಚಾತ್ತಾಪ ಪಡಬೇಕಾಗುವುದು. ಅತಏವ ಪ್ರತಿಯೊಬ್ಬರೂ ಯಾವ ಯಾವ ಕೆಲಸಗಳನ್ನು ಮಾಡಬೇಕು ಎಂಬುದನ್ನು ಮೊದಲೇ ಆಲೋಚಿಸಿಕೊಂಡು ಕಾರ್ಯಪರರಾಗುವುದು ಆದ್ಯ ಕರ್ತವ್ಯವು. ಉದ್ಯೋಗದಂತಹ ಮಿತ್ರನಿಲ್ಲ, ಆಲಸ್ಯದಂತಹ ಶತ್ರುವಿಲ್ಲ. ಆಲಸ್ಯವನ್ನು ದೂರ ನಿಲ್ಲಿಸಿ ಕ್ರಿಯಾವಂತರಾಗಿ ಉತ್ತಮ ನೈತಿಕಶಾಲಿಯಾದರೆ ಸಮಾಜದಲ್ಲಿ ಪ್ರಗತಿಪರನಾಗಿ ಜೀವಿಸಿ ಮಾನವನ ಗುರಿಯನ್ನು ಮುಟ್ಟಲು ಅವಕಾಶವಾಗುವುದು. ನೈತಿಕಬಲವು ಅಧಃಪತನವಾದರೆ ಅಂದೇ ಆತನ ಬಲಗಳೆಲ್ಲ ನಿತ್ರಾಣವಾಗುವುವು. ದೇಗುಲವಾದ ದೇಹವಿದು ಅಪವಿತ್ರತೆಯಿಂದ ಕೂಡಿ ಬೀಳು ಬಿದ್ದು ಹಾಳಾಗಿ ಹೋಗಲು ಅವಕಾಶವಾಗುತ್ತದೆ. ನಾವು ಅದಕ್ಕೆ ಅವಕಾಶಕೊಡದೆ ನೈತಿಕಶಾಲಿಗಳಾಗಿದ್ದು ದೇಹವೆಂಬ ದೇಗುಲವು ಸಕಲರಿಗೂ ಉಪಯೋಗವಾಗುವಂತೆ ಮಾಡಿಕೊಳ್ಳಬೇಕು. ಅಂದು ನಾವು ಹಿಡಿದ ಕಾರ್ಯ ಸಾಧನೆಯಲ್ಲಿ ಜಯಲಕ್ಷ್ಮಿಯನ್ನು ಪಾಣಿಗ್ರಹಣ ಮಾಡಿಕೊಂಡು ನೆಮ್ಮದಿ ಶಾಂತಿಯಿಂದಿರಬಹುದು.

ಹೆಚ್ಚುಹೆಚ್ಚಾಗಿ ವ್ಯಾಸಂಗ ಮಾಡುತ್ತ, ಜ್ಞಾನಸಂಗ್ರಹ ಮಾಡಿಕೊಂಡು ಜ್ಞಾನದಾಹಿಯಾಗಿರಬೇಕು. ವಿಚಾರಶೀಲರಂತೆಯೇ ಆಚಾ

ರಶೀಲರಾಗಿಯೂ ಇರಬೇಕು. ಮೆದುಳು, ಮನಸ್ಸು, ದೇಹಗಳು ಕ್ರಮಕ್ರಮವಾಗಿ ಚುರುಕಾಗಿರಬೇಕು. ಪಟುವಾಗಿ ಮುಂಬರಿಯುತ್ತಿರಬೇಕು. ತಾವು ಯತ್ನಿಸಿದ ಕಾರ್ಯದಲ್ಲಿ ಅಪಜಯವೇನಾದರೂ ಬಂದರೆ ಅದಕ್ಕೆ ಕಾರಣವನ್ನು ಕಂಡುಹಿಡಿದು ಕಾರ್ಯ ಸಿದ್ಧಿಮಾಡಿಕೊಳ್ಳಬೇಕು. ಒಂದುಕಡೆ ಸತತವೂ ಹಾಸ್ಯ ಮತ್ತು ನಗುವಿನ ಪ್ರವಾಹದಲ್ಲಿ ಈಜಾಡುತ್ತಿರುವರು. ಮತ್ತೊಂದುಕಡೆ ಅತಿ ಗಂಭೀರ ಗರ್ಭಗುಡಿಯಲ್ಲಿ ಪೀಠ ಪತಿಗಳಾಗಿರುವರು. ಬಾಳಿನಲ್ಲಿ ಗಾಂಭೀರ್ಯಕ್ಕೂ ಹಾಸ್ಯಕ್ಕೂ ಉಚಿತ ಸ್ಥಾನವನ್ನು ಕೊಡಬೇಕು. ಆರಂಭದಲ್ಲಿ ಅಂಕುರಿಸಿದ ನೀಚ ಗುಣದ ಮೊಳಕೆಯೇ ಇಲ್ಲದಂತೆ ಮಾಡಿ, ಸುಗುಣದ ಮೂರ್ತಿಗಳಾಗಬೇಕು. ಶಾಶ್ವತ ಕಾರ್ಯಗಳನ್ನು ಮಾಡಿ ಕೀರ್ತಿದೇಹಿಗಳಾಗುವುದು ನಮಗೆ ಅಗತ್ಯವು. ಶ್ರದ್ಧೆಯೂ, ಸಹನೆಯೂ, ಸ್ವಧರ್ಮಾಭಿಮಾನವೂ ಸಾಹಸವೂ ಇರಬೇಕು. ಬಸವೇಶ, ಬುದ್ಧ, ಮಹಮದ, ಕ್ರಿಸ್ತ ಇವರೆಲ್ಲರೂ ಗತಿಸಿ ನೂರಾರು ವರ್ಷಗಳಾಗಿದ್ದರೂ ಅವರು ಇಂದು ಕೀರ್ತಿ ಧವಳಗಿರಿಯಲ್ಲಿ ಮನೋಹರವಾಗಿ ರಂಜಿಸುತ್ತಿರುವರು. ಅವರ ಕಾರ್ಯಗಳೇ ಅವರನ್ನು ಹಾಗೆ ಮಾಡಿವೆ. ಏವಂ ಚ ನಾವು ಮಹಾ ವಿಭೂತಿಗಳ ಆದರ್ಶವನ್ನು ನಮ್ಮ ಜೀವನದ ಗುರಿಯಾಗಿಟ್ಟುಕೊಂಡು ಜೀವಿಸಬೇಕು.

ಕಾಲಗತಿಯ ವೈಪರೀತ್ಯದಿಂದ ನಮ್ಮ ಸಂಸ್ಕೃತಿ ಮಂದಿರದ ರೂಪವೇ ಇಂದು ಕೆಡುತ್ತಿದೆ. ನಮ್ಮ ಜನಾಂಗ, ಸಂಸ್ಕೃತಿ, ಭಾವನೆ, ಆಚಾರ, ವಿಚಾರಗಳು ತಾರುಮಾರಾಗಿ ಹೋಗಿವೆ. ನಮ್ಮ ಪ್ರಾಚೀನರು ಏರ್ಪಡಿಸಿದ್ದ ನೀತಿ ನಿಯಮಗಳು ಇಂದಿನವರೆಗೆ ಅನರ್ಥಕಾರಿಯೆಂದು ಗಣಿಸಲ್ಪಟ್ಟಿವೆ. ನಮ್ಮ ಸಂಸ್ಕೃತಿಯ ನೈಜಾರ್ಥವು ಅರಿವಾಗಿ ಅದರ ಮಾರ್ಗದಲ್ಲಿಯೇ ನಡೆದರೆ ನಮ್ಮ ಬಾಳು ಉತ್ತಮ ಮಟ್ಟಕ್ಕೇರುವುದರಲ್ಲಿ ಸಂದೇಹವಿಲ್ಲವು. ಅಜ್ಞಾನವು ಅಳಿದು ಪಾರಮಾರ್ಥಿಕವು ಫಲವೃಕ್ಷವಾಗಿ, ಅಖಂಡಾನಂದ ಪರಿಪೂರ್ಣ ಸ್ವಯಂ ಪ್ರಕಾಶ ಮಂಗಳಮಯನ ಸಂದರ್ಶನವನ್ನು ಮಾಡಿಸಿಕೊಂಡರೆ ಬಾಳು ಪಾವನವಾದೀತು, ಜೀವನವು ಪುನೀತವಾದೀತು. ಜಗನ್ನಿಯಾಮಕನಾದ ನರನಾಟಕ ಸೂತ್ರಧಾರನ ಅಪ್ಪಣೆಯಂತೆ ನಡೆದು, ಆತನಲ್ಲಿ ಭಕ್ತಿಯಿಂದ ವರ್ತಿಸಬೇಕು. ಗುರಿಯಿಲ್ಲದ ಬಾಳ್ವೆಯು ಮಕರಂದವಿಲ್ಲದ ಹೂವು. ದಯೆಯೇ ಜಗತ್ತನ್ನು

ನಿಲ್ಲಿಸಿರುವುದು; ಧನಕನಕಾದಿ ಸಂಪತ್ತಲ್ಲ. ಧರ್ಮವೇ ದಾರಿಯನ್ನು ತೋರಿಸುವ ಬೆಳಕು; ದೀಪವಲ್ಲ. ಕೀರ್ತಿಯೇ ಸತತವೂ ಮನೋಹರ; ಪ್ರಾಯವಲ್ಲವು. ಪರೋಪಕಾರ ಕ್ರಿಯೆಗಳೇ ಎಂದೆಂದಿಗೂ ಶಾಶ್ವತವು. ನಮ್ಮ ಜೀವವಲ್ಲವು ಎಂಬ ನೀತಿವಾಕ್ಯವಿದೆ. ವಿಶ್ವವೆಲ್ಲ ಜನಿಸಿ ಕಷ್ಟ ಸುಖಗಳಿಂದ ತೊಳಲಿ ಬಳಲಿ ಎದೆಗೆಡದೆ ಶುದ್ಧ ಕರ್ಮಮಯ ಜೀವನ ದಿಂದ ತನ್ನ ಕರ್ತವ್ಯವನ್ನೂ ಕಾಪಾಡುವುದೇ ಜೀವನದ ಪರಮೋದ್ದೇಶವು ಎಂಬ ಗೀತಾಚಾರ್ಯನ ವಾಕ್ಯವೂ ಪ್ರತಿಯೊಬ್ಬರ ಜೀವನದ ಉದ್ದೇಶವಾಗಿರಲಿ. ಆದರ ಸಾಧನೆಯಿಂದ ಪುರುಷಾರ್ಥವನ್ನು ಪಡೆದು ಪುನೀತರಾಗಲಿ.

---

## ಕುಲವಾವುದಯ್ಯಾ ?

( ಲೇಖಕಃ— ವಿದ್ವಾನ್ ಕೆ. ಎಂ. ರಾಜಶೇಖರಯ್ಯನವರು
ಗೌ॥ ಹೈಸ್ಕೂಲು ಸಂಸ್ಕೃತ ಪಂಡಿತರು ತೀರ್ಥಹಳ್ಳಿ )

ಭಕುತನಿಗೆ ಕುಲವಾವುದಯ್ಯಾ
ಯುಕುತಿಯಲಿ ಎನಗರುಹೊ ದೇವ
ನಾನು ನಿನ್ನನು ನಂಬಿ ಲಿಂಗದೇಹಿ
ಎನುತಲಿ ಕಾಲದೂಗುವೆ ದೇವ ॥ ॥೧॥

ಗುಣವು ಕರ್ಮವು ಶೀಲ
ಗಣನೆಯಲ್ಲವೆ ಕುಲಕೆ ಯೊಗ
ಕರ್ಮವೆಂತಿರಲಿ ಭಕುತಗೆ
ಅದೇ ಕುಲ ಪ್ರೇಮ ಕುಲ ಶಿವಗೆ ॥ ॥೨॥

ಶ್ವಪಚನಾದೊಡೆಯೇನು ? ತಾನು
ಗುರುಲಿಂಗಜಂಗಮದ ಸೇವೆಯಲಿ
ಹಗಲಿರುಳು ಕಾಲವನೆ ದೂಡುತಲಿ
ಶಿವಶರಣರ ನಾಮವನೆ ಧ್ಯಾನಮಾಳ್ಪೆನು. ದೇವ॥ ॥೩॥

ಕುಲವು ಕುಲವೆನ್ನುತಲಿಯುಮ್ಮದೆ
ಬಹು ದೊಡ್ಡ ಕುಲವೆನ್ನುತಲಿ ಕುಲಕೆ ತಕ್ಕ
ಶೀಲವಿಲ್ಲದಲೆ ಅದು ದೊಡ್ಡ
ಕುಲವೆಂತಹುದೊ? ಗುರುದೇವ ॥ ॥೪॥

ಕುಲವು ದೊಡ್ಡದಾದ ಮಾತ್ರದಿ
ಕುಲಕೆ ಕರ್ಮಶೀಲ ಗುಣಗಳ ಸಾಂಕರ್ಯ
ಸುಲಲಿತದಿ ಸಂಭವಿಸದಿರ್ದೊಡೆ
ಕುಲವೊ ಅದು ಖಿಲವೊ ಎನಗರುಹೊ ದೇವ ॥ ॥೫॥

---

# ಶಿವಶರಣರ (ಸಮನ್ವಯ) ಯೋಗ.

(ಬರೆದವರುಃ-ಶ್ರೀಯುತ ಎಂ. ದೊಡ್ಡಯ್ಯನವರು ಮುಕ್ಕಾಂ ನಾಗರಹಾಳ
ಜಿ ಬಳ್ಳಾರಿ ತಾ. ಶಿರುಗುಪ್ಪಿ.)

ಜಗದಾದಿಯಿಂದ ಇಂದಿನ ವರೆಗೂ ಸಕಲ ಮಾನವರು ಶಾಶ್ವತವಾದ ಸುಖವನ್ನೇ ಲಕ್ಷಿಸಿ ವ್ಯವಹರಿಸಿದರೂ, ತಪ್ಪು ತಿಳುವಳಿಕೆಯ ಮೂಲಕ, ದುಃಖಮಿಶ್ರಿತವಾದ ಸಾಸುವೆಯ ಷಡ್ಭಾಗದಷ್ಟು ಸುಖದಿಂದ ಸಮಾಧಾನವಿಲ್ಲ. ಅದೇಕೆ? ಜೀವನ ಸ್ವಭಾವವು ಶಾಶ್ವತ ಸುಖಾಪೇಕ್ಷೆಯಾಗಿರುವದರಿಂದ, ಜೀವನ ಅಧಿಷ್ಠಾನ ರೂಪವು ಸ್ವತಂತ್ರ ಸುಖವಾಗಿರುವದರಿಂದ, ಇಂದ್ರಿಯಜನ್ಯ ಸುಖವು ಪರತಂತ್ರವು. ಆದ್ದರಿಂದ ಜೀವನಿಗೆ ವಿಶ್ರಾಂತಿಯಿಲ್ಲ.

ಬುದ್ಧಿಯಿಂದತ್ತತ್ತ ಶುದ್ಧ ಬುದ್ಧಿಗೆ ಗೋಚರವಾದುದೇ ನಿತ್ಯ ಸುಖವು. ಇಂತಹ ನಿತ್ಯಸುಖಸ್ವರೂಪವೇ ನಿನ್ನ ನಿಜರೂಪವೆಂದು, ಗುರುಶಾಸ್ತ್ರಾದಿಗಳ ಉಪದೇಶಬಲದಿಂದ, ಶುದ್ಧಾಂತಃಕರಣನಾದ ಜೀವನು ದೇವರಾಗುವನು. ಈ ವಿಷಯದಲ್ಲಿ ಭಾರತೀಯ ದರ್ಶನಕಾರರು, ಆತ್ಯಂತಿಕ ಸತ್ಯವನ್ನು ಕುರಿತು, ನೋಡಿದಂತೆ ಸಿದ್ಧಾಂತಗಳನ್ನು ಬರೆದಿರುವರು. ಧ್ಯೇಯ ವಸ್ತುವಿನ ಸಿದ್ಧಿಗೋಸ್ಕರ ಸಾಧನಗಳನ್ನು ಬೇರೆ ಬೇರೆ ಮಂಡಿಸಿರುವರು. ಹೀಗೆ ನಾನಾ ಸಾಧನಗಳೂ, ನಾನಾ ಸಿದ್ಧಾಂ

ತಗಳೂ, ಸಾಮಾನ್ಯ ಜನರ ಮನಸ್ಸುಗಳಲ್ಲಿ, ಸಂದೇಹ ಜನಿಸಲು ಅವಕಾಶವಾದುದು ಇದೇ ಕಾರಣ. ಯಾವ ಮತವು ಸಮ್ಮತವಾದುದೆಂಬ ಸಂದೇಹವಂಕುರಿಸಿ ವಿಕಲ್ಪಗಳಿಗೆಡೆಯಾದುದು. ಜ್ಞಾನಾದೇವತು ಕೈವಲ್ಯಂ " ಜ್ಞಾನ ವೊಂದರಿಂದಲೇ ಮುಕ್ತಿ, ಎಂದು ಕೆಲವರೂ ಜೀವೇಶ್ವರರು ಬೇರೆ ಬೇರೆಯಾಗಿ ಭಾವಿಸುವವರು ಹಲವರೂ. ವಿಶಿಷ್ಟನೆಂದು ತಿಳಿದವರು ಹಲವರೂ ಉಂಟು. ಈ ರೀತಿಯಾಗಿ ತಮ್ಮ ತಮ್ಮ ಪಂಥಗಳನ್ನು ಬಗೆದಿದ್ದಾರೆ. ಮಹಾತ್ಮಾ ಗಾಂಧೀಜೀಯವರು ಅಂದದ್ದೇನಂದರೆ ಜಗತ್ತಿನಲ್ಲಿ ಎಷ್ಟು ವ್ಯಕ್ತಿಗಳುಂಟೋ ಅಷ್ಟು ಮತಗಳುಂಟೆಂದು ಹೇಳಿದ್ದು ಅತಿಶಯೋಕ್ತಿಯಲ್ಲ.

ಈ ವಿಷಯದಲ್ಲಿ ಶಿವಾನುಭವಿಗಳಾದ ಶಿವಶರಣರ ದರ್ಶನದ, ಅಥವಾ ಸಮನ್ವಯ ಯೋಗದ ಸಾರಾಂಶವೇನಂದರೆ ಸ್ವರೂಪಭೂತವಾದ ಸಮ್ಯಕ್‌ಜ್ಞಾನ ಮೂಲಕ ಭಕ್ತಿ ಪ್ರಧಾನ ಕರ್ಮಯೋಗವೇ ಸಮನ್ವಯಯೋಗದ ತಿರುಳು. ಈ ಅಭಿಪ್ರಾಯವು ಕೆಳಗೆ ಕಾಣಿಸಲ್ಪಟ್ಟ ಶರಣರ ವಾಕ್ಯಗಳಿಂದಲೇ ಸಿದ್ಧವಾಗುವದು.

"ಮಾನವಿಲ್ಲದ ಭೋಜನವದು ಶ್ವಾನನ ಮಾಂಸವಯ್ಯ. ಜ್ಞಾನವಿಲ್ಲದ ಕ್ರಿಯೆಯದು ಸಿದ್ಧಗಳಿಗೀಡವಯ್ಯ. ಧ್ಯಾನವಿಲ್ಲದ ಪೂಜೆಯದು ಕಾನನದ ಜ್ಯೋತಿಯಯ್ಯ. ಎಲೆ ಕಪಿಲಸಿದ್ಧಮಲ್ಲಿಕಾರ್ಜುನ ನೀನಿಲ್ಲದ ಭಕ್ತಿಯದು ಚಾಂಡಾಲಪಾಕವಯ್ಯ."

"ಕ್ರಿಯೆಯು ಅಧಿಕವೆಂಬ ದೊಡ್ಡ ಸಿದ್ಧಾಂತಿಗಳ ಮಾತು ಸೊಗಸದಯ್ಯಾ ಎನಗೆ. ಅದೇನು ಕಾರಣವೆಂದರೆ, ಅವುದಾನೊಂದು ಪಕ್ಷಿ ಉಭಯ ರೆಕ್ಕೆಯಿಂದ ಗಗನಕ್ಕೆ ಹಾರುವಂತೆ, ಅಂತರಂಗದಲ್ಲಿ ಸಮ್ಯಜ್ಞಾನ, ಬಹಿರಂಗದಲ್ಲಿ ಸತ್ಕ್ರಿಯಾ ಸಮ್ಯಜ್ಞಾನ ಸಂಪನ್ನರಾದ ಶಿವಶರಣರ ತೋರಿ ಬದುಕಿಸಯ್ಯ ಎನ್ನ ಅಖಂಡೇಶ್ವರಾ."

"ಸೋಹಂ ಎಂಬುದು ಅಂತರಂಗದ ಮದ ನೋಡಯ್ಯ. ಶಿವೋಹಂ ಎಂಬುದು ಬಹಿರಂಗದ ಮದ ನೋಡಯ್ಯ. ಈ ದ್ವಂದ್ವವನಳಿದು ದಾಸೋಹಂ ಎಂದೆನಿಸಯ್ಯ ಕಪಿಲಸಿದ್ಧಮಲ್ಲಿಕಾರ್ಜುನಾ."

ಹೀಗೆ ಶರಣರ ಅನೇಕ ವಚನಗಳಲ್ಲಿ, ಜ್ಞಾನ, ಕ್ರಿಯೆ, ಭಕ್ತಿ, ಧ್ಯಾನ, ಇವುಗಳು ಪರಸ್ಪರ ಅಗಲದಿರುವಿಕೆಯೊ ಸಮನ್ವಯ ಯೋಗ.

ಇಲ್ಲವೆ ಸಂಪೂರ್ಣ ಯೋಗ, ಸರ್ವಾರ್ಪಣ ಯೋಗ, ಇವೆಲ್ಲಾ ಪರ್ಯಾಯ ಪದಗಳು. ಆಯಾ ಮತದವರು ಜ್ಞಾನ, ಭಕ್ತಿ, ಕ್ರಿಯೆ, ಧ್ಯಾನಗಳೇ ಕ್ರಮವಾಗಿ ಅದ್ವೈತ, ದ್ವೈತ, ಹಠ, ರಾಜ, ಯೋಗ ಮಾರ್ಗಗಳೇ ಉತ್ತಮವೆಂದು ಇತರ ಮತಗಳು ಕಡಿಮೆ ತರಗತಿಯುಳ್ಳವುಗಳೆಂದು ಭಾವಿಸಿರುವದು ಸಾಂಪ್ರದಾಯದ ಹಠವಲ್ಲದೆ, ದಿಟವಲ್ಲ. ಮೂಲ ಮತಾಚಾರ್ಯರಲ್ಲಿ ಈ ಸಂಕುಚಿತವಾದ ದೃಷ್ಟಿಯಿರುವದಿಲ್ಲ.

'ಶಮಾರ್ಥಂ ಸರ್ವಶಾಸ್ತ್ರಾಣಿ, ವಿಹಿತಾನಿ ಮನೀಷಿಭಿಃ' ಎಂಬ ವಚನದಂತೆ ಸಕಲ ಶಾಸ್ತ್ರಗಳು, ಶಾಂತಿಸ್ಥಾಪನೆಯನ್ನು ಅಂತಿಮ ಗುರಿಯನ್ನಾಗಿಟ್ಟುಕೊಂಡಿರುವವು. ಪಕ್ಷಾಂತರ ಸಾಧನಗಳು ಮಾತ್ರ ಭಿನ್ನ ಭಿನ್ನವಾಗಿವೆಯೇ ಹೊರತು ಜ್ಞೇಯ ವಸ್ತು ಒಂದೇ ಎಂಬುದು ಸಿದ್ಧಾಂತವು. ಹಾಗಾದರೆ ಮತಾಚಾರ್ಯರು, ಇತರ ಮತಗಳನ್ನು ಖಂಡಿಸಿರುವದೇಕೆ ಎಂಬ ಪ್ರಶ್ನೆಯು ತಲೆದೋರುತ್ತದೆ. ಅಂದರೆ ತಮ್ಮ ತಮ್ಮ ಶಿಷ್ಯರ ಮನಃ ಪ್ರವೃತ್ತಿಯನ್ನನುಸರಿಸಿ ಖಂಡಿಸಿರುವರಲ್ಲದೆ, ಸ್ಪರ್ಧಾಸೂಯೆಯಲ್ಲಾ. ಅದೊಂದು ರೀತಿಯಿಂದ ಖಂಡನೆಯಾಗಿದ್ದರೂ, ತತ್ತ್ವವೇತ್ತರಿಗೆ ಮಂಡನವೇ ಸರಿ.

ಇನ್ನು ಸಮನ್ವಯವೆಂದರೆ, ಬರಿಯ ಸಮುಚ್ಚಯವಲ್ಲ. ನಾಲ್ಕು ನಾಲ್ಕು ಬೇರೆ ಬೇರೆ ಹಣ್ಣುಗಳನ್ನು ಒಂದೇ ಬುಟ್ಟಿಯಲ್ಲಿಡುವಂತೆ, ಯೋಗಮಾರ್ಗಗಳನ್ನೆಲ್ಲಾ ಒತ್ತಟ್ಟಿಗೆ ತರುವದು ಯೋಗಸಮನ್ವಯವಾಗದು. ಅದು ಹೇಗೆ ಸಂಗೀತ ಕಲೆಯಲ್ಲಿ ಯಾವುದಕ್ಕೆ ವಿವಿಧ ಸ್ವರಗಳ, ಏಕತಾನತೆಯನ್ನುವರೋ ಏಕರಸತೆಯನ್ನುವರೋ ಅಥವಾ ಕಾವ್ಯದಲ್ಲಿ ವಿವಿಧ ರಸಗಳ ಪರಿಪಾಕವೆನ್ನುವರೋ ಯೋಗಗಳ ಸಂಬಂಧವಾಗಿ ಶಿವಶರಣರು ಕಂಡ ಆತರದ ಕ್ರಿಯೆಗೆ ಸಮನ್ವಯವೆನ್ನುವರು.

ಆದರೆ ಈ ಮೇಲ್ಕಂಡ ಅದ್ವೈತಾದಿ ದರ್ಶನಗಳು, ಸ್ವತಂತ್ರ ಮಾರ್ಗಗಳು ಅಲ್ಲವೆಂಬ ಅರ್ಥವಲ್ಲ. ಸಮಸ್ತ ಮತಗಳ ಸಾಧನ ಮಾರ್ಗಗಳು ಸ್ವತಂತ್ರವೆಂದು ಹೇಳಬೇಕು. ಏಕೆಂದರೆ ಬುದ್ಧಿಶಕ್ತಿ ಪ್ರಧಾನವಿದ್ದವರಿಗೆ ಜ್ಞಾನ ಮಾರ್ಗವು ಸಾಧ್ಯ. ಭಾವನಾಶಕ್ತಿ ಪ್ರಧಾನವಿದ್ದವರಿಗೆ ಭಕ್ತಿ ಮಾರ್ಗ ಸುಲಭವಾಗಿರುತ್ತದೆ. ಹೀಗೆ ಎಲ್ಲಾ ಶಕ್ತಿಗಳಿಗೆ ತಿಳಿಯಲೇಬೇಕು. ಆದ್ದರಿಂದ ಬುದ್ಧಿಶಕ್ತಿ ಪ್ರಧಾನವಿದ್ದರೆ ಭಾವನಾಶಕ್ತಿಯು ಗೌಣವಾಗಿರುತ್ತೆಂದು ತಿಳಿಯಬೇಕಲ್ಲದೆ, ಅನ್ಯಥಾ ತಿಳಿಯಲಾಗದು.

ಪ್ರತಿ ಒಬ್ಬರಲ್ಲಿಯೂ ಜ್ಞಾನ, ಭಾವನ, ಮನ, ಪ್ರಾಣ, ಕರ್ಮ, ಈ ಪಂಚ ಶಕ್ತಿಗಳು ಇದ್ದೇ ಇವೆ. ಇವುಗಳಲ್ಲಿ ಗೌಣ, ಮುಖ್ಯ ಎಂಬ ಭೇದಗಳಲ್ಲದೆ, ಇವು ಪೂರಾ ಇಲ್ಲವೆಂದು ಹೇಳಲಿಕ್ಕೆ ಬರುವದಿಲ್ಲ. ಬರುತ್ತದೆಂದರೆ ಸಾಂಪ್ರದಾಯದ ಹಠ ಇವೆಲ್ಲಾ ಯೋಗಮಾರ್ಗ ಗಳು ಜ್ಞಾನ ಮೂಲಕವಾಗಿ ಹೊರಟು ಅದರ ಬೆಳಕಿನಿಂದ ಹೊರಗೆ ಬಂದು ಕೇವಲ ಆಧ್ಯಾತ್ಮಿಕ ಭೂಮಿಕೆಯಲ್ಲಿ ನಿಂತು, ಸರ್ವಾರ್ಪಣ ಮೊದಲ್ಗೊಂಡು ನಿತ್ಯ ಸುಖದ ಸ್ಥಾನವನ್ನು ಪಡೆಯುಲು ಸಮನ್ವಯ ಯೋಗದ ಧ್ಯೇಯವು.

---

## ಕಾಳಿ ಬಾರೆ!

(ಲೇಖಕಃ — ಶ್ರೀಯುತ ಹಿಂಪಿ ಲಿಂಗಣ್ಣ.)

ಅಡಿಯನೆತ್ತಿ, ಬಿಡದಲೊತ್ತಿ, ನಡೆದು ಕಾಳಿ ಬಾರೆ! ।
ತಮವು ಜಾರೆ, ಹಿಮವು ತೂರೆ, ಕ್ರಮದಿ ಸುಳಿದು ಬಾರೆ ॥
ಮುಸುಕು ತೆರೆದು, ಕಸುಕು ಸರಿದು, ನಸುಕಿನಂತೆ ತೋರೆ
ಬೆಸುಗೆ ಬಿಚ್ಚಿ, ಒಸಗೆ ಹೊಚ್ಚಿ, ಉಷೆಯು ಬರವ ತೋರೆ ॥
ಮನದ ಮಲಿನ, ಗುಣದ ಜ್ವಲನ, ಅನಲಗಣ್ಣಿಗೊಪ್ಪಿಸು ।
ಪ್ರಾಣದಣಿಕೆ, ಯೋನು ಕುಣಿಕೆ, ಗ್ಲಾನಿಯನ್ನು ತಪ್ಪಿಸು ॥
ಕಾಯುವಾಗ ಕಾಯಿಸು ।
ಮಾಯುವಾಗ ಮಾಯಿಸು ।
ಸಾಯುವಾಗ ಸಾಯಿಸು ॥
ಒಂದು ಗಣಿಸೆ ನೊಂದು ಗುಣಿಸೆ, ಹಿಂದು ಮುಂದು ನೋಡದೆ
ಒಮ್ಮೆ ನಲಿದು, ಸುಮ್ಮನೊಲಿದು, ಅಮ್ಮಗಿತ್ತೆ ಬಾಡದೆ ॥
ಸೋಲು ಭೀತಿ ಸುಳಿಯದೆ
ಬೀಳು ಭಯವು ಬೀಸದೆ
ಹೋಳು ಹೆದರು ನುಸುಳದೆ ॥
ಥಯ್ಯಥಕ್ಕ, ಕುಣಿತಕ್ಕ ಮಣಿಸಿ ಮೈಯಕೈಗಳ ।
ತುಳಿದ ಹೆಜ್ಜೆ, ಗಿಳಿರು ಗೆಜ್ಜೆ, ಒಲಿಸಲೆನುವೆ ಕಿವಿಗಳ ॥

ನಿನ್ನ ಕುಣಿತ, ನಿನ್ನ ಮಣಿತ, ಎನ್ನ ಹೃದಯಕಮೃತ
ಅಲಗಿನೇಟು, ಸಲಿಸಲಿಷ್ಟು, ನಲಿಸಿ ನಲಿವ ಮಾಟ।
ಅಡಿಯನೆತ್ತಿ, ಬಿಡದಲೊತ್ತಿ, ನಡೆದು ಕಾಳಿ ಬಾರೆ।
ತಮವು ಜಾರೆ, ಹಿಮವು ತೂರೆ, ಕ್ರಮದಿ ಸುಳಿದು ಬಾರೆ ॥

---

## ವಿಶ್ವಕವಿ ಸರ್ವಜ್ಞ.

(ಲೇಖಕಃ— ಶ್ರೀಯುತ ಎಸ್. ಸಿ. ಬೂದಿಹಾಳಮಠ
ಎಮ್. ಎ ಬಿ. ಟಿ. ಬಿಜಾಪುರ.)

ಕನ್ನಡ ನಾಡಿನಲ್ಲಿ ಸರ್ವಜ್ಞನಂಥ ಕವಿ ಉದಯಿಸಿ ಸಾಹಿತ್ಯ ಭಾಂಡಾರಕ್ಕೆ ಅಮೂಲ್ಯವಾದ ತ್ರಿಪದಿ ಕಾವ್ಯ ಕಾಣಿಕೆಯನ್ನರ್ಪಿಸಿ ಅಪಾರವಾದ ಸೇವೆಯನ್ನು ಕನ್ನಡ ಸಾಹಿತ್ಯ ಪ್ರಪಂಚಕ್ಕೆ ಸಲ್ಲಿಸಿರುವನು. ಅವನು ಪುರಾಣ ಕವಿಯಲ್ಲ. ಅವನ ಹೆಸರು ಮಹಾಕವಿಕುಲದಲ್ಲಿಲ್ಲ; ಕವಿಶಿಖಾಮಣಿಗಳ ಮಾಲೆಯಲ್ಲಿಲ್ಲ. ಕವಿಕುಲೋತ್ತಮರಾದ ರತ್ನತ್ರಯರಿಗೆ ಹೋಲಿಸಿಲ್ಲ. ಪಂಡಿತ ಮಂಡಲಿಯಲ್ಲಿ ಅವನ ಹೆಸರಿಲ್ಲ. ಕನ್ನಡ ಸಾರ್ವಭೌಮ ಕವಿಗಳು ತಮ್ಮ ಕೀರ್ತಿಧ್ವಜವನ್ನು ತಾವು ಬರೆದ ರಸವತ್ತಾದ ಭಾವಗರ್ಭಿತವಾದ, ಅಲಂಕಾರ ಉತ್ಪ್ರೇಕ್ಷೆಗಳಿಂದ ಆಚ್ಛಾದಿತವಾದ ಕಾವ್ಯಗಳಿಂದ ಪಂಡಿತ ಮಂಡಲಿಯ ಪ್ರಶಂಸೆಗೆ ಮಾತ್ರ ಯೋಗ್ಯರು ಇಂದು ಹೆಚ್ಚಾಗಿ ಸಾಹಿತ್ಯ ಪ್ರಪಂಚದಲ್ಲಿ ಇವರ ಕೂಗು, ಇವರ ಧ್ವನಿ ಕೇಳಬರುತ್ತದೆ. ಇವರ ಕೀರ್ತಿಯು ಅಜರಾಮರವಾಗಿದೆ. ಆದರೆ ಜನಸಾಮಾನ್ಯರ ಹೃದಯ ಭೇದಿಸಿದ್ದು, ಪರಿವರ್ತನವಾದದ್ದು ಸರ್ವಜ್ಞನಿಂದ. ಅವನು ಮಾಡಿದ ಸೇವೆಯು ಮಹಾಕವಿಗಳಿಂದ ಆಗಿಲ್ಲ. ಮಹಾಕವಿಗಳು ಕೇವಲ ವಿದ್ವಜ್ಜನರ ಮನ್ನಣೆಗೆ ಅವರ ಆದರಕ್ಕೆ ಬರೆದದ್ದು, ಸರ್ವಜ್ಞನು ಉಚ್ಚ ನೀಚ ವರ್ಗದವರಿಗೆ ತಿಳಿಯುವಂತೆ ಬರೆದು ಎಲ್ಲ ಜನರ ಮೆಚ್ಚಿಗೆಗೆ ಪಾತ್ರನಾದನು.

ಇಂದಿಗೂ ನನ್ನ ಊರ (ಮಾಸೂರ) ಮನೆಮನೆಗಳಲ್ಲಿ ಮಠ ಗುಡಿಗಳಲ್ಲಿ ಅಭಿಮಾನ ಧನನಾದ ಸರ್ವಜ್ಞನ ಕೀರ್ತಿಧ್ವಜವು ಮಾಸದೆ ನಿಂತಿದೆ.

ಮಾತಾಡುವಾಗ, ನ್ಯಾಯ ತೀರಿಸುವಾಗ ಸರ್ವಜ್ಞನ ಮಧುರ ಉಕ್ತಿಗಳನ್ನು ಇಂದಿಗೂ ಪಂಚಾಯತರು ನ್ಯಾಯ ತೀರಿಸುವ ಜಾಣ ಕುಶಲತೆಯನ್ನು ಉಪಯೋಗಿಸುವದುಂಟು.

ಸರ್ವಜ್ಞನ ಅನುಭವಾಮೃತವನ್ನು ತೃಪ್ತಿಯಿಂದ ತಣಿದು ತೇಗಿ ಸುಖಪಟ್ಟವರುಂಟು. ಇಂದು ನನ್ನ ಊರಲ್ಲಿ ನನ್ನ ಮುಪ್ಪಿನ ತಂದೆಯವರು ಸರ್ವಜ್ಞನ ತ್ರಿಪದಿಗಳನ್ನು ಏಕ ಕಂಠವಾಗಿ ಅನ್ನುವರು. ನನ್ನ ನೆರೆ ನಾಡಾದ ಮೈಸೂರ ಸೀಮೆಯಲ್ಲಂತೂ ಸರ್ವಜ್ಞನ ತ್ರಿಪದಿಗಳು ಲೋಕ ಪ್ರಿಯವಾಗಿ ಪುರಾಣ ಹೇಳುವಾಗ್ಗೆ, ಕೀರ್ತನ ಮಾಡುವಾಗ್ಗೆ, ಶಿವಭಜನೆ ಮಾಡುವಾಗ್ಗೆ, ಬೈಲಾಟವಾಡುವಾಗ್ಗೆ ಸರ್ವಜ್ಞನ ಬಿಚ್ಚು ಮಾತುಗಳು ಉದಾಹರಣೆಗಾಗಿ ಅಲ್ಲಲ್ಲಿ ಉಪಯೋಗಿಸುವದುಂಟು. ನನ್ನೂರ ಕಿಗುಳರ ಗೂಡ ನಗೆ ಯಾಡುವಾಗ್ಗೆ, “ಮಾಸೂರ ನಸುಗುನ್ನಿ ಕಿಗುಳರ ಗಾಳಿ ಬೇಡಂದ ಸರ್ವಜ್ಞ” ಎಂಬದು ಈಗಲೂ ವಾಡಿಕೆಯಲ್ಲಿದೆ.

ಕವಿಯು ಒಂದು ಊರಲ್ಲಿ ನಿಲ್ಲಲಿಲ್ಲ. ಊರಿಂದ ಊರಿಗೆ ಅಲಿಯುತ್ತ ಜನರ ಪದ್ಧತಿ ಸಾಂಪ್ರದಾಯಗಳನ್ನು ನೋಡಿ ಜಾತಿ ಪಂಥಗಳ ಕುಂದು ಕೊರತೆಗಳನ್ನು ಲೋಪ ದೋಷಗಳನ್ನು ಕ್ಷಣದಲ್ಲಿಯೇ ಅರಿತುಕೊಂಡು ;ಅವುಗಳ ಮೇಲೆ ತ್ರಿಪದಿ ವಚನಗಳನ್ನು ರಚಿಸಿ ಹಾಡಿದ್ದು ನಮ್ಮ ನಾಡಿನ ಜನರಿಗೆ ಅಭಿಮಾನವಾಗಿದೆ.

ಕವಿಯು ಪ್ರತಿಭಾಸಂಪನ್ನರಾದ ಕವಿಗಳಂತೆ ವೇಳೆ ಹರಣ ಮಾಡದೆ ಬಹಳ ವಿಚಾರ ಮಾಡದೆ ನಿಂತಲ್ಲಿಯೇ ನಿಂತು ಕೂತಲ್ಲಿಯೇ ಕೂತು ತ್ರಿಪದಿಗಳನ್ನು ಹಾಡಿದ್ದು ಕನ್ನಡ ಸಾಹಿತ್ಯ ಪ್ರೇಮಿಗಳಿಗೆ ಹೆಮ್ಮೆಯ ಮಾತಾಗಿದೆ. ಮನದೊಳಗಿದ್ದದ್ದನ್ನು ಕವಿಯು ಮುಚ್ಚದೆ ಬಿಚ್ಚಿಡದೆ ಸರಳೋಕ್ತಿಯಿಂದ ಸ್ಪಷ್ಟಪಡಿಸಿರುವನು.

ಕವಿಯು ತನ್ನ ಅಗಾಧವಾದ ಸ್ಮರಣಶಕ್ತಿಯನ್ನು ಸಂಗ್ರಹ ಶಕ್ತಿಯನ್ನು ವ್ಯವಹಾರ ಚಾತುರ್ಯವನ್ನು ಪ್ರತಿಯೊಂದು ಪದ್ಯದಲ್ಲಿ ನಿಚ್ಚಳ ಮಾಡಿರುವನು. ಶ್ರೇಷ್ಠ ಕವಿಗಳೆಂದು ಹೇಳಿಕೊಳ್ಳುವದೂ ಕೂಡ ಪ್ರಪಂಚದಲ್ಲಿ ಕಾಣಬರುವ ನೀತಿಗಳನ್ನು ಹೇಳಲಾರರು. ಸರ್ವಜ್ಞನ ಕೆಲಕೆಲವು ಪದ್ಯಗಳಲ್ಲಿ ದ್ವಂದ್ವಾರ್ಥವು ಕಂಡುಬರುತ್ತದೆ. ಉದಾಹರಣೆಗಾಗಿ ಕೆಲವು ಪದ್ಯಗಳನ್ನು ಕಾಣಬಹುದು.

ಹಣ್ಣು ಹಂಪಲಗಳು ಡೊಣ್ಕು ಬಾಳೆಯು ಹಣ್ಣು ।
ಡೊಣ್ಕುಟು ಒಳಗೆ ರುಚಿಯುಂಟು, ಸಜ್ಜನರ ।
ಡೊಣ್ಕು ಲೇಸೆಂದ ಸರ್ವಜ್ಞ.

ಹಂಣು ಹಂಪಲದೊಳಗೆ ಕೆಂಪು ಇಟ್ಟಿಯು ಹಣ್ಣು ।
ಕೆಂಪುಂಟು ಒಳಗೆ ವಿಷವುಂಟು. ದುರ್ಜನರ ।
ಇಂಪು ಇಂತೆಂದ ಸರ್ವಜ್ಞ.

ಹೀಗೆ ಮೇಲೆ ಕಾಣಿಸಿದ ಎರಡು ಪದ್ಯಗಳಲ್ಲಿ ದ್ವಂದ್ವಾರ್ಥ (Double meaning) ವನ್ನು ಕಾಣಬಹುದು.

ಸರ್ವಜ್ಞನು ತನ್ನ ನೈಜವಾದ ಕಾವ್ಯ ಪ್ರತಿಭೆಯಿಂದ ಬಾಳಿನಲ್ಲಿ ಬೆಳಕನ್ನು ಕತ್ತಲೆಯನ್ನು ಸಾಹಿತ್ಯ ಪ್ರಪಂಚಕ್ಕೆ ದೇಣಿಗೆ ಕೊಟ್ಟಿರುವನು. ನಮ್ಮ ಸಾಹಿತ್ಯದಲ್ಲಿ ಅನೇಕ ಕವಿಗಳು ತಮ್ಮ ಪಾಂಡಿತ್ಯ ಪ್ರದರ್ಶನ ಮಾಡಿದ್ದುಂಟು. ತಮ್ಮ ಕಾವ್ಯ ಪ್ರತಿಭೆಯ ಬೆಳಕನ್ನು ಪಸರಿಸಿದ್ದುಂಟು. ಆದರೆ ಸರ್ವಜ್ಞನಂಥ ವಿಶ್ವಕವಿ ಸಿಗುವದು ವಿರಳ!

ಪಂಡಿತರಿಗೂ ಪಾಮರರಿಗೂ ಮನ ಒಪ್ಪುವಂತೆ ತನ್ನ ವಚನಗಳ ದಿವ್ಯಾಮೃತವನ್ನು ಕನ್ನಡಿಗರು ಯಥೇಚ್ಛವಾಗಿ ಸೇವಿಸಲೆಂದು ಕವಿಯು ಮೀಸಲಾಗಿಟ್ಟಿರುವನು.

ಸರ್ವಜ್ಞನು ವಿಶ್ವಕವಿಯು. ಪಂಪಭಾರತವನ್ನು ಬರೆದ ನಮ್ಮ ಆದಿ ಪಂಪನು ಕೇವಲವಾಗಿ ಪಾಂಡವ ಕೌರವರ ಯುದ್ಧವನ್ನು ವರ್ಣಿಸಿದನು. ರನ್ನನಾದರೂ ಮಹಾಭಾರತದ ಒಂದು ತುಣುಕನ್ನು ತೆಗೆದುಕೊಂಡು ಅದನ್ನು ಅಮರವಾದ " ಸಾಹಸ ಭೀಮ ವಿಜಯ"ವನ್ನು ಬರೆದನು. ಈ ಎರಡು ಕಾವ್ಯಗಳನ್ನು ವಿದ್ವಜ್ಜನರು ಮಾತ್ರ ಓದಬಲ್ಲರು. ಆದರೆ ಜನಸಾಮಾನ್ಯರಿಗೇನುಪಯೋಗ? ಕುಮಾರವ್ಯಾಸ, ಲಕ್ಷ್ಮೀಶ, ಷಡಕ್ಷರಿ ಮೊದಲಾದ ಹೆಮ್ಮೆ ಪಡುವ ಕವಿಗಳು ಒಂದು ಪಂಥದ ಮೇಲ್ಮೆಗೆ ಕಾವ್ಯ ನಿರ್ಮಾಣ ಮಾಡಿದ್ದಾರೆ. ಆದರೆ ಸರ್ವಜ್ಞ ಕವಿಯು ಜಾತಿ ಮತ್ಸರಮಾಡದೆ ಎಲ್ಲಾ ಜಾತಿಗಳ ಕುಂದು ಕೊರತೆಗಳನ್ನು ಮತ್ತು ಅದರಲ್ಲಿಯ ವಿಶಿಷ್ಟಗುಣಗಳನ್ನು ಹೊಗಳಿದ್ದಾನೆ.

ಉದಾಹರಣೆಗಾಗಿ:—

ನಡೆಯೋದೊಂದೇ ಭೂಮಿ ಕುಡಿಯೋದೊಂದೇ ನೀರು।
ಸುಡುವಗ್ನಿಯೊಂದೆ ಇರುತಿರೆ ಕುಲಗೋತ್ರ
ನಡುವೆ ಎತ್ತಣದು? ಸರ್ವಜ್ಞ.

ಜಾತಿ ಹೀನರ ಮನೆಯ ಜ್ಯೋತಿ ತಾ ಹೀನವೇ?
ಜಾತಿ ವಿಜಾತಿಯೆನಬೇಡ।
ದೇವನೊಲಿದಾತನೇ ಜಾತ ಸರ್ವಜ್ಞ.

ಹೀಗೆ ಎಲ್ಲಾ ಜಾತಿಗಳು ಒಂದೇ (Universal Religion) ಎಂದು ಸಾರಿದ್ದಾನೆ. ಲಿಂಗಾಯತ, ಬ್ರಾಹ್ಮಣ ಜೈನರಲ್ಲಿರುವ ತಪ್ಪು ದೋಷ ಗಳನ್ನು ಸ್ವಚ್ಛಂದವಾಗಿ ಖಂಡಿಸಿರುವನು. ಸರ್ವಜ್ಞನ ಮನಸ್ಸು ಆಳ ವಾದದ್ದು (Sound mind) ಇದ್ದದ್ದನ್ನು ಒದ್ದ ಹಾಗೆ ಹೇಳುವ ಖಂಡಿತವಾದಿ.

ಅವನು ಬರೆದ ಕಾಲಜ್ಞಾನದಲ್ಲಿಯೂ ಸ್ತ್ರೀ ನಿಂದೆಯಲ್ಲಿಯೂ ಗಣಿ ಕೆಯರ ಸಂಪ್ರದಾಯದಲ್ಲಿಯೂ ಯೋಗ್ಯವಾದ ವಾದ ಮಾತುಗಳನ್ನು ಹೇಳಿರುವನು.

ಹರನ ಗಿರಿಗುಡಿಗಳಲಿ ಸುರೆ ಮಾಂಸ ಮಾರೀತು।
ಶರಣಗಳ ಹರಣ ಹಿರಿದಾಗಿ ಜಗದಲ್ಲಿ।
ಹರದಾಳಿ ನೋಡ ಸರ್ವಜ್ಞ.

ಆಂಗ್ಲ ದೇಶದಿಂ ಪಾ। ರಂಗೋರು ಒಂದು ಶ್ರೀ
ರಂಗ ಪಟ್ಟಣವ ತೆಗೆದೆಲ್ಲಿ ಜಗವನು।
ಭಂಗ ಪಡಿಸುವರು ಸರ್ವಜ್ಞ.

ಈ ಎರಡು ಪದ್ಯಗಳಲ್ಲಿ ಅವನ ಕಾಲಜ್ಞಾನವು ಸರಿಯಾಗಿ ತೋರಿದೆ. ಅದರಂತೆ ಆಂಗ್ಲೇಯರು ಜಗತ್ತನ್ನು ಭಂಗ ಪಡಿಸಿದ್ದು ನಿಜ.

ಮೊಸರು ಇಲ್ಲದ ಊಟ ಕೆಸರು ಇಲ್ಲದ ಗದ್ದೆ।
ಹಸಗವಿಲ್ಲದಳ ಮನೆವಾರ್ತೆ ತಿಪ್ಪೆಯು।
ಕಸದಂತೆ ಇಹುದು ಸರ್ವಜ್ಞ.

ನಂಬದಂತಿರಬೇಕು ನಂಬದಲೇ ಇರಬೇಕು ।
ಇಂಬರಿದು ಎಚ್ಚರಿರಬೇಕು ಹೆಣ್ಣಿನು ।
ನಂಬಿದವ ಕೆಟ್ಟ ಸರ್ವಜ್ಞ.

ಈ ಎರಡು ಪದ್ಯಗಳಲ್ಲಿ ಕೇವಲ ನೀತಿಯೇ ತೋರಿಸಲ್ಪಟ್ಟಿದೆ. ಇವುಗಳಲ್ಲಿ ವ್ಯವಹಾರ ನೀತಿಯೂ ಸ್ವಚ್ಛವಾಗಿ ತಿಳಿಸಲ್ಪಟ್ಟಿದೆ. ಜನರು ತಿಳಿದುಕೊಂಡು ಎಚ್ಚರಿಕೆಯಿಂದಿರಬೇಕೆಂಬ ಅವನ ವಿಚಾರ.

ಬಾಳಿಯಲಿ ಮುಳ್ಳಿಲ್ಲ ಕೋಳಿಯಲಿ ಮೊಲೆಯಿಲ್ಲ ।
ಕಾಳರಕ್ಕಸಿಗೆ ಭಯವಿಲ್ಲ ಸೂಳಿಗೆ ॥
ಕೀಳು ಮೇಲಿಲ್ಲ ಸರ್ವಜ್ಞ ।

ಕೋತಿಗೇ ಮತಿಯಿಲ್ಲ ಮಾತಿಗೇ ಕೊನೆಯಿಲ್ಲ ।
ಸೋತ ಹೋದವಗೆ ಬಲವಿಲ್ಲ ಸೂಳಿಗೇ ।
ನೀತಿಯೇ ಇಲ್ಲ ಸರ್ವಜ್ಞ ।

ಹೀಗೆ ಸೂಳಿಯರ ವಿಷಯಕ್ಕೆ ಅವರಲ್ಲಿರತಕ್ಕಂಥ ಮುಖ್ಯ ಗುಣಗಳನ್ನು ಬೈಲಿಗೆಳೆದಿದ್ದಾನೆ.

ಸರ್ವಜ್ಞನಿಂದ ಆಗಿನ ಕಾಲದ ಬಳಕೆಯ ಮಾತುಗಳು ಒಗಟುಗಳು ಕನ್ನಡ ನಾಡಿನ ಸಂಸ್ಕೃತಿಯ ಮೇಲೆ ಒಳ್ಳೇ ಪರಿಣಾಮವನ್ನುಂಟುಮಾಡುತ್ತವೆ. ಅವನ ಪದ್ಯಗಳಿಂದ ತಿಳಿಯಬಹುದಾದ ಅನೇಕ ವಿಷಯಗಳಿವೆ. ಸರ್ವಜ್ಞನು ತ್ಯಾಗಿಯೂ ಸ್ವಾವಲಂಬಿಯೂ ನಿಸ್ವಾರ್ಥಿಯೂ ಇದ್ದು ಆಗಿನ ಕಾಲದ ಜನಜಂಗುಳಿಯಲ್ಲಿಯ ಮೂಢ ವಿಚಾರಗಳನ್ನು ಬೈಲಿಗೆಳೆದು ಕನ್ನಡ ಸಾಹಿತ್ಯಕ್ಕೆ ಅಪಾರ ಸಹಾಯವನ್ನು ಮಾಡಿದನು. ಇಂಥ ವಿಚಾರ ಸಂಪನ್ನ ವ್ಯವಹಾರ ಚತುರ ಕವಿಗಳು ತೀರ ಕಡಿಮೆ. ಪ್ರತಿಯೊಂದು ವಿಷಯದಲ್ಲಿ ಸಮಯೋಚಿತ ಕಾಲೋಚಿತ ವಾಕ್ಯಗಳನ್ನು ನೋಡಿದರೆ ಅವು ನಾಣ್ಣುಡಿಗಳಂತೆ ಇವೆ. ಅವನ ಪ್ರಗತಿ ಶೀಲ ಸಾಹಿತ್ಯವನ್ನು ಸೇವಿಸುವ ಕನ್ನಡಿಗರೇ ಧನ್ಯರು.

---

# ಶಿವಾನುಭವ ಸಂಸ್ಥೆಯ ವಿಧಾಯಕ ಕಾರ್ಯಗಳು.

(ಲೇಖಕರುಃ— ಶ್ರೀ ಕಲ್ಯಾಣಪ್ಪ ಬ್ಯಾಳಿ. ಹೆಡ್ ಮಾಸ್ತರ
ಶ್ರೀ ಸಿದ್ಧೇಶ್ವರ ಹಾಯಸ್ಕೂಲ ವಿಜಾಪುರ.

ಧಾರವಾಡ ಮುರುಘಾಮಠದಲ್ಲಿ ಶ್ರೀ ಶಿವಯೋಗಿಗಳ ರಥೋತ್ಸವ ಕಾರ್ಯಕ್ರಮಗಳು ತಾ॥ ೧೧-೨-೪೮ ರಿಂದ ತಾ॥ ೧೮-೨-೪೮ ರ ವರೆಗೆ ಸಾಂಗವಾಗಿ ಜರಗಿದವು. ಆ ಕಾಲಕ್ಕೆ ಬೇರೆ ಬೇರೆ ಸ್ಥಳಗಳಿಂದ ಹರಗುರು ಚರಮೂರ್ತಿಗಳೂ, ಶಾಸ್ತ್ರಿಗಳೂ, ಪಂಡಿತರೂ, ವ್ಯಾಖ್ಯಾತರೂ, ಗಾಯಕರೂ ಆಗಮಿಸಿದ್ದರು. ಪ್ರತಿನಿತ್ಯ ಪುರಾಣ ಪ್ರವಚನ, ಭಜನೆ, ವಾದನ, ವ್ಯಾಖ್ಯಾನ, ಗಾಯನ ಜೀಪದಗಳಲ್ಲಿ ತಜ್ಞರಾದವರು ತಮ್ಮ ಕೌಶಲ್ಯದಿಂದ ಶ್ರೋತೃಗಳನ್ನು ತಣಿಸಿದರು. ಹಿರೇಕೆರೂರ ಗ್ರಾಮದ ಬಾಲಿಕೆಯರು 'ಶೂನ್ಯಸಂಪಾದನೆ'ಯೊಳಗಿನ ಕೆಲವು ಸಂವಾದಗಳನ್ನು ಪ್ರಹಸನರೂಪದಿಂದ ಒಳ್ಳೆ ಸ್ವಾರಸ್ಯವಾಗಿ ಮಾಡಿ ತೋರಿಸಿದರು. ಸೊಲ್ಲಾಪುರದ ಶ್ರೀಮತಿ ಸುಗ್ಗಲದೇವಿಯವರು 'ಬಸವಣ್ಣನವರ ಪ್ರಭಾವ'ದ ಬಗ್ಗೆ ಸುಶ್ರಾವ್ಯವಾದ ಭಾಷಣ ಮಾಡಿದರು.

ಈ ರಥೋತ್ಸವದ ಮುಖ್ಯ ವೈಶಿಷ್ಟ್ಯವೆಂದರೆ ಚಿತ್ರದುರ್ಗದ ಹಾಗೂ ಗದಗಿನ ಜಗದ್ಗುರು ಮಹಾಸ್ವಾಮಿಗಳವರು ಆಗಮಿಸಿ ತಮ್ಮ ಬೋಧಾಮೃತದಿಂದ ಭಕ್ತಾದಿಗಳ ಮನಸ್ಸಿಗೆ ಅತ್ಯಂತ ಸಂತೋಷವನ್ನುಂಟು ಮಾಡಿದರು. ಹುಬ್ಬಳ್ಳಿಯ ಜಗದ್ಗುರು ಮಹಾಸ್ವಾಮಿಗಳವರು ಅನಿವಾರ್ಯ ಕಾರಣಗಳ ಮೂಲಕ ಪ್ರತ್ಯಕ್ಷವಾಗಿ ದಯಮಾಡಿಸದಿದ್ದರೂ ಅವರು ಕಳಿಸಿಕೊಟ್ಟ ಸಂದೇಶದ ಮೇಲಿಂದ ಪರೋಕ್ಷವಾಗಿ ಅವರ ಸಾನ್ನಿಧ್ಯವು ಅಲ್ಲಿ ಇದ್ದಿತೆಂದೇ ಎಲ್ಲರ ಭಾವನೆಯಾಗಿದ್ದಿತು. ಹೀಗೆ ಶ್ರೀ ಶಿವಯೋಗಿಗಳ ಪ್ರೇರಣೆಯಿಂದ ಜಗದ್ಗುರು ಮಹಾಸ್ವಾಮಿಗಳು ಒತ್ತಟ್ಟಿಗೆ ಸೇರಿ ಸಮಾಜವನ್ನುದ್ಧರಿಸಲು ಸಿದ್ಧರಾಗಿದ್ದುದು ಸಮಾಜದ ಸೌಭಾಗ್ಯವೇ ಸರಿ. ಇದೇ ಮೇರೆಗೆ ಈ ಸಂಧಿಕಾಲದಲ್ಲಿ ಎಲ್ಲ ಗುರುಪೀಠಾಧಿಕಾರಿಗಳೂ ವಿರಕ್ತಪೀಠಾಧಿಕಾರಿಗಳೂ ಒತ್ತಟ್ಟಿಗೆ ಸೇರಿ ಸಮಾಜೋದ್ಧಾರಕ್ಕಾಗಿ ಟೊಂಕಕಟ್ಟುವ ಸುದಿನಗಳು ತೀವ್ರವೇ ಶ್ರೀ ಶಿವಯೋಗಿಗಳ ಪ್ರೇರಣೆಯಿಂದ ಬರುವವೆಂದು ನಾವು ಹಾರೈಸುತ್ತೇವೆ.

ಈ ರಥೋತ್ಸವದ ಇನ್ನೊಂದು ವೈಶಿಷ್ಟ್ಯವೆಂದರೆ ಪ್ರತಿನಿತ್ಯವೂ ಸಭಾ ಕಾರ್ಯಗಳಲ್ಲಿ ಮ. ಗಾಂಧಿಜಿಯವರ ಸತ್ಯ, ಅಹಿಂಸೆ, ವಿಶ್ವ ಪ್ರೇಮ, ಜಾತೀಯತೆಯ ಖಂಡನೆ ಮೊದಲಾದ ಅಲೌಕಿಕ ಗುಣಗ ಳನ್ನು ಕೊಂಡಾಡಿ ಅವರ ಆತ್ಮಕ್ಕೆ ಶಾಂತಿಯನ್ನು ಕೋರಲಾಗುತ್ತಿತ್ತು. ಗಾಂಧೀಜಿಯವರ ತತ್ವಗಳನ್ನೇ ಶ್ರೀ ಬಸವಾದಿ ಪ್ರಮಥರು ೧೨ನೆಯ ಶತಮಾನದಲ್ಲಿ ಆಚರಿಸಿ ಕಿತ್ತಿ ಹಾಕಿಕೊಟ್ಟದ್ದರಿಂದ ಆ ಮಾರ್ಗವನ್ನನು ಸರಿಸಿ ನಾವು ವಿಧಾಯಕ ಕಾರ್ಯಗಳನ್ನು ಕೈಕೊಂಡರೆ ನಮ್ಮ ಸಮಾ ಜಕ್ಕೂ ರಾಷ್ಟ್ರಕ್ಕೂ ಕಲ್ಯಾಣವಾಗುವದೆಂದೂ ಮಹಾತ್ಮರ ನಿಜವಾದ ಸ್ಮರಣೆಯನ್ನು ಮಾಡಿದಂತಾಗುವದೆಂದೂ ಚಿಂತಿಸಲಾಯಿತು.

ಶಿವಯೋಗಿ ರಥೋತ್ಸವ ಕಾರ್ಯಕ್ರಮಗಳ ಅಂಗಭೂತವಾಗಿ 'ಶಿವಾನುಭವ ಸಂಸ್ಥೆಯ' ೫ನೆಯ ವಾರ್ಷಿಕ ಸಮ್ಮೇಲನವು ಗದುಗಿನ ಜಗದ್ಗುರು ತೋಂಟದಾರ್ಯ ಮಹಾಸ್ವಾಮಿಗಳವರಿಂದ ಉದ್ಘಾಟಿತ ವಾಗಿ ಚಿತ್ರದುರ್ಗದ ಜಗದ್ಗುರು ಜಯದೇವ ಮಹಾಸನ್ನಿಧಿಯವರ ಅಧ್ಯಕ್ಷತೆಯಲ್ಲಿ ಅದರ ಕಾರ್ಯಕಲಾಪಗಳು ಜರಗಿದವು. ಬೆಂಗಳೂರ ಶ್ರೀ ಮಹಾದೇವ ಸ್ವಾಮಿಗಳೂ, ಹೊಳಲ ಶ್ರೀ ಚಂದ್ರಶೇಖರ ಶಾಸ್ತ್ರಿ ಗಳೂ, ಗದುಗಿನ ಶ್ರೀ ನಾಗಭೂಷಣ ಶಾಸ್ತ್ರಿಗಳೂ, ಶ್ರೀ ಮಲ್ಲಿಕಾರ್ಜುನ ಶಾಸ್ತ್ರಿಗಳೂ ಮೊದಲಾದ ಮಹೋದಯರು ಶಿವಾನುಭವ ಸಂಸ್ಥೆಯ ಪರವಾಗಿ ಸಾಹಿತ್ಯಸೇವೆ ಸಮಾಜಸೇವೆಗಳು ಕ್ರಮಬದ್ಧವಾದ ರೀತಿ ಯಲ್ಲಿ ಸಾಂಗವಾಗಬೇಕೆಂದು ವಿಶದಪಡಿಸಿದರು. ಈ ಬಗ್ಗೆ ಯಾವ ವಿಧಾಯಕ ಕಾರ್ಯಗಳನ್ನು ಕೈಕೊಳ್ಳಬೇಕೆಂಬ ಬಗ್ಗೆ ಹಲವಾರು ಪ್ರಶ್ನೆಗಳುದ್ಭವಿಸಿದವು. ನಾನು ಇದರಡಿಯಲ್ಲಿ ನನಗೆ ತೋಚಿದ ಕೆಲವು ಕಾರ್ಯಗಳನ್ನು ನಿವೇದಿಸಲು ಪ್ರಯತ್ನಿಸುವೆನು. ಸುಜ್ಞರು ಆ ಬಗ್ಗೆ ಸಾವಧಾನವಾಗಿ ವಿಚಾರಿಸಬೇಕಾಗಿ ಸವಿನಯ ಪ್ರಾರ್ಥನೆ.

## ಶಿವಯೋಗಿ ಮಿಶನ್ ಸ್ಥಾಪನೆ.

(೧) ಅಖಿಲಭಾರತ ಶಿವಾನುಭವ ಸಂಸ್ಥೆಯ ಪರವಾಗಿ ರಾಮ ಕೃಷ್ಣ ಮಿಶನ್, ಕ್ರಿಶ್ಚಿಯನ್ ಮಿಶನ್‌ಗಳಂತೆ 'ಶಿವಯೋಗಿ ಮಿಶನ್' ಎಂಬ ಸಂಸ್ಥೆಯನ್ನು ಒಂದು ಕ್ಲಪ್ತವಾದ ಸ್ಥಳದಲ್ಲಿ ಸ್ಥಾಪಿಸಬೇಕು ಮತ್ತು ಆ ಸಂಸ್ಥೆಯನ್ನು 'ಕಂಪನಿ ಆ್ಯಕ್ಟ' ಪ್ರಕಾರ ರಜಿಸ್ಟರ ಮಾಡಿಸ

ತಕ್ಕದ್ದು. ಆದರೆ ರೇಣುಕಾದ್ಯಾಚಾರ್ಯರೂ ಬಸವಾದಿ ಪ್ರಮಥರೂ ಪ್ರಭು ಮೊದಲಾದ ನಿರಂಜನ ಮೂರ್ತಿಗಳೂ ಮೊದಲಾದವರ ಹೆಸರನ್ನು ಬಿಟ್ಟು 'ಶಿವಯೋಗಿ ಮಿಶನ್' ಎಂದು ಹೆಸರಿನಿಂದ ಏಕೆ ಕರೆಯಬೇಕೆಂದು ಕೆಲವರು ಪ್ರಶ್ನೆ ಮಾಡಬಹುದು. ಅದಕ್ಕೆ ಉತ್ತರವಿಷ್ಟೇ. ಆಚಾರ್ಯರೂ ಪ್ರಮಥರೂ ನಿರಂಜನಮೂರ್ತಿಗಳೂ ಪ್ರಾಚೀನರು. ಮೇಲಾಗಿ ಅವರ ವಿಷಯಕ್ಕೆ ನಿರರ್ಥಕವಾಗಿ ವಾದಗ್ರಸ್ತ ಸಂಗತಿಗಳು ನಡೆದು ಸಮಾಜವನ್ನು ದೂಷಿತಗೊಳಿಸಿದ್ದು ಸರ್ವರಿಗೂ ವಿದಿತವಾದ ಸಂಗತಿ. ಆದ್ದರಿಂದ ಆ ಹೆಸರುಗಳನ್ನು ಸಮಾಜ ಹಿತದ ದೃಷ್ಟಿಯಿಂದ ಬಿಡುವದೊಳಿತು. ಶಿವಯೋಗಿಗಳು ಇತ್ತೀಚಿನವರ ಪ್ರಮಥರಾಚರಣೆಯುಳ್ಳವರು. ಎಲ್ಲ ಗುರುವಿರಕ್ತರಿಗೂ ಬೇಕಾದವರು. ಗುರುವಿರಕ್ತ ಸ್ಥಲಗಳನ್ನು ಮೀರಿ ನಿಃಸ್ಥಲದಲ್ಲಿ ನಿಂತವರು. ಆದುದರಿಂದ ಆ ಹೆಸರಿಗೆ ಯಾವ ಬಾಧಕವೂ ಬರಲಾರದು.

(೨) "ಶಿವಯೋಗಿ ಮಿಶನ್ನಿ"ಗೆ ಎಲ್ಲ ಗುರುವಿರಕ್ತ ಪೀಠದವರೂ ಮಠದವರೂ ಮುಕ್ತಹಸ್ತದಿಂದ ಸಹಾಯ ಮಾಡಿ ದೊಡ್ಡ ನಿಧಿಯನ್ನು ಶೇಖರಿಸಿ ಭದ್ರವಾದ ಬ್ಯಾಂಕಿನಲ್ಲಿಡಬೇಕು. ಮಠಪೀಠಗಳು ಸಮಾಜದ ಸೊತ್ತುಗಳೆಂಬದನ್ನು ಯಾರೂ ಮರೆಯಲಾಗದು. ಮಹಾಪಾದಗಳಿಗೆ ಸಮಾಜದವರು ಕೊಟ್ಟ ದುಡ್ಡು ಸಮಾಜಹಿತಕ್ಕೇ ಸಲ್ಲತಕ್ಕದ್ದು. ಸಲ್ಲುವಂಥ ಕಾಲವೂ ಬಂದಿದೆ ಈ ಮಿಶನ್ನಿಗೆ ಆಯಾಯ ಭಾಗಗಳಿಂದ ಕೂಡಿ ಒಟ್ಟು ೨೫ ಜನ ಸಮಾಜ ಧುರೀಣರ ಒಂದು "ಟ್ರಸ್ಟ ಕಮೀಟಿ" ಯನ್ನು ನೇಮಿಸಿ ಅವರ ಸ್ವಾಧೀನಕ್ಕೆ ಆ ಹಣದ ಸದ್ವಿನಿಯೋಗ ಮಾಡುವ ಅಧಿಕಾರವನ್ನು ಕೊಡತಕ್ಕದ್ದು. ಅವರ ಘಟನೆ, ಆಯ್ಕೆ, ಕರ್ತವ್ಯ, ಹೊಣೆಗಾರಿಕೆಗಳ ಬಗ್ಗೆ ಅಖಿಲಭಾರತ ವೀರಶೈವ ಮಹಾಸಭೆಯು ಕಾಲಕ್ಕೆ ನಿಯಮ ಉಪನಿಯಮಗಳನ್ನು ಸಿದ್ಧಪಡಿಸತಕ್ಕದ್ದು.

(೩) "ಶಿವಯೋಗಿ ಮಿಶನ್ನ"ದ ಕೆಳಗೆ ಶಿವಯೋಗಿ ಪ್ರಿಂಟಿಂಗ ಪ್ರೆಸ್ ಒಂದನ್ನು ಸ್ಥಾಪಿಸಿ ಒಳ್ಳೆ ಲೇಖನ ವ್ಯವಸಾಯವುಳ್ಳ ಒಬ್ಬ ಪಂಡಿತನಿಗೆ ಯೋಗ್ಯ ವೇತನ ಕೊಟ್ಟು ನೇಮಿಸಿ ಎಲ್ಲ ಸಮಾಜ ಬಾಂಧವರಿಗೂ ತಿಳಿಯುವಂತೆ ಸುಲಭ ಸುಂದರ ಶೈಲಿಯ ಸಾಮಾಜಿಕ, ಧಾರ್ಮಿಕ ಗ್ರಂಥಗಳನ್ನೂ ಪಠ್ಯಪುಸ್ತಕಗಳನ್ನೂ ಬರೆಯಿಸಿ ಪ್ರಕಟಗೊಳಿಸಬೇಕು. ಈ ಗ್ರಂಥಗಳನ್ನು ಗುರುವಿರಕ್ತ ಪೀಠದವರೂ ಮಠಸ್ಥರೂ ಪ್ರಚಾರ

ಗೊಳಿಸುವ ಕಾರ್ಯವನ್ನು ಕೈಕೊಳ್ಳಬೇಕು. ಇದಲ್ಲದೆ ಕನಿಷ್ಠ ಪಕ್ಷಕ್ಕೆ ೧೦ ಜನ ಪ್ರಚಾರಕರನ್ನು ಯೋಗ್ಯ ವೇತನದ ಮೇಲೆ ನೇಮಿಸಿ ಕರ್ನಾಟಕ, ಮಹಾರಾಷ್ಟ್ರ, ನಿಜಾಮಪ್ರಾಂತ, ಆಂಧ್ರ ಸೀಮೆಗಳಲ್ಲಿರುವ ಮಹಾಜನಗಳಿಗೆ ಅವು ಕೈಸೇರುವಂತೆ ವ್ಯವಸ್ಥೆ ಮಾಡಬೇಕು.

(೪) ಲಿಂಗಪೂಜಾ ಮಂತ್ರಗಳನ್ನು ಅದೇ ಮೇರೆಗೆ ಲಿಂಗಧಾರಣ, ವಿವಾಹ, ಅಂತ್ಯಸಂಸ್ಕಾರ ಮೊದಲಾದವುಗಳಲ್ಲಿ ಹೇಳುವ ಮಂತ್ರಗಳನ್ನು ಶುದ್ಧ ತಿಳಿಗನ್ನಡದಲ್ಲಿ ಪಂಡಿತರಿಂದ ಬರೆಯಿಸಿ ಎಲ್ಲ ಕಡೆಗೂ ಪ್ರಚಾರ ಮಾಡತಕ್ಕದ್ದು. ಕನ್ನಡವು ನಮ್ಮ ಧಾರ್ಮಿಕ ಹಾಗೂ ಸಾಂಸ್ಕೃತಿಕ ಭಾಷೆಯು; ಸಂಸ್ಕೃತವಲ್ಲ. ಕನ್ನಡದಿಂದಲೇ ನಮ್ಮ ಅಂತರ್ಬಾಹ್ಯಗಳ ಉನ್ನತಿ ಸಂಸ್ಕೃತದ ಬಗ್ಗೆ ನಮಗೆ ಒಣ ಹೆಮ್ಮೆಯು ಬೇಡ.

(೫) ಪ್ರತಿಯೊಂದು ಮಠವೂ ಪಾಠಶಾಲೆಯಾಗುವಂತೆ ಪ್ರಯತ್ನಿಸಬೇಕು. ಮಿಶನ್‌ದವರು ಅವುಗಳಿಗೆ 'ಗ್ರ್ಯಾಂಟು' ಕೊಡಬೇಕು. ಶಾಸ್ತ್ರಿಗಳ ವೇತನ ಕ್ರಮವನ್ನು ಸಿದ್ಧಪಡಿಸಬೇಕು. ಬಡ ವಿದ್ಯಾರ್ಥಿಗಳಿಗೆ ಅನ್ನ ವಸ್ತ್ರಗಳನ್ನು ಉಚಿತವಾಗಿ ಕೊಡಬೇಕು. ಎಲ್ಲ ಪಾಠಶಾಲೆಗಳಲ್ಲಿಯೂ ಒಂದೇ ಮಾದರಿಯ ಪಾಠಕ್ರಮ, ಪಠ್ಯಪುಸ್ತಕಗಳು, ಪರೀಕ್ಷೆಗಳಿರಬೇಕು. ಯೋಗ್ಯ ಪರೀಕ್ಷಕರನ್ನೂ ಮೇಲ್ವಿಚಾರಕರನ್ನೂ ವೇತನ ಕೊಟ್ಟು ನೇಮಿಸಬೇಕು. ಎಲ್ಲ ಪಂಗಡಗಳ ವಿದ್ಯಾರ್ಥಿಗಳಿಗೂ ಪಾಠಶಾಲಾಧ್ಯಯನಕ್ಕೆ ಅವಕಾಶ ದೊರೆಯಬೇಕು. ಹಿಂದಿ ಭಾಷೆಗೆ ಮಹತ್ವ ಕೊಟ್ಟು ಅದನ್ನು ಕನ್ನಡದ ಜೊತೆಗೆ ಉಪಭಾಷೆಯಾಗಿ ಕಲಿಸಬೇಕು. ಇಂಗ್ಲಿಷ ಭಾಷೆಯ ಪ್ರಶಸ್ತಿ ಕಾಲವು ಮುಗಿಯಿತು. ಕನ್ನಡ ಕಾವ್ಯಗಳು—ವಚನ ಗ್ರಂಥಗಳು, ಕೈವಲ್ಯಗಳು, ನಿಜಗುಣಾಚಾರ್ಯರ ಗ್ರಂಥಗಳು, ಸರ್ವಜ್ಞನ ಪದಗಳು ಇಂಥ ಗ್ರಂಥಗಳನ್ನು ಪಾಠ ಕ್ರಮದಲ್ಲಿ ಸೇರಿಸಬೇಕು.

(೬) ಇನ್ನು ನಾವು ಪಾಠಶಾಲೆಗಳಲ್ಲಿ ಸಂಸ್ಕೃತ ಭಾಷೆಗೆ ಹೆಚ್ಚು ಮಹತ್ವ ಕೊಟ್ಟು ವಿದ್ಯಾರ್ಥಿಗಳನ್ನು ಕಾಶಿ, ಅಲ್ಲಾಬಾದ, ಕಲಕತ್ತೆ ಪರೀಕ್ಷೆಗಳಿಗೆ ಕಳಿಸುವ ಅವಶ್ಯವಿಲ್ಲ. ಸಂಸ್ಕೃತಾಧ್ಯಯನವು ತಕ್ಕಮಟ್ಟಿಗೆ ಬೇಕು. ಭಂಡಾರಕರ ೧-೨ ಪುಸ್ತಕಗಳು, ಹಿತೋಪದೇಶ, ಭಗವದ್ಗೀತೆಯ ಭಾಷೆಯನ್ನು ತಿಳಿಯುವ ಮಟ್ಟಿಗೆ ಸಂಸ್ಕೃತ ಕಲಿತರೆ ತೀರಿತು.

ಅಪವಾದಕ್ಕೆ ಏನೋ ಒಬ್ಬಿಬ್ಬ ವಿಶೇಷ ತಜ್ಞರು ಸಿಕ್ಕರೆ ವ್ಯಾಕರಣ, ಸಾಹಿತ್ಯ, ವೇದಾಂತ, ನ್ಯಾಯ, ಜ್ಯೋತಿಷ್ಯ ಮೊದಲಾದ ಪರೀಕ್ಷೆಗಳ ಅಧ್ಯಯನಕ್ಕೆ ವಿದ್ಯಾರ್ಥಿವೇತನ ಕೊಟ್ಟು ಕಳಿಸಬಹುದು.

(೭) ಶಿವಯೋಗಿ ಮಿಶನ್‌ದವರು ಈ ವರೆಗೆ ಪ್ರಕಟವಾದ ಎಲ್ಲ ಧಾರ್ಮಿಕ ಹಾಗೂ ಸಾಹಿತ್ಯ ಗ್ರಂಥಗಳನ್ನೂ ಪ್ರಕಟವಾದ ಹಸ್ತಲಿಖಿತ ಗ್ರಂಥಗಳನ್ನೂ ಶೇಖರಿಸಿ ದೊಡ್ಡ ಗ್ರಂಥಭಾಂಡರವನ್ನೇರ್ಪಡಿಸಬೇಕು. ಇದಲ್ಲದೆ ಸಂಶೋಧಕರಿಗೆ ಯೋಗ್ಯ ವೇತನ ಕೊಟ್ಟು "ಓರಿಯೆಂಟಲ್ ಲಾಯಬ್ರರಿಗೆ" ಕಳಿಸಿ ಸಂಶೋಧನ ಮಾಡಹಚ್ಚಬೇಕು.

(೮) ಶಿವಯೋಗಿ ಮಿಶನ್‌ದಿಂದ ಶರಣರ ಹಾಗೂ ಚರಗುರು ಚರಮೂರ್ತಿಗಳ ಜೀವನವನ್ನು ಚಿತ್ರಿಸುವ ಚಲನ ಚಿತ್ರಗಳನ್ನೂ ಬಾನುಲಿಗಳನ್ನೂ ಮ್ಯಾಜಿಕ್ ಲ್ಯಾಂಟರ್ನ ವ್ಯಾಖ್ಯಾನಗಳನ್ನೂ ನಾಟಕ ಪ್ರಹಸನಗಳನ್ನೂ ಲಾವಣಿ-ಜೀಪದಗಳನ್ನೂ ಭಾವಚಿತ್ರಗಳನ್ನೂ ಪ್ರೋತ್ಸಾಹ ಕೊಟ್ಟು ಬೆಳಕಿಗೆ ತರಬೇಕು. ಗಾಯನ ಚಿತ್ರಕಲೆಗಳಿಗೆ ಪ್ರೋತ್ಸಾಹವನ್ನೀಯಬೇಕು.

(೯) ಪ್ರತಿಯೊಂದು ಮನೆಯು ಪವಿತ್ರ ಮಠವಾಗುವಂತೆ ಆ ಮನೆಯವರ ಸಲುವಾಗಿ ಪ್ರತಿನಿತ್ಯ ಮುಂಜಾನೆ ಸಂಜೆಗೆ ಪಠಿಸಬೇಕಾದ ಪ್ರಾರ್ಥನಾ ಪದಗಳನ್ನು ಅರ್ಥ ಸಹಿತ ಬರೆದು ಪ್ರಕಟಿಸಬೇಕು. ಅದರಂತೆ ಕೆಲವು ಮಹತ್ವದ ವಚನಗಳನ್ನು ಅರ್ಥಸಹಿತವಾಗಿ ಬರೆಯಿಸಿ ಪ್ರಚಾರಪಡಿಸಬೇಕು.

## ಸಮಾಜ ಸೇವೆ.

(೧೦) ಶಿವಯೋಗಿ ಮಿಶನ್‌ದವರು ಸಾಹಿತ್ಯ ಪ್ರಚಾರ ಮಾಡುವಂತೆ ಸಮಾಜಸೇವೆಯ ಇನ್ನಿತರ ಕೆಲವು ವಿಧಾಯಕ ಕಾರ್ಯಗಳನ್ನು ಕೈಕೊಳ್ಳತಕ್ಕದ್ದು. ಅದಕ್ಕಾಗಿ ಹಣವನ್ನು ಯೋಗ್ಯ ರೀತಿಯಿಂದ ವೆಚ್ಚ ಮಾಡತಕ್ಕದ್ದು.

(ಅ) ವೀರಶೈವರಲ್ಲಿ ಜಾತೀಯತೆಯೆಂಬುದಿಲ್ಲ. ಶರಣರು ಎಲ್ಲ ಜಾತಿಗಳನ್ನೊಂದುಗೂಡಿಸಿ ನೀತಿ ಭಕ್ತಿಗಳಿಂದ ಸಮಾಜವನ್ನು ಸರ್ವಾಂಗ ಸುಂದರವಾಗಿ ಮಾಡಿದರು. ಆದರೆ ಮಧ್ಯಂತರದಲ್ಲಿ ಒಳಪಂಗಡಗಳು ರೂಢವಾಗಿ ಜಾತೀಯತೆಯು ತಲೆಯೆತ್ತಿದೆ. ಕಾರಣ ಒಳಪಂಗಡಗ

ಳನ್ನು ಕಿತ್ತೊಗೆದು ಪರಸ್ಪರರಲ್ಲಿ ಊಟ ವಿವಾಹಾದಿ ಕಾರ್ಯಗಳು ನಡೆಯುವಂತೆ ಪ್ರೋತ್ಸಾಹಿಸಬೇಕು. ಪ್ರತಿಬಂಧವಂತು ಇಲ್ಲವೇ ಇಲ್ಲ.

(ಬ) ಅನ್ಯಮತೀಯರಾದರೂ ಆಗಲಿ ಮದ್ಯಮಾಂಸಗಳ ಸೇವನೆಯನ್ನು ಬಿಟ್ಟು ಶುದ್ಧಾಚರಣೆಯಿಂದ ನಡೆದುಕೊಳ್ಳಲು ಸಿದ್ಧರಾದರೆ ಅಂಥ ಮನೆತನದವರಿಗೆಲ್ಲ ಅವರ ಅನುಮತಿಯ ಪ್ರಕಾರ ಲಿಂಗಧಾರಣ ಮಾಡಬೇಕು. ಅವರ ಆಚರಣೆಯು ಶುದ್ಧವೆಂದು ಕಂಡುಬಂದರೆ ಮಾತ್ರ ಅವರೊಡನೆ ಪ್ರಸ್ಥ ವಿವಾಹ ಕಾಲದಲ್ಲಿ ಸಹಭೋಜನ ಮಾಡಬೇಕು. ಲಗ್ನ ವ್ಯವಹಾರವು ಪರಸ್ಪರ ಐಚ್ಛಿಕ ವಿಷಯ. ಇಲ್ಲಿ ನಾವು ಒಂದು ಮಾತನ್ನು ಸರ್ವಥಾ ಮರೆಯಲಾಗದು. ಕೀಳು ಜನರನ್ನು ಪವಿತ್ರಗೊಳಿಸಿ ಬಸವಾದಿ ಶರಣರು ಪವಿತ್ರ ಜೀವಿಗಳನ್ನು ಮಾಡಿದರೇ ವಿನಾ ಕೀಳರೊಡನೆ ಕೂಡಿ ತಾವು ಅನಾಚಾರಿಗಳಾಗಲಿಲ್ಲ. ಈ ಮಾತು ಈಗಿನ ವಿಧಾಯಕ ಕಾರ್ಯಕ್ಕೂ ಸಮನ್ವಯಿಸುತ್ತದೆ.

(ಕ) ಕುಲಗೆಟ್ಟವರು ಪುನಃ ವೀರಶೈವ ಮತದಲ್ಲಿ ಪ್ರವೇಶಿಸುವ ಇಚ್ಛೆಯಿದ್ದರೆ ಆಯಾಯ ಊರುಗಳಲ್ಲಿಯ ದೈವದವರು ಯಾತ್ರೋತ್ಸವ, ಪುರಾಣ, ಪ್ರವಚನ ಮೊದಲಾದ ಶುಭ ಪ್ರಸಂಗಗಳಲ್ಲಿ ದೀಕ್ಷೆ ಮಾಡಿಸಿ ಬಳಿಕೆಯಲ್ಲಿ ತೆಗೆದುಕೊಳ್ಳಬೇಕು. ಇದಕ್ಕೆ ಮಿಶನ್‌ದವರು ಮನ್ನಣೆ ದೊರೆಯಬೇಕು.

(ಡ) ಕರ್ನಾಟಕ, ಮಹಾರಾಷ್ಟ್ರ, ನಿಜಾಮಪ್ರಾಂತಗಳಲ್ಲಿ ಗುರುವಿರಕ್ತರ ಮಠಗಳೆಷ್ಟು? ಈಗ ಆಯಾಯ ಮಠಗಳ ಅಧಿಕಾರಿಗಳಾರು? ಆ ಮಠಗಳ ಇತಿಹಾಸವೇನು? ಎಂಬದನ್ನು ಶೋಧಿಸಿ ಅವರವರ ಭಾವ ಚಿತ್ರಗಳೊಂದಿಗೆ ಒಂದು ಗ್ರಂಥವನ್ನು ಪ್ರಕಟಿಸಬೇಕು.

(ಈ) ನಮ್ಮ ಸಮಾಜಕ್ಕೊಳಪಟ್ಟ ಅನೇಕ ಸಂಸ್ಥಾನಿಕರು, ದೇಸಾಯಿ-ದೇಶಮುಖರು ಗೌಡ-ನಾಡಗೌಡರು ಮೊದಲಾದವರ ಹೆಸರಾದ ಮನೆತನಗಳೆಷ್ಟೋ ಇರುತ್ತವೆ. ಇದಲ್ಲದೆ ಅಲ್ಲಲ್ಲಿ ದೊಡ್ಡ ಸೆಟ್ಟಿ ಸಾಹುಕಾರರು ಕಂಡುಬರುತ್ತಾರೆ- ಅವರ ಮನೆತನಗಳ ಇತಿಹಾಸವನ್ನು ಕೇಳಿಕೊಂಡು ಅವರ ಭಾವಚಿತ್ರಗಳೊಂದಿಗೆ ಒಂದು ಗ್ರಂಥವನ್ನು ಪ್ರಕಟಿಸುವದು ಯುಕ್ತವಾಗಿದೆ.

(ಫ) ಎಷ್ಟೋ ತೀರ್ಥಕ್ಷೇತ್ರಗಳ ಪೂಜಾರಿಕೆಯು ವೀರಶೈವ ಪೂಜಾರಿಗಳಿಂದ ಕಾಲಕಾಲಕ್ಕೆ ನಡೆದು ಬಂದಿರುತ್ತದೆ. ಮಧ್ಯಂತರದಲ್ಲಿ

ಅದನ್ನು ಕೆಲವು ಅನ್ಯಮತೀಯರು ಅಪಹರಿಸಿದ್ದುಂಟು. ಆದ್ದರಿಂದ ಆಯಾಯ ಪ್ರಸಿದ್ಧ ದೇವಾಲಯಗಳ ಇತಿಹಾಸವನ್ನು ಗೊತ್ತುಪಡಿಸಿ ಪ್ರಸಿದ್ಧಿಸಬೇಕು.

(ಗ) ವೀರಶೈವರ ವಸತಿಯು ಪ್ರಾಮುಖ್ಯವಾಗಿ ಕರ್ನಾಟಕ ನಿಜಾಮಪ್ರಾಂತ, ಮಹಾರಾಷ್ಟ್ರ, ಆಂಧ್ರಪ್ರದೇಶಗಳಲ್ಲಿ ಹೆಚ್ಚಾಗಿದ್ದು ಉಳಿದ ಕಡೆಗೆ ಬಹು ವಿರಳವಾಗಿರುವದು. ಆದ್ದರಿಂದ ಪ್ರಚಾರಕರನ್ನು ನೇಮಿಸಿ ವೀರಶೈವ ಜನಸಂಖ್ಯೆಯನ್ನು ಆಯಾಯ ಜಿಲ್ಹೆಯ ಮಾನ ದಿಂದ ಗೊತ್ತುಪಡಿಸಿ ಪ್ರಕಟಿಸತಕ್ಕದ್ದು.

(ಇ) ಜಾತೀಯತೆಯನ್ನು ಬದಿಗಿಟ್ಟು ಪಂಢರಪುರದಂತೆ ಅನಾಥ ಶಿಶುಗಳ ರಕ್ಷಣೆಯ ಬಗ್ಗೆ ಅನಾಥಾಶ್ರಮಗಳನ್ನು ಅಲ್ಲಲ್ಲಿ ಸ್ಥಾಪಿಸಿ ಅವ ರಿಗೆ ಬಸವಾದಿ ಪ್ರಮಥರ ಆಚರಣೆಯನ್ನು ಕಲಿಸಿ ಸಮಾಜ ಸೇವಾ ಕಾರ್ಯಕ್ಕೆ ಹಚ್ಚಬೇಕು. ಇಂಥ ಆಶ್ರಮಗಳಿಗೆ ಮಿಶನ್‌ದವರು ಗ್ರ್ಯಾಂಟು ಕೊಡತಕ್ಕದ್ದು.

(ಈ) ಲೌಕಿಕ ಶಿಕ್ಷಣದಲ್ಲಿ ಕೃಷಿಕರ್ಮ, ಔದ್ಯೋಗಿಕ, ಯಾಂತ್ರಿಕ, ಇಂಜಿನಿಯರಿಂಗ, ಇಲೆಕ್ಟ್ರಿಕ್ ಮೊದಲಾದವುಗಳನ್ನು ದೇಶ-ವಿದೇಶಗಳ ವಿಶ್ವವಿದ್ಯಾಲಯಗಳಲ್ಲಿ ಅಭ್ಯಾಸ ಮಾಡಲಿಚ್ಛಿಸುವ ವಿದ್ಯಾರ್ಥಿಗಳಿಗೆ ವಿದ್ಯಾರ್ಥಿ ವೇತನವನ್ನು ಕೊಟ್ಟು ಕಳಿಸಬೇಕು.

(ಣ) ಸರಕಾರದವರು ರಾಷ್ಟ್ರಹಿತದ ಸಲುವಾಗಿ ಸೈನಿಕ ಶಿಕ್ಷಣ ವನ್ನು ಕೊಡುವವರಿದ್ದು ಅದರಲ್ಲಿ ಸೇರುವ ನಮ್ಮ ತರುಣರಿಗೆ ಮಿಶನ್ ದವರು ಗೌರವ ಪಾರಿತೋಷಕಗಳನ್ನು ಕೊಟ್ಟು ಪ್ರೋತ್ಸಾಹಿಸಬೇಕು.

(ಮ) ಕರ್ನಾಟಕ ಪ್ರಾಂತೀಕರಣ, ಕರ್ನಾಟಕ ವಿಶ್ವವಿದ್ಯಾಲ ಯಗಳ ಸ್ಥಾಪನೆಗೆ ಕೆಲವರು ಜಾತೀಯತೆಯನ್ನು ಮುಂದುಮಾಡಿ ಆ ಕೆಲಸಕ್ಕೆ ವಿಘ್ನವನ್ನೊಡ್ಡುತ್ತಿರುವರು. ಆದರೆ ಜಾತೀಯತೆಯನ್ನು ನಿಷೇಧಿಸಿ ಒಮ್ಮನಸ್ಸಿನಿಂದ ರಾಷ್ಟ್ರಹಿತದ ದೃಷ್ಟಿಯಿಂದಲೂ, ಸಾಂಪತ್ತಿಕ ದೃಷ್ಟಿಯಿಂದಲೂ ಸಾಹಿತ್ಯ ಸಂಸ್ಕೃತಿಯ ದೃಷ್ಟಿಯಿಂದಲೂ ವಿಚಾರಿಸಿ ಅವನ್ನು ಬೇಗನೆ ಪಡೆದುಕೊಳ್ಳಲಿಕ್ಕೆ ಮಿಶನ್‌ದವರು ಒಂದು ಶಿಷ್ಟ ಮಂಡಳವನ್ನೇರ್ಪಡಿಸಿ ಈ ಕಾರ್ಯಕ್ಕೆ ಹಚ್ಚಬೇಕು.

(ನ) ನಮ್ಮಲ್ಲಿ ಈ ವರೆಗೆ ಬಹುಮುಖದಿಂದ ಸಾಹಿತ್ಯ ಸೇವೆ ಮಾಡಿದ ಮತ್ತು ಮಾಡುತ್ತಲಿರುವ ಅನೇಕ ಸಾಹಿತಿಗಳುಂಟು. ಅದೇ

ವೇಳೆಗೆ ಪುರಾಣಿಕರು, ಕೀರ್ತನಕಾರರು, ಗಾಯಕರು, ವ್ಯಾಖ್ಯಾತರೂ ಉಂಟು. ಅವರೆಲ್ಲರ ಒಂದು ಯಾದಿಯನ್ನು ಸಿದ್ಧಪಡಿಸಿ ಸಮಾಜಕ್ಕೆ ಅವರ ಸದುಪಯೋಗವಾಗುವಂತೆ ಮಿಶನ್‌ದವರು ಬಹುಮಾನಗಳನ್ನೂ ಪ್ರಶಸ್ತಿಪತ್ರಗಳನ್ನೂ ಕೊಟ್ಟು ಪ್ರೋತ್ಸಾಹಿಸಬೇಕು. ಮತ್ತು ಅಂಥವರ ಸಂಕ್ಷಿಪ್ತಪರಿಚಯು ಭಾವಚಿತ್ರಗಳೊಂದಿಗೆ ಒಂದು ಗ್ರಂಥವನ್ನು ಪ್ರಕಟಿಸಬೇಕು.

---

## ಸ್ಫುಟ ಸೂಚನೆಗಳು.

(ಲೇಖಕಃ— ಫ. ಗು. ಹಳಕಟ್ಟಿ-ಸಂಪಾದಕ.)

ಇದೇ ಸಂಚಿಕೆಯಲ್ಲಿ ಮಿ॥ ಕಲ್ಯಾಣಪ್ಪ ಬ್ಯಾಳಿ ಇವರು ವೀರಶೈವ ಮಿಶನ್ ಎಂಬ ಸಂಸ್ಥೆಯನ್ನು ಸ್ಥಾಪಿಸಿ ಅದರ ದ್ವಾರಾ ಧಾರ್ಮಿಕ ಮತ್ತು ಸಾಮಾಜಿಕ ಸುಧಾರಣಾ ಪ್ರಯತ್ನಗಳನ್ನು ಮಾಡಲು ಒಂದು ಸೂಚನೆಯನ್ನು ಮಾಡಿದ್ದಾರೆ. ಹೀಗೆ ಒಂದು ಸಂಘಟನೆಯನ್ನು ಈ ಕಾಲದಲ್ಲಿ ಮಾಡುವದು ಅತ್ಯಾವಶ್ಯಕವೆಂಬುದು ನಿರ್ವಿವಾದವು. ಈ ಉದ್ದಿಶ್ಯವಾಗಿ ಕೆಲವು ವರ್ಷಗಳ ಹಿಂದೆ ನಾನು ಅಲ್ಲಲ್ಲಿ 'ಶಿವಾನುಭವ ಸಂಘ' ಅಥವಾ 'ಶಿವಾನುಭವ ಮಂಟಪ'ಗಳನ್ನು ಸ್ಥಾಪಿಸುವ ವಿಷಯುವಾಗಿ ಸೂಚಿಸಿದ್ದರ ಪರಿಣಾಮವಾಗಿ ಆಗ ಸುಮಾರು ೧೦೦-೧೫೦ ಗ್ರಾಮಗಳಲ್ಲಿ ಇವು ಸ್ಥಾಪಿತವಾದವು. ಇಷ್ಟೇ ಅಲ್ಲ, ಅವುಗಳಲ್ಲನೇಕವುಗಳು ಅತ್ಯಂತ ಉಪಯುಕ್ತ ಕಾರ್ಯಗಳನ್ನು ಮಾಡುತ್ತಲೂ ಬಂದವು. ಇವುಗಳಲ್ಲಿ ಕೆಲವು ಸಂಘಗಳು ಈಗಲೂ ಸ್ವಯಂಪ್ರೇರಣೆಯಿಂದ ಕೆಲಸ ಮಾಡುತ್ತಲೂ ಇವೆ. ಇದು ಅತ್ಯಂತ ಅಭಿನಂದನೀಯುವಾಗಿದೆ. ಹೀಗೆ ಸಂಸ್ಥೆಗಳು ಸ್ಥಾಪಿಸಲ್ಪಡಹತ್ತಲು ಅವುಗಳಿಗೆ ಅವಶ್ಯವಿರುವ ವಾಚನ ಪುಸ್ತಕಗಳನ್ನು ಏರ್ಪಡಿಸುವ ಉದ್ದಿಶ್ಯವಾಗಿ (೧) ಹೊಸಪದ್ಧತಿಯ ಬಸವೇಶ್ವರನ ವಚನಗಳು (೨) ಭಕ್ತಿಯ ವಚನಗಳು (೩) ಪರಮಾತ್ಮನ ವಚನಗಳು (೪) ಜಾತಿಭೇದದ ವಚನಗಳು (೫) ತ್ರಿಲಿಂಗಗಳ ಸ್ವರೂಪ (೬) ಷಟ್‌ಸ್ಥಲ ಸ್ವರೂಪ (೭) ವೀರಶೈವ ರಾಜಮನೆತನಗಳ ಇತಿಹಾಸ (೮) ಸಂಗೀತ ವಚನಗಳು ಹೀಗೆ ಗ್ರಂಥಗಳನ್ನು ನಾನು ಸಿದ್ಧಪಡಿಸಿದೆನು. ಇವುಗಳಲ್ಲಿ

ನಂ. ೧, ೨, ೩, ೮ ಇವು ಅಚ್ಚಾಗಿವೆ. ನಂ. ೭ ಇದು ಅರ್ಧಮಾತ್ರ ಅಚ್ಚಾಗಿದೆ. ಉಳಿದವುಗಳು ಹಸ್ತಲಿಖಿತವಾಗಿ ಹಾಗೆಯೇ ಉಳಿದಿವೆ. ಹಳ್ಳಿಗರ ಅಭ್ಯಾಸಕ್ಕೆ ಅನುಕೂಲವಾಗುವಂತೆ ವಚನಗಳ ಪಾಠಗಳನ್ನು ಅವುಗಳಲ್ಲಿ ಇಟ್ಟಿದೆ.

ಇಷ್ಟಾದಬಳಿಕ ಈ ಸಂಘಗಳನ್ನು ಕೇಂದ್ರೀಕರಿಸಬೇಕೆಂದು ನಾವು ಪ್ರಯತ್ನಿಸುವಷ್ಟರಲ್ಲಿ ಧಾರವಾಡದಲ್ಲಿ ಅಖಿಲಭಾರತ ಶಿವಾನುಭವ ಸಂಸ್ಥೆಯು ಸ್ಥಾಪಿತವಾಗಿ ಅದರಲ್ಲಿ ನಮ್ಮ ಸಮಾಜದಲ್ಲಿಯ ಮಹಾಸ್ವಾಮಿಗಳೂ ವಿದ್ವಜ್ಜನರೂ, ಪ್ರಮುಖರೂ ಸಮಾವೇಶವಾಗಿದ್ದರು. ಆದರಿಂದ ನಾನು ಮುಂದುವರಿಸಬೇಕೆಂದಿದ್ದ ಕಾರ್ಯವನ್ನು ಅಲ್ಲಿಯೇ ನಿಲ್ಲಿಸುವದು ಇಷ್ಟವೆಂದು ತೋರಿತು. ಆದರೆ ವಿಚಾರ ಮಾಡಿದಲ್ಲಿ ಈ ಎರಡೂ ಪ್ರಯತ್ನಗಳು ಪರಸ್ಪರ ವಿರೋಧವಾದವುಗಳಾಗಲಾರವು. ಆದುದರಿಂದ ನಾನು ಪುನಃ ಸೂಚಿಸುವದೇನೆಂದರೆ—

(೧) ಮೊದಲಿಗೆ ಹೇಗೆ ಗ್ರಾಮಗಳಲ್ಲಿ ಶಿವಾನುಭವ ಸಂಘಗಳು ಅಥವಾ ಮಂಟಪಗಳು ಸ್ಥಾಪಿತವಾದವೋ ಹಾಗೆಯೇ ಈಗಲೂ ಅವುಗಳನ್ನು ಅಲ್ಲಲ್ಲಿಯ ಜನರು ಸ್ಥಾಪಿಸಲು ಪ್ರಾರಂಭಿಸಬೇಕು.

(೨) ಇದಕ್ಕೋಸ್ಕರ ಅವರು ನಿಧಿಯನ್ನು ಕೂಡಿಸುವ ಅವಶ್ಯವಿಲ್ಲ. ಶಿವಾನುಭವ ತತ್ವಗಳನ್ನು ತಿಳಿಯಲಪೇಕ್ಷಿಸುವವರೇ ಇದರ ಸದಸ್ಯರು. ಇಂಥವರು ಕೆಲವರು ಕೂಡಿಕೊಂಡು ಕೆಲವೊಂದು ದಿವಸವನ್ನು ಗೊತ್ತುಮಾಡಿಕೊಂಡು ಶಿವಾನುಭವ ತತ್ವಗಳ ಚರ್ಚೆಯನ್ನು ತಮ್ಮ ಗ್ರಾಮದಲ್ಲಿಯೇ ಮಾಡಹತ್ತಬೇಕು.

(೩) ಇದಕ್ಕೆ ಪ್ರೆಸಿಡೆಂಟ, ಕಾರ್ಯಕಾರೀ ಮಂಡಳ ಇತ್ಯಾದಿಗಳು ಅನವಶ್ಯಕ. ಆದರೂ ಕಾರ್ಯಸೌಕರ್ಯಕ್ಕಾಗಿ ಇವುಗಳನ್ನು ಇಟ್ಟುಕೊಳ್ಳಬಹುದು. ಆದರೆ ಪತ್ರವ್ಯವಹಾರಕ್ಕೋಸ್ಕರ ಒಬ್ಬ ಸೆಕ್ರೆಟರಿಯನ್ನು ಮಾತ್ರ ನೇಮಿಸಬೇಕು. ಅವನು ಪುಸ್ತಕ ಸಂಗ್ರಹ ಮಾಡುವದು, ನಡವಳಿಕೆ ಬರೆಯುವದು ಇತ್ಯಾದಿ ಕಾರ್ಯಮಾಡಬೇಕು.

(೪) ಗ್ರಾಮದ ಸಾಮಾಜಿಕ ಧಾರ್ಮಿಕ ಅಭಿವೃದ್ಧಿಗಾಗಿ ತಮಗೆ ಶಕ್ಯವಿರುವ ಕಾರ್ಯಕ್ರಮವನ್ನು ಗ್ರಾಮದಲ್ಲಿಯ ಶಿವಾನುಭವ ಸಂಘದವರೇ ನಿರ್ಧರಿಸಿಕೊಂಡು ಶಕ್ಯವಿದ್ದಷ್ಟು ಕಾರ್ಯಮಾಡಹತ್ತಬೇಕು.

(ಕವ್ಹರ ೩ನೇ ಪುಟ ನೋಡಿರಿ.)

೩. ಕಾಯದ ಕರಸ್ಥಲದಲ್ಲಿ ಲಿಂಗ ಸ್ವಾಯತವ ಮಾಡುವೆ. ಕ್ರೋಧದ ನಯನದಲ್ಲಿ ಜಂಗಮ ಸ್ವಾಯತವ ಮಾಡುವೆ. ಜಿಹ್ವೆಯ ಕೊನೆಯಲ್ಲಿ ಪ್ರಸಾದ ಸ್ವಾಯತವ ಮಾಡುವೆ. ಇಂತೀ ತ್ರಿವಿಧದಲ್ಲಿ ಸನ್ನಿಹಿತನಾದೆನು ಕಾಣಾ ಕಲಿದೇವಯ್ಯ.

೪. ಮನವ ಮರೆದು ಮಾಡಿದರೆ ಲಿಂಗರೂಪಾಯಿತ್ತು. ಧನವ ಮರೆದು ಮಾಡಿದರೆ ಜಂಗಮ ರೂಪಾಯಿತ್ತು. ತನುವ ಮರೆದು ಮಾಡಿದರೆ ಪ್ರಸಾದರೂಪಾಯಿತ್ತು. ಇಂತೀ ತ್ರಿವಿಧವನರಿದು ಮಾಡಿದರೆ ಬಯಲ ರೂಪಾಯಿತ್ತು. ಮನವನರಿಯನಾಗಿ ಲಿಂಗವೆಂದರಿತ. ಧನವನರಿಯನಾಗಿ ಜಂಗಮವೆಂದರಿತ. ತನುವನರಿಯನಾಗಿ ಪ್ರಸಾದವೆಂದರಿತ. ಇಂತೀ ತ್ರಿವಿಧ ಸುಖವ ಮರೆದನಾಗಿ ಬಯಲೆಂದರಿತ ಮನವನೇ ಲಿಂಗ ಒಳಕೊಂಡಿತ್ತು. ಧನವನೇ ಜಂಗಮ ಒಳಕೊಂಡಿತ್ತು. ತನುವನೇ ಪ್ರಸಾದ ಒಳಕೊಂಡಿತ್ತು. ಇಂತೀ ತ್ರಿವಿಧ ರೂಪವ ಬಯಲು ಒಳಕೊಂಡಿತ್ತು ಗುಹೇಶ್ವರಾ.

---

## ಗುರು ಲಿಂಗ ಜಂಗಮ ಪ್ರಸಾದ ಇವುಗಳಲ್ಲಿ ಪರಸ್ಪರ ಸಂಬಂಧ.

೧. ಹರ ತನ್ನ ರೂಪ ತೋರಬೇಕೆಂದು ಗುರುರೂಪಾಗಿ ಬಂದು ಮನಸ್ಥಲಕ್ಕೆ ಮಂತ್ರವಾದ. ತನುಸ್ಥಲಕ್ಕೆ ಪ್ರಸಾದವಾದ. ಕರಸ್ಥಲಕ್ಕೆ ಲಿಂಗವಾದ. ಪ್ರಾಣಸ್ಥಲಕ್ಕೆ ಜಂಗಮವಾದ. ಇಂತೀ ಚತುರ್ವಿಧ ಸಾಹಿತ್ಯ ಕೂಡಲಚನ್ನಸಂಗಯ್ಯನಲ್ಲಿ ಬಸವಣ್ಣನೊಬ್ಬನೇ.

೨. ಕಷ್ಟಕುಲದಲ್ಲಿ ಹುಟ್ಟಿದ ಕರ್ಮವ ಕಳೆದು ಮುಟ್ಟಿ ಪಾವನವ ಮಾಡಿ ಕೊಟ್ಟನಯ್ಯ ಶ್ರೀಗುರು ಎನ್ನ ಕರಸ್ಥಲಕ್ಕೆ ಲಿಂಗವ. ಆ ಲಿಂಗ ಬಂದು ಸೋಂಕಲೊಡನೆ ಎನ್ನ ಸರ್ವಾಂಗದ ಅವಲೋಹವಳಿಯಿತ್ತು. ಎನ್ನ ತನುವಿನಲ್ಲಿ ಗುರುವ ನೆಲೆಗೊಳಿಸಿದ- ಎನ್ನ ಮನದಲ್ಲಿ ಜಂಗಮವ ನೆಲೆಗೊಳಿಸಿದ. ಎನ್ನ ಅರಿವಿನಲ್ಲಿ ಪ್ರಸಾದವ ನೆಲೆಗೊಳಿ

ಸಿದ. ಇಂತೀ ತ್ರಿವಿಧ ಸ್ಥಾನವ ಶುದ್ಧ ಮಾಡಿದ ಬಸವಣ್ಣನ ಕರುಣ ದಿಂದೆ ಪ್ರಭುವಿನ ಶ್ರೀಪಾದವ ಕಂಡು ಬದುಕಿದೆನು ಕಾಣಾ ಅಭಿನವ ಚನ್ನಮಲ್ಲಿಕಾರ್ಜುನಾ.

೩. ಗುರುವಿನಲ್ಲಿ ಸದಾಚಾರಿ, ಲಿಂಗದಲ್ಲಿ ಶಿವಾಚಾರಿ, ಜಂಗಮ ದಲ್ಲಿ ಸಮಯಾಚಾರಿ, ಪ್ರಸಾದದಲ್ಲಿ ಬ್ರಹ್ಮಚಾರಿ, ಆಚಾರದಲ್ಲಿ ಸುವಿ ಚಾರಿ ಕೂಡಲ ಚನ್ನಸಂಗಾ ನಿಮ್ಮ ಶರಣ.

೪. ಇನ್ನು ಮುಕ್ತಿ ಎಂದು ಮನದಲ್ಲಿ ಹೊಳೆದು ಕಾಣಿಸುವ ನ್ನಕ್ಕರ ಜಂಗಮಲಿಂಗ ಸಾಹಿತ್ಯವಾದುದಲ್ಲ ಇನ್ನು ಲಿಂಗವ ಬೆರಸಿಹೆ ನೆಂದು ಮನದಲ್ಲಿ ಹೊಳೆದು ಕಾಣಿಸುವನ್ನಕ್ಕರ ಶಿವಲಿಂಗ ಸಾಹಿತ್ಯ ವಾದುದಲ್ಲ. ಇನ್ನು ವಿಶೇಷತ್ವ ಉಂಟೆಂದು ಕಾಮಿಸುವನ್ನಕ್ಕರ ಶ್ರೀಗುರು ಲಿಂಗ ಸಾಹಿತ್ಯವಾದುದಲ್ಲ. ಗುರುಲಿಂಗ, ಶಿವಲಿಂಗ, ಜಂಗಮಲಿಂಗ, ಪ್ರಸಾದಲಿಂಗ, ಈ ಚತುರ್ವಿಧವು ಏಕೀಭವಿಸಿ ಪ್ರಾಣಲಿಂಗವಾದ ಮಹಾ ಮಹಿಮಂಗೆ ಇನ್ನು ಕಾಮಿಸಲಿಲ್ಲ, ಭಾವಿಸಲಿಲ್ಲ. ಆತ ನಿಶ್ಚಿಂತ ಪರಮ ಸುಖಿ, ಪರಿಣಾಮಿ. ಆತನಿರ್ದುದೇ ಕೈಲಾಸ, ಆತ ಸರ್ವಾಂಗಲಿಂಗಿ ಕೂಡಲ ಚನ್ನ ಸಂಗಮದೇವಾ.

---

## ಗುರು ಲಿಂಗ ಜಂಗಮ ಪ್ರಸಾದ ಪಾದೋದಕ ಇವುಗಳಲ್ಲಿ ಪರಸ್ಪರ ಸಂಬಂಧ.

೧. ಗುರುವಾಗಿ ಉಪದೇಶವ ತೋರಿದನೀತ. ಲಿಂಗವಾಗಿ ಮನವ ನಿಂಬುಗೊಂಡನೀತ. ಜಂಗಮವಾಗಿ ಅರ್ಥ ಪ್ರಾಣಾಭಿಮಾನದ ದರ್ಪವ ಕೆಡಿಸಿದನೀತ. ಪ್ರಸಾದವಾಗಿ ಎನ್ನ ಸರ್ವಾಂಗವನವಗ್ರಹಿಸಿದನೀತ. ಪಾದೋದಕವಾಗಿ ಎನ್ನ ಒಳಹೊರಗೆ ತೊಳೆದನೀತ ಕಲಿದೇವರದೇವ ಬಸವಣ್ಣ ತೋರಿದನಾಗಿ ಪ್ರಭುವೆಂಬ ಮಹಿಮನ ಸಂಗದಿಂದ ಆನು ಬದುಕಿದೆನು.

೨. ಹೊನ್ನು ಹೆಣ್ಣು ಮಣ್ಣು ಮೂರನು ಬಿಡಿಸಿದ ಗುರುವಿ ನುಪದೇಶವನೊಲ್ಲೆ. ರೋಷ ಹರುಷವ ಕೆಡಿಸದ ಲಿಂಗವ ಪೂಜಿಸೆ.

ತಾಮಸ ಭ್ರಮೆಯನಳಿಯದ ಜಂಗಮಕ್ಕೆ ದಾಸೋಹವ ಮಾಡೆ. ಪರಮಾನಂದವಲ್ಲದ ಪಾದೋದಕವ ಕೊಳ್ಳೆ. ಪರಿಣಾಮವಲ್ಲದ ಪ್ರಸಾದ ವನುಕ್ಣೆ. ಆನೆಂಬುದಳಿಯದ ಈಶ್ವರಿಯ ಮಾರದ ಮಹಾಲಿಂಗನೆಂದೆಂಬೆ.

೩. ಗುರು ದ್ರೋಹವಾದವನ ಮುಖವ ನೋಡಲಾಗದು. ಮತ್ತೆ ನೋಡಬಹುದು. ಅದೆಂತೆಂದೊಡೆ, ಮುಂದೆ ಲಿಂಗವಿಪ್ಪುದಾಗಿ. ಜಂಗಮ ದ್ರೋಹವಾದವನ ಮುಖವ ನೋಡಲಾಗದು. ಮತ್ತೆ ನೋಡಬಹುದು. ಅದೆಂತೆಂದೊಡೆ, ಮುಂದೆ ಪಾದ ತೀರ್ಥವಿಹುದಾಗಿ. ಪಾದತೀರ್ಥ ದ್ರೋಹವಾದವನ ಮುಖವ ನೋಡಲಾಗದು. ಮತ್ತೆ ನೋಡಬಹುದು. ಅದೇನು ಕಾರಣವೆಂದಡೆ, ಮತ್ತೆ ಪ್ರಸಾದವಿಹುದಾಗಿ. ಪ್ರಸಾದ ದ್ರೋಹ ವಾದವನ ಮುಖವ ನೋಡಲಾಗದು. ಅದೇನು ಕಾರಣವೆಂದಡೆ ಕೂಡಲ ಚನ್ನಸಂಗಯ್ಯ ಪ್ರಸಾದವಿರಹಿತಂಗೆ ಮುಂದೆ ಪರವಿಲ್ಲವಾದ ಕಾರಣ.

೪ ಗುರು ಲಿಂಗ ಜಂಗಮ ಪ್ರಸಾದವೆಂಬ ಚತುರ್ವಿಧದ ಏಕ ರಸವೇ ಪಾದೋದಕವೆನಿಸುವುದು. ಆ ಪಾದೋದಕದ ರೂಪಾದಾತನೇ ಭಕ್ತನು. ಆ ಭಕ್ತನೊಳಗೆ ಅಡಗಿ ತೋರುವ ಗುರು ಲಿಂಗ ಜಂಗಮ ಪ್ರಸಾದಕ್ಕೆ ಆ ಭಕ್ತನೇ ಆಧಾರ. ಆ ಭಕ್ತಂಗೆ ಚತುರ್ವಿಧ ಒಂದಾದ ಲಿಂಗವೇ ಆಧಾರ. ಇದು ಒಂದನೊಂದು ಬಿಡದೆ ಒಂದಕ್ಕೊಂದಾ ಧಾರ ಆಧೇಯವಾಗಿಹುದೇ ಲಿಂಗ ಭಕ್ತನ ಇರವು ತಾನೇ ನಿಜಗುರು ಸ್ವತಂತ್ರ ಸಿದ್ಧಲಿಂಗೇಶ್ವರಾ.

೫. ಸತ್ತು ಚಿತ್ತಾನಂದ ನಿತ್ಯ ಪರಿಪೂರ್ಣವೆಂಬರು. ನಾನದ ಮನದಲ್ಲಿ ಹಿಡಿದು ಮಾತಾಡುವೆನಲ್ಲದೆ ಕ್ರಿಯಿಂದ ಕಾಣೆ. ಸತ್ತೇ ಗುರು, ಚಿತ್ತೇ ಲಿಂಗ, ಆನಂದವೇ ಜಂಗಮ, ನಿತ್ಯವೇ ಪ್ರಸಾದ, ಪರಿಪೂರ್ಣವೇ ಪಾದೋದಕವೆಂಬುದ ನಾನು ಗ್ರಹಿಸಿ ನಿಂದು, ಜಂಗಮಕ್ಕೆ ನಾನು ಭಕ್ತ ನಾದೆನಯ್ಯ. ನಿತ್ಯನಾಗಿ ನಿಮ್ಮ ಜಂಗಮಕ್ಕೆ ವಂದಿಸುವೆ. ಆನಂದ ದಿಂದ ನಿಮ್ಮ ಪಾದೋದಕವ ಕೊಂಬೆ. ಪರಿಪೂರ್ಣವಾಗಿ ನಿಮ್ಮನರ್ಚಿಸಿ ಪೂಜಿಸಿ ಪರವಶನಪ್ಪೆ. ನಾನು ಭಕ್ತಿಪ್ರಸಾದ ಮುಕ್ತಿಪ್ರಸಾದ ನಿತ್ಯ ಪ್ರಸಾದ ನಿಮ್ಮ ಜಂಗಮದಲ್ಲಿ ವರವ ಪಡೆವೆನು. ಕಲಿದೇವರ ದೇವ ನಿಮ್ಮ ಶರಣ ಪ್ರಭುದೇವರ ಶ್ರೀಪಾದದಲ್ಲಿ ಮಗ್ನವಾಗಿರ್ದೆನಯ್ಯ.

# ಶುದ್ಧ ಸಿದ್ಧ ಪ್ರಸಿದ್ಧ ಪ್ರಸಾದ.

೧. ಎನ್ನ ಚಿನ್ನಾದ ಇರವ ಗುರುವೆಂದೆನಿಸಿದ ಬಸವಣ್ಣ. ಎನ್ನ ಚಿದ್ಬಿಂದುವಿನ ಇರವ ಲಿಂಗವೆಂದೆನಿಸಿದ ಬಸವಣ್ಣ. ಎನ್ನ ಚಿತ್ಕಳೆಯ ಇರವ ಜಂಗಮವೆಂದೆನಿಸಿದ ಬಸವಣ್ಣ. ಗುರುವಿನಲ್ಲಿ ಶುದ್ಧ, ಲಿಂಗ ದಲ್ಲಿ ಸಿದ್ಧ, ಜಂಗಮದಲ್ಲಿ ಪ್ರಸಿದ್ಧ. ಇಂತೀ ಶುದ್ಧ ಸಿದ್ಧ ಪ್ರಸಿದ್ಧ ಪ್ರಸಾ ದದಲ್ಲಿ ಎನ್ನನುಣಕಲಿಸಿದ ಕಲಿದೇವ ನಿಮ್ಮ ಶರಣ ಸಂಗನಬಸವಣ್ಣನು.

೨. ರೂಪಾಗಿ ಬಂದ ಪದಾರ್ಥವ ಕಾಯದ ಕೈಯಲ್ಲಿ ಇಷ್ಟ ಲಿಂಗಕ್ಕೆ ಕೊಟ್ಟು ಶುದ್ಧಪ್ರಸಾದವ ಕೊಂಡು ಸರ್ವಾಂಗ ಶುದ್ಧವಾದೆನು ನೋಡಾ. ರುಚಿಯಾಗಿ ಬಂದ ಪದಾರ್ಥವನು ಮನದ ಕೈಯ್ಯಲ್ಲಿ ಜಿಹ್ವೆಯ ಮುಖದಲ್ಲಿ ಪ್ರಾಣಲಿಂಗಕ್ಕೆ ಕೊಟ್ಟು ಸಿದ್ಧಪ್ರಸಾದ ಗ್ರಾಹಕ ನಾಗಿ ಮನ ನಿರ್ಮಲವಾಯಿತ್ತು ನೋಡಾ. ಪರಿಣಾಮವಾಗಿ ಬಂದ ಪದಾರ್ಥವ ಭಾವದ ಕೈಯ್ಯಲ್ಲಿ ಹೃದಯ ಮುಖದಲ್ಲಿ ತೃಪ್ತಿ ಲಿಂಗಕ್ಕೆ ಕೊಟ್ಟು ಪ್ರಸಿದ್ಧ ಪ್ರಸಾದವ ಕೊಂಡು ಶುದ್ಧ ಪರಮಾತ್ಮನಾದೆನು ನೋಡಾ. ಈ ಕ್ರಿಯಾ ಜ್ಞಾನಾರ್ಪಣವಿರಬೇಕು. ಕಾಯವು ಬಯಲವಾಹನ್ನಕ್ಕರ ಈ ಕಾಯವು ಜೀವವು ಪರತತ್ವದಲ್ಲಿ ಅಡಗದೆ ಬರಿಯ ವಾಗದ್ವೈತ ದಿಂದ ತಾನೇ ಲಿಂಗವಾದೆನೆಂದು ಲಿಂಗಾರ್ಪಣ ಬಿಡುವ ನಾಯಮುಖವ ಎನಗೊಮ್ಮೆ ತೋರದಿರಯ್ಯ ಮಹಾಲಿಂಗ ಗುರುಶಿವಸಿದ್ಧೇಶ್ವರಪ್ರಭುವೇ.

೩. ಶುದ್ಧ ಸಿದ್ಧ ಪ್ರಸಿದ್ಧ ಪ್ರಸಾದವೆಂತುಟೆಂದು ಬೆಸಗೊಂಡಡೆ ಹೇಳಿಹೆ ಕೇಳಿರೇ. ಶುದ್ಧಪ್ರಸಾದ ಗುರುಮುಖದಿಂದ ಬಂದುದು. ಸಿದ್ಧ ಪ್ರಸಾದ ಲಿಂಗಮುಖದಿಂದ ಬಂದುದು. ಪ್ರಸಿದ್ಧಪ್ರಸಾದ ಜಂಗಮ ಮುಖ ದಿಂದ ಬಂದುದು. ಇದರೊಳಗಾವುದು ಘನವೆಂಬೆ ಆವುದು ಕಿರಿದೆಂಬೆ ಘನಕ್ಕೆ ಘನವಾದ ಮಹಾಘನ ಪ್ರಸಾದವು? ಗುರುಪ್ರಸಾದದಿಂದ ತನು ಶುದ್ಧವಾಯಿತ್ತು. ಲಿಂಗಪ್ರಸಾದದಿಂದ ಮನ ಶುದ್ಧವಾಯಿತ್ತು. ಜಂಗಮ ಪ್ರಸಾದದಿಂದ ಪ್ರಾಣ ಶುದ್ಧವಾಯಿತ್ತು. ಶರಣ ಸಂಗದಿಂದ ಪ್ರಸಾದ ಸಾಧ್ಯವಾಯಿತ್ತು. ಇದುಕಾರಣ ಕೂಡಲಚನ್ನಸಂಗಯ್ಯ ಇಂತೀ ತ್ರಿವಿಧ ಪ್ರಸಾದವ ಕೊಂಡೆನ್ನ ಭವಂ ನಾಸ್ತಿಯಾಯಿತ್ತು ಗುರುಶಿವಸಿದ್ಧೇಶ್ವರ ಪ್ರಭುವೇ.

೪. ಎಮ್ಮ ಶಿವಶರಣರ ಪ್ರಸಾದದ ವಿವರವೆಂತೆಂದೊಡೆ, ಶುದ್ಧ ಪ್ರಸಾದ ಸ್ವರೂಪವಾದ ಸದ್ರೂಪಾಚಾರ್ಯನು ತನುವಿನಲ್ಲಿ ಸ್ವಾಯತವ ಮಾಡಿ ಆ ತನುಪ್ರಕೃತಿ ಆ ಗುರುವಿನಲ್ಲಿ ನಷ್ಟವಾದುದೇ ಅಚ್ಚ ಪ್ರಸಾದ. ಸಿದ್ಧಪ್ರಸಾದ ಸ್ವರೂಪನಾದ ಚಿದ್ರೂಪ ಲಿಂಗವನು ಮನದಲ್ಲಿ ಸ್ವಾಯತವ ಮಾಡಿ ಆ ಮನೋ ಪ್ರಕೃತಿ ಆ ಲಿಂಗದಲ್ಲಿ ನಷ್ಟವಾದುದೇ ನಿಚ್ಚಪ್ರಸಾದ. ಪ್ರಸಿದ್ಧಪ್ರಸಾದ ಸ್ವರೂಪವಾದ ಪರಮಾನಂದ ಜಂಗಮವನು ಆತ್ಮನಲ್ಲಿ ಸ್ವಾಯತವ ಮಾಡಿ ಆತ್ಮ ಪ್ರಕೃತಿ ಆ ಜಂಗಮದಲ್ಲಿ ನಷ್ಟವಾದುದೇ ಸಮಯಪ್ರಸಾದ. ಶುದ್ಧ ಸಿದ್ಧ ಪ್ರಸಿದ್ಧ ಪ್ರಸಾದತ್ರಯದ ಏಕ ಸ್ವರೂಪವಾದ ಮಹಾಪ್ರಸಾದ. ಅಂತಪ್ಪ ಮಹಾಪ್ರಸಾದ ಸ್ವರೂಪವಾದ ಘನಮಹಾಲಿಂಗ. ಆ ಘನಮಹಾಲಿಂಗವನು ಆಪಾದ ಮಸ್ತಕಪರಿಯಂತರವಾಗಿ ಸರ್ವಾಂಗದಲ್ಲಿ ಸ್ವಾಯತವ ಮಾಡಿ ಆ ಲಿಂಗ ಪ್ರಕಾಶದಲ್ಲಿ ಸರ್ವಾಂಗದ ಪ್ರಕೃತಿ ನಷ್ಟವಾಗಿ, ಅಂತಪ್ಪ ಘನಮಹಾಲಿಂಗದೇಕ ಸ್ವರೂಪ ತಾನಾದುದೇ ಏಕಪ್ರಸಾದ. ಇಂತೀ ನಾಲ್ಕು ತೆರದ ಪ್ರಸಾದವ ಕೊಂಡವರು ಆರೆಂದಡೆ ಹಿಂದಕ್ಕೆ ಕಲ್ಯಾಣಪುರದಲ್ಲಿ ಬಸವಾದಿ ಪ್ರಭುದೇವರಂತ್ಯವಾದ ಏಳನೂರೆಪ್ಪತ್ತು ಪ್ರಮಥಗಣಂಗಳು. ಇನ್ನು ಮುಂದೆ ಶಿವಜ್ಞಾನೋದಯವಾಗಿ ಶ್ರೀಗುರು ಕಾರುಣ್ಯವ ಪಡೆದು ಲಿಂಗಾಂಗ ಸಂಬಂಧಿಗಳಾದ ಶಿವಶರಣರಿಗೆ ಇದೇ ಪ್ರಸಾದ ನೋಡೆಂದ ನಮ್ಮ ಕಾಡಿನೊಳಗಾದ ಶಂಕರ ಪ್ರಿಯ ಚನ್ನ ಕದಂಬಲಿಂಗ ನಿರ್ಮಾಯ ಪ್ರಭುವೇ.

೫. ಇಂದ್ರಿಯಂಗಳ ದುರ್ವರ್ತನ ಗುಣಗಳ ಜಯಿಸಿದಾತಂಗೆ ಬ್ರಹ್ಮನುತ್ಪತ್ಯಕ್ಕೆ ಹೊರಗಾಗಿ ಶ್ರೀಗುರುವಿನಿಂದ ಸರ್ವಾಂಗವೆಲ್ಲ ಶುದ್ಧ ಪ್ರಸಾದವಾಗುವದಯ್ಯ. ಸಮಸ್ತ ವಿಷಯಂಗಳ ದುರ್ವರ್ತನ ಗುಣಂಗಳ ಜಯಿಸಿದಾತಂಗೆ ವಿಷ್ಣುವಿನ ಸ್ಥಿತಿ ಹೊರಗಾಗಿ ಚಿನ್ಮನ ಮಹಾಲಿಂಗದಿಂದ ಸರ್ವಾಂಗವೆಲ್ಲ ಸಿದ್ಧಪ್ರಸಾದವೆನಿಸುವದಯ್ಯ ಸಮಸ್ತ ಕರಣಂಗಳ ದುರ್ವರ್ತನ ಗುಣಗಳ ಜಯಿಸಿದಾತಂಗೆ ರುದ್ರನ ಲಯಕ್ಕೆ ಹೊರಗಾಗಿ ನಿರಾಲಂಬ ನಿಃಕಲ ಜಂಗಮದಿಂದ ಸರ್ವಾಂಗವೆಲ್ಲ ಪ್ರಸಿದ್ಧ ಪ್ರಸಾದವಾಗುವದಯ್ಯ. ಇಂತು ಇಂದ್ರಿಯ ವಿಷಯ ಕರಣ ಗುಣ ಧರ್ಮಗಳಳಿದು ಲಿಂಗೇಂದ್ರಿಯ ವಿಷಯ ಕರಣಗಳಾಗಿ ಬ್ರಹ್ಮನುತ್ಪತ್ತಿ ವಿಷ್ಣುವಿನ ಸ್ಥಿತಿ ರುದ್ರನ ಲಯಕ್ಕೆ ಹೊರಗಾಗದಲ್ಲದೆ ಮಹಾಪ್ರಸಾದಿಸ್ಥಲದೊಳಗಣ ಷಟ್‌ಸ್ಥಲ ದೊರೆಯದು ನೋಡಾ ಸಂಗನಬಸವೇಶ್ವರಾ.

೬. ತ್ರಿವಿಧ ಪ್ರಸಾದವೆಂದೆಂಬರು. ಅದೆಂತಾದುದೋ ? ಶುದ್ಧ ಪ್ರಸಾದ ಗುರುವಿನವು, ಸಿದ್ಧಪ್ರಸಾದ ಲಿಂಗವದು, ಪ್ರಸಿದ್ಧ ಪ್ರಸಾದ ಜಂಗಮವದು. ಇಂತೀ ತ್ರಿವಿಧ ಒಂದೆಂದರಿದವರ ತೋರಿ ಬದುಕಿಸಾ ಕೂಡಲಚನ್ನಸಂಗಮದೇವಾ.

೭. ಅಗ್ನಿ ಮುಟ್ಟಲು ತೃಣವಗ್ನಿಯಪ್ಪುದು ತಪ್ಪದಯ್ಯ. ಗುರು ಪ್ರಸಾದವಂಗ ಸೋಂಕಿದಲ್ಲಿ ಸರ್ವಾಂಗ ಗುರುವಪ್ಪುದು ತಪ್ಪದಯ್ಯ. ಲಿಂಗ ಪ್ರಸಾದ ಮನಸೋಂಕಿದಲ್ಲಿ ಮನ ಲಿಂಗವಪ್ಪುದು ತಪ್ಪದಯ್ಯ. ಜಂಗಮಪ್ರಸಾದ ಅರಿವು ಸೋಂಕಿದಲ್ಲಿ ಅಖಂಡಿತ ಪ್ರಸನ್ನ ಪ್ರಸಾದ ವಪ್ಪುದು ತಪ್ಪದಯ್ಯ. ಶಿವಶಿವಾ ಪ್ರಸಾದದ ಮಹಿಮೆಯನೇನೆಂದುಪಮಿಸುವೆನು? ಇಂತಪ್ಪ ಪ್ರಸಾದವ ಕೊಂಡು ನಾನು ಬದುಕಿದೆನಯ್ಯ ಉರಿಲಿಂಗಪೆದ್ದಿಪ್ರಿಯವಿಶ್ವೇಶ್ವರಾ.

೮. ಇಂತೀ ಶ್ರೀಗುರು ಕರುಣದಿಂದ ಉಪದೇಶವಂ ಪಡೆದ ಆತ್ಮಂಗೆ ಸಮ್ಯಜ್ಞಾನೋದಯವಾಗಿ ಪರಬ್ರಹ್ಮದ ಚಿತ್ಕಳೆಯೇ ಸಾಕಾರ ವಿದೆಯಲಾ ಎಂದು ನಿಶ್ಚಯಿಸಿದ ಶರಣನು ತನ್ನ ಕಾಯಕ ವಾಚಕ ಮಾನಸದಿಂ ತನು ಮನ ಧನ ಪದಾರ್ಥಂಗಳಂ ಗುರು ಲಿಂಗ ಜಂಗಮದ ಸೊಮ್ಮೆಂದರಿದು ರೂಪು ರುಚಿ ತೃಪ್ತಿ ಪದಾರ್ಥಂಗಳಂ ಇಷ್ಟಪ್ರಾಣ ಭಾವಂಗಳಲ್ಲಿ ಶುದ್ಧ ಸಿದ್ಧ ಪ್ರಸಿದ್ಧ ಪ್ರಸಾದವ ಮಾಡುವ ಪರಿ ಎಂತೆಂದೊಡೆ:—

ಶ್ಲೋಕ॥ ಏಕಮೂರ್ತಿಸ್ತ್ರಯೋಭಾಗಕಂ । ಗುರು ಲಿಂಗಂಚ ಜಂಗಮಂ । ಜಂಗಮಂಚ ಗುರುಲಿಂಗಂ ತ್ರಿವಿಧ ಲಿಂಗಮುಚ್ಯತೇ। ಎಂಬೀ ಹರ ಗುರು ವಾಕ್ಯ ಪ್ರಮಾಣದಿಂ ಇಷ್ಟವೇ ಗುರುವೆಂದು ಪ್ರಾಣವೇ ಲಿಂಗವೆಂದು ಭಾವವೇ ಜಂಗಮವೆಂದು ಅರಿದು ತನ್ನ ಜೇಷ್ಟ ಲಿಂಗದಲ್ಲಿ ಶುದ್ಧ ಪ್ರಸಾದವ ಮಾಡುವ ಪರಿ ಎಂತೆಂದೊಡೆ:—

ಶ್ಲೋಕ॥ ಮಧ್ಯಮನಾಮಿಕಾಂಗುಷ್ಠ ಮುದ್ರಾನಾಮ ಕುರಂಗಕಂ। ಇಷ್ಟಲಿಂಗಸ್ಯ ನೈವೇದ್ಯಂ ಮಮ ಪ್ರಿಯ ವರಾನನೆ । ಎಂಬೀ ಹರ ಗುರು ವಾಕ್ಯ ಪ್ರಮಾಣದಿಂತು ಕುರಂಗ ಮುದ್ರೆಯಿಂ ವೃಣ್ಮಯಾದಿ ಸುವರ್ಣಾಂತ್ಯವಾದ ಪ್ರಕ್ಷಾಲಿಸಿದ ಹರಿವಾಣದಲ್ಲಿ ಗಡಣಿಸಿದ ಸಕಲ

ಪದಾರ್ಥ ದ್ರವ್ಯಂಗಳ ಪತಾಕ ಮುದ್ರಾ ಸ್ಪರ್ಶನದಿಂ ತ್ವಕ್ಕೆಂಬ ಹಸ್ತದಿಂ ತಂದು ಇಷ್ಟಲಿಂಗ ಮುಖಂ ಪಂಚ ತತ್ಪ್ರಾಣವೇದ್ಯ ತನ್ಮುಖಂ ॥ ಯತ್ತನ್ಮುಖಮಿದಂ ಭಾವಂ । ಭಾವಲಿಂಗ ಮುಖಂ ತಥಾ ॥ ಎಂಬೀ ಹರ ಗುರು ವಾಕ್ಯ ಪ್ರಮಾಣದಿಂ ತನ್ನಿಷ್ಟಲಿಂಗದಲ್ಲಿಹ ಪಂಚಮುಖಂ ಗಳಲ್ಲಿ ಪ್ರಣವ ಬೀಜಾಕ್ಷರವೆಂಬ ತ್ರಿವಿಧ ಮಂತ್ರ ಧ್ಯಾನದಿಂ ತ್ರಿವಿಧ ಪರಿಯಾಯದಿಂದೆ ರೂಪಾದಿ ದ್ರವ್ಯಂಗಳಂ ಶುದ್ಧ ಪ್ರಸಾದವಾದ ಗುರು ಪ್ರಸಾದವಂ ಜಿಹ್ವೆಯಲ್ಲಿ ಸ್ಪರ್ಶನ ಸಂಜ್ಞೆಯಿಂದ ಪ್ರಾಣಲಿಂಗದಲ್ಲಿ ಪಂಚ ಮುಖಂಗಳನರಿದು ವ-ನ ಜ್ಞಾನ ಸುವಿವೇಕವನೆಚ್ಚರಿಸಿ ಕುಳಾ ಕೃತಿಯ ಲಿಂಗಂಗಳಲ್ಲಿ ಪ್ರಣವ ಬೀಜಾಕ್ಷರವೆಂಬ ತ್ರಿವಿಧ ಮಂತ್ರ ಧ್ಯಾನದಿಂ ದ್ವಿತೀಯ ಪರಿಯಾಯದಿಂದೆ ರುಚಿಸಿದ ಷಡ್ರುಚಿ ದ್ರವ್ಯಂ ಗಳಂ ಸಿದ್ಧ ಪ್ರಸಾದವಾದ ಲಿಂಗ ಪ್ರಸಾದವಂ ಹೃದಯದಲ್ಲಿ ಮಿಳಿನ ಸಂಜ್ಞೆಯಿಂದ ಭಾವಲಿಂಗದಲ್ಲಿ ಪಂಚ ಮುಖಂಗಳನರಿದು ಸಮ್ಯಕ್ ಜ್ಞಾನಸುವೇಕದಿಂದೆಚ್ಚರಿಸಿ ಆತ್ಮಭಾವ ವಸ್ತುವಿನಲ್ಲಿ ಪ್ರಣವ ಬೀಜ ಅಕ್ಷರ ವೆಂಬ ತ್ರಿವಿಧ ಮಂತ್ರ ಧ್ಯಾನದಿಂದ ಇಷ್ಟ ಪ್ರಾಣ ಭಾವ ಲಿಂಗಂಗ ಳೇಕ ವಿಷಯದಿಂ ತೃಪ್ತಿ ಪ್ರಸಿದ್ಧ ಪ್ರಸಾದವಾದ ಜಂಗಮ ಪ್ರಸಾ ದವಂ ಶರಣ ತನ್ನ ತನುವೇ ಶುದ್ಧ ಪ್ರಸಾದವಾಗಿ ಮನವೇ ಸಿದ್ಧ ಪ್ರಸಾದವಾಗಿ, ಭಾವವೇ ಪ್ರಸಿದ್ಧ ಪ್ರಸಾದವಾಗಿ, ನಾಸಿಕವೇ ಗಂಧ ಪ್ರಸಾದವಾಗಿ, ಜಿಹ್ವೆಯಲ್ಲಿ ರಸ ಪ್ರಸಾದವಾಗಿ, ನೇತ್ರವೇ ನೋಟ ಪ್ರಸಾದವಾಗಿ, ಹಸ್ತವೇ ಸ್ಪರ್ಶನ ಪ್ರಸಾದವಾಗಿ, ಶ್ರೋತ್ರವೇ ಶಬ್ದ ಪ್ರಸಾದವಾಗಿ ಹೃದಯವೇ ತೃಪ್ತಿ ಪ್ರಸಾದವಾಗಿ, ಜ್ಞಾನವೇ ಸಮಯ ಪ್ರಸಾದವಾಗಿ ಸರ್ವಾಂಗ ಲಿಂಗ ಸಮರಸೈಕ್ಯತ್ವದಿಂ ಸಹ ಭಾಜನ ಸಹ ವರ್ತನಂಗಳೆಲ್ಲ ಘನ ಪ್ರಸಾದವಾಗಿ ಆನಂದಿಸುವೆ ಮಹಾಮಹಿ ಮರ ಚರಣಾರವಿಂದಕ್ಕೆ ನಮೋ ನಮೋ ಎಂಬೆ ಶಾಣಾ ಮದ್ಗುರು ಬಸವಪ್ರಭುವೇ.

## ಸ್ವಯ ಪ್ರಸಾದಿ ಜ್ಞಾನ ಪ್ರಸಾದಿ ಮಹಾ ಪ್ರಸಾದಿ.

೧. ಸ್ವಯ ಪ್ರಸಾದಿ ಗುರು ಪ್ರಸಾದವನೊಲ್ಲ ಲಿಂಗಪ್ರಸಾದವ ಕೊಂಬ. ಜ್ಞಾನಪ್ರಸಾದಿ ಜಂಗಮಪ್ರಸಾದವ ಕೊಂಬ ಲಿಂಗಪ್ರಸಾದವನೊಲ್ಲ. ಮಹಾ ಪ್ರಸಾದಿ ಪ್ರಸನ್ನ ಪ್ರಸಾದವ ಕೊಂಬ ಜಂಗಮ ಪ್ರಸಾದವನೊಲ್ಲ. ಇಂತೀ ತ್ರಿವಿಧ ಪ್ರಸಾದದ ಭೇದವನರಿದು ಒಂದನೊಡಗೂಡಿ ಒಂದನರ್ಪಿಸಬೇಕು. ಆ ಉಭಯವನೊಡಗೂಡಿ ಪ್ರಸನ್ನ ಪ್ರಸಾದವ ಲಿಂಗಕ್ಕೆ ಕೊಟ್ಟು ಕೊಳಬಲ್ಲಾ ಮಹಾ ಪ್ರಸಾದಿಗೆ ಕುಂಭೇಶ್ವರ ಲಿಂಗದಲ್ಲಿ ಜಗನ್ನಾಥಂಗೆ ನಮೋ ನಮೋ ಎನುತಿರ್ದೆನು.

ಅರ್ಥ:— ನಿತ್ಯವಾದ ಮಹಾಲಿಂಗವನೇ ಇಷ್ಟಲಿಂಗವಾಗಿ ಪ್ರಸನ್ನತ್ವ ಮಾಡಿಕೊಂಡಿರ್ದ ಶರಣನು ಭಿನ್ನವಿಟ್ಟು ಗುರು ಪ್ರಸಾದವ ಸ್ವೀಕರಿಸನು. ಲಿಂಗವು ತಾನು ಪ್ರಸಾದವು ಒಂದೇ ಎಂಬ ಸಮರಸ ಭಾವದಿಂದ ಲಿಂಗಪ್ರಸಾದವ ಸ್ವೀಕರಿಸುವನು ಸಮರಸ ಭಾವದಿಂದ ಲಿಂಗ ಪ್ರಸಾದವ ಕೊಂಬ ಶರಣನು ಜಂಗಮವು ತಾನು ಪ್ರಸಾದವು ಒಂದೇ ಎಂಬ ಸಮರಸ ಭಾವದಿಂದ ಜಂಗಮ ಪ್ರಸಾದವ ಸ್ವೀಕರಿಸುವನು. ಜಂಗಮವ ಭಿನ್ನವಿಟ್ಟು ಲಿಂಗಪ್ರಸಾದವ ಕೊಳ್ಳನು ಸಮರಸಭಾವದಿಂದ ಜಂಗಮ ಪ್ರಸಾದವ ಸ್ವೀಕರಿಸುವ ಶರಣನು ಗುರುಮುಖದಿಂದ ಪ್ರತ್ಯಕ್ಷವಾದ ಪ್ರಸಾದವನು ಗುರುವು ತಾನು ಪ್ರಸಾದವು ಒಂದೇ ಎಂಬ ಭಾವದಿಂದ ಗುರುಪ್ರಸಾದವ ಸ್ವೀಕರಿಸುವನು. ಜಂಗಮ ಪ್ರಸಾದವನು ಭಿನ್ನವಿಟ್ಟು ಅನುಭವಿಸನು. ಈ ಗುರು ಲಿಂಗ ಜಂಗಮದ ಪ್ರಸಾದವನು ಸಮರಸಭಾವದಿಂದ ಸ್ವೀಕರಿಸುವ ವಿಚಾರವನು ತಿಳದು ಇಷ್ಟ ಲಿಂಗದ ಕ್ರಿಯೆಯಲ್ಲಿ ಕೂಡಿ ರೂಪು ಪದಾರ್ಥವ ಇಷ್ಟ ಲಿಂಗಕ್ಕೆ ಸಮರ್ಪಿಸಬೇಕು. ಆ ಇಷ್ಟ ಲಿಂಗವು ಮನದಲ್ಲಿ ಪ್ರಾಣಲಿಂಗ, ಆತ್ಮನಲ್ಲಿ ಭಾವಲಿಂಗವಾದಲ್ಲಿ ಪ್ರಾಣಲಿಂಗದ ಜ್ಞಾನ ಭಾವಲಿಂಗದ ಮಹಾಜ್ಞಾನದಲ್ಲಿ ಕೂಡಿ ಆ ರೂಪು ಪದಾರ್ಥವೇ ಮನದಲ್ಲಿ ರುಚಿಯಾಗಿ ಆತ್ಮನಲ್ಲಿ ತೃಪ್ತಿಯಾಗಲು ಆ ರುಚಿ ತೃಪ್ತಿಗಳೆರಡನು ಪ್ರಾಣಲಿಂಗ ಭಾವಲಿಂಗಕ್ಕೆ ಅರ್ಪಿಸಿ ತ್ರಿವಿಧ ಲಿಂಗ ಪ್ರಸಾದವ ಸ್ವೀಕರಿಸಿದಲ್ಲಿ ಅಧಿಕವಾದ ಶಿವ ಪ್ರಸಾದಿಗೆ ಇಷ್ಟ ಲಿಂಗಕ್ಕೆ ಚೈತನ್ಯವಾದ ಪ್ರಾಣಲಿಂಗವೇ ತಾನಾದ ಶರಣಂಗೆ ಸಾಂದ್ರ ನಮಸ್ಕಾರವ ಮಾಡುತ್ತಿರ್ದೆನೆಂಬುದರ್ಥ.

---

ಅದು ಪ್ರಕಾಶಿಸುತ್ತ ಇರುವದನ್ನು ರಾಜನು ನೋಡಿ ಕೋಪವಡಗಿತು. ಜೊಮ್ಮಯ್ಯನು ಮಹಿಮನೆಂದು ತಿಳಿದನು. ಆಮೇಲೆ ಅವನು ಜೊಮ್ಮಯ್ಯನಿಗೆ – ನೀನು ಪುರಾಣಿಕನನ್ನು ಏಕೆ ಕೊಂದೆ ಎಂದು ಕೇಳಲು ಅವನು — ಪುರಾಣಿಕನು ಗಂಗೆಯ ಉದ್ಭವದ ವಿಷಯವಾಗಿ ಸುಳ್ಳು ಹೇಳಿ ಶಿವನಿಂದೆಯನ್ನು ಮಾಡಿದನು. ನಾನು ದೇವರ ನಿಂದೆಯನ್ನು ಸಹಿಸಲಾರೆನು. ಅದಕ್ಕೋಸ್ಕರ ನಾನು ಹಾಗೆ ಮಾಡಿದೆನೆನ್ನಲು ಅರಸನು — ನೀನನ್ನುವದಕ್ಕೆ ದೃಷ್ಟಾಂತವನ್ನು ತೋರಿಸಿದೆಯಾದರೆ ಮಾತ್ರ ನಾನು ನಿನ್ನನ್ನು ಬಿಡುವೆನು, ಇಲ್ಲದಿದ್ದರೆ ಶಿಕ್ಷಿಸುವೆನು ಎಂದು ಹೇಳಲು — ಅದಕ್ಕೆ ಜೊಮ್ಮಯ್ಯನು ನೀನು ಈಗ ಪುರಾಣಿಕನ ಶವವನ್ನು ನೋಡು. ಅದು ಪೂರ್ಣವಾಗಿ ಇಷ್ಟರಲ್ಲಿ ಹುಳಿತು ಹೋಗಿದ್ದನ್ನು ನೀನು ಕಾಣುವಿ ಎಂದು ನುಡಿಯಲು ಅರಸನು ಶವದ ಮೇಲಿದ್ದ ಹೊದಿಕೆಯನ್ನು ತೆಗೆದು ನೋಡಲಾಗಿ ಶವದ ಒಳಗೆಲ್ಲ ಹುಳುಗಳ ರಾಶಿಯೇ ತುಂಬಿಕೊಂಡಿತ್ತು. ಅದು ಅತ್ಯಂತ ದುರ್ಗಂಧಮಯವಾಗಿತ್ತು. ಅರಸನು ಅದನ್ನು ನೋಡಿ ಹೇಸಿ ಹಿಂದಿರುಗಿದನು. ಆಗ ಅರಸನು ಜೊಮ್ಮಯ್ಯನಿಗೆ – ನೀನು ನಿಜವಾದ ಭಕ್ತನು, ಮಹಾಮಹಿಮನು ಎಂದು ನುಡಿಯುತ್ತ ಅವನ ಪಾದಕ್ಕೆರಗಿದನು. ಆಮೇಲೆ ಅವನನ್ನು ಸತ್ಕರಿಸಿ ಆನೆಯ ಮೇಲೇರಿಸಿ ಕಳುಹಿದನು. ಆಗ ಭಕ್ತ ಸಂದೋಹವು ಜೊಮ್ಮಯ್ಯನ ಸುತ್ತಲೂ ನೆರೆದು ಸ್ತುತಿಸುತ್ತಿರಲು ಅವನು ತನ್ನ ಗೃಹಕ್ಕೆ ಹೋದನು.

ಈ ಮೇರೆಗೆ ಜೊಮ್ಮಯ್ಯನು ಪೆರ್ಮಾಡಿರಾಯನ ಓಲಗದಲ್ಲಿ ಪ್ರಧಾನಿಯ ಕೆಲಸ ಮಾಡುತ್ತ ಶಿವಪುರದಲ್ಲಿರುತ್ತ ಅಲ್ಲಿಯೇ ಸಾಮರಸ್ಯವನ್ನು ಹೊಂದಿದನು.

ತೆಲಗು ಜೊಮ್ಮಯ್ಯನು ಬಸವೇಶ್ವರನಕಿಂತಲೂ ಮೊದಲಿನವನಾದ್ದರಿಂದ ಅವನ ಚರಿತ್ರೆಯು ಮಹತ್ವದ್ದಾಗಿರುತ್ತದೆ. ಅವನು ೧೦೭೬ ರಿಂದ ೧೧೨೬ ರ ವರೆಗೆ ಕರ್ನಾಟಕದಲ್ಲಿ ಅತ್ಯಂತ ವೈಭವದಿಂದ ರಾಜ್ಯವಾಳಿದ ವಿಕ್ರಮಾದಿತ್ಯನ ಕಾಲದಲ್ಲಿದ್ದನು. ಈ ರಾಜನ ಕಾಲದಲ್ಲಿ ತೆಲಗು ಜೊಮ್ಮಯ್ಯನಂತೆ ಕೆಲವು ವಚನಕಾರರು ಆಗಿಹೋಗಿದ್ದಾರೆ. ಆದ್ದರಿಂದ ವಚನ ಶಾಸ್ತ್ರವು ಬಸವೇಶ್ವರನಕಿಂತಲೂ ಮೊದಲಿನದೆಂದು ತಿಳಿದುಬರುತ್ತದೆ.

ವಿಕ್ರಮಾದಿತ್ಯನ ಆಳಿಕೆಯಲ್ಲಿ ಸ ತ್ತಲಿನ ಪ್ರಾಂತಗಳಲ್ಲಿದ್ದ ವಿದ್ವಾಂಸರು ಅವನ ಓಲಗಕ್ಕೆ ಆಗಿಂದಾಗ್ಗೆ ಬಂದು ತಮ್ಮ ಪಾಂಡಿತ್ಯವನ್ನು ಪ್ರಕಟ ಮಾಡುತ್ತ ಇರುವರು. ಅರಸನಾದರೂ ಅವರ ವಿದ್ವತ್ತಿಗೆ ಮೆಚ್ಚಿ ಅವರಿಗೆ ತನ್ನ ಆಡಳಿತೆಯಲ್ಲಿ ತಕ್ಕ ಸ್ಥಾನಗಳನ್ನು ಕೊಡುತ್ತಿದ್ದನೆಂದು ತೋರುತ್ತದೆ. ಆದ್ದರಿಂದಲೇ ಕೇಶಿರಾಜ ಮತ್ತು ತೆಲುಗು ಜೊಮ್ಮಯ್ಯಗಳು ಅವನಲ್ಲಿ ಮಂತ್ರಿಪದಾರೂಢರಾದರು. ತೆಲುಗು ಜೊಮ್ಮಯ್ಯನು ಆಂಧ್ರ ದೇಶದವನು. ಆದರೂ ಆಂಧ್ರರು ಕರ್ನಾಟಕದ ವೀರಶೈವ ಸಂಸ್ಕೃತಿಗೆ ಮೆಚ್ಚಿದವರಾಗಿ ಅವರು ಆಗಿಂದಾಗ್ಗೆ ಇಲ್ಲಿಗೆ ಬಂದು ಶಿವಾನುಭವದ ಶಾಸ್ತ್ರಗಳನ್ನು ತಿಳಿಯಲಿಕ್ಕೆ ಆತುರಪಡುತ್ತಿದ್ದಂತೆ ಕಂಡುಬರುತ್ತದೆ. ಇದರಿಂದ ಆಂಧ್ರ ಸಾಮ್ರಾಜ್ಯದಲ್ಲಿ ಅನೇಕ ವೀರಶೈವ ಗ್ರಂಥಗಳಾದವು. ಆಂಧ್ರರು ತಮ್ಮ ಭಾಷೆಯಲ್ಲಷ್ಟೇ ಅಲ್ಲ, ಕನ್ನಡದಲ್ಲಿಯೂ ಕೂಡ ಗ್ರಂಥಗಳನ್ನು ರಚಿಸಿದ್ದಾರೆ. ಹಾಗೆಯೇ ತೆಲುಗು ಜೊಮ್ಮಯ್ಯನು ಕನ್ನಡದಲ್ಲಿ ವಚನಗಳನ್ನು ರಚಿಸಿದ್ದಾನೆ.

ವಿಕ್ರಮಾದಿತ್ಯನ ಕಾಲದಲ್ಲಿ ಶಿವೋಪಾಸಕರಿಗೂ ವಿಷ್ಣುವಿನ ಉಪಾಸಕರಿಗೂ ಆಗಿಂದಾಗ್ಗೆ ಜಗಳಗಳೇಳುತ್ತಿದ್ದಂತೆ ತೋರುತ್ತದೆ. ಚಾಲುಕ್ಯರು ಬಹಳ ಕಾಲದ ವರೆಗೆ ವಿಷ್ಣುವಿನ ಉಪಾಸಕರಾಗಿದ್ದು ಅವರು ಶಿವೋಪಾಸಕರಾಗಿದ್ದ ಚೋಳ ರಾಜರ ಮೇಲೆ ಆಗಿಂದಾಗ್ಗೆ ದಂಡೆತ್ತಿ ಹೋಗುತ್ತಿದ್ದುದು ಇತಿಹಾಸದಿಂದ ತಿಳಿದುಬರುತ್ತದೆ. ತೆಲುಗು ಜೊಮ್ಮಯ್ಯನ ಚರಿತ್ರೆಯಲ್ಲಿ ಈ ಬಗೆಯ ಒಂದು ಕಲಹದ ವಿವರವು ಉಲ್ಲೇಖವಾಗಿದೆ. ಆದರೆ ಮುಂದೆ ಶಿವಶರಣರು ದೇವರು ಒಬ್ಬನೇ ಇದ್ದಾನೆ ಎಂದು ಸಾರುತ್ತ ಬಂದದ್ದರಿಂದ ಇಂಥ ಕಲಹಗಳು ದೂರಾಗಿರಬೇಕು. ಅವರು ಬ್ರಹ್ಮ ವಿಷ್ಣು ರುದ್ರ ಇವರು ಒಬ್ಬನೇ ದೇವರಿಂದ ಉತ್ಪನ್ನರಾದವರಿದ್ದು ಅವರಿಗೆ ಸಂಬಂಧಿಸಿದ ಕಾರ್ಯಗಳಿಗೆ ಅವರು ಅಧಿದೇವತೆಗಳಾಗಿ ಜಗತ್ತನ್ನು ಪಾಲಿಸುತ್ತಾರೆಂದು ಶಿವಶರಣರು ತಮ್ಮ ಉಕ್ತಿಗಳಲ್ಲಿ ಹೇಳಿದ್ದಾರೆ. ಇದರಿಂದ ಈ ಕಾಲದಲ್ಲಿ ತ್ರಿಮೂರ್ತಿಗಳಲ್ಲಿಯ ಭೇದ-ಭಾವಗಳು ದೂರಾಗಿರಬೇಕು. ಆದರೆ ವಚನ ಶಾಸ್ತ್ರದ ತತ್ವಗಳ ಅಭ್ಯಾಸವು ನಿಂತು ಹೋದದ್ದರಿಂದ ಪುನಃ ತ್ರಿಮೂರ್ತಿಗಳ ಬಗ್ಗೆ ಕಲಹಗಳು ಉಂಟಾಗಿ ವಿಷ್ಣು ಹೆಚ್ಚೋ, ಶಿವನು ಹೆಚ್ಚೋ ಎಂಬ ಬಗ್ಗೆ ವಾದಗಳೇಳುತ್ತಿರಬಹುದು.

ತೆಲುಗು ಜೊಮ್ಮಯ್ಯನು ಮೊದಲು ಬೇಟೆಯಾಡಿ ಜೀವಿಸುವವನಾಗಿದ್ದನು. ಆದರೂ ಅವನು ಶಿವಾನುಭವ ಶಾಸ್ತ್ರದ ನೆಲೆ-ಕಲೆಗಳನ್ನು ತಿಳಿದುಕೊಂಡು ಉಚ್ಚ ಪದವಿಗೇರಿದನು. ಶಿವಶರಣರು ಉಪಜೀವನದ ಹೋರಿಗೆ ಮಹತ್ವ ಕೊಡದೆ ಗುಣ ಕರ್ಮಕ್ಕೆ ಮಹತ್ವ ಕೊಡುವವರಾದ್ದರಿಂದ ತೆಲುಗು ಜೊಮ್ಮಯ್ಯನು ಕೀಳುವೃತ್ತಿಯನ್ನು ಮಾಡುತ್ತಿದ್ದರೂ ಮುಂದೆ ಅವನು ಆ ವೃತ್ತಿಯನ್ನು ಬಿಟ್ಟು ಶಿವಾನುಭವವನ್ನು ಹೊಂದಿ ಶ್ರೇಷ್ಠ ಶಿವಶರಣನೆಂದೆನಿಸಿಕೊಂಡನು. ಇದು ಶಿವಾನುಭವದ ವೈಶಿಷ್ಟ್ಯವಾಗಿರುತ್ತದೆ.

ತೆಲುಗು ಜೊಮ್ಮಯ್ಯನ ಚರಿತ್ರೆಯಲ್ಲಿ ರಾಜನ ಹೆಂಡತಿಯಾದ ಲಕುಮಾದೇವಿಯು ಉಲ್ಲೇಖವಿರುತ್ತದೆ. ವಿಕ್ರಮಾದಿತ್ಯನ ಶಿಲಾಶಾಸನಗಳಲ್ಲಿ ಅವನಿಗೆ ಎಂಟು ಜನ ಹೆಂಡರಿದ್ದು ಅವರಲ್ಲಿ ಲಕ್ಷ್ಮೀದೇವಿಯು ಒಬ್ಬಳಾಗಿದ್ದುದ್ದು ತಿಳಿದುಬರುತ್ತದೆ. ಈ ಹೆಂಡಿರು — ಸಾವಳದೇವಿ, ತಾರಾದೇವಿ, ಲಕ್ಷ್ಮೀದೇವಿ, ಜಕ್ಕಲದೇವಿ, ಮಲ್ಲೆಯಮದೇವಿ, ಚಂಡಲದೇವಿ, ಮಾಳಲದೇವಿ ಮತ್ತು ಓಲಜೆಗಬ್ಬೆ ಈ ಪ್ರಕಾರ ಇರುತ್ತಾರೆ. ಇವರಲ್ಲಿ ಲಕ್ಷ್ಮೀದೇವಿಯು ೧೦೮೪ ರಲ್ಲಿ ಕಲ್ಯಾಣದಲ್ಲಿ, ೧೧೯೫ ರಲ್ಲಿ ಧರ್ಮಪುರ ಅಂದರೆ ಈಗಿನ ಡಂಬಳದಲ್ಲಿ, ೧೧೧೯ ರಲ್ಲಿ ನಿಟ್ಟಸಿಂಗಿ ಎಂಬಲ್ಲಿ ಬೇರೆ ಬೇರೆ ಕಾಲಗಳಲ್ಲಿ ಅಧಿಪತಿಯಾಗಿ ರಾಜ್ಯಭಾರ ಮಾಡುತ್ತಿದ್ದಳೆಂದು ಶಿಲಾಶಾಸನಗಳಲ್ಲಿ ಉಲ್ಲೇಖಗಳಿವೆ. ಇವಳು 'ಪಿರಿಯರಸಿ' ಎಂತಲೂ ಅವುಗಳಲ್ಲಿ ಕರೆಯಲ್ಪಟ್ಟಿದ್ದಾಳೆ. ಈ ಲಕ್ಷ್ಮೀದೇವಿಯೇ ಜೊಮ್ಮಯ್ಯನ ಚರಿತ್ರೆಯಲ್ಲಿ ಉಲ್ಲೇಖವಾದ ಲಕುಮಾದೇವಿಯಾಗಿರಬಹುದು. ಆದುದರಿಂದ ಲಕುಮಾದೇವಿಯು ಕೇವಲ ಕಾಲ್ಪನಿಕ ಸ್ತ್ರೀಯಳಾಗಿರದೆ, ಒಬ್ಬ ಐತಿಹಾಸಿಕ ಸ್ತ್ರೀಯಳಾಗಿ ತೆಲುಗು ಜೊಮ್ಮಯ್ಯನಿಗೋಸ್ಕರ ಆದರ ಭಾವವನ್ನು ತಾಳಿದವಳಾಗಿದ್ದಳೆಂದೂ ಅವಳು ಲಿಂಗಧಾರಿಯಾಗಿ ವೀರಶೈವ ಮತವನ್ನು ಪುರಸ್ಕರಿಸುತ್ತಿದ್ದಳೆಂದೂ ಈಗಿನ ಚರಿತ್ರೆಯಿಂದ ತಿಳಿದುಬರುತ್ತದೆ.

ಈ ಪ್ರಕಾರ ತೆಲುಗು ಜೊಮ್ಮಯ್ಯನ ಚರಿತ್ರೆಯಲ್ಲಿ ವೀರಶೈವ ಮತಕ್ಕೆ ಸಂಬಂಧಿಸಿದ ಅನೇಕ ಮಹತ್ವದ ಐತಿಹಾಸಿಕ ವಿಷಯಗಳು ಅಡಕವಾಗಿರುತ್ತವೆ. ವಿಕ್ರಮಾದಿತ್ಯನ ಹೆಂಡಿರಲ್ಲಿ ಸಾವಳದೇವಿಯು ಮಂಗಳವಾಡದ ಜೋಗಮರಸನ ಮಗಳಾಗಿದ್ದಳು. ತಾರಾದೇವಿಯು

೧೦೭೭—೭೮ ರಲ್ಲಿ ನರೆಯಂಗಲದಲ್ಲಿಯೂ ಜಕ್ಕಲದೇವಿಯು ಕದಂಬ ರಾಜನ ಮಗಳಾಗಿ ೧೦೯೩ ರಲ್ಲಿ ಇಂಗುವಡಿಗೆ ಎಂಬಲ್ಲಿಯೂ ಮಲ್ಲೆಯಮದೇವಿಯು ೧೦೯೩ ರಲ್ಲಿ ಕಿರಿಯಕೆರೆಯೂರು ಎಂಬ ಅಗ್ರಹಾರಕ್ಕೆ ಸಂಬಂಧಿಸಿದ ಭೂಭಾಗವನ್ನೂ ಆಳುತ್ತಿದ್ದರು. ಚಂಡಲದೇವಿಯು ಕರ್ಹಾಡದ ಶಿಲಾಹಾರ ರಾಜನ ಮಗಳಾಗಿಯೂ, ಮಾಳಲದೇವಿಯು ರಾಯಣನೆಂಬ ಕರಣಿಕನ ಮಗಳಾಗಿಯೂ ಇದ್ದರು. ಓಲಜೆಗಬ್ಬೆಯೂ ಕೂಡ ೧೧೧೩ ನೇ ಇಸ್ವಿಯ ಒಂದು ಶಾಸನದಲ್ಲಿ ಉಲ್ಲೇಖಿಸಲ್ಪಟ್ಟಿದ್ದಾಳೆ. ಹೀಗೆ ಈ ರಾಣಿಯರ ಉಲ್ಲೇಖಗಳಿವೆ.

---

## ಶಂಕರದಾಸಿಮಯ್ಯ.

ಶಂಕರದಾಸಿಮಯ್ಯನು ಶಿವಶರಣರಲ್ಲಿ ಅತ್ಯಂತ ಪ್ರಸಿದ್ಧನಾಗಿ ವೀರಶೈವಮತದ ಪ್ರಸಾರಕಾರ್ಯ ಮಾಡಿದವರಲ್ಲಿ ಮುಖ್ಯನಾಗಿದ್ದಾನೆ. ಅವನು ಬಸವೇಶ್ವರನಕಿಂತಲೂ ಮೊದಲಿನವನು ಮತ್ತು ದೇವರದಾಸಿಮಯ್ಯನ ಸಮಕಾಲೀನನು. ಅವನು ವಚನಗಳನ್ನೂ ರಚಿಸಿದ್ದಾನೆ. ಆದರೆ ಅವು ನಮಗೆ ಉಪಲಬ್ಧವಾಗಿಲ್ಲ. ಹೆಚ್ಚಿಗೆ ಸಂಶೋಧಿಸಿದಲ್ಲಿ ಅವು ನಮಗೆ ದೊರೆಯಬಹುದು. ಅವನ ವಚನಗಳ ಮುದ್ರಿಕೆಯು 'ನಿಜಗುರು ಶಂಕರದೇವಾ' ಎಂದಿರುತ್ತದೆ. ಅವನ ಹೆಸರು ಗಣಸಹಸ್ರದಲ್ಲಿ ಬಂದಿರುತ್ತದೆ. ಶಿವಶರಣರ ಮಾಲಿಕೆಯಲ್ಲಿ ಅವನ ಹೆಸರು ಯಾವಾಗಲೂ ಬರುವದುಂಟು. ಪುರಾತನ ವೀರಶೈವ ಕವಿಯಾದ ಹರಿಹರನು ಅವನ ವಿಷಯವಾಗಿ ಒಂದು ಭಾವಪೂರ್ಣವಾದ ರಗಳೆಯನ್ನು ಬರೆದಿದ್ದಾನೆ.

ವಿಜಾಪುರ ಜಿಲ್ಲೆಯಲ್ಲಿ ಹುನಗುಂದ ತಾಲೂಕವಿದ್ದು ಇದರ ಆಗ್ನೇಯ ಮೂಲೆಯಲ್ಲಿ ಇಳಕಲ್ಲ ಗ್ರಾಮದಿಂದ ೫-೬ ಮೈಲುಗಳ ಮೇಲೆ ಕಂದಗಲ್ಲು ಎಂಬ ಹೆಸರಿನ ಒಂದು ಗ್ರಾಮವಿದೆ. ಇದರ ಪುರಾತನ ಹೆಸರು ಸ್ಕಂಧಶಿಲೆ ಅಥವಾ ಕಂದಶಿಲೆ ಎಂಬುದಾಗಿತ್ತು. ಈ ಗ್ರಾಮದಲ್ಲಿ ಗೋವಿಂದಭಟ್ಟನೆಂಬ ಬ್ರಾಹ್ಮಣನೂ ಅವನ ಹೆಂಡಿತಿ ಉಮ್ಮವ್ವೆ ಎಂಬವಳೂ ವಾಸ ಮಾಡುತ್ತಿದ್ದರು. ಕೆಲವು ಗ್ರಂಥಗಳಲ್ಲಿ ಉಮ್ಮವ್ವೆಗೆ ದುಮ್ಮವ್ವೆ ಎಂತಲೂ ಹೆಸರಿದೆ.

ಹೀಗಿರಲು ಇವರ ಮನಸ್ಸಿನಲ್ಲಿ ಕಾಶೀ ವಿಶ್ವೇಶ್ವರನ ದರ್ಶನವನ್ನು ಹೊಂದಬೇಕೆಂಬ ಅಪೇಕ್ಷೆಯು ಉಂಟಾಗಿ ಅದು ಬಹು ದೂರದ ಹಾದಿಯಾದುದರಿಂದ ಅವರು ತಮ್ಮಲ್ಲಿದ್ದ ಅಲ್ಪ ಸ್ವಲ್ಪ ದ್ರವ್ಯವನ್ನು ಅನಾಥರಿಗೆ ದಾನ ಮಾಡಿ ಒಂದು ದಿನ ಮುಂಜಾವಿನಲ್ಲಿ ಕಾಲ್ನಡಿಗೆಯಿಂದ ಕಾಶಿಗೆ ಹೊರಟರು. ಅವರು ಸಂಜೆಯಾಗುವಷ್ಟರಲ್ಲಿ ತಮ್ಮ ಗ್ರಾಮದಿಂದ ಉತ್ತರಕ್ಕೆ ೧೨ ಮೈಲು ದೂರವಿರುವ ನಪಿಲಿ ಎಂಬ ಗ್ರಾಮಕ್ಕೆ ಬಂದರು.

ಈ ಗ್ರಾಮವು ಕೃಷ್ಣಾ ನದಿಯ ದಂಡೆಯ ಮೇಲೆ ಇದೆ. ಅಲ್ಲಿ ನದಿಯು ಬಹು ವಿಶಾಲವಾಗಿ ಹರಿಯುತ್ತ ನೋಡಲಿಕ್ಕೆ ಅತ್ಯಂತ ಆಲ್ಹಾದಕರವಾಗಿರುತ್ತದೆ. ಅದರ ದಂಡೆಯ ಮೇಲೆಯೇ ಜಡೆಯ ಶಂಕರನೆಂಬ ಹೆಸರಿನ ಒಂದು ಪುರಾತನ ದೇವಾಲಯವಿದ್ದು ಅವರು ಆ ಸ್ಥಳಕ್ಕೆ ಹೋದ ಕಾಲದಲ್ಲಿ ಅಲ್ಲಿ ಪೂಜಾರ್ಚನಾದಿಗಳು ಬಹು ಸಂಭ್ರಮದಿಂದ ನಡೆದಿದ್ದವು. ಅದನ್ನು ನೋಡಿ ಉಭಯ ದಂಪತಿಗಳು ಕೃಷ್ಣೆಯಲ್ಲಿ ಸ್ನಾನ ಮಾಡಿ ರಂಗಮಂಟಪದಲ್ಲಿ ಬಂದು ಕುಳಿರಲು ಅಲ್ಲಿ ನೆರೆದ ಶಿವಭಕ್ತರ ಸಂದಣಿಯೂ, ಗುಗ್ಗುಳ ಚಂದನದ ಪರಿಮಳದ ಸುವಾಸನೆಯೂ, ಥಳಥಳಿಸಿ ಬೆಳಗುವ ಆರತಿಗಳೂ, ಗೀತವಾದ್ಯಗಳೂ ಇವುಗಳನ್ನು ನೋಡಿ ಗೋವಿಂದಭಟ್ಟನ ಮನಸಿನಲ್ಲಿ ಭಕ್ತಿಯ ಭರವು ತುಂಬಿ ಬಂದಿತು. ಅಲ್ಲಿ ಕೆಲವು ವೇಳೆ ಕುಳ್ಳಿರುವಷ್ಟರಲ್ಲಿ ಅವನು ಮನದಲ್ಲಿ—ಇನ್ನೇಕೆ ವಾರಣಾಸಿಯು? ನಾನಿಲ್ಲೇ ಇರುವೆನು. ನಾನಿಲ್ಲೇ ಪರಮಾತ್ಮನನ್ನು ಭಜಿಸುತ್ತ ಅವನ ಸೇವೆಯಲ್ಲಿರುವೆನು, ಎಂಬ ವಿಚಾರವು ಬಂದು ಭಕ್ತಿ ಸುಖದಲ್ಲಿ ಕಣ್ಮುಚ್ಚಿ ಪರಮಾತ್ಮನನ್ನು ನೆನೆಯುತ್ತ—ನನಗೆ ಈ ದಿವ್ಯ ಕ್ಷೇತ್ರವೇ ವಾರಣಾಸಿಯು, ಇಲ್ಲಿ ಹರಿಯುವ ನದಿಯೇ ನನಗೆ ಗಂಗಾ ನದಿಯು, ಎಂದು ನುಡಿಯುತ್ತ ಶಿವನಲ್ಲಿ ಭಕ್ತಿಯನ್ನು ತಾಳಿ—ನಾನು ಇನ್ನು ಮೇಲೆ ದಿನಾಲು ನಮ್ಮೂರಿಂದ ಇಲ್ಲಿಗೆ ಬಂದು ಶಂಕರಲಿಂಗನನ್ನು ಭಜಿಸುವೆನೆಂದು ನಿಶ್ಚಯಿಸಿದನು. ಆಗ ಕಾಶಿಗೆ ಹೋಗುವದನ್ನು ಅವನು ಬಿಟ್ಟುಕೊಟ್ಟು ತನ್ನ ಹೆಂಡತಿಯೊಡನೆ ಮರಳಿ ತನ್ನ ಗ್ರಾಮವಾದ ಕಂದಗಲ್ಲಿಗೆ ಬಂದನು.

ಪೂಜಾರ್ಚನಾದಿಗಳನ್ನು ನೋಡುತ್ತ ಕುಳಿತಲ್ಲಿ ನೋಡುವವರಲ್ಲಿ ಭಕ್ತಿಭಾವವು ತುಂಬಿಬರುತ್ತದೆಂಬುದು ಸಟೆಯಲ್ಲ. ಆದರಿಂದ ಮನಸ್ಸು ಪರಿಶುದ್ಧವಾಗಿ ದುರ್ಗುಣಗಳ ಕಡೆಗೆ ಅದು ಹರಿದುಹೋಗುವದು ನಿಲ್ಲು ತ್ತದೆ. ಉರಿಲಿಂಗಪೆದ್ದಿ ಎಂಬ ಶಿವಶರಣನು ಮೊದಲು ಕಳ್ಳತನದಿಂದ ಜೀವಿಸುವವನಾಗಿದ್ದು ಅವನು ಅಕಸ್ಮಾತ್ತಾಗಿ ಉರಿಲಿಂಗದೇವನ ಲಿಂಗ ಪೂಜಾದಿಕಾರ್ಯಗಳನ್ನು ನೋಡಲಾಗಿ ಅವನಲ್ಲಿ ಭಕ್ತಿಭಾವವು ಉಂಟಾಗಿ ತನ್ನ ಮೊದಲಿನ ದುರ್ವ್ಯಾಪಾರಗಳನ್ನು ಬಿಟ್ಟುಕೊಟ್ಟು ಅವನನ್ನು ತನ್ನ ಗುರುವನ್ನಾಗಿ ಮಾಡಿಕೊಂಡು ಮುಂದೆ ಘನವಿದ್ವಾಂಸನಾದನು. ಅನೇ ಕರು ದೂರದೇಶಗಳಲ್ಲಿರುವ ದಿವ್ಯಕ್ಷೇತ್ರಗಳ ವರ್ಣನೆಗಳನ್ನು ಕೇಳಿ ಅಲ್ಲಿಗೆ ಕಷ್ಟಪಟ್ಟು ಹೋಗುವದುಂಟು. ಆದರೆ ತಮ್ಮ ನಾಡಿನಲ್ಲಿಯೇ ಸೃಷ್ಟಿ ಸೌಂದರ್ಯದಿಂದ ಕೂಡಿದ ಬಹು ಸುಂದರವಾದ ಪ್ರದೇಶಗಳಲ್ಲಿ ಪವಿತ್ರ ತರವಾದ ಅನೇಕ ದೇವಾಲಯಗಳಿದ್ದು ಅವುಗಳನ್ನು ಸಂದರ್ಶಿಸಿ ಆನಂದ ಪಡಬಹುದಾಗಿದೆ.

ಗೋವಿಂದಭಟ್ಟನು ತನ್ನ ಗ್ರಾಮಕ್ಕೆ ತಿರುಗಿಬಂದ ಬಳಿಕ ದಿನಾಲು ನವಿಲೆಗೆ ೧೨ ಮೈಲು ನಡೆದುಹೋಗಿ ಅಲ್ಲಿ ತನ್ನ ಪೂಜಾದಿ ಕಾರ್ಯ ಗಳನ್ನು ತೀರಿಸಿಕೊಂಡು ತಿರುಗಿ ತನ್ನ ಗ್ರಾಮಕ್ಕೆ ಬರುವನು. ಅವನು ಹೋಗುವಲ್ಲಿ ಮಳೆ ಗಾಳಿ ಶೀತ ಉಷ್ಣ ಎನ್ನದೆ ದೇವರನ್ನು ಓಲೈಸಿ ಬರುವನು. ಪರಮಾತ್ಮನು ಅವನು ಶ್ರಮಪಡುವದನ್ನು ನೋಡಿ, ಒಂದು ದಿವಸ ಅವನ ಸ್ವಪ್ನದಲ್ಲಿ ಬಂದು ಅವನಿಗೆ—ನೀನು ಹೀಗೆ ದಾರಿ ನಡೆಯುತ್ತ ಬಳಲಬೇಡ, ನೀನು ನವಿಲೆಗೆ ಬಂದು ಅಲ್ಲಿಯೇ ಇರು, ನಿನಗೆ ಉಪದೇಶವನ್ನು ಮಾಡುವೆನೆಂದು ಹೇಳಲು, ಗೋವಿಂದಭಟ್ಟನು ಆನಂದಬಟ್ಟು ತನ್ನ ಹೆಂಡತಿಯೊಡನೆ ಅಲ್ಲಿಗೆ ಬಂದು ವಾಸಮಾಡ ಹತ್ತಿದನು. ಅಲ್ಲಿದ್ದು ಆವನು ದಿನಾಲು ಜಡೆಯಶಂಕರನ ದೇವಾಲಯಕ್ಕೆ ಬಂದು ದೇವರನ್ನು ಅರ್ಚಿಸುತ್ತ ಅಚ್ಚ ಶಿವಸುಖದಲ್ಲಿರಹತ್ತಿದನು.

ಹೀಗೆ ಶಂಕರದಾಸಿಮಯ್ಯನು ಅಲ್ಲಿ ಶಿವನ ಸೇವೆ ಮಾಡುತ್ತ ಇರುವಲ್ಲಿ ಒಂದು ದಿನ ಪರಮಾತ್ಮನು ಅವನ ಕನಸಿನಲ್ಲಿ ಬಂದು, ಗೋವಿಂದಭಟ್ಟನೇ—ನಾನು ನಿನಗೆ ಪ್ರೀತನಾದೆನು. ನಾಳೆ ನಿನಗೆ ಉಪ ದೇಶವನ್ನು ಮಾಡುವೆನೆಂದು ನುಡಿಯಲು, ಗೋವಿಂದಭಟ್ಟನು ಆನಂದ ಭರಿತನಾಗಿ ಮರುದಿನ ಉದಯದಲೆದ್ದು ನಿರ್ಮಲ ಸ್ನಾನ ಮಾಡಿ

ಧವಳ ವಸ್ತ್ರವನುಟ್ಟು ಕಡುನಿಷ್ಠೆಯಿಂದ ತನ್ನ ಹೆಂಡತಿಯೊಡನೆ ಜಡೆಯು ಶಂಕರನಿದಿರಿಗೆ ಬಂದುನಿಂತನು. ಆಗ ಶಂಕರನು ಜಂಗಮವೇಷದಿಂದ ಅವನಿಗೆ ವೈದೋರಿ ಅವನಿಗೆ ಇಷ್ಟಲಿಂಗೋಪದೇಶ ಮಾಡಿ ಲಿಂಗದ ನೆಲೆಕಲೆಗಳನ್ನು ತಿಳಿಸಿದನು. ಆಮೇಲೆ ಗೋವಿಂದಭಟ್ಟನು ತನ್ನ ಹೆಂಡತಿಗೂ ದೀ ್ಷಯನ್ನಿತ್ತನು. ಹೀಗೆ ದೀಕ್ಷೆಯನ್ನು ಹೊಂದಿದ ಬಳಿಕ ಅವರು ತಮಗಿರುವ ನಾಮಗಳು ಬೇಡ, ಬೇರೆ ನಾಮಗಳನ್ನು ಕೊಡಬೇಕೆಂದು ಪರಮಾತ್ಮನಿಗೆ ಹೇಳಲಾಗಿ, ಅವನು ಗೋವಿಂದಭಟ್ಟನಿಗೆ 'ಶಂಕರ ದಾಸಿಮಯ್ಯ'ನೆಂತಲೂ ಅವನ ಹೆಂಡತಿಗೆ 'ಶಿವದಾಸಿ' ಎಂತಲೂ ಹೆಸರನ್ನಿತ್ತು, ಇನ್ನುಮೇಲೆ ನೀವು ಹೊಲಿಗೆಯ ಕಾಯಕವನ್ನು ಮಾಡಿಕೊಂಡಿರಬೇಕೆಂದು ಬೋಧಿಸಿ ಶಿವಲಿಂಗದಲ್ಲಿ ಅಂತರ್ಧಾನನಾದನು.

ಶಂಕರದಾಸಿಮಯ್ಯನು ಹೀಗೆ ದೀಕ್ಷೆಯನ್ನು ಹೊಂದಿದ ಬಳಿಕ ನವಿಲೆಯಲ್ಲಿಯೇ ಹೊಲಿಗೆಯ ಕಾಯಕವನ್ನು ಮಾಡುತ್ತ ಹಚ್ಚಡ ಕೌದಿಗಳನ್ನು ಹೊಲಿಯುತ್ತ ಗುರುಲಿಂಗ ಜಂಗಮ ದಾಸೋಹ ಕಾರ್ಯಗಳಲ್ಲಿ ನಿರತನಾದನು. ನವಿಲೆಯು ಇದ್ದ ಈ ಪ್ರದೇಶದಲ್ಲಿ ಈ ಕಾಲದಲ್ಲಿ ಅನೇಕ ಧಾರ್ಮಿಕ ಚಟುವಟಿಕೆಗಳು ನಡೆದಿದ್ದವೆಂದು ತೋರುತ್ತಿದೆ. ಐಹೊಳೆ ಪಟ್ಟದಕಲ್ಲುಗಳಿದ್ದ ಭೂಪ್ರದೇಶದಲ್ಲಿ ಅನೇಕ ಬಗೆಯ ಶೈವ ವೈಷ್ಣವ ಸಾಂಪ್ರದಾಯಿಕರೂ ಸಿದ್ಧರೂ ವಾಸವಾಗಿದ್ದರು. ಇದು ನವಿಲೆಯಿಂದ ೪೦—೫೦ ಮೈಲುಗಳ ಮೇಲಿದೆ. ಅತ್ಯಂತ ಪ್ರಸಿದ್ಧಿಯನ್ನು ಹೊಂದಿದ ಸಂಗಮಕ್ಷೇತ್ರವು ಇಲ್ಲಿಂದ ೧೨ ಮೈಲು ಮಾತ್ರ ದೂರವಿರುತ್ತದೆ. ಇಲ್ಲಿಗೆ ಅನೇಕ ಶಿವಸಾಂಪ್ರದಾಯಿಕರು ಆಗಿಂದಾಗ್ಗೆ ಬರುವರು. ಅಲ್ಲದೆ ಶಿವಶರಣನಾದ ದೇವರದಾಸಿಮಯ್ಯನು ಚಾಲುಕ್ಯ ರಾಜನಾದ ಜಯಸಿಂಹನ ರಾಜಧಾನಿಯಾದ ಪೊಟ್ಟಲಕೆರೆಯಲ್ಲಿ ತನ್ನ ಪೊವಾಡಗಳನ್ನು ನಡಿಸಿ ಮರಳಿ ಮುದನೂರಿಗೆ ಬಂದು ಶಿವಾನುಭವ ಕಾರ್ಯನಿರತನಾಗಿ ತಮ ನಿಧಿಯನ್ನು ಪಡೆದವನಾಗಿ ಪ್ರಸಿದ್ಧನಾಗಿದ್ದನು. ಈ ಮುದುನೂರು ನವಿಲೆಯಿಂದ ೪೦ ಮೈಲುಗಳ ಮೇಲೆ ಇದೆ. ಶಂಕರದಾಸಿಮಯ್ಯನು ಈ ಎಲ್ಲ ಭಾಗಗಳ ಮಧ್ಯಸ್ಥಾನದಲ್ಲಿದ್ದುಕೊಂಡು ಲಿಂಗಾನುಸಂಧಾನಲ್ಲಿರುವಾಗ ಬಹುಜನ ಶಿವಯೋಗಿಗಳು ಅವನನ್ನು ಕಾಣುತ್ತಿರಬಹುದು. ಮತ್ತು ಅವರೊಡನೆ ಅವನು ಶಿವಾನುಭವಗೋಷ್ಠಿಗಳನ್ನು ನಡಿಸುತ್ತಿರಬಹುದು. ಇದರಿಂದ ಅವನ ಖ್ಯಾತಿಯು ನಾಡಿನಲ್ಲಿ ಹೆಚ್ಚುತ್ತಹೋಗಲು

ಇತರ ಸಾಂಪ್ರದಾಯಿಗಳೂ ಕೂಡ ಅವನಲ್ಲಿಗೆ ಬಂದು ಅನೇಕ ಬಗೆಯ ವಾದಗಳನ್ನು ನಡಿಸುತ್ತಿದ್ದ ಹಾಗೆ ತೋರುತ್ತದೆ. ಹೀಗೆ ಶಂಕರದಾಸಿ ಮಯ್ಯನು ಅಲ್ಲಿ ಕೆಲವು ಕಾಲ ಕಳೆದನು.

ಹೀಗಿರಲು ಒಂದು ದಿವಸ ಅವನು ಶಿವಯೋಗ ನಿದ್ರೆಯಲ್ಲಿರು ವಾಗ ಶಂಕರನು ಅವನನ್ನು ಸ್ವಪ್ನದಲ್ಲಿ ಕಂಡು— ನಾಳೆ ನಿನಗೆ ಒಂದು ವರವನ್ನು ಕೊಡವೆನೆಂದು ಹೇಳಿದನು. ಅದಕ್ಕೆ ಶಂಕರದಾಸಿಮಯ್ಯನು ಆನಂದಪಟ್ಟು ವರಕೊಡುವದಾದರೆ ಕ್ಷುದ್ರದೇವತೆಗಳನ್ನು ಭಜಿಸುವ ಪರಸಮಯಿಗಳು ಬಹಳ ಹೆಚ್ಚಿದ್ದಾರೆ, ಅವರನ್ನು ಧೂಳಿಪಟಮಾಡುವ ಸಾಮರ್ಥ್ಯವನ್ನು ದಯಪಾಲಿಸಬೇಕೆಂದು ಬೇಡಿಕೊಂಡನು.

ಮರುದಿನ ಶಂಕರದಾಸಿಮಯ್ಯನು ದೇವಾಲಯದಲ್ಲಿ ಶಂಕರನನ್ನು ಜಪಿಸುತ್ತ ಸಮಾಧಿಸ್ಥನಾಗಿ ಕುಳಿತಿರಲು ಲಿಂಗಮಧ್ಯದಲ್ಲಿ ಶಿವನು ಪ್ರತ್ಯಕ್ಷ ನಾಗಿ ಹೊರಗೆ ಬಂದು ತನ್ನ ಹಣೆಯನ್ನು ಅವನ ಹಣೆಗೆ ಹಚ್ಚಿ ಉಜ್ಜಲು ಅಲ್ಲಿ ಅಗ್ನಿಯನ್ನು ಹೊರಚೆಲ್ಲುವ ಒಂದು ಹೊಸ ನೇತ್ರವು ಉದಯ ವಾಯಿತು. ಆಗ ಶಂಕರನು ಅವನಿಗೆ ಬೋಧಿಸಿದ್ದೇನಂದರೆ— ನೀನು ಈ ನೇತ್ರವನ್ನು ನಿಷ್ಕಾರಣವಾಗಿ ಯಾರ ಮೇಲೂ ಉಪಯೋಗಿಸಬೇಡ. ನಿನಗೆ ಎದುರು ವಾದಿಸುವವರು ವಿರೋಧಿಸಿದಲ್ಲಿ ಮಾತ್ರ ಇದರ ಮೇಲಿನ ಆಚ್ಛಾದನವನ್ನು ತೆಗೆದು ಅದರ ಉಪಯೋಗವನ್ನು ಮಾಡು ಎಂದು ಹೇಳಿದನು. ಶಂಕರದಾಸಿಮಯ್ಯನು ಹಾಗೆಯೇ ಆಗಲಿ ಎಂದು ಒಪ್ಪಿ— ನೀನು ನನ್ನ ಸೇವೆ ಸಹಾಯಕ್ಕೋಸ್ಕರ ಒಬ್ಬ ಗಣಾಧೀಶ್ವರನನ್ನು ದಯಪಾ ಲಿಸಬೇಕೆಂದು ಬೇಡಿಕೊಳ್ಳಲು ಜಡೆಯ ಶಂಕರನು ವಕ್ತ್ರಪಾದ ಗಣೇಶ್ವರ ನೆಂಬುವನನ್ನು ನಿಯಮಿಸಿ ಲಿಂಗದಲ್ಲಿ ಅಡಗಿದನು.

ಹಣೆಗಣ್ಣು ಎಂಬುದು ಜ್ಞಾನನೇತ್ರವೆಂದೆನಿಸಿಕೊಳ್ಳುತ್ತದೆ. ಮಿಗಿ ಲಾದ ಬುದ್ಧಿ ಸಾಮರ್ಥ್ಯವುಳ್ಳವನಲ್ಲಿ ಮಾತ್ರ ಅದು ತೋರುತ್ತದೆಯೇ ಹೊರ್ತು ಇತರರಲ್ಲಿ ಅದು ತೋರಲಾರದು. ಈ ಪ್ರಕಾರ ಶಂಕರ ದಾಸಿಮಯ್ಯನು ಶಿವಜ್ಞಾನವನ್ನು ಹೊಂದಿ ಅಲೌಕಿಕ ಸಾಮರ್ಥ್ಯವನ್ನು ಪಡೆದವನಾದ್ದರಿಂದ ಇತರ ಹೀನ ದೇವತೆಗಳು ಅವನ ಸಲುವಾಗಿ ಭೀತಿಯನ್ನು ತಾಳಿ ಅವನನ್ನು ಓಲೈಸಹತ್ತಿದವು. ಮಸಣಮ್ಮನು ಅವನ ಮನೆಯಲ್ಲಿ ಕಸವನ್ನಡುಗುವಳು. ಕಾಳರಾತ್ರಿಯು ಅವನ

ಮಂಠದ ಸುತ್ತಲೂ ಅವನನ್ನು ಕಾಯುವಳು. ಭೈರವನು ಸೌದೆಯನ್ನು ಹೊತ್ತುತರುವನು ಬ್ರಾಹ್ಮಿಯು ಅವನ ತಾಂಬೂಲ ಪೆಟ್ಟಿಗೆಯನ್ನೂ ಬ್ರಹ್ಮರಾಕ್ಷಸನು ವಿಭೂತಿ ಕರಡಿಗೆಯನ್ನೂ ಹೊತ್ತು ಸೇವೆ ಮಾಡು ವರು. ಈಪ್ರಕಾರ ಶಂಕರದಾಸಿಮಯ್ಯನು ನವಿಲೆಯಲ್ಲಿ ವಾಸಮಾಡುತ್ತ ಎಲ್ಲ ಕಡೆಗೂ ಪ್ರಸಿದ್ಧನಾದನು. ಅವನ ಶಿಷ್ಯನಾದ ವಕ್ರಪಾದ ಗಣೇ ಶ್ವರನು ಶಿವಶ್ಲಾನಿಯಾಗಿ ಸದಾಕಾಲ ಅವನನ್ನು ಓಲೈಸುವನು. ಪರವಾದಿಗಳ ಕೂಡ ವಾದವಿವಾದಗಳು ನಡೆದಾಗ, ಅವನು ಸಹ ಅವ ರೊಡನೆ ವಾದಿಸಿ ಅವರನ್ನು ಸೋಲಿಸುವಷ್ಟು ಬುದ್ಧಿ ಸಾಮರ್ಥ್ಯವನ್ನು ಹೊಂದಿದವನಾಗಿದ್ದನು. ತನ್ನ ಗುರುವು ಹಚ್ಚಡಗಳನ್ನೂ ಕೌದಿಗಳನ್ನೂ ಹೊಲಿಯುತ್ತ ಕಾಯಕವನ್ನು ಮಾಡುತ್ತಿರುವಾಗ ಅವನು ಭಕ್ತರಲ್ಲಿ ಹೋಗಿ ಅವರು ಕೊಟ್ಟುದನ್ನು ತಂದು ಗುರುಲಿಂಗಜಂಗಮ ದಾಸೋ ಹದಲ್ಲಿ ತತ್ಪರನಾಗಿರುವನು. ಹೀಗೆ ಗುರುಶಿಷ್ಯರೀರ್ವರು ನವಿಲೆಯಲ್ಲಿ ಕೆಲವು ಕಾಲ ಕಳೆದರು.

ಹೀಗಿರಲು ಒಂದು ದಿವಸ ವಕ್ರಪಾದನು ಎಂದಿನಂತೆ ಒಬ್ಬ ಭಕ್ತನ ಮನೆಗೆ ಕೋರಾನ್ನಕ್ಕೆ ಹೋಗಿರಲು ಆ ಭಕ್ತನು—ನನ್ನಲ್ಲಿ ಜೋಳ ವಿಲ್ಲ ಎಂದು ಅನ್ನುವದರ ಬದಲು, ಶಂಕರ ಗಂಡ ಘನವಾಗಿದೆ ಎಂದರೆ ಜೋಳ ನನ್ನಲ್ಲಿಲ್ಲ ಎಂಬ ಭಾವದಿಂದ ನುಡಿಯಲು, ವಕ್ರಪಾದನು ಹಾಗೆಯೇ ಶಂಕರದಾಸಿಮಯ್ಯನ ಕಡೆಗೆ ಹೋಗಿ ಹಾಗೆ ಅವನು ಅಂದದ್ದನ್ನು ತಿಳಿಸಿದನು. ಅದಕ್ಕೆ ಶಂಕರದಾಸಿಮಯ್ಯನು— ಜೋಳಕ್ಕೆ ಶಂಕರ ಗಂಡ ನೆಂಬ ಹೆಸರಿದ್ದುದು ನನಗೆ ಈವರೆಗೂ ಗೊತ್ತಿರಲಿಲ್ಲ. ಆದರೆ ಶಂಕರನ ಹೆಸರಿದ್ದ ಈ ಧಾನ್ಯವನ್ನು ನಾನು ಇನ್ನುಮುಂದೆ ಮುಟ್ಟಲಾರೆನು ಎಂದು ನಿಶ್ಚಯಿಸಿ ಅಂದಿನಿಂದ ಅವನು ಅದನ್ನು ಬಿಟ್ಟುಕೊಟ್ಟು ಗುಲುಗುಂಜಿ ಗಳ ಸಾರವನ್ನು ತೆಗೆದು ಅದರಲ್ಲಿ ಲೋಳಿಸರದ ಪಳಕುಗಳನ್ನು ಹಾಕಿ ಸುಣ್ಣವನ್ನು ಕಲಿಸಿ ಲಿಂಗಕ್ಕೆ ಸಮರ್ಪಿಸಿ ಅದೇ ಪ್ರಸಾದವೆಂದು ಭುಂಜಿಸ ತೊಡಗಿದನು. ಅಂದರೆ ಅವನು ಬಾಹ್ಯ ಸುಖಭೋಗಗಳನ್ನು ತೊರೆದು ಕೇವಲ ಬಡವನಂತೆ ಇರಲಿಕ್ಕೆ ಹತ್ತಿದನು. ಶಿವಶರಣರಿಗೆ ಬಾಹ್ಯ ಸುಖೋ ಪಭೋಗಗಳು ರುಚಿಸಲಾರವು. ಅವರಿಗೆ ಪ್ರಸಾದ ಸೇವನೆಯೇ ಅತ್ಯ ಧಿಕವಾದದ್ದು. ಅದು ಯಾವುದಿದ್ದರೂ ಅದನ್ನು ಅವರು ಸೇವಿಸುವರು.

ಹೀಗೆ ಸೇವಿಸಿದ್ದೇ ಅವರ ಮನಸ್ಸಿಗೂ ಶರೀರಕ್ಕೂ ಹಿತಕರವಾಗಿ ಪರಿ
ಣಮಿಸುತ್ತದೆ.

ಹೀಗೆ ಶಂಕರದಾಸಿಮಯ್ಯನು ತನ್ನ ಶಿವಾನುಭವದಲ್ಲಿ ನಿರತನಾಗಿ
ಅದನ್ನು ತನ್ನ ನಡೆನುಡಿಗಳಲ್ಲಿಟ್ಟುಕೊಂಡು ಆಚರಿಸುತ್ತ ಕೆಲವುಕಾಲ
ನವಿಲೆಯಲ್ಲಿರುವಾಗ ಅವನು ತನ್ನ ವಚನಗಳನ್ನು ರಚಿಸಿರಬಹುದೆಂದು
ತೋರುತ್ತದೆ. ಆದರೆ ಶಿವಶರಣರು ಕೇವಲ ಆತ್ಮೋನ್ನತಿಯನ್ನು ಅಪೇ
ಕ್ಷಿಸುತ್ತ ಏಕಾಂತದಲ್ಲಿರುವವರಲ್ಲ. ಪರರ ಉನ್ನತಿಯನ್ನು ಮಾಡುವ
ದನ್ನು ಅವರು ಯಾವಾಗಲೂ ಬಗೆಯುತ್ತಾರೆ. ಆದುದರಿಂದ ಶಂಕರದಾಸಿ
ಮಯ್ಯನು ಧರ್ಮೋದ್ಧಾರ ಕಾರ್ಯಗಳನ್ನು ಜಗತ್ತಿನಲ್ಲಿ ನಿರ್ವಹಿಸ
ಬೇಕೆಂದು ಅಪೇಕ್ಷೆಯುಳ್ಳವನಾಗಿ ಅನೇಕ ದೇಶಗಳಲ್ಲಿ ಸಂಚರಿಸಲು
ಉದ್ಯುಕ್ತನಾದನು. ಆದ್ದರಿಂದ ಅವನು ತನ್ನ ಹೆಂಡತಿಯಾದ ಶಿವ
ದಾಸಿಯನ್ನೂ ತನ್ನ ಶಿಷ್ಯನಾದ ವಕ್ತ್ರಪಾದ ಗಣೇಶ್ವರನನ್ನೂ ಕೆಲವು
ಭಕ್ತರನ್ನೂ ಕೂಡಿಕೊಂಡು ಈ ಕಾಲದಲ್ಲಿ ಅತ್ಯಂತ ಪ್ರಸಿದ್ಧಿಗೆ ಬಂದ
ಶಿವಶರಣ ದೇವರದಾಸಿಮಯ್ಯನನ್ನು ಕಾಣಬೇಕೆಂದು ಅವನಿದ್ದ ಗ್ರಾಮ
ವಾದ ಮುದುನೂರಿಗೆ ಬಂದನು.

ಅವನು ಮುದನೂರನ್ನು ಪ್ರವೇಶಿಸುವಾಗ ದೂರದೂರದ ದೇಶದ
ಜನರು ದೇವದಾಸಿಮಯ್ಯನಲ್ಲಿಗೆ ಬಂದು ಗ್ರಾಮದಲ್ಲಿ ಕಿಕ್ಕಿರಿದಿದ್ದರು.
ದಾಸಿಮಯ್ಯನು ತವನಿಧಿಯನ್ನು ಪಡೆದವನಾದದ್ದರಿಂದ ಅವರು ವೈಭವ
ದೊಡನೆ ಅವನ ಗ್ರಾಮದಲ್ಲಿದ್ದುಕೊಂಡು ಶಿವಾನುಭವ ಸದ್ಗೋಷ್ಠಿಯಲ್ಲಿ
ರುವದನ್ನು ಕಂಡನು. ಶಂಕರದಾಸಿಮಯ್ಯನು ಅದನ್ನು ಕಂಡು ಅತ್ಯಾ
ನಂದಭರಿತನಾಗಿ ಅವರನ್ನು ನೋಡುತ್ತ ರಾಮನಾಥಾಲಯದಲ್ಲಿ ಬಂದಿ
ಳಿದನು. ದೇವರದಾಸಿಮಯ್ಯನು ಅವನು ಬಂದದ್ದನ್ನು ತಿಳಿದು ಅವ
ನನ್ನು ಕಂಡು ಸತ್ಕರಿಸಿ ಅವನೊಡನೆ ಕೆಲವು ಕಾಲ ಶಿವಕಥಾಗೋಷ್ಠಿ
ಯಲ್ಲಿ ಕಳೆದನು. ಆಗ ಶಿವದಾಸಿಯು ವಕ್ತ್ರಪಾದನಿಗೆ—ನೀನು ಧಾನ್ಯದ
ಭಿಕ್ಷೆಗೋಸ್ಕರ ಪಟ್ಟಣದಲ್ಲಿ ಹೋಗು, ನಮ್ಮ ಭಕ್ತರೆಲ್ಲರೂ ಆಯಾಸ
ದಿಂದ ಬಳಲಿದ್ದಾರೆ ಎಂದು ಹೇಳಿದಳು. ಅದನ್ನು ದೇವರದಾಸಿಮಯ್ಯನು
ಕೇಳಿ—ನೀವು ನಮ್ಮ ಊರಲ್ಲಿರುವ ವರೆಗೆ ಧಾನ್ಯವನ್ನು ಬೇಡಿತರುವ
ಪ್ರಯಾಸವನ್ನು ಮಾಡಬೇಡಿರಿ. ನಾನು ಬಂಡಿಯಲ್ಲಿ ನಿಮಗೆ ಬೇಕಾ

ದಷ್ಟು ನೆಲ್ಲನ್ನು ಹೇರಿಸಿ ಕಳಿಸುವೆನು ಎಂದು ಬಿಂಕದಿಂದ ನುಡಿದನು. ಶಂಕರದಾಸಿಮಯ್ಯನು ಅದನ್ನು ಕೇಳಿ ಅವನಲ್ಲಿ ಅಹಂಕಾರವು ಅಂಕುರಿಸಿದೆಂಬುದನ್ನು ಕೂಡಲೆ ತಿಳಿದವನಾಗಿ ನಸುಗೋಪದಿಂದ ಅಂದದ್ದೇನೆಂದರೆ— ಅಹುದು, ನಾವು ಬಡವರು. ನಮಗೆ ನೆಲ್ಲೆಲ್ಲಿಂದ ಬರಬೇಕು? ಶಿವನು ಭಿಕ್ಷಾಪಾತ್ರೆಯನ್ನು ಹಿಡಿದು ತಿರಿದಾಡುವವನು. ಅಂಥವನ ಭಕ್ತರಾದ ನಮಗೆ ಸಿರಿ ಎಂಬುದೆಲ್ಲಿ? ಎಲೆ ದಾಸ, ನೀನಿದ್ದುಳ್ಳವ. ನೀನು ಕೊಡುವದಾದರೆ ನಾವು ಬೇಡೆನ್ನಬಹುದೇ? ಎಂದು ವ್ಯಂಗ್ಯೋಕ್ತಿಯನ್ನಾಡಿದನು. ದೇವರದಾಸಿಮಯ್ಯನು ಅದನ್ನು ಕೇಳಿ ನಾಚಿಕೊಂಡು ಜರ್ರನೆ ಇಳಿದು ಮನೆಗೆ ಬರುವವನಾದನು.

ದುಗ್ಗಳೆಯು ತನ್ನ ಗಂಡನು ಮ್ಲಾನಮುಖನಾಗಿ ಮನೆಗೆ ಬಂದದ್ದನ್ನು ನೋಡಿ, ಹೀಗೇಕಾಯಿತೆಂದು ಕೇಳಲು ದೇವರದಾಸಿಮಯ್ಯನು ನಡೆದ ಸಂಗತಿಗಳನ್ನೆಲ್ಲ ಅವಳಿಗೆ ಹೇಳಿದನು. ಸಾಧ್ವಿಯಾದ ಅವಳು— ಚಂದ್ರನಿಗೆ ಶೈತ್ಯೋಪಚಾರ ಮಾಡುವವನಂತೆ ನೀವು ವೃಡಭಕ್ತರಿಗೆ ಧಾನ್ಯವನ್ನು ಕೊಡಹೋಗುವದುಚಿತವೇ? ಶಿವಪೂಜಕರು ಎಂದಾದರೂ ಬೇಡಿ ಹೊಟ್ಟೆ ಹೊರೆದುಕೊಳ್ಳುವವರೇ? ಎಂದು ದುಗ್ಗಳೆಯು ಪತಿಗೆ ಹೇಳುವ ಸಮಯದಲ್ಲಿ ವಕ್ರಪಾದ ಮುನಿಯು ಅಲ್ಲಿಗೆ ಬಂದು ಧಾನ್ಯವನ್ನು ಬೇಡಿದನು. ಆಗ ಅವರು ಒಳಗೆ ಹೋಗಿ ನೋಡುತ್ತಾರೆಯೋ ತವನಿಧಿಯು ಬಯಲಾಗಿದ್ದದ್ದನ್ನು ಕಂಡರು. ಅವರು ಹಾಗಾದದ್ದನ್ನು ವಕ್ರಪಾದನಿಗೆ ಹೇಳಲು ಅವನು ಮರಮರನೆ ಮರುಗಿ— ಶಿವಶಿವಾ, ಭಕ್ತಾಗ್ರಗಣ್ಯರಾದ ನೀವು ಶಿವಶರಣರಿಗೆ ಹಾಗೆ ನುಡಿಯಬಹುದೇ? ಅಹಂಕಾರದಿಂದ ಹಿಂದೆ ಯಾರ ಯಾರ ಗತಿಯು ಏನೇನಾಯಿತೆಂಬುದು ನಿಮಗೆ ಗೊತ್ತಿಲ್ಲವೇ? ಎಂದು ನುಡಿದನು. ಆಗ ದೇವರದಾಸಿಮಯ್ಯನು ಮನಸ್ಸು ನೊಂದವನಾಗಿ— ನಾನು ಅರಿಯದೆ ಮೈಮರೆದು ಹಾಗೆ ಮಾತಾಡಿದೆನು. ನನ್ನಿಂದ ತಪ್ಪಾಯಿತು ಎಂದು ಅಂದು ಅವನೂ ಅವನ ಹೆಂಡತಿಯೂ ಶಂಕರದಾಸಿಮಯ್ಯನಿದ್ದಲ್ಲಿಗೆ ಹೋಗಿ ಅವನ ಮುಂದೆ ಅಡ್ಡಬಿದ್ದು— ಕರುಣಾನಿಧಿಯೇ, ನಿಮ್ಮ ಪಾದದ ಗುರುತನ್ನು ನಾವು ಅರಿಯದೆ ನುಡಿದೆವು. ನಮ್ಮನ್ನು ದಯಮಾಡಿ ಕ್ಷಮಿಸಬೇಕು ಎಂದು ಬೇಡಿಕೊಂಡರು. ಶಂಕರದಾಸಿಮಯ್ಯನು ಮನಕರಗಿ ಆ

ದಂಪತಿಗಳ ಶಿರಗಳನ್ನು ಹಿಡಿದೆತ್ತಿ ವಂದಿಸಿ ಅವರನ್ನು ಗದ್ದುಗೆಯ ಮೇಲೆ ಕುಳ್ಳಿರಿಸಿದನು. ದಾಸಿಮಯ್ಯನ ಮೇಲಿನ ಸಿಟ್ಟು ಕೂಡಲೆ ಅವನಲ್ಲಿ ಇಳಿಯಿತು. ಅವನು ಆ ಉಭಯ ದಂಪತಿಗಳನ್ನು ಸತ್ಕರಿಸಿ ಮನೆಗೆ ಕಳುಹಿದನು. ಅವರು ಮನೆಯೊಳಗೆ ಬಂದು ನೋಡುತ್ತಾರೆಯೇ ಮೊದಲು ಬಯಲಾಗಿದ್ದ ತವನಿಧಿಯು ಮೊದಲಿನಕಿಂತಲೂ ಎಷ್ಟೋ ಮಡಿಯಾಗಿ ಬೆಳೆದಿರುವದನ್ನು ಕಂಡು ಸಂತೋಷಿಸಿದರು.

ಆಮೇಲೆ ದೇವರದಾಸಿಮಯ್ಯ ಶಂಕರದಾಸಿಮಯ್ಯ ಉಭಯತರು ಮುದುನೂರಲ್ಲಿ ರಾಮನಾಥನ ಸನ್ನಿಧಿಯಲ್ಲಿ ಶಿವಾನುಭವ ಗೋಷ್ಠಿಯಲ್ಲಿರುತ್ತ ಅಲ್ಲಿ ನೆರೆದಿದ್ದ ಭಕ್ತಸಮೂಹದಲ್ಲಿದ್ದುಕೊಂಡು ಕೆಲವು ಕಾಲ ಕಳೆದರು.

ಈ ಕಾಲದಲ್ಲಿ ಜಯಸಿಂಹರಾಜನು ಕಲ್ಯಾಣ ಪಟ್ಟಣದಲ್ಲಿ ರಾಜ್ಯವಾಳುತ್ತಿದ್ದನು. ಅವನು ವಿಷ್ಣು ಭಕ್ತನಾಗಿ ನರಸಿಂಹನನ್ನು ಪೂಜಿಸುತ್ತ ಇದ್ದನು. ಆಗ ಕೊಂಡೆಯರು ಅವನಲ್ಲಿಗೆ ಬಂದು— ನವಿಲೆಯಲ್ಲಿ ಶಂಕರದಾಸಿಮಯ್ಯನೆಂಬೊಬ್ಬನು ನೊಸಲಗಣ್ಣನ್ನು ಪಡೆದು ಪರದೈವ ಪ್ರತಿಮೆಗಳನ್ನು ದಹಿಸುತ್ತಿದ್ದಾನೆ. ತಾನು 'ಸಮಸ್ತ ಅನ್ಯದೈವ ಕೋಲಾಹಳ' ನೆಂಬ ಬಿರುದನ್ನಿಟ್ಟುಕೊಂಡು ಸಾರಿಸುತ್ತಾನೆ. ಈಗವನು ಮುದುನೂರಿನಲ್ಲಿದ್ದಾನೆ. ಅವನನ್ನು ಕಲ್ಯಾಣಕ್ಕೆ ಬರಮಾಡಿಕೊಂಡು ಅವನ ಗರ್ವಭಂಗ ಮಾಡಬೇಕೆಂದು ಅರುಹಿದರು. ಅರಸನು ಅವರ ಮಾತಿಗೆ ಒಡಂಬಟ್ಟು ತ್ರಿಪುರಾಂತಕ ದೇವರ ಸ್ಥಾನಿಕರನ್ನು ಕರೆಯಿಸಿ— ನೀವಿಂದು ಹೋಗಿ ಮುದುನೂರೊಳಗಿರುವ ಶಂಕರದಾಸಿಮಯ್ಯನನ್ನು ಕರೆದುಕೊಂಡು ಇಲ್ಲಿಗೆ ಬನ್ನಿ, ಎಂದು ಹೇಳಲು ಆ ತಮ್ಮಡಿಗಳು ಮುದುನೂರಿಗೆ ಬಂದು ಶಂಕರದಾಸಿಮಯ್ಯನನ್ನು ಕಂಡು—ತಾವು ಕಲ್ಯಾಣದಲ್ಲಿ ತ್ರಿಪುರಾಂತಕ ದೇವರೇ ಮೊದಲಾದ ಮಹಾಸ್ಥಾನಗಳನ್ನು ನೋಡಲು ಚಿತ್ತವಿಸಬೇಕೆಂದು ತಿಳಿಸಲು ಅವನು ಅನೇಕ ಭಕ್ತಜನರನ್ನು ಕೂಡಿಕೊಂಡು ಕಲ್ಯಾಣ ಪಟ್ಟಣಕ್ಕೆ ಬಂದನು.

ಅವನು ಪಟ್ಟಣಕ್ಕೆ ಬಂದ ಬಳಿಕ ಜಯಸಿಂಹರಾಜನು ಅವನನ್ನು ಕಂಡು ಅವನನ್ನು ಬಹಳವಾಗಿ ಸತ್ಕರಿಸಿದನು. ಆದರೆ ಶಂಕರದಾಸಿಮಯ್ಯನು ಅವನ ರಾಜವೈಭವಕ್ಕೆ ಎಷ್ಟು ಮಾತ್ರವೂ ಮರುಳಾಗದೆ

ಎಂದಿನಂತೆ ತನ್ನ ಗುಲಗುಂಜಿ, ಲೋಳಸರವನ್ನು ಪ್ರಸಾದರೂಪಾಗಿ ಸೇವಿಸುವದನ್ನೂ ಕೌದಿ ಹೊಲಿಯುವ ತನ್ನ ಕಾಯಕವನ್ನೂ ಬಿಟ್ಟಿರಲಿಲ್ಲ. ಶಿವಶರಣರು ವೈಭವಕ್ಕೆ ಎಷ್ಟು ಮಾತ್ರವೂ ಒಲಿಯದೆ ಸಾದಾ ವೃತ್ತಿಯವರಾಗಿರುವರು. ಇದು ಅವರ ಸಹಜ ವೃತ್ತಿಯಾಗಿರುತ್ತವೆ.

ಹೀಗೆ ಕೆಲವು ದಿವಸಗಳು ಸಂದಿ ಹೋದಬಳಿಕ ಅರಸನ ಸಭಾಸ್ಥಾನದಲ್ಲಿ ಅನೇಕ ಶಾಸ್ತ್ರ ಕೋವಿದರು ನೆರೆದು ಶಂಕರದಾಸಿಮಯ್ಯನನ್ನು ಅವನೆದುರಿಗೆ ಹೀಯಾಳಿಸುವದನ್ನು ರಾಜನು ಕೇಳಿ ಅವರಿಗೆ— ಶಂಕರದಾಸಿಮಯ್ಯನು ಮಹತ್ಮಿಕನಿದ್ದಾನೆ, ಅವನು ಹಣೆಗಣ್ಣನ್ನು ಪಡೆದಿದ್ದಾನೆ, ಅವನು ತಪಸಿಥಿಯನ್ನು ಬಯಲು ಮಾಡಿದ್ದಾನೆ, ಮಾರಿ ಮಸಣಿಗಳನ್ನು ತೊತ್ತು ಮಾಡಿ ಅವರಿಂದ ಸೇವೆ ಮಾಡಿಸಿಕೊಳ್ಳುತ್ತಾನೆ ಇಂಥವನನ್ನು ನೀವು ಹೀಗೆ ಜರಿಯುವದು ಯೋಗ್ಯವಲ್ಲೆಂದು ತಿಳಿಸಿ ಹೇಳಿದನು. ಆದರೆ ಅವರು ಅರಸನಿಗೆ— ಅವನು ಮಾಡುವುದೆಲ್ಲ ಕೃತಕವು, ಮೋಸಗಾರಿಕೆಯು. ಇವನು ಪಟ್ಟಣದಲ್ಲಿ 'ಷಡುದರ್ಶನಾಚಾರ್ಯ' ನೆಂದು ಕಹಳೆಯನ್ನು ಹಿಡಿಸಿ ಮೆರೆಯುತ್ತಾನೆ. ಅವನು ನಮ್ಮೊಡನೆ ವಾದಕ್ಕೆ ಬರಲಿ. ಒಂದು ಮಾತಿನಲ್ಲಿ ಅವನನ್ನು ಹಾರಿಸಿ ಬಿಡುವೆವೆಂದು ಹೇಳಿದರು.

ಆದಕ್ಕೆ ಜಯಸಿಂಹರಾಜನು ಒಪ್ಪಿ ಶಂಕರದಾಸಿಮಯ್ಯನ ಕಡೆಗೆ ತನ್ನ ದಂಡನಾಯಕನನ್ನು ಕಳಿಸಲು ಅವನು ನಡೆದ ಸಂಗತಿಗಳನ್ನು ಅವನಿಗೆ ತಿಳಿಸಲಾಗಿ, ಅವನು— ಯತಿಗಳು ರಾಜದ್ವಾರವನ್ನು ಮೆಟ್ಟಬಾರದೆಂದು ಶಾಸ್ತ್ರವಿದೆ, ಇದಕ್ಕೆ ಹೇಗೆ ಮಾಡಬೇಕೆಂದು ಯೋಚಿಸುತ್ತಿರುವಷ್ಟರಲ್ಲಿ ವಕ್ರಪಾದ ಮುನಿಯು ಮುಂದೆ ಬಂದು ತನಗೆ ವಾದಿಸಲಿಕ್ಕೆ ಅಪ್ಪಣೆ ಕೊಡಬೇಕೆಂದು ಗುರುವಿಗೆ ಬಿನ್ನವಿಸಲು, ಶಂಕರದಾಸಿಮಯ್ಯನು ಅದಕ್ಕೆ ಒಪ್ಪಿ ಪಂಚಾಕ್ಷರೀ ಮಂತ್ರವನ್ನು ಜಪಿಸುತ್ತ ನೀನು ಹೋಗಬೇಕು ಅಂದರೆ ನಿನಗೆ ಜಯವಾಗುವದು ಎಂದು ಹೇಳಿದನು. ಅವನು ಹಾಗೆಯೇ ಆಗಲೆಂದು ಒಪ್ಪಿ ಒಡ್ಡೋಲಗಕ್ಕೆ ಮಂತ್ರ ಜಪವನ್ನು ಮಾಡುತ್ತ ಬಂದನು.

ಅರಸನು ವಕ್ರಪಾದ ಗಣೇಶ್ವರನನ್ನು ಸತ್ಕರಿಸಿ ನಡೆದ ಸಂಗತಿಗಳನ್ನೆಲ್ಲ ಅವನಿಗೆ ಹೇಳಲಾಗಿ ವಕ್ರಪಾದನು— ಇಲ್ಲಿ ಅನೇಕ ಮತಸ್ಥರು

ನೆರೆದಿದ್ದಾರೆ ಅವರಲ್ಲಿ ನನಗೆ ಇದಿರಾಗಿ ಮಾತನಾಡುವವರು ಯಾರು? ಎಂದು ಕೇಳಲು ಅದಕ್ಕೆ ಒಬ್ಬ ವೈಷ್ಣವನು ಮುಂದೆ ಬಂದನು. ತರುವಾಯ ಅವನ ಮತ್ತು ವಕ್ತ್ರಪಾದಮುನಿಯ ನಡುವೆ ಶಾಸ್ತ್ರಾಧಾರದ ಮೇಲೆ ದೀರ್ಘ ವಾದಗಳು ನಡೆದು ಕಡೆಗೆ ವೈಷ್ಣವನು ಸೋತು ನಿರುತ್ತರನಾದನು. ಆಗ ಆ ವೈಷ್ಣವನು ಹೇಳಿದ್ದೇನಂದರೆ-- ನಿಮ್ಮ ಗುರುವು ತನ್ನ ಅಗ್ನಿ ನೇತ್ರದಿಂದ ದೇವತೆಗಳನ್ನು ಸುಡುತ್ತಾನೆಂದು ಹೇಳುತ್ತಾರೆ. ಅವನು ನಮ್ಮ ಒಡೆಯನಾದ ನರಸಿಂಹನನ್ನು ಅದರಿಂದ ಸುಟ್ಟರೆ ನಾವು ಸೋತೆವೆಂದು ಒಪ್ಪಿಕೊಳ್ಳುತ್ತೇವೆ ಎಂದು ನುಡಿಯಲು ಹಾಗೆಯೇ ಆಗಲೆಂದು ಹೇಳಿ ವಕ್ತ್ರಪಾದ ಗಣೇಶ್ವರನು ತನ್ನ ಬಿಡಾರಕ್ಕೆ ಬಂದನು.

ಶಂಕರದಾಸಿಮಯ್ಯನು ತನ್ನ ಹಣೆಗಣ್ಣಿನಿಂದ ನರಸಿಂಹದೇವರನ್ನು ಸುಡಲು ಸಿದ್ಧನಾಗಿರುವನೆಂಬ ವರ್ತಮಾನವು ಕೂಡಲೇ ಎಲ್ಲ ಕಡೆಗೂ ಹಬ್ಬಿತು. ಅಸಂಖ್ಯ ಜನರು ಮರುದಿನ ಈ ಕೌತುಕವನ್ನು ನೋಡಬೇಕೆಂದು ನರಸಿಂಹದೇವಾಲಯದಲ್ಲಿ ನೆರೆದರು. ಆಗ ಶಂಕರದಾಸಿಮಯ್ಯನು ಭಕ್ತ ಸಮೂಹದಿಂದ ಕೂಡಿಕೊಂಡು ಅಲ್ಲಿಗೆ ಬಂದನು. ಜಯಸಿಂಹ ರಾಜನೂ ಕೂಡ ಬರಲಾಗಿ ಶಂಕರದಾಸಿಮಯ್ಯನು ಗರ್ಭಗುಡಿಯಲ್ಲಿ ನರಸಿಂಹ ದೇವರೆದುರಿಗೆ ನಿಂತುಕೊಂಡು ತನ್ನ ಅಗ್ನಿ ನೇತ್ರದ ಮೇಲಿದ್ದ ಮೊಗಪಾಡವನ್ನು ಸಾವಕಾಶವಾಗಿ ತೆರೆಯಲಾಗಿ ಅದರೊಳಗಿಂದ ಒಂದು ಮಹತ್ತರವಾದ ಜ್ವಾಲೆಯು ಹೊರಬಿದ್ದು ಘುಳುಘುಳಿಸಿ ಸುಳಿ ಸುಳಿದು ನರಸಿಂಹನ ಪ್ರತಿಮೆಯ ಮೇಲೆ ಬೀಳಲು ಅದು ಕೂಡಲೆ ಹುರಿಹಂಚಾಗಿ ಭುಗಿಲೆಂದು ಉರಿದು ಧರೆಯ ಮೇಲೆ ಬಿದ್ದಿತು. ಆಗ ವೈಷ್ಣವರೂ ಇತರ ವಾದಿಗಳೂ ಶಂಕರದಾಸಿಮಯ್ಯನಿಗೆ ಶರಣು ಹೋಗಲಾಗಿ ದಾಸಿಮಯ್ಯನು ಎಲ್ಲರನ್ನು ಸಂತಯಿಸಿ ಅರಸನಿಂದ ಅಪ್ಪಣೆಯನ್ನು ತೆಗೆದುಕೊಂಡು ಶಿವಶರಣರೊಡನೆ ತನ್ನ ಬಿಡಾರಕ್ಕೆ ಬಂದನು.

ಶಂಕರದಾಸಿಮಯ್ಯನು ಕಲ್ಯಾಣದಲ್ಲಿ ಕೆಲವು ದಿನಗಳಿದ್ದು ಮುಂದೆ ತನ್ನ ಪಯಣವನ್ನು ಸಾಗಿಸಿ ಬಿರುದುಗಳನ್ನು ಹೊಗಳಿಸಿಕೊಳ್ಳುತ್ತ ಪ್ರಸಿದ್ಧವಾದ ಉಜ್ಜಯಿನೀ ಪಟ್ಟಣವನ್ನು ಸೇರಿ ಅಲ್ಲಿ ಒಂದು ಈಶ್ವರ ದೇವಾಲಯದಲ್ಲಿ ಬೀಡುಬಿಟ್ಟನು. ಈ ಪಟ್ಟಣವು ಮಾಳವಾ ದೇಶದಲ್ಲಿ

ಅತ್ಯಂತ ಪ್ರಸಿದ್ಧವಾದುದು. ಅದು ಮಹಾಕಾಳೀ ಸ್ಥಾನವು ಅಲ್ಲಿ ಶಾಕ್ತರು ಹೆಚ್ಚಾಗಿ ವಾಸವಾಡುತ್ತಿದ್ದ ಅವರು ಶಂಕರದಾಸಿಮಯ್ಯನನ್ನು ಕಂಡು- ನೀನು ಹೊಗಳಿಸಿಕೊಳ್ಳುವ ಈ ಬಿರುದುಗಳು ನಿನಗೇಕೆ? ಜಂಗಮರಿಗೆ ವೇದ ಶಾಸ್ತ್ರಗಳೇನು ಗೊತ್ತು? ಮಹಾಕಾಳಿಯೇ ದೇವರು ಅವಳು ಶ್ರೇಷ್ಠಳು ಎಂದು ನುಡಿಯಲು ಶಂಕರದಾಸಿಮಯ್ಯನು — ನೀವು ಆ ಮಾತಂಗಿಯ ಪಾದಪೂಜೆಯನ್ನು ಮಾಡಿ ಆಕೆಗೆ ಸುರೆ ಮಾಂಸಗಳನ್ನ ರ್ಪಿಸಿ ಒಂದೇ ತಳಿಗೆಯಲ್ಲಿ ಎಲ್ಲರೂ ತಿಂದು ಕುಡಿದು ವ್ಯೈಮರೆಯುತ್ತೀರಿ ನೀವು ಹಿಂಸಾಚಾರಿಗಳು, ಎಂದು ನುಡಿಯಲು ಅವರು — ಹಿಂಸೆ ಎಂದರೇನು? ಮಾಯೆಯ ಸ್ವರೂಪು ಅವುದು, ಇವೇ ಮೊದಲಾದ ವಿಷಯಗಳ ಬಗ್ಗೆ ವಾದಿಸಹತ್ತಲು ಅದರಲ್ಲಿ ಶಂಕರದಾಸಿಮಯ್ಯನು ಅವರನ್ನು ಕಡೆಗೆ ನಿರುತ್ತರರನ್ನಾಗಿ ಮಾಡಿದನು. ಕಡೆಗೆ ಅವನು ಅವರಿಗೆ— ನಿಮ್ಮ ಇಷ್ಟದೇವತೆಯ ಹೆಸರು ಹೇಳಿದಲ್ಲಿ ನಾನು ಆಕೆಯ ಕೈಯಿಂದ ಊಳಿಗವನ್ನು ಮಾಡಿಸಿಕೊಳ್ಳುವೆನೆಂದನು. ಅದಕ್ಕೆ ಅವರು ನಮ್ಮ ದೇವತೆಯು ಮಹಾಕಾಳಿಯು. ಅವಳು ಈ ಉಜ್ಜಯಿನಿ ಪಟ್ಟಣದ ಅಧಿದೇವತೆಯು. ಅವಳ ಕಡೆಯಿಂದ ನೀನು ಊಳಿಗ ಮಾಡಿಸಿಕೊಂಡರೆ ನಿನ್ನ ಮತವು ಶ್ರೇಷ್ಠವಾದುದೆಂದೆನ್ನುತ್ತೇವೆ, ಎಂದು ನುಡಿಯಲು ಶಂಕರದಾಸಿಮಯ್ಯನು ವಕ್ತ್ರಪಾದನಿಗೆ ಹೇಳಿ ಆಕೆಯನ್ನು ಕರೆಕಳುಹಿಸಲು ಅವಳು ಹರುಷದಿಂದ ಅಡ್ಡಬೀಳುತ್ತ ಹೊರಳುತ್ತ ಹೊಗಳುತ್ತ ಬಂದು ಶಂಕರದಾಸಿಮಯ್ಯನನ್ನು ವಂದಿಸಿ ಕೈಮುಗಿದು ಅವನ ಮಗ್ಗುಲಲ್ಲಿ ನಿಂತಳು. ಆಗ ಶಂಕರದಾಸಿಮಯ್ಯನು ಉಗುಳಲೆಂದು ಅತ್ತಿತ್ತ ನೋಡುತ್ತಿರಲು ಆಕೆಯು ತನ್ನ ಕೈಯೊಳಗಿದ್ದ ಕತ್ತಿಯನ್ನು ಚೆಲ್ಲಿ ತನ್ನ ಬಟ್ಟಲವನ್ನು ಮುಂದೆ ಹಿಡಿದಳು. ಶಂಕರದಾಸಿಮಯ್ಯನು ಅದರಲ್ಲಿ ಉಗುಳಲು ಅದು ಪ್ರಸಾದವೆಂದು ಮಹಾಕಾಳಿಯು ಭಾವಿಸಿ ಅದನ್ನು ಮೈಯ್ಗೆ ತೊಡೆದುಕೊಂಡಳು. ಶಾಕ್ತರು ಅದನ್ನು ನೋಡಿ— ನಿನ್ನ ಮತವು ಶ್ರೇಷ್ಠವಾದುದು, ನಮ್ಮ ತಪ್ಪನ್ನು ಒಪ್ಪಿಕೊಳ್ಳುತ್ತೇವೆ, ಕ್ಷಮಿಸಬೇಕು ಎಂದು ಬೇಡಿಕೊಳ್ಳಲು ಶಂಕರದಾಸಿಮಯ್ಯನು ಅವರನ್ನು ಸಂತಯಿಸಿ ಉಜ್ಜಯಿನಿ ಪಟ್ಟಣದಿಂದ ಮುಂದಕ್ಕೆ ತೆರಳುವವನಾದನು. ಆಗ ಮಹಾಕಾಳಿಯು ಕಾಳಂಜಿಯನ್ನು ಹಿಡಿದುಕೊಂಡು

ಅವನ ಬೆನ್ನು ಹತ್ತಲು, ನಿನ್ನ ಸ್ಥಾನದಲ್ಲಿಯೇ ಇರು ಹೀಗೆ ಬರಬೇ
ಡೆಂದು ಹೇಳಿ ಅವನು ಅವಳನ್ನು ಅವಳ ಸ್ಥಾನಕ್ಕೆ ತಿರುಗಿ ಕಳಿಸಿ
ಕೊಟ್ಟನು.

ಶಂಕರದಾಸಿಮಯ್ಯನು ಮುಂದೆ ದಕ್ಷಿಣ ದಿಕ್ಕಿಗೆ ಸಂಚಾರ
ಮಾಡುತ್ತ 'ಕರಹಾಟ' ಅಂದರೆ ಈಗಿನ ಕರ್ಹಾಡ ಪ್ರಾಂತಕ್ಕೆ
ಬಂದನು. ಅಲ್ಲಿ ಶಿಲಾಹಾರ ರಾಜರು ಬಹಳ ದಿವಸಗಳಿಂದಲೂ
ರಾಜ್ಯವಾಳುತ್ತ ಬಂದಿದ್ದರು. ಈ ಪ್ರಾಂತದಲ್ಲಿ ಸಾತಾರೆಯ ದಕ್ಷಿಣಕ್ಕೆ
೧೬ ಮೈಲುಗಳ ಮೇಲೆ ತರಲಾ ಎಂಬ ನದಿಯು ಇದ್ದು ಅದರ
ದಂಡೆಯ ಒಂದು ಮಗ್ಗುಲಿನ ಭಾಗಕ್ಕೆ ಪೆಂಬರವೆಂಬ ಹೆಸರು ಇದೆ. ಇಲ್ಲಿ
ಈಗಲೂ ಮಲ್ಲಾರಿಯ ಪ್ರಸಿದ್ಧ ದೇವಸ್ಥಾನವಿದೆ. ಇದರಲ್ಲಿ ಖಂಡೋಬಾ
ಮತ್ತು ಮ್ಹಾಳಸಾ ಎಂಬ ಹೆಸರುಗಳಿಂದ ಮಹಾರಾಷ್ಟ್ರಿಗರಲ್ಲಿ ಬಹು
ಪ್ರಸಿದ್ಧವಾದ ದೇವತೆಗಳಿವೆ. ಖಂಡೋಬಾ ಎಂಬ ಹೆಸರಿನ ದೇವತೆಗೆ
ಕರ್ನಾಟಕದಲ್ಲಿ ಮೈಲಾರನೆಂಬ ಹೆಸರಿದ್ದು ಮೈಲಾರನ ಗುಡಿಗಳು
ವಿಜಾಪುರ ಜಿಲ್ಲೆಯಲ್ಲಿ ಹಿಪ್ಪರಗಿಯಲ್ಲಿ ರಾಣೇಬಿನ್ನೂರು ತಾಲೂಕಿನಲ್ಲಿ
ದೇವರಗುಡ್ಡದಲ್ಲಿ ಹೀಗೆ ಅನೇಕ ಕಡೆಗೆ ಇವೆ. ಈ ದೇವತೆಯ
ಅನುಯಾಯಿಗಳು ನಾಡಿನಲ್ಲಿ ಅಸಂಖ್ಯಾತರಾಗಿದ್ದು ನಾಯಿಯಂತೆ ಬೊಗ
ಳುವದೇ ಅವರ ಅರ್ಚನೆಯ ವೈಶಿಷ್ಟ್ಯವಾಗಿದೆ. ಬಸವೇಶ್ವರನು ತನ್ನ ವಚನ
ಗಳಲ್ಲಿ ಈ ದೇವತೆಯನ್ನು ಆಗಿಂದಾಗ್ಗೆ ಟೀಕಿಸಿದ್ದು ಕಂಡುಬರುತ್ತದೆ.
ಅಲ್ಲದೆ 'ಪಿಂಬೆರ ಮೈಲಾರನೂ' ಕೂಡ ಕಡಿಮೆ ತರಗತಿಯ ದೇವತೆ
ಎಂದು ಅವನು ತನ್ನ ಒಂದು ವಚನದಲ್ಲಿ ಹೇಳಿದ್ದು ಕಂಡುಬರುತ್ತದೆ.
ಹೀಗೆ ಶಿವಶರಣರು ಇಂಥ ಕಿರುಕುಳ ದೇವತೆಗಳನ್ನು ಪೂಜಿಸುವದು
ಶಿವಾನುಭವಕ್ಕೆ ಹೊರತಾದುದೆಂದು ಭಾವಿಸಿದ್ದಾರೆ. ಶಂಕರದಾಸಿ
ಮಯ್ಯನು ಹಾಗೆಯೇ ಭಾವಿಸಿ ನಾಡಿನಲ್ಲಿ ಮೈಲಾರನಿಗಿದ್ದ ಮಹತ್ವ
ವನ್ನು ಕಡಿಮೆ ಮಾಡಬೇಕೆಂಬ ಉದ್ದೇಶವನ್ನು ತಾಳಿ ಉಜ್ಜಯಿನಿ
ಯಿಂದ ಮಹಾರಾಷ್ಟ್ರದ ಪಶ್ಚಿಮ ಭಾಗದೊಳಗಿಂದ ಹಾಯ್ದು ಪಿಂಬೇರ
ಗ್ರಾಮಕ್ಕೆ ಬಂದನು.

ಅವನು ಅಲ್ಲಿಯ ಮೈಲಾರನ ದೇವಸ್ಥಾನದಲ್ಲಿ ಬಂದು ಇಳಿ
ದಾಗ್ಗೆ ಒಬ್ಬ ವೇಶಿಯು ಪೂಜೆಗೆಂದು ಅಲ್ಲಿಗೆ ಬಂದು ದ್ವಾರದಲ್ಲಿ

# ವಿಷಯಗಳು.


ಪು।

೧ ಕದಳೀ ಬನದ ಬಟ್ಟೆ — ೧೬
ಶ್ರೀ ಲಕ್ಷ್ಮಣರಾವ ಜಮಖಂಡಿ

೨ ಜಾತೀಯತೆಯ ಭೂತ — ೧೭
ಶ್ರೀ ಕಲ್ಯಾಣಪ್ಪಾ ಬ್ಯಾಳಿ ವಿಜಾಪುರ

೩ ಸಿದ್ಧಾಂತ ಶಿಖಾಮಣಿ — ೧೮೩
ಶ್ರೀ. ಬಸವಪ್ಪ ಚನ್ನಪ್ಪ ಪಟ್ಟೇದ, ವಂಟಮುರಿ

೪ ಮಹಾತ್ಮಾ ಗಾಂಧಿಯವರು ಮತ್ತು ವಿಶ್ವಧರ್ಮ — ೧೮೫
ಶ್ರೀ. ಸ. ದ. ನಾಯಕ, ರಾಣೇಬೆನ್ನೂರ

೫ ಶರಣಸ್ಮರಣೆ ಮತ್ತು ಸಮಾಜೋದ್ಧಾರ — ೧೯೦
ಶ್ರೀ. ಅನ್ನದಾನೀಶ್ವರ ವಿರಕ್ತಮಠ, ರಾಣೇಬೆನ್ನೂರ

೬ ವಚನಶಾಸ್ತ್ರಸಾರ ಭಾಗ ೩—
ಉತರಾರ್ಧ — ೫೭—೬೪
ರಾ॥ ಬ॥ ಫ. ಗು. ಹಳಕಟ್ಟಿ

೭ ಶಿವಶರಣರ ಚರಿತ್ರೆ ಭಾಗ ೩— — ೧೧೯—೧೩೪
ರಾ॥ ಬ॥ ಫ. ಗು. ಹಳಕಟ್ಟಿ

# ಶಿವಾನುಭವ

ವರ್ಷ ೨೨ | ಎಪ್ರೀಲ ೧೯೪೮ | ಸಂಚಿಕೆ ೭

## ಕದಳೀ ಬನದ ಬಟ್ಟೆ.

(ಲೇಖಕः— ಶ್ರೀ. ಲಕ್ಷ್ಮಣರಾವ ಜಮುಖಂಡಿ.)

### ಲೇಖಾಂಕ ೨.

'ಶಿವಗಣಂಗಳ ಮನೆಯಂಗಣ ವಾರಣಾಸಿ ಎಂಬುದು ಹುಸಿಯೇ ! ಪುರಾತನರ ಮನೆಯ ಅಂಗಣದಲ್ಲಿ ಅಷ್ಟಾಷಷ್ಟಿ ತೀರ್ಥಂಗಳು ನೆಲಿಸಿಪ್ಪವಾಗಿ, ಅದೆಂತೆಂದೊಡೆ, ಸಾಕ್ಷಿ || ಶ್ಲೋ || ಕೇದಾರಸ್ಯೋದಕಂ ಪೀತ್ವಾ ವಾರಾಣಸ್ಯಾಂ ಮತಿರ್ಧ್ರುವಂ ! ಶ್ರೀಶೈಲ ಶಿಖರಂ ದೃಷ್ಟ್ವಾ ಪುನರ್ಜನ್ಮ ನ ವಿದ್ಯತೆ || ಎಂಬ ಶಬ್ದವಧಿಕವು. ಸುತ್ತಿ ಬರಲು ಶ್ರೀಶೈಲ, ಕೆಲಬಲದಲ್ಲಿ ಕೇದಾರ. ಅಲ್ಲಿಂದ ಹೊರಗೆ ವಾರಣಾಸಿ. ವಿರಕ್ತಿ ಬೀಡಾಗಿ, ಭಕ್ತಿ ಮೊಳೆಯಾಗಿ, ಎನ್ನ ದೇವ ಚನ್ನಮಲ್ಲಿಕಾರ್ಜುನ ನಿಮ್ಮ ಭಕ್ತರ ಮನೆಯಂಗಣ ಪ್ರಯಾಗದಿಂದಧಿಕ ನೋಡಾ.' ಎಂಬ ವಚನದ ಮೇಲಿಂದ, ಅಕ್ಕಮಹಾದೇವಿಯವರು, ಭಕ್ತನ ಮನೆಯಂಗಣವನ್ನು ಕದಳೀಬನಯುಕ್ತವಾದ ಶ್ರೀಶೈಲವನ್ನಾಗಿ ತಿಳಿಯುತ್ತಿದ್ದರೆಂದು ಮತ್ತು ಭಕ್ತನನ್ನು ಭವಹರನನ್ನಾಗಿ ಕಾಣುತ್ತಿದ್ದರೆಂದು ನಾವು, "ಕದಳಿಯ ಬನದಲ್ಲಿ ಭವಹರನ ಕಂಡೆನು." ಈ ವಾಕ್ಯಕ್ಕೆ ಮಾಡಬಹುದಾದ ಮೂರನೆಯ ಅರ್ಥವು.

'ಮರ್ತ್ಯಲೋಕದ ಭಕ್ತರ ಮನವ ಬೆಳಗಲೆಂದು ಇಳಿತಂದನಯ್ಯ ಶಿವನು. ಕತ್ತಲೆಯ ಪಾಳೆಯವ ರವಿ ಹೊಕ್ಕಂತಾಯಿತ್ತಯ್ಯ. ಚಿತ್ತದ

ಪ್ರವೃತ್ತಿಯ ಹಿಂಗಿಸಿ, ಮುಕ್ತಿಪಥವ ತೋರಿದನಲ್ಲ ಅಸಂಖ್ಯಾತರುಗಳಿಗೆ. ತನುವೆಲ್ಲ ಸ್ವಯಲಿಂಗ, ಮನವೆಲ್ಲ ಚರಲಿಂಗ, ಭಾವವೆಲ್ಲ ಮಹಾಘನದ ಬೆಳಗು. ಚೆನ್ನಮಲ್ಲಿಕಾರ್ಜುನಯ್ಯ, ನಿಮ್ಮ ಶರಣರ ಸಮ್ಯಜ್ಞಾನಿ. ಚನ್ನ ಬಸವಣ್ಣನ ಶ್ರೀಪಾದಕ್ಕೆ ಶರಣೆಂದು ಎನ್ನ ಭವಂ ನಾಸ್ತಿಯಾಯಿತ್ತಯ್ಯ ಪ್ರಭುವೇ.' ಎಂಬ ವಚನದ ಮೇಲಿಂದ, ಅನುಭಾವ ಪೂರ್ವದಲ್ಲಿ ಕದಳಿ ಯಾಗಿದ್ದ, ಭವರೋಗದರಣ್ಯವಾಗಿದ್ದ, ತನುಮನಗಳು, ಅನುಭಾವೋತ್ತ ರದಲ್ಲಿ ಕದಳೀ ಬನವಾಗಿ, ಆನಂದವನವಾಗಿ, ಪರಿಣಮಿಸಿ, ಭವಹರನನ್ನು ರೂಪುಗೊಟ್ಟು ತೋರುವವೆಂದು, ನಾವು "ಕದಳಿಯ ಬನದಲ್ಲಿ ಭವಹರನ ಕಂಡೆನು." ಈ ವಾಕ್ಯಕ್ಕೆ ಮಾಡಬಹುದಾದ ನಾಲ್ಕನೆಯ ಅರ್ಥವು.

ಛಾಂದೋಗ್ಯದಲ್ಲಿ ಸನತ್ಕುಮಾರನು "ಆನಂದ, ಕ್ರಿಯೆ, ನಿಷ್ಠೆ, ಶ್ರದ್ಧೆ, ವಿಚಾರ, ಜ್ಞಾನ, ಸತ್ಯ ಇವು ಸತ್ಯ ಸಾಕ್ಷಾತ್ಕಾರ ಸೋಪಾನದ ಮೆಟ್ಟಲುಗಳು. ಸುತ್ತಲೂ ಸರ್ವಾತ್ಮನನ್ನು ಸತತವೂ ಸಾಕ್ಷಾತ್ಕರಿಸುವದರಿಂದ ಉಂಟಾಗುವ ಅಮಿತ ಆನಂದವೇ 'ಭೂಮನ್' ಎನಿಸುವದು. ಆತ್ಮನ ಹೊರ್ತು ಇನ್ನೇ ನಾದರೂ ಇರುವದೆಂಬ ಜ್ಞಾನವೇ 'ಅಲ್ಪ'ವೆನಿಸುವದು." ಎಂದು ಉಪ ದೇಶಿಸಿರುವನು. ಅಕ್ಕಮಹಾದೇವಿಯವರು, 'ಗಟ್ಟಿದುಪ್ಪ ತಿಳಿದುಪ್ಪಕ್ಕೆ ಭೇದವುಂಟೇ ? ದೀಪಕ್ಕೆ ದೀಪ್ತಿಗೆ ಭೇದವುಂಟೇ ಅಯ್ಯ ? ಆತ್ಮಕ್ಕೆ ಅಂಗಕ್ಕೆ ಭೇದವುಂಟೇ ಅಯ್ಯ ? ಎನ್ನಂಗವನು ಶ್ರೀಗುರು ಮಂತ್ರವ ಮಾಡಿ ತೋರಿದನಾಗಿ । ಸಾವಯವಕ್ಕೆ ನಿರವಯಕ್ಕೆ ಭಿನ್ನವಿಲ್ಲವಯ್ಯ ಚನ್ನಮಲ್ಲಿಕಾರ್ಜುನ, ಎಂದು ಸಾರುವಳು. ಸ್ವಾಮಿ ರಾಮತೀರ್ಥರು, 'The whole World is my Himalayan Woods-ಜಗತ್ತೆಲ್ಲ ನನಗೆ ಹಿಮಾಲಯ ವನವಾಗಿರುವದು.' ಎಂದು ಅಂದು ತೋರಿಸಿರುವರು. ಪೂರ ಣಸಿಂಗರು, ಸ್ವಾಮಿ ರಾಮತೀರ್ಥರ ವಿಷಯವಾಗಿ, 'The Universe is a Garden of Eden to Him-ಅವರಿಗೆ ಜಗತ್ತು ಆನಂದವನವಾಗಿರುವದು. ಎಂದು ಬರೆದಿರುವರು. ಸ್ವಾಮೀ ರಾಮತೀರ್ಥರಂತೆ, ಅಕ್ಕಮಹಾದೇವಿ ಯರು, ವಿಶ್ವವೆಂಬ ಕದಳೀ ಬನದಲ್ಲಿ, ವಿಶ್ವವೆಂಬ ಆನಂದವನದಲ್ಲಿ, ಯಾವಾಗಲೂ, ವಿಶ್ವೇಶ್ವರನನ್ನು ಸಾಕ್ಷಾತ್ಕರಿಸುತ್ತಿದ್ದರೆಂದು, ನಾವು "ಕದ ಳಿಯ ಬನದಲ್ಲಿ ಭವಹರನ ಕಂಡೆನು." ಎಂಬ ವಾಕ್ಯಕ್ಕೆ ಮಾಡಬಹುದಾದ ಐದನೆಯ ಅರ್ಥವು.

'ಭೂಮನ್' ಸ್ಥಿತಿಯಲ್ಲಿ ಯಾವಾಗಲೂ ಇರಬಲ್ಲ, ಸರ್ಪಭೂಷಣರು,

ರಾಗ—ಸೌರಾಷ್ಟ್ರ.

" ನಾನೆ ನಾನಾದೆಯೆಂಬನುಭವವೆನಗೀಗ
ನೀನೆ ನೀನಾದ ಮರ್ಮವ ಸೂಚಿಸೊ ||ಪಲ್ಲ||
ದೃಢವಾಗಿ ತೋರುತಿರುವ ತನುವಿದು ನೀನೋ |
ಒಡಲ ಚೇಷ್ಟಿಸುತಿರುವವನೆ ನೀನೋ ||
ಒಡಲೊಳಗಿರ್ದು ಭೋಗಿಸುವ ಜೀವನು ನೀನೋ |
ಒಡಲ ಸಾಕ್ಷಿಕನಾದ ಪರವೆ ನೀನೋ ||೧||

ಮಾನಸ ವಿ ಕೃತಿದೋರದ ಯೋಗವದು ನೀನೋ |
ನೀನೋಲ್ಪನಾದಬಿಂದುಗಳು ನೀನೋ ||
ಆನಾದ ಬಿಂದುಗಳಾನಂದವದು ನೀನೋ |
ಆನಂದವನಳಿದ ಕೇವಲವೆ ನೀನೋ ||೨||

ಉದರಿದ್ದು ತೋರುವೀ ವಿಶ್ವವೆಲ್ಲವು ನೀನೋ |
ಇದರೊಳ್ ವ್ಯಾಪಿಸಿದ ಚೇತನವೆ ನೀನೋ ||
ಇದುವೆ ಶ್ರೀಗುರುಸಿದ್ಧನೆಂಬರಿವೆಯೋ ನೀನೋ
ಇದು ತೋರಿ ಲಯಿಸುವುನ್ಮನಿಯೆ ನೀನೋ ||೩||"

ಎಂದು ಹಾಡಿ ತೋರಿಸಿರುವರು.

## ಭಾವಾದ್ವೈತ.

'ಆವುದಾನೊಂದು ಪಕ್ಷಿ ಉಭಯ ರೆಕ್ಕೆಯಿಂದೆ ಗಗನಕ್ಕೆ ಹಾರುವಂತೆ
ಅಂತರಂಗದಲ್ಲಿ ಸಮ್ಯಕ್‌ಜ್ಞಾನ
ಬಹಿರಂಗದಲ್ಲಿ ಶಿವನ ಸತ್ಕ್ರಿಯಾ ಸನ್ನಿಹಿತವಿಲ್ಲದೆ
ಪರವಸ್ತುವ ಕೂಡಬಾರದಾಗಿ
ಇದು ಕಾರಣ ಸತ್ಕ್ರಿಯಾ ಸಮ್ಯಕ್‌ಜ್ಞಾನ ಸಂಪನ್ನರಾದ
ಮಹಾಶರಣರ ತೋರಿ ಬದುಕಿಸಯ್ಯ ಎನ್ನ ಅಖಂಡೇಶ್ವರಾ'

ಷಣ್ಮುಖ ಸ್ವಾಮಿಗಳು

ಎಂದು ಅನ್ನುವರು. ಮಡಿವಾಳ ಮಾಚಿದೇವನು, 'ಅರಿವನರಿದೆನೆಂದು ಕ್ರಿಯೆ ಯಬಿಡಲಾಗದು, ಮಧುರಕ್ಕೆ ಮಧುರ ಒದಗಲಾಗಿ ಸವಿಗೆ ಕೊರತೆಯುಂಟೇ? ದ್ರವ್ಯಕ್ಕೆ ದ್ರವ್ಯ ಕೂಡಲಾಗಿ ಬಡತನಕೆಡೆಯುಂಟೇ? ನೀ ಮಾಡುವ

ಮಾಟದಿ ಶಿವಪೂಜೆಯ ನೋಟ ಭಾರವಿರಬೇಕು. ಅದು ಕಲಿದೇವರ ದೇವ ಯ್ಯನ ಕೂಟ.' ಎಂದು ಹೇಳಿರುವನು. ಕೈವಲ್ಯ ಪದ್ಧತಿಯಲ್ಲಿ, ಶ್ರೀ ನಿಜಗುಣ ಶಿವಯೋಗಿಗಳು,

> ಬಳಸದಿರದ್ವೈತವನು ಬಾಹ್ಯದಲಿ ನಿಂ
> ನೊಳಗೇಕೋ ಭಾವನೆಯೊಡಗೂಡು ||
> ತಿಳಿದು ಸಮಯ ನಿಷ್ಠೆಗಲಿ ವೇದವಿದ ಭಕ್ತಿ |
> ಗಳನಗಲದಿರೆಂದುಸುರುವ ||'

ಭಾವಾದ್ವೈತವನ್ನು ಸಾರಿರುವರು. ಅಕ್ಕಮಹಾದೇವಿಯವರು; 'ಅರಿವು ಸಾಧ್ಯವಾಯಿತ್ತೆಂದು ಗುರು-ಲಿಂಗ-ಜಂಗಮವ ಬಿಡಬಹುದೆ? ಸಂದು ಸಂಶಯವಳಿದು ಅಖಂಡ ಜ್ಞಾನವಾಯಿತ್ತೆಂದು ಪರಧನ ಪರಸ್ತ್ರೀಗೆಯಳುಪ ಬಹುದೇ? ಯತ್ರ ಜೀವಸ್ತತ್ರ ಶಿವಃ ಎಂಬ ಅಭಿನ್ನ ಜ್ಞಾನವಾಯಿತ್ತೆಂದು ಶುನಕ ಸೂಕರ ಕುಕ್ಕುಟ ಮಾರ್ಜಾಲಗಳ ಕೂಡಿ ಭುಂಜಿಸಬಹುದೇ? ಭಾವದಲ್ಲಿ ತನ್ನ ನಿಜದ ನೆಲೆಯನರಿವುತ್ತಿಹುದು. ಸುಜ್ಞಾನ ಸತ್ಕ್ರಿಯಾ ಸುನೀತಿ ಸುಮಾರ್ಗದಲ್ಲಿ ವರ್ತಿಸುವದು. ಹೀಗಲ್ಲದೆ ಜ್ಞಾನವಾಯಿತ್ತೆಂದು ತನ್ನ ಮನಕ್ಕೆ ಬಂದ ಹಾಗೆ ಮೀರಿ ನುಡಿದು ನಡೆದನಾದೊಡೆ ಶ್ವಾನಗರ್ಭ ದಲ್ಲಿ ಹುಟ್ಟಿಸದೆ ಬಿಡುವನೇ ಚನ್ನಮಲ್ಲಿಕಾರ್ಜುನಯ್ಯನು?' ಎಂಬ ವಚ ನದಿಂದ ತಮ್ಮ ಸುಜ್ಞಾನ ಸತ್ಕ್ರಿಯಾ ಸುನೀತಿ ಯುಕ್ತವಾದ ಭಾವಾದ್ವೈತ ವನ್ನು ಬೋಧಿಸಿರುವರು.

ಶ್ರೀ. ಅರವಿಂದರು ತಾವು ಬರೆದ ಗೀತೆಯ ಮೇಲಿನ ನಿಬಂಧದಲ್ಲಿ

'But God in the world and you in the world are realities. The world and you are true and actual powers and manifestations of the Supreme. Therefore accept life and action and do not reject them. One with God in your impersonal self and essence, an eternal portion of the God head turned to him by the love and adoration of your spiriual personality for its own Infinite, make of your natural being what it is intended to be, an instrument of works a channel, a power of the Divine that it always is in its truth, but now unconsciously and imper-

fectly, through the lower nature, doomed to a disfigurement of the God head by your ego. Make it consciously and perfectly and without any distortion by ego a power of the Divine in his supreme spiritual nature and a vehicle of his will and his works. In this way you will live in the integral truth of your own being and you will possess the integral God-union the whole and flawless Yoga. +

ಸಂಪ್ರಾಪ್ಯೈನಮೃಷಯೊ ಜ್ಞಾನತೃಪ್ತಾಃ ।
ಕೃತಾತ್ಮಾನೊ ವೀತರಾಗಾಃ ಪ್ರಶಾಂತಾಃ ॥
ತೆ ಸರ್ವಗಂ ಸರ್ವತ್ರಃ ಪ್ರಾಪ್ಯ ಧೀರಾ ।
ಯುಕ್ತಾತ್ಮಾನಃ ಸರ್ವಮೇವಾವಿಶಂತಿ ॥

ಮುಂಡಕ ೩; ಖಂ ೨, ಮಂ ೫

ಯೋಗಿಗಳಿಗೆ 'ವಿಶ್ವದೊಳು ವ್ಯಾಪಿಸಿದ ಚೇತನವು, ನಮ್ಮ ಶರೀರದೊಳಗೆ ವ್ಯಾಪಿಸಿರುವದು. ಆ ಚೇತನವೇ ನಾವು.' ಎಂಬ ತತ್ತ್ವದ ಅರಿವು ಆಗುವದೆಂದು ಸರ್ವಭೂಷಣರ ಅಂಬೋಣವು. 'ಯಾವ ಅಸಾಮಾನ್ಯ ಶಕ್ತಿಯು ಸೂರ್ಯ ಚಂದ್ರರಲ್ಲಿ ತೋರಿಕೊಳ್ಳುವದೋ ಆ ಶಕ್ತಿಯೇ ನಾವು, ಆ ಶಕ್ತಿಯೇ ನೀವು. ಕಮಲ, ಕುಂದಗಳಲ್ಲಿ ಕುಂದದೆ ಹರಿಯುವ ರಕ್ತವು ನಮ್ಮದೆಂದೇ ನಾವು ಗುರುತಿಸಬೇಕು ಮತ್ತು ಅವುಗಳಿಂದ ಅಮಿತ ಆನಂದವನ್ನು ಪಡೆಯಬೇಕು. Those alone have the real joys of life who recognise the blood in the veins lily and violet to be their own. ಎಂದು ಸ್ವಾಮೀ ರಾಮತೀರ್ಥರು ಕಂಠರವದಿಂದ ಹೇಳಿರುವರು. 'ಸುಜ್ಞಾನ ಸತ್ಕ್ರಿಯಾ ಸುನೀತಿ ಸುಮಾರ್ಗದಲ್ಲಿ ವರ್ತಿಸುವದು. ಭಾವದಲ್ಲಿ ತನ್ನ ನಿಜದ ನೆಲೆಯನರಿವುತ್ತಿಹುದು. ಅದ್ವೈತದಿಂದ ತನ್ನ ತಾನರಿದು ತಾನಾದರೆ ಚನ್ನಮಲ್ಲಿಕಾರ್ಜುನಲಿಂಗ ತಾನೆ ಬೇರಿಲ್ಲ. ಎಂದು ಅಕ್ಕಮಹಾದೇವಿಯವರು ಘೋಷಿಸುವರು.

---

+ Essays on the Gita Second Series, Reprinted 1945. pp. 418-19. ಎಂದು ಹೇಳಿದ ಭಾವಾದ್ವೈತವು, ಅಕ್ಕಮಹಾದೇವಿಯರ ಭಾವಾದ್ವೈತವನ್ನು ಹೋಲುವದು.

ಅಕ್ಕಮಹಾದೇವಿಯವರಂತಹ ಅನುಭಾವವನ್ನು ಪಡೆದವರಿಗೆ ಮಾತ್ರ. ಮಹಲಿಂಗರಂಗ ಕವಿಯು

ಮೇರುವೇ ಧನುವಹಿಪತಿಯೆ ಹೆದೆ ।
ವಾರಿಜಾಕ್ಷನ್ನೆ ಬಾಣ. ಪುರಗಳು ।
ಮೂರು ಗುರಿ, ತ್ರಿಪುರಾರಿಯೇ ಬಲುವೀರ ಬಿಲುಗಾರ, ॥

ಧಾರುಣಿಯೆ ರಥ, ಸಾರಥಿಯೆ ವಿಧಿ ।
ವಾರುವಂಗಳೆ ವೇದ, ಗಾಲಿಗ ।
ಳಾ ರವೀಂದುಗಳಾಗೆ ಶ್ರೀಗಿರಿನಾಥಗಿದಿರಾರು ॥೧

ತನ್ನ ತೇಜಸ್ಸಿಂದ ಸಕಲಕ್ಕೆ ।
ಬಣ್ಣಗೊಡುವದು ಬ್ರಹ್ಮವೆಂದದ ।
ನಿರ್ಣಯಿಸಿ ತಿಳಿದಿರ್ಪುದೇ ಆಭರಣದುಪಚಾರ, ॥

ಪೂರ್ಣ ಸಚ್ಚಿತ್ಸುಖವೆನಿಪ ಚೈ ।
ತನ್ಯ ಸೂತ್ರದೊಳಖಿಳವನು ಸಂ ।
ಪನ್ನವೆನುತಾವರ್ತಿಪುದೆ ಉಪವೀತದುಪಚಾರ ॥೨॥

ಎಂ.ಎ. ಕವಿತೆಗಳ, ಸ್ವಾಮಿ ರಾಮತೀರ್ಥರ

' I am the blush of the morning
And I am the evening breeze
I am the leaf's low murmers
The swell of the terrible seas
The Rose, her poet nightingale
The songs from the throat that rise
The flint, the sparks, the taper
The moth that about it flies.
In every thing my breath I feel
In earth and moon and sun I real
I blow in air and grow in grass,
I flow in rivers, throw in mass.

ಎಂ.ಎ. ಕವಿತೆಗಳ, ಹರಿಹರನ

'ವಾರಿಯವೋಲ್ ನಿರ್ಮಳನಾಗಾಡುತೆ
ಅನವಲನವೋಲು ಜ್ವಲನಾಗಾಡುತೆ
ಅನಿಲನವೋಲ್ ಸುತ್ತಂ ಸುಳಿದಾಡುತೆ
ಗಗನದವೋಲ್ತನ್ಮಯನಾಗಾಡುತೆ
ಎಳೆವಿಸಿಲಂತಿರೆ ಬಣ್ಣಂ ದೋರುತೆ
ಬೆಳುದಿಂಗಳವೋಲ್ತಂಪಂ ಬೀರುತೆ
ಕೋಗಿಲೆಯಂತಿರೆ ಸರಗೈದಾಡುತೆ
ರಾಗದಿ ಗಿಳಿಯಂತಿರೆ ನುಡಿದಾಡುತೆ
ಅಳಿಯಂತಿರೆ ಝೇಂಕಾರದೊಳಾಡುತೆ
ಕಳಹಂಸೆಯವೊಲ್ಮೆಲ್ಲನೆ ನಡೆಯುತೆ
ಎಳೆಲತೆಯಂದದಿ ತೂಗಾಡುತ್ತಂ
ಶಳೆ ಮಿಂಚಿನವೋಲ್ ಹೊಳೆದಾಡುತ್ತಂ

ಮಿಗೆ ಚಾದಗೆಯಂತಿರೆ ನಲಿದಾಡುತೆ
ನವಿಲಂತಿರೆ ನವಿದನಿಗೊಟ್ಟಾಡುತೆ.

ಎಂಬ ರಗಳೆಯ, ಸರ್ಪಭೂಷಣರ

ರಾಗ–ಪಂತುವರಾಳಿ

ಯೋಗೀಶನ ಸಿರಿಗೆಣೆಯುಂಟೆ, ಮಿಕ್ಕ ।
ಭೋಗಿಗಳಣು ಸಿರಿಯೆನು ನೋಡಲಹಹಾ ||ಪಲ್ಲ||

ನಳಿನ ಜಾಂಡವೆಗೇಹವಿಳೆಯೊಂದೆ ಮಂಚವು !
ಹೊಳೆವ ದಿಕ್ಕುಗಳೆಂಟು ಪರದೆಗಳು ||
ಕುಲಶೈಲಮುಪಧಾನಮಭ್ರವೇ ಮೇಲ್ಕಟ್ಟು
ತೊಳೆಪತಾರೆಯೆ ಪುಷ್ಪಗುಚ್ಛಗಳಹಹಾ ||೧||

ತರಣೀಂದುಗಳೆ ನಿತ್ಯಕರದೀಪಯುಗಳವು
ಚರಿಪವಾಯುವೆ ತಾಲವೃಂತಕವು ||
ಉರಿವದಾವಾಗ್ನಿಯೆಲ್ಲವು ಕುಮ್ಮಟಂಗಳು ।
ಮೆರೆವಾರು ಋತುಗಳೇ ಸೇವಕರಹಹಾ ||೨||

ಧರೆಯ ಮಹಾರಣ್ಯವೆಲ್ಲ ಜೀವಣಶಾಲೆ ।
ಶರಧಿವಾಪಿಗಳೆ ಭೃಂಗಾರಂಗಳು ॥
ಹರಿಯದ್ಯೆ ಸಿರಿಯಿದನುಣುತೆ ಶ್ರೀಗುರುಸಿದ್ಧ ।
ನಿರವಂದಯತಿಯೆ ಮೂಜಗದಾಣ್ಮನಹಹಾ ॥೩॥

ಎಂಬ ಹಾಡಿನ ಅರ್ಥವು ಸಂಪೂರ್ಣವಾಗಿ ಹೃದ್ಗತವಾಗುವದು.

---

# ಜಾತೀಯತೆಯ ಭೂತ.

ಲೇಖಕ:— ಶ್ರೀಯುತ ಕಲ್ಯಾಣಪ್ಪಾ ಬ್ಯಾಳಿ ಹೆ| ಮಾಸ್ತರ ಎಸ್ ಎಸ್ ಹಾಯಸ್ಕೂಲ ವಿಜಾಪುರ.

---

ಕರ್ನಾಟಕದಲ್ಲಿ ಜಾತೀಯತೆಯ ಭೂತವನ್ನು ಹೊಡೆದೋಡಿಸಿದವರು ಬಸವಾದಿ ಪ್ರಮಥರು. ಇದಕ್ಕೆ ಅವರು ಉಸುರಿದ ವಚನಗಳೇ ಪ್ರಮಾಣ. ಅವರು ಆಚರಿಸಿದ ಮಾರ್ಗವೇ ನಮಗೆ ಹೆದ್ದಾರಿ. "ವಿಪ್ರ ಮೊದಲು ಅಂತ್ಯಜಕಡೆಯಾಗಿ ಶಿವಭಕ್ತರಾದವರನೆಲ್ಲ ಒಂದೇ ಎಂಬೆ. ಹಾರುವ ಮೊದಲು ಶ್ವಪಚಕಡೆಯಾಗಿ ಭವಿಗಳಾದವರನೆಲ್ಲ ಒಂದೇ ಎಂಬೆ ಕೂಡಲ ಸಂಗಮದೇವಾ" ಎಂದು ಬಸವಣ್ಣನವರು ಹಾಡಿಕೊಂಡಿದ್ದಾರೆ. ಸದ್ಗುಣಿ ಸದಾಚಾರಿಯೇ ಕುಲಜನು. ದುರ್ಗುಣಿ ದುರಾಚಾರಿಯೇ ಕುಲಹೀನನು. ಸದ್ಭಕ್ತಿಸಂಪನ್ನನಾದ ಶರಣನು ಯಾವ ಕುಲದಲ್ಲಿ ಹುಟ್ಟಿದರೂ ತಮ್ಮವನೆಂದೇ ಭಾವಿಸಿ ತಲೆಯ ಮೇಲೆ ಹೊತ್ತುಕೊಂಡು ಕುಣಿದಾಡಿದರು ನಮ್ಮ ಶರಣರು. ಡೋಹರ ಕಕ್ಕಯ್ಯ, ಮೊಚ್ಚಿಗರ ಹರಳಯ್ಯ, ಮಡಿವಾಳ ಮಾಚಯ್ಯ, ಅಂಬಿಗರ ಚೌಡಯ್ಯ, ಮೇದಾರ ಕೇತಯ್ಯ, ಹಡಪದ ಅಪ್ಪಣ್ಣ, ಮೊದಲಾದವರಿಗೆ ಕುಲವೆಲ್ಲಿ ? ಕುಲಛಲದ ನೆಲೆಯನ್ನು ಮೀರಿದ ಮಹಿಮರಲ್ಲಿ ಕುಲವನರಸುವರೇ? ಮನುಷ್ಯನ ಯೋಗ್ಯತೆಗೆ ಮನ್ನಣೆಯಲ್ಲದೆ ಕುಲಕ್ಕೆ ಮನ್ನಣೆಯೇ ? ಹಾಗಿದ್ದರೆ ವಿಪ್ರನಾದ ಮಧುವಯ್ಯನು ಹೊಲೆಯನಾದ ಹರಳಯ್ಯನ ಮಗನಿಗೆ ತನ್ನ ಮಗಳನ್ನು ಕೊಟ್ಟು ಲಗ್ನ ಮಾಡುತ್ತಿದ್ದನೇ ?

ಉದ್ಯೋಗಗಳಿಂದ ಕುಲಗಳು ರೂಪವಾಗಿವೆಯೇ ಹೊರತು ಅವುಗಳಲ್ಲಿ ಹೆಚ್ಚು ಕಡಿಮೆಗಳನ್ನೆಣಿಸಕೂಡದು. ಶರಣರು ಕಾಯಕವೇ ಕೈಲಾಸವೆಂದು ಕಸಬುಗಳ ಯೋಗ್ಯತೆಯನ್ನು ಮೇಲ್ಮಟ್ಟಕ್ಕೆತ್ತಿದರು. ಬೇಕಾದ ಕಾಯಕ ಮಾಡಿದರೂ ಶಿವಭಕ್ತಿಸಂಪನ್ನರಾದವರೆಲ್ಲ ಒಂದೇ ಎಂಬ ಮಾತನ್ನು ಶರಣರು ಒತ್ತಿ ಹೇಳಿದ್ದಾರೆ. "ದೇವಸಹಿತ ಭಕ್ತ ಮನೆಗೆ ಬಂದರೆ ಕಾಯಕವಾವುದೆಂದು ಬೆಸಗೊಂಡೆನಾದರೆ ಆಣೆ, ನಿಮ್ಮಾಣೆ; ಭಕ್ತರಲ್ಲಿ ಕುಲವನರಿಸಿದರೆ ಕೂಡಲಸಂಗಮದೇವಾ ನಿಮ್ಮ ರಾಣಿವಾಸದಾಣೆ. ಎಂದು ಬಸವಣ್ಣನವರು ಅಪ್ಪಣೆಕೊಡಿಸಿದ್ದಾರೆ. ಮತ್ತು ಅವರು ಹೇಳುವದೇನಂದರೆ— 'ಕಾಸಿ ಕಮ್ಮಾರನಾದ, ಬೀಸಿ ಮಡಿವಳನಾದ, ಹಾಸನಿಕ್ಕಿ ಸಾಲಿಗನಾದ, ವೇದವನೋದಿ ಹಾರುವನಾದ. ಕುಲವೇನೋ ಅವಂದಿರ ಕುಲವೇನು ? ಕರ್ಣದಲ್ಲಿ ಜನಿಸಿದವರುಂಟೇ ಜಗದಲ್ಲಿ ? ಸಕಲ ಜೀವಾತ್ಮರಿಗೆ ಲೇಸನೇ ಬಯಸುವ ನಮ್ಮ ಕೂಡಲಸಂಗನ ಶರಣರೇ ಕುಲಜರು. ಆದುದರಿಂದ ಪರಮಾತ್ಮನ ಕರುಣವನ್ನು ಪಡಕೊಂಡವರೇ ಕುಲಜರು. ಸರ್ವಜ್ಞನು ಕೂಡ ಹೀಗೆ ಹೇಳಿರುವನು. "ಜಾತಿಹೀನನ ಮನೆಯ ಜ್ಯೋತಿತಾ ಹೀನವೇ । ಜಾತಿ ವಿಜಾತಿಯೆನಬೇಡ, ದೇವನೊಲಿದಾತನೇ ಜಾತ ಸರ್ವಜ್ಞ, ಭಗವದ್ಗೀತೆಯಲ್ಲಿ ಶ್ರೀಕೃಷ್ಣನು " ಚಾತುರ್ವರ್ಣ್ಯಂ ಮಯಾ ಸೃಷ್ಟಂ ಗುಣಕಾರ್ಮವಿಭಾಗಶಃ " ಅಂದರೆ ಗುಣಕರ್ಮಗಳಿಗನುಸರಿಸಿ ನಾಲ್ಕು ವರ್ಣಗಳನ್ನು ಕಲ್ಪಿಸಿರುವೆನೆಂದು ಹೇಳಿರುವನೇ ಹೊರತು. ಹೆಚ್ಚು ಕಡಿಮೆಗಳನ್ನು ತೋರಿಸಲಿಕ್ಕೆ ಹೇಳಿರುವದಿಲ್ಲ. ಬ್ರಾಹ್ಮಣನು ಹೆಚ್ಚಲ್ಲ; ಶೂದ್ರನು ಕಡಿಮೆಯಲ್ಲ. ಕ್ಷತ್ರಿಯ ವೈಶ್ಯರು ಮಧ್ಯಮ ತರಗತಿಯವರಲ್ಲ. ಧಾರ್ಮಿಕ ದೃಷ್ಟಿಯಿಂದ ಎಲ್ಲರೂ ಒಂದೇ. ಆದರೆ ಅವರವರಲ್ಲಿ ಯಾರ್‍ಯಾರು ಹೆಚ್ಚಿನ ಆಧ್ಯಾತ್ಮಿಕೋನ್ನತಿಯನ್ನು ಪಡೆಯುವರೋ ಅವರು ಹೆಚ್ಚಿನವರೆಂದು ಲೋಕವು ಮನ್ನಿಸುವದು.

ಆದರೆ ಚಾತುರ್ವರ್ಣಗಳ ಅಪಾರ್ಥಮಾಡಿ ಮನಸ್ಮೃತಿ ಮೊದಲಾದ ಗ್ರಂಥಗಳು ಬ್ರಾಹ್ಮಣ ಜಾತಿಯಲ್ಲಿ ಹುಟ್ಟಿದವನು ಶ್ರೇಷ್ಠನೆಂದೂ ಶೂದ್ರ ಜಾತಿಯಲ್ಲಿ ಜನಿಸಿದವನು ಕನಿಷ್ಠನೆಂದೂ ಜಾತೀಯತೆಯ ಭಾವನೆಯನ್ನು ಭಾರತೀಯರಲ್ಲಿ ಬೇರೂರಿಸಿದವು. ಇದೇ ಸಾಂಪ್ರದಾಯವು ಸಾವಿರಾರು ವರ್ಷಗಳಿಂದ ಹಿಂದೂ ಸಮಾಜದಲ್ಲಿ ರೂಢಿಗತವಾಗಿದೆ. ಜಾತಿಯಲ್ಲಿ ಹೆಚ್ಚು ಕಡಿಮೆಗಳನ್ನೆಣಿಸುವ ದುಷ್ಟ ಪ್ರಮಾದವು ಸಮಾಜದಲ್ಲಿ ಸೇರಿ ನೂರೆಂಟು

ಪಂಥ ಪಂಗಡಗಳು ಹುಟ್ಟಿ ಬೆಳೆದು ದೇಶದಲ್ಲಿ ಅನೈಕ್ಯತೆ, ದೌರ್ಬಲ್ಯ, ಪರಸ್ಪರ ಅಸಹನೆ, ಅಸೂಯೆ ಮೊದಲಾದ ದುರ್ಗುಣಗಳು ನೆಲೆಗೊಂಡಿವೆ. ಇದಕ್ಕೆ ಸ್ಮೃತಿಗಳೇ ಹೊಣೆ. ಎಲ್ಲ ಜಾತಿ ಪಂಥಗಳ ಮೇಲೂ ಸ್ಮೃತಿಗಳ ಪ್ರಭಾವವು ಬಿದ್ದು ದೇಶವು ಅಧೋಗತಿಗೆ ಹೋಗಿದೆ.

ಈ ಜಾತ್ಯಂಧತೆಯನ್ನು ನಿರ್ಮೂಲಗೊಳಿಸಲು ಬುದ್ಧ, ಬಸವೇಶ್ವರ, ಮ. ಗಾಂಧಿಯವರು ಆಯಾಯ ಕಾಲಕ್ಕೆ ಜನ್ಮ ತಾಳಿ ವಿಶ್ವಪ್ರಯತ್ನಮಾಡಿದರು. ಆದರೆ ನೀತಿ ಸಂಪನ್ನರಾದವರೆಲ್ಲ ಒಂದೇ ಎಂದು ಸಾರಿದ ಬುದ್ಧದೇವನಿಗೆ ಸನಾತನಿಗಳು ಹಂದಿಯ ಮಾಂಸದಲ್ಲಿ ವಿಷ ಬೆರಿಸಿಕೊಟ್ಟು ಪ್ರಾಣ ಹರಣಮಾಡಿದರು. ಬಸವೇಶ್ವರನು ಉದಾತ್ತ ಜೀವಿಗಳಾದ ಹರಳಯ್ಯ ಮಧುವಯ್ಯಗಳ ಶರೀರ ಸಂಬಂಧ ಬೆಳಿಸಿದ್ದರಿಂದ ಕರ್ಮಠರು ಬಸವಣ್ಣನು ದೇಶವನ್ನೆಲ್ಲ ಕುಲಗೆಡಿಸಿ ಹಾಳು ಮಾಡಿದನೆಂಬ ಆರೋಪ ಹೊರಿಸಿ ಹೂಲಿಯನ್ನೆಬ್ಬಿಸಿದ್ದರಿಂದ ಹರಳಯ್ಯ ಮಧುವಯ್ಯಗಳನ್ನು ಶೂಲಕ್ಕೇರಿಸಿದ್ದಾಯಿತು. ಅದನ್ನು ಕೇಳಿ ಅತ್ಯಂತ ಮನನೊಂದ ಬಸವನು ಶರಣರಿಗಾದ ಕೇಡನ್ನು ಸಹಿಸಲಾರದೆ ತಳಮಳದಿಂದ ಕೂಡಲ ಸಂಗಯ್ಯನಲ್ಲಿ ತನ್ನ ಆತ್ಮವನ್ನು ಆಹುತಿಕೊಟ್ಟನು. ಹಿಂದೂ ಮುಸಲ್ಮಾನರಲ್ಲಿ ಬಂಧುಭಾವ ಸೌಹಾರ್ದಗಳನ್ನು ಬೆಳಿಸಲೆತ್ನಿಸುತ್ತಿದ್ದ ಮ. ಗಾಂಧಿಜಿಯವರನ್ನು ತಲೆತಿರುಕನಾದ ಒಬ್ಬ ಹಿಂದುವು ಗುಂಡಿನೇಟಿಗೀಡು ಮಾಡಿದನು. ಈ ಮೇರೆಗೆ ಜಾತ್ಯಂಧತೆಯ ಭೂತವು ಮೂರು ದೊಡ್ಡ ಆಹುತಿಗಳನ್ನು ತೆಗೆದುಕೊಂಡರೂ ನಾಶವಾಗದೆ ಕಳ್ಳತನದಿಂದ ಹಾಗೆಯೇ ಬದುಕಿಕೊಂಡು ಸಾಗಿದೆ ಮತ್ತು ಸಾಗುತ್ತಲಿದೆ.

ಹಿಂದುಸ್ತಾನ ಸರಕಾರದವರು ಈಗ ಜಾತೀಯ ಸಂಸ್ಥೆಗಳೆನಿಸುವ ಹಿಂದು ಮಹಾಸಭೆ, ರಾಷ್ಟ್ರೀಯ ಸೇವಾಸಂಘ, ಮುಸ್ಲಿಂ ಲೀಗ, ಅಕಾಲಿದಳ ಮೊದಲಾದವುಗಳು ಅಕ್ರಮವೆಂದು ಸಾರಿದರೂ ಜಾತೀಯತೆಯು ನಷ್ಟವಾಗಬಹುದೆಂದು ಹೇಳಲಿಕ್ಕಾಗುವದಿಲ್ಲ. ಕೆಲವು ಸ್ವಾರ್ಥಿಸಮಾಜದವರು ಜಾತೀಯತೆಯ ಅರ್ಥದ ದುರುಪಯೋಗ ಮಾಡಿಕೊಂಡು ಇತರ ಸಮಾಜಗಳ ಸೊತ್ತನ್ನು ಅಪಹರಿಸಬಹುದು. ಸರಕಾರದಲ್ಲಿ ಹೆಚ್ಚು ಸ್ಥಾನಗಳನ್ನು ಪಡೆಯಬಹುದು. ಚುನಾವಣೆಯ ಸಮಯದಲ್ಲಿ ಸ್ಥಾನಮಾನಗಳನ್ನು ಪಡೆಯಲು ಮುಂದುವರಿಯಬಹುದು. ನಾವು ಯಾವ ಜಾತಿಗೂ ಸಂಬಂಧ

ವಿಲ್ಲ. ದೇಶ ಸೇವೆಯೋ ನಮ್ಮ ಗುರಿಯೆಂದು ಹೊರಗೆ ಸಾರುತ್ತಾ ಒಳ ಗಿಂದೊಳಗೆ ತಮ್ಮ ಜಾತೀಯ ಜನರಿಗೇನೇ ಎಲ್ಲ ತರಹದ ಸುಖ ಸೌಲಭ್ಯಗಳನ್ನೊದಗಿಸಿಕೊಡುವ ಠಕ್ಕ ಸಮಾಜದವರೂ ಮುಂದುವರಿಯಬಹುದು. ಇದು ಪ್ರಜಾಸ್ವಾತಂತ್ರ್ಯದ ಯುಗವಾದ್ದರಿಂದ ಅಂಥ ಸ್ವಾರ್ಥ ಹಾಗೂ ಠಕ್ಕ ಸಮಾಜಗಳ ಮೋಸದ ಕೃತಿಗಳನ್ನು ಬೈಲಿಗೆಳೆದು ದೇಶಕ್ಕೆ ನಿಜಸ್ಥಿತಿಯನ್ನು ತೋರಿಸಿಕೊಡುವದು ಪ್ರತಿಯೊಬ್ಬನ ಆದ್ಯ ಕರ್ತವ್ಯವಾಗಿದೆ.

ಕೇವಲ ರಾಜಕೀಯ ಶಾಸನಗಳಿಂದ ಜಾತೀಯತೆಯು ನಷ್ಟವಾಗಲಾರದು. ಅದು ಬೂದಿ ಮುಚ್ಚಿದ ಕೆಂಡದಂತೆ ಹಾಗೇ ಹುದುಗಿಕೊಂಡು ಪ್ರಸಂಗ ಬಂದಾಗ ತಲೆಯತ್ತೇ ಎತ್ತುತ್ತದೆ. ಅದನ್ನು ಮುರಿಬಡಿಯಲು ಆತ್ಮಶಕ್ತಿಯುಳ್ಳ ಮ. ಗಾಂಧಿಯಂಥವರೇ ಸಮರ್ಥರು. ಅದಕ್ಕಾಗಿ ಸಮಾಜ ಪಕ್ಷದ ಧುರೀಣರಾದ ಶ್ರೀ ಜಯಪ್ರಕಾಶ ನಾರಾಯಣರು ಹೇಳಿರುವದೇ ನಂವರೆ "ಕೇವಲ ರಾಜಕೀಯ ಕೈದಿಗಳಿಂದ ಜಾತಿಯತೆಯನ್ನು ಬಗ್ಗು ಬಡೆಯುವದು ಶಕ್ಯವಿಲ್ಲ. ಸಾಂಸ್ಕೃತಿಕ ದೃಷ್ಟಿಯಿಂದ ಅದನ್ನು ತಡೆಗಟ್ಟಬೇಕು. ಅದರ ಸಲುವಾಗಿ ಶ್ರೀ ಅರವಿಂದ ಘೋಷ, ಶ್ರೀ ರಮಣಮಹರ್ಷಿ ಮೊದಲಾದ ಸಾಧುಸತ್ಪುರುಷರು ತಮ್ಮ ಗವಿಗಳೊಳಗಿಂದ ಹೊರಬಿದ್ದು ಜಾತೀಯತೆಯನ್ನು ನಷ್ಟಪಡಿಸಿ ದೇಶದಲ್ಲಿ ಐಕ್ಯತೆಯನ್ನು ನೆಲೆಗೊಳಿಸಬೇಕು."

ಶರಣರು ಮರಳಿ ಬರುವ ದಿನಗಳು ಸಮೀಪಿಸಿವೆಯೆಂದು ನಮ್ಮವರ ಕಾಲಜ್ಞಾನದ ವಚನಗಳು ಸಾರುತ್ತವೆ. ಹಿಂದೆ ಗತಿಸಿದ ಶರಣರು ಇಂದು ಅವೇ ರೂಪದಿಂದ ಉದ್ಭವಿಸುತ್ತಾರೆಂಬರ್ಥವಲ್ಲ. ಆದರೆ ಹಿಂದಿನ ಶರಣರ ವಿಚಾರಗಳು ಇಂದಿನ ಸಮಾಜದಲ್ಲಿ ಬಳಕೆಯಲ್ಲಿ ಬರುತ್ತವೆಂಬರ್ಥ. ಆದುದರಿಂದ ಬಸವಾದಿ ಶರಣರ ಸಾಂಪ್ರದಾಯಿಕರಾದ ನಾವು ಈಗ ಜಗತ್ತು ಯಾವ ದಿಶೆಗೆ ಓಡುತ್ತಿದೆ, ನಮ್ಮ ದೇಶವು ಯಾವ ಪರಿಸ್ಥಿತಿಯಲ್ಲಿ ಮುಂದಡಿಯಿಡಹತ್ತಿದೆ, ಇವನ್ನೆಲ್ಲ ಪರಿಶೀಲಿಸಿ ಯಾವ ಯಾವ ವಿಧಾಯಕ ಕಾರ್ಯಗಳನ್ನು ನಾವು ಕೈಕೊಂಡು ದೇಶಕ್ಕೆ ನಮ್ಮ ಸೇವಾಕಾಣಿಕೆಯನ್ನು ಸಲ್ಲಿಸಬೇಕೆಂಬ ವಿಷಯವನ್ನು ಈಗಲೆ ವಿಚಾರಿಸಿಟ್ಟುಕೊಳ್ಳುವದು ನೆಟ್ಟಗೆ.

ಶರಣರ ಸಂಸ್ಕೃತಿಯು ವಿಶಾಲವಾದುದು; ಸಂಕುಚಿತವಲ್ಲ. ಜಗತ್ತೇ ಮಾನ್ಯ ಮಾಡಲು ತಕ್ಕದು. ಹೀಗಿರುವಾಗ ನಾವು ನಮ್ಮೊಳಗೆ ಅನೇಕ ಒಳಪಂಗಡಗಳನ್ನು ಕಲ್ಪಿಸಿ ನಾ ಹೆಚ್ಚು ನಿ ಕಡಿಮೆಯೆಂಬ ಕ್ಷುದ್ರ ವಿಚಾರ

ದಿಂದ ಹೊಡೆದಾಡುತ್ತ ಹೋದರೆ ನಮ್ಮ ಸಂಸ್ಕೃತಿಯು ಅಧೋಗತಿಯಾಗುವದಲ್ಲದೆ ನಾವು ಅನ್ಯ ಸಂಸ್ಕೃತಿಯ ದಾಸರಾಗಿ ಚಿರಕಾಲ ನಡೆದು ಬಂದ ನಮ್ಮ ಸಾಹಿತ್ಯ ಸಂಸ್ಕೃತಿಗಳನ್ನು ಕಳೆದುಕೊಳ್ಳುವ ಸ್ಥಿತಿಯು ಪ್ರಾಪ್ತವಾದೀತು.

ಮಾನವಪ್ರಾಣಿಗಳಲ್ಲಿ ಜಾತೀಯತೆಯೆಂಬುದಿಲ್ಲ ಎಂದು ಸಾರಿ ಅದನ್ನು ಬಳಿಕೆಯಲ್ಲಿ ತಂದ ಸಮಾಜವೆಂದರೆ ವೀರಶೈವ ಸಮಾಜವು. ಇದು ನಿಜವಾಗಿ ಹೆಮ್ಮೆಯ ಮಾತು. ಈ ಹೆಮ್ಮೆಯನ್ನು ನಾವು ದೇಶಕ್ಕೆ ತೋರಿಸಿ ದೇಶದ ಗೌರವಾದರಗಳಿಗೆ ಪಾತ್ರರಾಗಬೇಕಾಗಿದೆ. ಬ್ರಾಹ್ಮಣನಿಂದ ಹೊಲೆಯನವರೆಗಿನ ಹೊಲೆ ಹದಿನೆಂಟು ಜಾತಿಗಳು ಶರಣ ಸಾಂಪ್ರದಾಯದಲ್ಲಿ ಒಂದುಗೂಡಿವೆ. ಆದರೆ ಕಾಲಾಂತರದಿಂದ ಕರ್ಮಠರಾದ ವೈದಿಕರ ಜಾತ್ಯಂಧತೆಯ ಅನುಕರಣದಿಂದ ನಾವು ನಮ್ಮೊಳಗೆ ಜಾತಿಭೇದಗಳನ್ನು ಕಲ್ಪಿಸಿ ಒಳಪಂಗಡಗಳನ್ನುಂಟು ಮಾಡಿಕೊಂಡು ಪರಸ್ಪರ ಭೋಜನ ವಿವಾಹ ಕಾರ್ಯಗಳನ್ನು ನಿಲ್ಲಿಸಿಬಿಟ್ಟಿದ್ದೇವೆ. ಒಳಪಂಗಡಗಳ ಏಕೀಕರಣ ಮಾಡಿ ಪರಸ್ಪರರಲ್ಲಿ ಅನ್ನ ಪಾನ-ವಿವಾಹಾದಿಗಳು ನಡೆಯುವಂತೆ ಮಾಡುವದು ನಮ್ಮಗಳ ಕರ್ತವ್ಯ. ಇದಕ್ಕಾಗಿ ಉತ್ತೇಜನ ಕೊಡಲು ಮೊದಲು ಗುರು ವಿರಕ್ತರು ಟೊಂಕ ಕಟ್ಟಬೇಕು. ಭಕ್ತರಂತೂ ಅವರನ್ನು ಹಿಂಬಾಲಿಸಿಯೇ ತೀರುವರು.

ಈಗ ಕರ್ನಾಟಕದಲ್ಲಿ ಎಷ್ಟೋ ಹಿಂದುಳಿದ ಸಮಾಜಗಳು ಮದ್ಯಪಾನ ಮಾಂಸಭಕ್ಷಣೆಗಳನ್ನು ಬಿಟ್ಟು ಸದಾಚಾರ ಸದ್ಭಕ್ತಿಯಿಂದ ನಡೆದುಕೊಂಡು ಶರಣ ಸಾಂಪ್ರದಾಯವನ್ನು ಸೇರಲಿಚ್ಛಿಸಿದರೆ ಅವುಗಳನ್ನು ಪುನ: ದೀಕ್ಷಾದಿ ವಿಧಾನಗಳಿಂದ ಒಳಗೆ ತೆಗೆದುಕೊಳ್ಳುವದು ಸಮಾಜ ಹಿತದ ದೃಷ್ಟಿಯಿಂದಲೂ ರಾಷ್ಟ್ರಹಿತದ ದೃಷ್ಟಿಯಿಂದಲೂ ವಿಹಿತವಾದುದು. ಈ ಸಮಾಜಗಳು ಹಿಂದಕ್ಕೆ ಬಸವಣ್ಣನವರ ಕಾಲದಲ್ಲಿ ಶರಣ ಸಾಂಪ್ರದಾಯ ಕೈಕೊಳಪಟ್ಟಿದ್ದವು. ಆದರೆ ಮಧ್ಯಂತರದಲ್ಲಿ ನಮ್ಮೊಳಗೆ ಜಾತೀಯತೆಯ ಭೂತವು ಪುನಃ ತಲೆದೋರಿ ಅವರನ್ನು ದೂರವಾಗಿರಿಸಿಬಿಟ್ಟಿದ್ದೇವೆ. ಒಳ್ಳೆ ಸಂಘಟನೆಯನ್ನು ತೀವ್ರವೇ ಮಾಡಿಕೊಂಡು ಈ ಕಾಯಕಕ್ಕೆ ಗುರು ವಿರಕ್ತರು ಕೈಹಾಕಿ ಸಮಾಜದ ಗೌರವವನ್ನೂ ಸಂಸ್ಕೃತಿಯನ್ನೂ ಕಾಪಾಡಿಕೊಳ್ಳಬೇಕು.

ಈಗ ಕರ್ನಾಟಕದಲ್ಲಿ ಮುಸಲ್ಮಾನ ಕ್ರಿಸ್ತಿ ಧರ್ಮಗಳನ್ನು ಬಿಟ್ಟರೆ ಉಳಿದ ಎಲ್ಲ ಪಂಗಡದವರೂ ಹಿಂದಕ್ಕೆ ಶರಣ ಸಾಂಪ್ರದಾಯದಲ್ಲಿ ಪ್ರವೇಶ ವಾಗಿದ್ದಾರೆ. ಉದಾಹರಣಾರ್ಥ, ಮಡಿವಳರು, ಮೇದಾರರು, ಗೌಳಿಗರು, ಬಡಿಗರು, ಕಮ್ಮಾರರು, ಕುಂಬಾರರು, ಮೊಚ್ಚಿಗರು, ಢೋರರು, ಕುರುಬರು, ರಡ್ಡಿಗಳು, ಸಾದರು, ನೊಣಬರು, ದೇವಾಂಗರು, ಜೈನರು, ಬ್ರಾಹ್ಮಣರು ಇತ್ಯಾದಿ ಮತದ ಜನಗಳು ಶರಣಪಂಥವನ್ನನುಸರಿಸಿ ನಡೆದಿದ್ದಾರೆ. ನಮ್ಮ ಸಮಾಜದ ಪೂಜ್ಯರಾದ ಗುರುವಿರಕ್ತರು ಸಮಾಜದ ಹಿತದ ಕಡೆಗೆ ಅಷ್ಟು ಗಮನಿಸದಿರುವದರಿಂದಲೇ ಇಂಚಗೇರಿಪಂಥ, ಆರೂಢಪಂಥ, ನವ ಕಲ್ಯಾಣಮಠದ ಪಂಥ ಮುಂತಾದ ಪಂಥಗಳು ತಲೆಯೆತ್ತಿ ಶರಣರ ಮಾರ್ಗ ವನ್ನು ಬೋಧಿಸುತ್ತಲೂ ಆಚರಿಸುತ್ತಲೂ ಸಾಗಿವೆ. ದೇಶಕಾಲ ಪರಿಸ್ಥಿತಿ ಗಳನ್ನರಿತು ಆಚರಿಸುವವರೇ ಜಾಣರು.

ಈಗ ದೇಶದಲ್ಲಿ ಜಾತೀಯತೆಯನ್ನು ನಿರ್ಮೂಲಗೊಳಿಸುವ ಗಾಳಿಯು ಭರದಿಂದ ಬೀಸಹತ್ತಿದೆ. ಆ ಗಾಳಿಗುಂಟ ನಾವೂ ಹೋಗಬೇಕಾಗಿದೆ. ನಮ್ಮ ಲ್ಲಿರುವ ಕ್ಷುದ್ರವಾದ ಹೆಚ್ಚುಕಡಿಮೆಗಳನ್ನು ನಾವು ದೂರೀಕರಿಸಿ ನಮ್ಮ ಹಿಂದುಳಿದ ಬಂಧುಗಳನ್ನಪ್ಪಿಕೊಳ್ಳಬೇಕು. ಅವರ ಜೀವನವನ್ನು ಉದಾತ್ತಗೊಳಿಸಲೆತ್ನಿಸಬೇಕು. ಅವರಲ್ಲಿ ನೆಲೆಗೊಂಡ ದುಷ್ಟ ಸಾಂಪ್ರದಾಯಗಳನ್ನೂ ಚಟಗಳನ್ನೂ ಬಿಡಿಸಬೇಕು. ಅವರನ್ನು ನಮ್ಮೊಳಗೆ ಕೂಡಿಸಿಕೊಂಡು ಐಕ್ಯತೆಯನ್ನು ಬೆಳಿಸಿಕೊಳ್ಳಬೇಕು. ಹಾಗೆ ಮಾಡದಿದ್ದರೆ ನಮ್ಮ ಸಂಸ್ಕೃತಿ, ನಮ್ಮ ಸಾಹಿತ್ಯ, ನಮ್ಮ ಭಾಷೆ, ನಮ್ಮ ಜೀವನ ಇವೆಲ್ಲವುಗಳಿಗೆ ದೊಡ್ಡ ಪೆಟ್ಟು ತಗಲುವ ಸಂಭವವುಂಟು. ಇದನ್ನು ನಾವು ದುರ್ಲಕ್ಷಿಸುವಂತಿಲ್ಲ. ಜಾತೀಯತೆಯನ್ನು ಹೋಗಲಾಡಿಸಿ ದೇಶಕ್ಕೆ ಒಳ್ಳೆಯ ಉದಾಹರಣೆಯನ್ನು ತೋರಿಸುವ ಮೊದಲನೆಯ ಸಮಾಜವೆಂದರೆ ನಮ್ಮದೆಂದು ಒಳ್ಳೆ ಅಭಿಮಾನದಿಂದ ಹೇಳಬೇಕಾಗಿದೆ. ಅಂಥ ಸಮಯ ಬಂದಿದೆ. ಅದನ್ನು ನಾವು ಕೃತಿ ರೂಪದಲ್ಲಿ ತರೋಣ.

---

# ಸಿದ್ಧಾಂತ ಶಿಖಾಮಣಿ.

(ಲೇಖಕಃ— ಶ್ರೀ. ಬಸವಪ್ಪ ಚನ್ನಪ್ಪ ಪಟ್ಟೇದ ವಂಟಮುರಿ.)

ನೂರೊಂದು ಸ್ಥಲಗಳನ್ನು ನೋಡಬೇಕೆಂದು ನನಗೆ ಅಪೇಕ್ಷೆ ಹುಟ್ಟಿತು. ಆ ಬಗ್ಗೆ "ಸಿದ್ಧಾಂತ ಶಿಖಾಮಣಿ" ಗ್ರಂಥವು ಪ್ರಸಿದ್ಧವೇ ಅದೆ. ಆ ಗ್ರಂಥ ದಿಂದ ವೀರಶೈವ ಸಮಾಜಕ್ಕೆ ಮಹದುಪಕಾರವಾಗಿದೆ. ಅದು ಸಂಸ್ಕೃತದ ಲ್ಲಿದ್ದರೂ ವಿದ್ವಾನ್ ಕರಿಬಸವ ಶಾಸ್ತ್ರಿಗಳು ಅದಕ್ಕೆ ಸರಸವಾದ ಸ್ವಾರಸ್ಯ ವುಳ್ಳ ಟೀಕೆಯನ್ನು ಬರೆದುದಾದರೂ ನನಗೆ ಗೊತ್ತಿತ್ತು. ಆದುದರಿಂದ ಅದನ್ನೇ ಓದಲು ನಾನು ಆರಂಭಿಸಿದೆನು. ಮೊದಲು "೪೪" ಅಂಗಸ್ಥಲ ಗಳನ್ನೂ ಬಳಿಕ "೫೭" ಲಿಂಗಸ್ಥಲಗಳನ್ನೂ ಅದರಲ್ಲಿ ಕ್ರಮವಾಗಿ ವರ್ಣಿಸಿ ರುವರು. ಅಂಗಸ್ಥಲಗಳನ್ನೆಲ್ಲ ಪಡೆದ ಭಕ್ತನು ಐಕ್ಯನಾಗುವನು. ಲಿಂಗ ಸ್ಥಲಗಳು ಆ ಐಕ್ಯನ ಯೋಗ್ಯತೆ ಆಚರಣೆ ಭಕ್ತೋದ್ಧಾರಾರ್ಥವಿರುವ ವೆಂದು ಹೇಳಿ, ಮುಂದೆ ಅವನ್ನೂ ವಿವರಿಸಿರುವರು. ಗ್ರಂಥವನ್ನೆಲ್ಲ ಕುತೂ ಹಲಪೂರ್ವಕವಾಗಿ ಮನನ ಮಾಡಿದೆನು.

ತರುವಾಯ ಲಿಂಗೈಕ್ಯವಾದ ಪೂಜ್ಯ, ಹರ್ಡೇಕರ ಮಂಜಪ್ಪನವರು "ಸಿದ್ಧಾಂತ ಶಿಖಾಮಣಿ"ಯನ್ನೇ ಆಧಾರವಾಗಿಟ್ಟುಕೊಂಡು ಬರೆದ ವೀರಶೈವ ಮತತತ್ವಗಳು" ಎಂಬ ಚಿಕ್ಕ ಪುಸ್ತಕವನ್ನಾದರೂ ಓದಿದೆನು. ಅದರಿಂದಲೂ ಮೂಲಗ್ರಂಥದ ವಿಷಯವಾಗಿ ನನ್ನಲ್ಲುಂಟಾದ ಗ್ರಹಿಕೆಯು ಸ್ಥಿರಪಟ್ಟಿತು. ಬಳಿಕ ಮನದಲ್ಲಿ ಸಂಘರ್ಷಣಕ್ಕೆ ಆರಂಭವಾಗಿ ಹಲಕೆಲವು ಆಕ್ಷೇಪಗಳು ಇಲ್ಲವೆ ಸಂದೇಹಗಳು ತಲೆದೋರಿದವು. ಅವನ್ನು ದೂರೀಕರಿಸಿಕೊಳ್ಳದಿ ದ್ದರೆ ನಿರ್ವಾಹವೇ ಇಲ್ಲ. ಆದುದರಿಂದ ಬಲ್ಲಿದರಾದ "ಶಿವಾನುಭವ" ವಾಚಕರೆದುರು ಅವನ್ನು ಮುಂಡಿಸಿರುವೆನು. ಮಹಾಶಯರು ಉದಾಸೀನ ರಾಗದೆ ಅವನ್ನು ಓದಿನೋಡಿ ತಕ್ಕ ಮಾರ್ಗದರ್ಶನ ಮಾಡಿ ನನ್ನನ್ನು ಉದ್ಧರಿಸುವರೆಂದು ನಂಬಿರುವೆನು.

ಅವು ಯಾವವೆಂದರೆಃ—

(೧) ಲಿಂಗಸ್ಥಳಗಳನ್ನೇನೂ ಹೊಂದದೆ ಬರಿಯ ಅಂಗಸ್ಥಲಗಳ ನ್ನಷ್ಟೇ ಹೊಂದಿದರೆ ಆ ಭಕ್ತರಿಗೆ (ಅಂಗರಿಗೆ) ಪೂರ್ಣತ್ವ ಬರುವದೋ ಹೇಗೆ? ಬರುತ್ತಿದ್ದರೆ ಅದು ಎಂತು?

(೧) ಬಾರದಿದ್ದರೆ ಬರೀ ೪೦ ಅಥವಾ ೪೪ ಅಂಗಸ್ಥಲಗಳನ್ನು ಪಡೆದ ಶರಣನಾಗಲಿ, ಐಕ್ಯನಾಗಲಿ ಗುರುವಾಗಲು ತಕ್ಕವರೆಂದು ಗ್ರಹಿಸಬಹುದೇ?

(೩) ಲಿಂಗಸ್ಥಲಗಳು ಐಕ್ಯನ ಯೋಗ್ಯತೆ ಆಚರಣೆ ಭಕ್ತೋದ್ಧಾರಕ್ಕೆ ಮಾತ್ರವಿರುವವೆಂದು ಸಿ. ಶಿ. ಗ್ರಂಥದಲ್ಲಿ ಹೇಳಿರುತ್ತದೆ. ಅವುಗಳನ್ನು ಉಳಿದ ಅಂಗರು ಪಡೆಯಲಿಕ್ಕೆ ಅವಸರವೂ ಇಲ್ಲ ಅವಶ್ಯವೂ ಇಲ್ಲ ಎಂದು ತಿಳಿಯಬಹುದೋ ಹೇಗೆ?

(೪) ಅಂಗಸ್ಥಳಗಳು ಆಯಾ ಅಂಗರು ತಮ್ಮ ಲಿಂಗಗಳಲ್ಲಿ ಬೆರೆಯು ಲಿಕ್ಕೆ ಅವಶ್ಯವಾದ ಗುಣಗಳು ಅಥವಾ ಸಾಧನಗಳು ಇರುತ್ತವೆಂದು ಹೇಳು ವದು ಸಮುಂಜಸವೆಂದು ಬಲ್ಲವರು ಒಪ್ಪಬಹುದಲ್ಲವೇ? ಅದಕ್ಕೇನಾದರೂ ತಡೆಯಿದ್ದರೆ ಅವನ್ನು ವಿವರಿಸಬೇಕು.

(೫) ತಡೆಗಳಿಲ್ಲದಿದ್ದರೆ ಅವು. "ಅಂಗದಲ್ಲಿ ಬೆರೆಯಲಿಕ್ಕೆ ಅವಶ್ಯ ವಾದ ಸಾಧನಗಳೇ!" ಎಂದು ನಂಬುವದು ಸಾಹಜಿಕವಾದುದು. ಹಾಗೂ ಸಾಧನಗಳನ್ನು ಮಾತ್ರ ಪಡೆದು ಸಾಧ್ಯ ಹೊಂದದೆ ಇದ್ದವರು ನಿಷ್ಫಲರಾಗು ವರು. ಅವರು ಗುರುಗಳೆನಿಸಲು ಅಷ್ಟೇನು ಉಚಿತರೆನಿಸರಲಿಲ್ಲವೇ?

(೬) ಲಿಂಗಸ್ಥಳಗಳಲ್ಲಿ ೪೫ ರಿಂದ ೬೮ ರ ವರೆಗೆ ೨೪ ಸ್ಥಳಗಳನ್ನು ಆ ಐಕ್ಯ ಇಲ್ಲವೇ ಶರಣ ಗುರುವು, ಲೋಕೋದ್ಧಾರಾರ್ಥವೇ ತಾನು ಅನು ಸರಿಸುವನಲ್ಲದೆ, ಅವೇನೂ ಅವನಿಗೆ ಬೇಕಾಗಿಲ್ಲ. ಯಾಕಂದರೆ ಅವನು ಐಕ್ಯನು. ಸ್ವಂತದ ಸಲುವಾಗಿ ಇವುಗಳದೇ ಗರಜು. ಇಲ್ಲವಾದ ಮೇಲೆ ಮುಂದಿನ ಸ್ಥಲಗಳದು ಅವನಿಗೆ ಏನು ಪರಿವೆ?

(೭) ಈ ೨೪ ಸ್ಥಲಗಳನ್ನು ಐಕ್ಯನು ಅನುಸರಿಸಿದ ಬಳಿಕ ಮುಂದಿನ ೩೩ ಸ್ಥಲಗಳನ್ನು ಆತನ ನೂತನ ಶಿಷ್ಯನು ಹೊಂದುವನು. ಹೀಗೆ ಇಬ್ಬರೂ ಕೂಡಿ ೫೭ ಲಿಂಗಸ್ಥಲಗಳನ್ನು ಹೊಂದಿದ್ದು ಸಿ. ಶಿ. ಯಿಂದ ಕಂಡು ಬರುತ್ತದೆ. ಬರೀ ಗುರುವಿನಾಜ್ಞಾ ಪಾಲನದಿಂದಲೇ ಈ ಶಿಷ್ಯನು ಕೃತಾ ರ್ಥನಾಗುವನು. ಹಿಂದಿನ (೪೪+೨೪) ಸ್ಥಲಗಳನ್ನು ಅವನು ಅನುಸರಿಸಿದ್ದು ಎಲ್ಲಿಯೂ ಕಂಡುಬರುವದಿಲ್ಲ. ಇದು ಓದುಗರನ್ನು ಭ್ರಮೆಗೊಳಿಸುವದ ಲ್ಲವೇ? ಈ ೧೦೧ ಸ್ಥಲಗಳು ಪ್ರತಿಯೊಬ್ಬರಿಗೆ ಅನುಸರಿಸಲಿರುವವಲ್ಲವೇ?

(೮) ಇನ್ನು ಭಕ್ತನ ಆಚಾರಲಿಂಗದ ವಿಚಾರ:—ಭಕ್ತನು ಗುರುತ್ರಯರಿಂದ ಲಿಂಗತ್ರಯ ಪಡೆದು ಜಂಗಮತ್ರಯ ಹೊಂದಬೇಕಾಗುವದು. ಇದು ಹೊಸದಾಗಿ ದೀಕ್ಷಾಬದ್ಧನಾದವನಿಗೆ (ದೀಕ್ಷಾಯುಕ್ತನಿಗೆ) ಶಕ್ಯವೇ ಅವನು ಬರೇ ಇಷ್ಟಲಿಂಗದ (ಬಹಿರ್‌ಲಿಂಗದ) ಆರಾಧಕನು. ಹೊರಗಣ ಸ್ಥೂಲ ಆಚಾರ ಹೊಂದುವದೇ ಅವನ ಕರ್ತವ್ಯವು. ಅಂದ ಮೇಲೆ ಇಲ್ಲಿ ಉಕ್ತವಾದುದು ಅದೆಂತಹ ಭಕ್ತತ್ವ? ಅದೆಂತಹ ಆಚಾರಲಿಂಗ? ಅವನು ಕೇವಲ ಆರಂಭದ ಭಕ್ತನೇ ಅಲ್ಲ. ಅಂಗರೆಲ್ಲರನ್ನು ತನ್ನಲ್ಲಿ ಒಳಕೊಂಡ ಮಹಾಭಕ್ತ. ಆಚಾರಲಿಂಗವಾದರೂ, ಸಂಪೂರ್ಣ ಆಚಾರಲಿಂಗ. ಅದರಲ್ಲಿ ಬಾಹಿರಂಗಿಕ, ಆಂತರಂಗಿಕ, ಸಾಹಜಿಕವೆಂಬ ಮೂರು ವಿಧದ ಆಚಾರಗಳ ಸಮಾವೇಶವಿರುವದು. ಇಲ್ಲಿ ಭಕ್ತಜನ್ಮದ ಇಡೀ ಧ್ಯೇಯವೇ ಉಕ್ತವಾಗಿರುವದು.

(೯) ಹೀಗೆ ಭಕ್ತನು ಷಡಂಗರಿಗೆಲ್ಲ ಸಾಮಾನ್ಯವಾಗಿ ಉಳಿದರೆ ಇಷ್ಟಲಿಂಗ ಪೂಜಕನಾದ ತ್ಯಾಗಾಂಗನ ಹೊಟ್ಟೆಯಲ್ಲಿರುವ ಉತ್ತರ ಉಪಾಂಗನಾದ ಮಹೇಶ್ವರನ ಜೋಡಿಗೆ ಪೂರ್ವ ಉಪಾಂಗನು ಯಾರೂ ಇಲ್ಲದಂತಾಗಿ ಬಿಟ್ಟಿತಲ್ಲ! ಅದರ ಗತಿ ಏನು. ?

(೧೦) ಅವನನ್ನು ಒಂದು ವೇಳೆ "ನೂತನ ದೀಕ್ಷಾಯುಕ್ತ" ಎಂದು ಕರೆಯಬಹುದು. ಆದರೆ ಅವನಿಗೆ ಮೊದಲು ಪಡೆದ ೮ ಸ್ಥಳಗಳ ಮುಂದಣ ಅಂಗಸ್ಥಲಗಳೂ ೯ ಲಿಂಗಸ್ಥಲಗಳೂ ಇಲ್ಲವಾಗುವವು. ಅವುಗಳ ವ್ಯವಸ್ಥೆ ಏನು? ಒಂದುವೇಳೆ ಅವನ್ನೆಲ್ಲ ಕಲ್ಪಿಸಿದರೆ ೧೦೧ಕ್ಕೆ ಮೀರಿ ಸ್ಥಲಗಳು ಹೋಗುವವು. ಬಿಟ್ಟರೆ ವ್ಯಂಗತ್ವ ತೋರುವದು. ಇದಕ್ಕೆ ಮಾರ್ಗವೇನು?

(೧೧) ದೀಕ್ಷಾಯುಕ್ತನಿಗೆ ಸಲ್ಲುವಂಥ ೮ರ ಮುಂದಣ ಅಂಗಸ್ಥಳಗಳನ್ನು ಕಲ್ಪಿಸಿದರೆ ಆ ೮ರ ಮುಂದಿದ್ದ ೭ ಸ್ಥಳಗಳು ಬದಿಗೇ ಉಳಿಯುವವು. ಅವು:—(೯) ಭಕ್ತಮಾರ್ಗ ಕ್ರಿಯಾಸ್ಥಲ. (೧೦) ಉಭಯ ಸ್ಥಲ. (೧೧) ತ್ರಿವಿಧ ಸಂಪತ್ತು ಸ್ಥಳ. (೧೨) ಚತುರ್ವಿಧ ಸಾರಾಯ ಸ್ಥಳ. (೧೩) ಉಪಾಧಿ ಮಾಟಸ್ಥಳ. (೧೪) ನಿರುಪಾಧಿ ಮಾಟಸ್ಥಳ. (೧೫) ಸಹಜ ಮಾಟಸ್ಥಳ. ಅವೆಲ್ಲ ಬಹು ಮಹತ್ವದವಿರುವದರಿಂದ ಇವನ್ನು ಯಾರು ಅನುಸರಿಸಬೇಕು?

ಹೀಗೆ ಒಂದಲ್ಲ ಎರಡಲ್ಲ, ಅನೇಕ ತರ್ಕವಿತರ್ಕಗಳು (ಸಂದೇಹಗಳು) ೧೦೧ ಸ್ಥಳಗಳನ್ನು ಓದಿ ಉದ್ಭವಿಸುವಂತಿವೆ. ಅದಕ್ಕೆ ಒಂಮ ವೇಳೆ ನನ್ನ ಅಜ್ಞಾನವೇ ಹೆಚ್ಚಾಗಿ ಕಾರಣವಿರಬಹುದು ಎಂದು ನನಗೆ ತೋರುತ್ತಿದ್ದರೂ ಒಮ್ಮೆ ನಿಜವನ್ನು ಕಂಡುಕೊಳ್ಳಬೇಕೆಂದು ಈ ಸಾಹಸ ಮಾಡಿರುವೆನು. ಆದಾದರೂ ಅಂತರಾತ್ಮನ ಪ್ರೇರಣೆಯಿಂದಲೇ. ಆ ಕಾರಣ ಬಲ್ಲವರು ಉದಾಸೀನರಾಗದೆ ಯೋಚಿಸಿ ಇವೆಲ್ಲಕ್ಕೆ ಸಮರ್ಪಕವಾದ ವಿವರಣೆಯನ್ನು ಪ್ರಸಿದ್ಧಿಸಿ ನನ್ನನ್ನು ಕಾಪಾಡಬೇಕೆಂದು ಸವಿನಯವಾಗಿ ಬೇಡಿಕೊಳ್ಳುವೆನು.

ಸಿ. ಶಿಯ ೧೦೧ ಸ್ಥಳಗಳ ಹೊಂದಿಕೆಯಲ್ಲಿ ದೋಷವಿದ್ದುದೇ ಸರಿ ಎಂಮ ಬಲ್ಲವರಿಗೆ ಅನಿಸಿದರೆ ಅವನ್ನು ಹೇಗೆ ಹೊಂದಿಸಬೇಕೆಂಬುದನ್ನಾದರೂ ಅವರು ಸೂಚಿಸಬಹುದು. ಆ ವಿಷಯವಾಗಿರುವ ನನ್ನ ವಿಚಾರವೆಂದರೆ:—ಅಂಗರು ತಮ್ಮ ಅಂಗಸ್ಥಳಗಳನ್ನು ಹೊಂದಿದ ಕೂಡಲೆ ತಮ್ಮ ಲಿಂಗಗಳಲ್ಲಿ ಬೆರೆಯುವದಕ್ಕೋಸ್ಕರ ಆಯಾ ಲಿಂಗಗಳಿಗೆ ಸಂಬಂಧಿಸಿದ ಲಿಂಗಸ್ಥಳಗಳನ್ನು ಪಡೆಯಬೇಕು. ಇದೇನೂ ಹೊಸದಲ್ಲ. ಮೊದಲು ಪ್ರಮಥರು ಹೇಳುತ್ತ ಬಂದುದೇ. ಆದಕಾರಣ ಅವುಗಳನ್ನು ಈ ರೀತಿ ಹೊಂದಿಸುವದೇ ಒಳ್ಳಿತು.

---

# ಮಹಾತ್ಮಾ ಗಾಂಧಿಯವರು ಮತ್ತು ವಿಶ್ವಧರ್ಮ.

(ಬರೆದವರುಃ-ಸ. ದ. ನಾಯಕ ಬಿ ಎ. ಎಸ್. ಟಿ. ಸಿ. ರಾಣೇಬೆನ್ನೂರ)

ಮಹಾತ್ಮಾ ಗಾಂಧಿಯವರ ಮರಣವು ಇಡೀ ವಿಶ್ವವನ್ನೇ ಶೋಕಸಾಗರದಲ್ಲಿ ಮುಳುಗಿಸಿದ ದೊಡ್ಡ ಆಘಾತವಾಯಿತು. ಕಾರಣವೇನು ಎಲ್ಲರಿಗೂ ತಿಳಿಯದಿದ್ದ ವಿಷಯವಲ್ಲ. ಮನುಷ್ಯನ ಸಾವಿನ ಬೆಲೆಯು ಅವನ ಗುಣಗಳ ಮೇಲೆ ಅವಲಂಬಿಸಿವೆ. ವಿಶ್ವವನ್ನೇ ತಮ್ಮ ತಪೋಭೂಮಿಯನ್ನು ಮಾಡಿಕೊಂಡಿದ್ದ ಮಹಾತ್ಮರ ಜೀವವು ಈ ಜಗತ್ತಿನಿಂದ ಕಣ್ಮರೆಯಾದಾಗ ನಾವು ಅವರ ಅಗಲುವಿಕೆಯನ್ನು ವಿಶ್ವಕ್ಕೆ ಬಂದ ಒಂದು ಗಂಡಾಂತರವೆಂದು ಊಹಿಸಲೇಬೇಕು. ಕರ್ಮದಿಂದಲೇ ಸಂಸಿದ್ಧಿಯನ್ನು ಪಡೆದ ಆ ಮಹಾತ್ಮರು ತಮ್ಮ ಕರ್ಮದ ಆಚರಣೆಯ ಉಚ್ಚ ಮಟ್ಟದಲ್ಲಿರುವಾಗ ಅವರ ಕರ್ಮದ ಮಹಿಮೆಯೇ ಅವರಿಗೆ ಮರಣವನ್ನು ತಂದೊಡ್ಡಿತು.

ಜಗತ್ತಿನಲ್ಲಿ ಹಿಂದೆ ಆಗಿ ಹೋದ ಮಹಾತ್ಮರ ಮರಣವನ್ನು ಕುರಿತು ವಿಚಾರಿಸೋಣ. ಸಾಕ್ರೆಟೀಸ ಮಹಾಪುರುಷನು ಜನತೆಯ ಕಲ್ಯಾಣಕ್ಕಾಗಿಯೇ ತನ್ನ ದೇಹವನ್ನು ಅರ್ಪಿಸಲಿಲ್ಲವೇ ? ಮಹಾತ್ಮಾ ಏಸೂಕ್ರಿಸ್ತರು ಆಗಿನ ಕಾಲದ ಧಾರ್ಮಿಕ ಮತ್ತು ಸಾಮಾಜಿಕ ಉನ್ನತಿಗೋಸ್ಕರ ಅತ್ಯಂತ ಕ್ರೂರವಾದ ಯಾತನೆಯನ್ನು ಅನುಭವಿಸಿ ಸಾಯಲಿಲ್ಲವೇ ? ಮಹಾತ್ಮಾ ಬಸವಣ್ಣನವರು ಸಾಹಿತ್ಯ ಮತ್ತು ಸಮಾಜದಲ್ಲಿ ಅಮೃತಮಯವಾದ ಕ್ರಾಂತಿಯನ್ನುಂಟುಮಾಡಿದರು. ಅವರ ಸಮತೆ ಮತ್ತು ಅಹಿಂಸೆಯ ತತ್ವವನ್ನೊಪ್ಪದ ಕೆಲವು ವೀರಶೈವರು ತಪ್ಪು ತಿಳುವಳಿಕೆಯಿಂದ ಬಿಜ್ಜಳನ ಕೊಲೆ ಮಾಡಿಸಿದರು. ಬಿಜ್ಜಳನ ಕೊಲೆಯೇ ಬಸವಣ್ಣನವರ ಐಹಿಕ ಜೀವನದ ನಾಟಕವನ್ನು ಮುಗಿಸಿದ ಕೊನೆಯ ದೃಶ್ಯವಾಯಿತು. ಮಹಾತ್ಮಾ ಬಸವಣ್ಣನವರ ವಿಶ್ವಧರ್ಮದ ವಿಚಾರಗಳು ಕೆಲವು ಜನರಿಗೆ ಸೇರದ್ದರಿಂದಲೇ ಮುಂದಾಗಬಹುದಾದ ಅನರ್ಥವನ್ನು ತಪ್ಪಿಸಲು ತಾವೇ ಸಂತೋಷದಿಂದ ಕಪ್ಪಡಿ ಸಂಗಮದಲ್ಲಿ ಲಿಂಗೈಕ್ಯರಾದರು. ಅಂತೂ ವಿಶ್ವಧರ್ಮವನ್ನೇ ತಮ್ಮ ಜೀವನದ ತಳಹದಿಯನ್ನಾಗಿಟ್ಟುಕೊಂಡ ಹಿಂದಿನ ಕಾಲದ ಮಹಾತ್ಮರು ಜನತಾ ಕಲ್ಯಾಣಕ್ಕಾಗಿ ಅತೀವ ಯಾತನೆಯನ್ನು—ಅದೇಕೆ ಮರಣವನ್ನೂ ಕೂಡ ಅನುಭವಿಸಬೇಕಾಯಿತು. History repeats itself ಎಂಬ ಮಾತನ್ನು ನಾವು ನೆನಪಿಗೆ ತಂದುಕೊಂಡರೆ ಹೊಸದಾಗಿ ಸಂಭವಿಸಿದ ಮಹಾತ್ಮಾ ಗಾಂಧಿಯವರ ಕೊಲೆಯು ನಮಗೆ ಆಶ್ಚರ್ಯಕರವೆನಿಸಿದರೂ ಅದರಲ್ಲಿ ನೂತನತೆ ಇಲ್ಲ. ಅವರ ಕೊಲೆಯೇ ಅವರ ಹಿರಿಮೆಯನ್ನು ವಿಶ್ವಕ್ಕೆ ತೋರಿಸುವ ಘಟನೆಯಾಗಿದೆ. ಮಹಾತ್ಮರ ಎದೆಗೆ ಗುಂಡಿಕ್ಕಿ ಹೊಡೆಯುವವನ ಕೈಯು ಇಡೀ ಜಗತ್ತಿಗೆ ಮಹಾತ್ಮರ ಹೃದಯದಲ್ಲಿ ಹುದುಗಿಕೊಂಡಿದ್ದ ವಿಶ್ವದ ಕಡೆಗೆ ಗುರಿಮಾಡಿ ತೋರಿಸಿತೇ ಹೊರತಾಗಿ ಆ ಕೈಯು ನಿಜವಾಗಿ ಮಹಾತ್ಮರನ್ನು ಗುಂಡಿಕ್ಕಿ ಕೊಂದಿತೆಂದು ಹೇಳುವದು ಸರಿಯಾಗಲಾರದು.

ಮಹಾತ್ಮಾ ಗಾಂಧಿಯವರ ಕೊಲೆಗೆ ಅಪ್ರತ್ಯಕ್ಷವಾಗಿ ಕಾರಣವಾದ ಅವರ ವಿಶ್ವಧರ್ಮದ ತತ್ವಗಳನ್ನು ನಾವು ಅಭ್ಯಾಸಿಸೋಣ.

ವೀರಶೈವ ಮತದ ತತ್ವಗಳನ್ನು ಅಭ್ಯಾಸ ಮಾಡಿದರೆ ನಮಗೆ ವಿಶ್ವಧರ್ಮದ ಅರಿವು ಚೆನ್ನಾಗಿ ಆಗುವದು. ವಚನಕಾರರ ವಚನಗಳನ್ನು

ನಾವು ಸೂಕ್ಷ್ಮನಾಗಿ ಪರಿಶೀಲಿಸಿದರೆ ವಚನ ಸಾಹಿತ್ಯದ ಜಲನಿಧಿಯಲ್ಲಿ ಜ್ಞಾನಾಮೃತವೂ ಮತ್ತು ವಿಶ್ವಧರ್ಮವೆಂಬ ಈ ಮಹಾಲಕ್ಷ್ಮಿಯೂ ಜನಿಸಿರುವದನ್ನು ಎಲ್ಲರೂ ಬಲ್ಲರು. ಸಮತೆ, ಸ್ವಾತಂತ್ರ್ಯ ಮತ್ತು ವಿಶ್ವಬಂಧುತ್ವ ಇವೇ ವಿಶ್ವಧರ್ಮದ ಮೂಲತತ್ವಗಳು. ಒಂದು ಸಮಾಜ, ದೇಶಕ್ಕೆ ಹಚ್ಚಬಹುದಾದ ಈ ತತ್ವಗಳನ್ನು ವಿಶ್ವದ ಎಲ್ಲ ದೇಶಗಳಿಗೂ ಹಚ್ಚಲು ಮಹಾತ್ಮರು ಹೆಣಗಾಡಿದರು. ಹಿಂದಿನಿಂದ ಬಂದ ಉಚ್ಚ ಮತ್ತು ನೀಚವೆಂಬ ಕಲ್ಪನೆಯನ್ನು ಹುಟ್ಟಿಸಿ ಸಮಾಜದಲ್ಲಿ ಒಡಕು ಹುಟ್ಟಿಸುವ ಜಾತಿ ವಿಭಾಗವನ್ನು ಗಾಂಧಿಯುವರು ಎಂದೂ ಒಪ್ಪಲಿಲ್ಲ. ಉಚ್ಚ ನೀಚ ಭಾವದ ಅವಶ್ಯಕತೆಯು ರಾಜಕಾರಣದಲ್ಲಿಯೂ ಬೇಡವೆಂದು ಅವರು ಜಗತ್ತಿನಲ್ಲಿ ಬಲಿಷ್ಠ ರಾಷ್ಟ್ರಗಳು ದುರ್ಬಲ ರಾಷ್ಟ್ರಗಳ ರಕ್ತವನ್ನು ಹೀರಿ ಕೊಬ್ಬುತ್ತಿರುವದನ್ನು ಸಹಿಸದೆ ಜಗತ್ತನ್ನು ರಾಜಕೀಯ ಪಾರತಂತ್ರ್ಯದಿಂದ ವಿಮುಕ್ತಗೊಳಿಸಲೆತ್ನಿಸಿ ಜಗದೋದ್ಧಾರಿಗಳೆಂಬ ಬಿರುದನ್ನು ಪಡೆದುಕೊಂಡರು. ಮೊಗಲ ಸಾಮ್ರಾಜ್ಯದ ಅರಸನಾದ ಅಕಬರಬಾದಶಹನು ದೀನ-ಈ-ಇಲಾಹಿ ಎಂಬ ಹೆಸರಿನ ವಿಶ್ವಧರ್ಮವನ್ನು ಸ್ಥಾಪಿಸಲೆತ್ನಿಸಿದ್ದರಿಂದಲೇ ಈ ದೇಶದಲ್ಲಿ ಇಷ್ಟು ಗೌರವವನ್ನು ಪಡೆದನೆಂಬುದು ಇತಿಹಾಸವೇ ಹೇಳಿವ ಸಂಗತಿಯಾಗಿದೆ. ಅಕಬರಬಾದಶಹನಂತೆ ಮಹಾತ್ಮಾ ಗಾಂಧಿಯವರು ಇಡೀ ವಿಶ್ವದ ಧರ್ಮಗಳೊಳಗಿನ ಮುಖ್ಯ ಮುಖ್ಯ ತತ್ವಗಳನ್ನು ಸೇರಿಸಿ ವಿಶ್ವಧರ್ಮದ ಸ್ಥಾಪನೆಗಾಗಿ ಹೆಣಗಾಡಿದರು. ಬಸವಣ್ಣನವರು ಎಲ್ಲ ಕಾಯಕಗಳ ಜನರನ್ನು ಶೇಖರಿಸಿಕೊಂಡು ಅನುಭವ ಮಂಟಪದ ಮುಖಾಂತರವಾಗಿ ಧರ್ಮ ಪ್ರಚಾರ ಮತ್ತು ವಿಶ್ವದ ಕಲ್ಯಾಣ ಮಾಡಿದಂತೆ ಮಹಾತ್ಮಾ ಗಾಂಧಿಯವರೂ ಎಲ್ಲ ಧರ್ಮಗಳ ಜನರನ್ನು ಕೂಡಿಕೊಂಡು ಸಾಮೂಹಿಕ ಪ್ರಾರ್ಥನೆ ಮಾಡುತ್ತಿದ್ದರು. ಮುಸಲ್ಮಾನ, ಕ್ರಿಶ್ಚನ್ ಮೊದಲಾದ ಪರಕೀಯ ಧರ್ಮದವರು ಅವರ ಪ್ರಾರ್ಥನೆಯಲ್ಲಿ ಭಾಗ ತೆಗೆದುಕೊಳ್ಳುತ್ತಿದ್ದರು. ಬಸವಣ್ಣನವರ ಶಿವನಾಮ ಮಹಾತ್ಮರ ರಾಮನಾಮವಾಗಿದೆ. ವಿಶ್ವವು ಆ ವಿಶ್ವಕುಟುಂಬಿಯ ಸಂತತಿಯು. ನಾವೆಲ್ಲರೂ ಆ ಪರಮಾತ್ಮನ ಮಕ್ಕಳು. "ದೇವನೊಬ್ಬ ನಾಮ ಹಲವು" ಎಂಬುದನ್ನೇ ಗಾಂಧಿಯವರು ಅರಿತು ಅದರಂತೆ ಆಚರಿಸಿದರು. ಹೀಗೆ ರಾಜಕಾರಣದಲ್ಲಿ ಧರ್ಮವನ್ನು ಬೆರಸಿ ಧರ್ಮವು ರಾಜಕಾರಣಕ್ಕೆ ಪೋಷಕವಾ

ಗುವದೆಂದು ವಿಶ್ವಕ್ಕೆ ತೋರಿಸಿಕೊಟ್ಟ ನೂತನ ಯುಗ ಪುರುಷ. ಕೇವಲ ಜ್ಞಾನಮಾರ್ಗ ಬೋಧಿಸುವ ವೇದೋಪನಿಷತ್ತುಗಳಿಗಿಂತ ಕರ್ಮ ಮಾರ್ಗ ವನ್ನು ಕೂಡ ಬೋಧಿಸುವ ಭಗವದ್ಗೀತೆಯು ಮಹಾತ್ಮರ ಕೈದೀವಟಿಗೆ ಯಾಗಿತ್ತು. ವಿಶ್ವಧರ್ಮದ ಕೆಲವು ತತ್ವಗಳನ್ನು ಭಗವದ್ಗೀತೆಯು ಒಪ್ಪಿಕೊಳ್ಳುವದರಿಂದ ವೀರಶೈವರಿಗೆ ಕೆಲವು ರೀತಿಯಿಂದ ಉಪಯೋಗ ವಾದ ಗೀತೆಯು ಗಾಂಧಿಯವರಿಗೂ ಮಾರ್ಗದರ್ಶಿಕವಾದ ಗ್ರಂಥವಾ ಗಿತ್ತು. ಗೀತೆಯಲ್ಲಿಯ ಕರ್ಮಯೋಗವು ವೀರಶೈವರಿಗೆ ಪ್ರಿಯವಾದಂತೆ ಮಹಾತ್ಮರಿಗೂ ಪ್ರಿಯವಾಗಿತ್ತು.

ಮಹಾತ್ಮಾ ಗಾಂಧಿಯವರ ವಿಶ್ವಧರ್ಮದ ತತ್ವಗಳು ಅವರಿಗೆ ಮುಕ್ತಿ ಅಥವಾ ಫಲ ಕೊಟ್ಟಿರಬಹುದು. ಆದರೆ ರಾಜಕಾರಣದಲ್ಲಿ ಧರ್ಮವನ್ನು ಸೇರಿಸಿದುದು ಮತ್ತು ಸನಾತನ ಅಥವಾ ವೈದಿಕಧರ್ಮದ ಕೆಲವು ತತ್ವಗಳನ್ನು ಅವರು ಒಪ್ಪಿಕೊಳ್ಳದಿರುವದು—ಇವೆಲ್ಲಾ ಒಂದು ಪಂಗಡದ ಮನಸ್ಸಿಗೆ ಹೇಗೆ ಸೇರಬೇಕು? ಒಂದು ವಿಶಿಷ್ಟ ಪಂಗಡ ದವರು ಈ ವಿಶ್ವ ಪ್ರೇಮಿಯನ್ನು ಹಿಂದೂಧರ್ಮದ ದ್ರೋಹಿ ಎಂಬ ತಪ್ಪು ತಿಳುವಳಿಕೆಯನ್ನು ಮಾಡಿಕೊಂಡರು. ದಯೆಯೇ ಧರ್ಮದ ಮೂಲವಯ್ಯ ಎಂಬುದನ್ನು ಈ ಜನರು ಮರೆತು ತಮ್ಮ ಸಂಸ್ಕೃತಿಗೆ ತಾವೇ ಕಲಂಕ ತಂದುಕೊಂಡರು. ಸತ್ಯ, ಅಹಿಂಸೆ, ಸಮತೆ ಮತ್ತು ದಯೆಯಿಂದ ಮಹಾತ್ಮರ ಜೀವನವು ಸುವರ್ಣಮಯವಾಗಿತ್ತು. ಅವರ ಮರಣವು ಅವರಿಗೆ ಅಮರತ್ವವನ್ನು ಕೊಟ್ಟಿದೆ. ಅವರು ಜೀವಿಸಿ ದ್ದಾಗ ಸಾಧ್ಯವಾಗದಿದ್ದ ಭಾರತೀಯರಲ್ಲಿಯ ಒಕ್ಕಟ್ಟು ಅವರ ಮರಣದ ತರುವಾಯ—ಅವರ ಆದರ್ಶ ಜೀವನದ ಪರಿಣಾಮವಾಗಿ ಆಗಬಹು ದೆಂದು ಭಾರತದ ಇಂದಿನ ಇತಿಹಾಸವು ಸಾರುತ್ತದೆ. ಏಸೂಕ್ರಿಸ್ತರ ಮರಣದ ತರುವಾಯ ಕ್ರಿಶ್ಚನ್ ಧರ್ಮವು ಪ್ರಗತಿಹೊಂದಿತು. ಬುದ್ಧನ ತರುವಾಯ ಬೌದ್ಧ ಧರ್ಮವಾದರೂ ಪ್ರಬಲವಾದ ಸ್ಥಿತಿ ಯನ್ನು ಹೊಂದಿತು. ಮಹಾತ್ಮಾ ಗಾಂಧಿಯವರ ವಿಶ್ವಧರ್ಮದ ತತ್ವ ಗಳು ಇನ್ನುಮುಂದೆ ಭಾರತದಲ್ಲಿ—ಇಡೀ ವಿಶ್ವದಲ್ಲಿ ಫಲದಾಯಕವಾಗು ವೆಂದು ಊಹಿಸೋಣ.

ವಿಶ್ವಧರ್ಮದ ಸ್ಥಾಪನೆಗಾಗಿ ಹೆಣಗಾಡಿದ ಮಹಾತ್ಮಾ ಬಸವ ಣ್ಣನವರನ್ನೂ ಮಹಾತ್ಮಾ ಗಾಂಧಿಯವರನ್ನೂ ಹೋಲಿಸಿ ನೋಡಿ

ಕೊಂಡು ಈ ಲೇಖವನ್ನು ಮುಗಿಸುವಾ. "ಎನಗಿಂತ ಕಿರಿಯರಿಲ್ಲ, ಶಿವಭಕ್ತರಿಗಿಂತ ಹಿರಿಯರಿಲ್ಲ" ಎಂದು ಹೇಳಿ ಸೇವಕ ಧರ್ಮವನ್ನು ಸ್ವೀಕರಿಸಿದ ಬಸವಣ್ಣನವರಂತೆಯೇ ಮಹಾತ್ಮಾ ಗಾಂಧಿಹುವರು ಮಾನವಕುಲದ ಸೇವಕರಾಗಿದ್ದರು. ಅವರ ಭಾಷಣಗಳನ್ನು ಅಥವಾ ಉಪದೇಶಗಳನ್ನು ಕೇಳಿದವರಿಗೆ ಅವುಗಳು ಕೇವಲ ಭಾರತೀಯರಿಗಾಗಿರದೆ ಮಾನವ ಕುಲಕ್ಕೇನೇ ಅನ್ವಯಿಸುವವೆಂಬುದು ಎಲ್ಲರಿಗೂ ವಿದಿತವಿದೆ. ಅಹಿಂಸೆಯ ತತ್ವವನ್ನು ಇಡೀ ವಿಶ್ವನೇ ಒಪ್ಪಿಕೊಳ್ಳಬೇಕೆಂದು ಅವರ ಮಹತ್ತರವಾದ ಆಶೆಯಾಗಿತ್ತು. ಗಾಂಧಿಯವರ ಸರಳ ಜೀವನ, ಉದಾತ್ತವಾದ ವಿಚಾರಗಳು, ಸತತೋದ್ಯೋಗ, ಅಹಿಂಸೆ, ಸಮತೆ ಮತ್ತು ಅವರ ದಯಾಮಯವಾದ ಜೀವನವು ಬಸವಣ್ಣನವರ ಜೀವನವನ್ನು ನೆನಪಿಗೆ ತಂದುಕೊಡುತ್ತದೆ. ಆದರೆ ಗಾಂಧಿಯವರು ಮತ ಪ್ರಚಾರಕರಲ್ಲ. ಕಲಂಕವಾದ ಅಸ್ಪೃಶ್ಯತೆಯನ್ನು ದೂರೀಕರಿಸಿದ ಪವಿತ್ರಕೆಲಸ ಅವರದು. ಆದರೆ ಅನ್ಯಾಯವು ಯಾವದೇ ದೇಶದಲ್ಲಿ ನಡೆದರೂ ಅವರು ಸಹಿಸರೆಂಬುದು ಆಫ್ರಿಕೆಯಲ್ಲಿಯ ಅವರ ಹೋರಾಟದಿಂದ ತಿಳಿಯುವದು. ಈ ದೃಷ್ಟಿಯಿಂದ ವಿಚಾರಿಸಿದಲ್ಲಿ ಇಂಥ ಮಹಾತ್ಮರು ಹಿಂದೆ ಹುಟ್ಟಲಿಲ್ಲ ಮತ್ತು ಮುಂದೆ ಹುಟ್ಟುವರೋ ಇಲ್ಲವೋ ಹೇಳಲುಸಾಧ್ಯವಿಲ್ಲ. ಬಸವಣ್ಣನವರು ಸಾಹಿತ್ಯದಲ್ಲಿ ಕ್ರಾಂತಿಯನ್ನು ಮಾಡಿದಂತೆ ಮಹಾತ್ಮರೂ ತಮ್ಮ ಸಾಹಿತ್ಯದಲ್ಲಿ ಮಾಡಿದರು. ಆದುದರಿಂದ ವಿಶ್ವಪ್ರೇಮಿಯ ಗುಣಗಳು ಇಬ್ಬರಲ್ಲಿಯೂ ಸಾಮಾನ್ಯವಾಗಿದ್ದವೆಂಬುದನ್ನು ಮರೆಯುವಂತಿಲ್ಲ. ಅದೇ ವಿಶಾಲವಾದ ತತ್ವಗಳ ನಿಮಿತ್ತವಾಗಿ ಬಸವಣ್ಣನವರು ರಾಜಕೀಯ ಕ್ಷೇತ್ರದಿಂದ ದೂರಾಗಬೇಕಾಯಿತು. ಇಂದಿಗೆ ಬಂದ ಪ್ರಸಂಗವೂ ಅಂತಹದೇ. ಹಿಂದುಸ್ತಾನದ ತಂದೆಯು ಹಿಂದೂರಾಷ್ಟ್ರದ ನಿರ್ಮಾಪಕನು ಹಿಂದೂಧರ್ಮ ದ್ರೋಹಿಯೆಂದು ಕೊಲೆ ಮಾಡಲ್ಪಟ್ಟನು. ಆದರೆ ಜಗತ್ತು ಮಹಾತ್ಮರನ್ನು ಅರಿತಿದೆ. ಮಹಾತ್ಮರು ಮಾಡುವ ಕೆಲಸ ಮುಗಿದಿರಬಹುದು. ಕಾರ್ಯವಿಲ್ಲದ ಮೇಲೆ ಮಹಾತ್ಮರ ಅವಶ್ಯಕತೆ ಏಕೆ? ಅವರ ತತ್ವಗಳೇ ಬದುಕಿವೆ. ಗಾಂಧಿಯವರ ದೇಹವು ನಶ್ವರ—ಆದರೆ ಅವರ ವಿಶ್ವಧರ್ಮದ ತತ್ವಗಳು ಅಮರವಾಗಿವೆ.

———

# ಶರಣಸ್ಮರಣೆ ಮತ್ತು ಸಮಾಜೋದ್ಧಾರ.

(ಬರೆದವರುಃ-ಶ್ರೀ. ಅನ್ನದಾನೀಶ್ವರ ವಿರಕ್ತಮಠ. ಮು. ರಾಣೇಬೆನ್ನೂರ)



ಜಗತ್ತಿಗೇನೇ ಆದರ್ಶಕವಿಯಾದ ಸರ್ವಜ್ಞನು ಶಿವಶರಣರನ್ನು ಸ್ಮರಿಸಿ ಕೊಂಡಾಡಿರುವನು. ಸೋಮೇಶ್ವರ ಕವಿಯಂತೂ ಅಜರಾಮರ ವಾದ " ಬಸವಲಿಂಗ ನಾಮಾವಳಿ " ಯನ್ನು ಬರೆದಿರುವನು. ಅದ್ವೈತ ಚಕ್ರವರ್ತಿಯಾದ ನಿಜಗುಣ ಶಿವಯೋಗಿಯು "೬೩ ಪುರಾತರ ತ್ರಿವಿಡಿ" ಯನ್ನು ಬರೆದಿರುವನು. ಹಂಪಿಯಲ್ಲಿ ಹಿರೇಮಠದ ಪಟ್ಟಾಧಿಕಾರಿಯಾಗಿದ್ದ ವಿರುಪಾಕ್ಷ ಪಂಡಿತನು ಚನ್ನಬಸವರೇ ಮುಂತಾದ ಶರಣರನ್ನು ಸ್ತುತಿಸಿರುವನು. ಪಂಚಾಚಾರ್ಯರಲ್ಲೊಬ್ಬರಾದ ಪಂಡಿತಾಚಾರ್ಯರಂತೂ "ಅಳಿಲು ಗೀತೆ"ಯಲ್ಲಿ ತಮ್ಮ ಬಸವ ಭಕ್ತಿಯನ್ನು ವ್ಯಕ್ತಗೊಳಿಸಿರುವರು. ಈ ಪ್ರಕಾರ ಅನೇಕ ಕವಿಗಳೂ ಅದ್ವೈತಿಗಳೂ, ಪಟ್ಟದಪ್ಪನವರೂ, ಪಂಡಿತರೂ, ಮೊದಲಾಗಿ ಅನೇಕ ಭಕ್ತರೂ, ಸಜ್ಜನರೂ, ಸಾಧುಗಳೂ ಶಿವಶರಣರನ್ನು ಸ್ಮರಿಸಿ ಹೊಗಳಿ ಪವಿತ್ರರಾಗಿ ತಮ್ಮ ಕರ್ತವ್ಯವನ್ನು ಮಾಡಿರುವರು.

ನಿಜಸ್ಥಿತಿಯು ಹೀಗಿದ್ದು, ಈಗಿನ ಲಿಂಗವಂತರಲ್ಲಿ ಕೆಲವರು ಅಜ್ಞಾನದಿಂದ, ದುರಾಗ್ರಹದಿಂದ, ಸಲ್ಲದ ಇಲ್ಲದ ಜಾತಿ-ಭೇದದ ಕಲ್ಪನೆಯಿಂದ, ಶಿವಶರಣರನ್ನು ಸ್ಮರಿಸುವದಿಲ್ಲ; ಇಷ್ಟೇ ಅಲ್ಲ ಅಪ್ರತ್ಯಕ್ಷವಾಗಿ ಶಿವಶರಣರ ವಿರುದ್ಧವಾದ ಅಪಪ್ರಚಾರವನ್ನೇ ನಡಿಸಿರುವದನ್ನು ನೋಡಿದರೆ ಕೃತಘ್ನತೆಯ ಚಿತ್ರವು ಕಣ್ಣೆದುರಿಗೆ ನಿಂತು ವಿಷಾದವಾಗುತ್ತದೆ.

ವ್ಯವಹಾರದಲ್ಲಿ ಮನುಷ್ಯರಿಂದ ಉಪಕಾರಹೊಂದಿ ಉಪಕಾರ ಸ್ಮರಿಸದಿದ್ದರೆ ಅಸಭ್ಯತನವೆಂದು ತಿಳಿಯಲ್ಪಡುವದು. ಉಪಕಾರ ಸ್ಮರಣೆಯು ದೈನಂದಿನ ವ್ಯವಹಾರದಲ್ಲಿಯ ಸಭ್ಯತೆಯ ಲಕ್ಷಣವು. ಉಪಕಾರಸ್ಮರಣೆಯು ನ್ಯಾಯದ ರೀತಿನೀತಿಯ ಲಕ್ಷಣವು. ಹೀಗಿದ್ದ ನಮಗೆ ಶ್ರೇಷ್ಠ ಸಾಹಿತ್ಯ, ಸಂಸ್ಕೃತಿ, ತತ್ವಜ್ಞಾನ, ಆದರ್ಶ ಸಮಾಜ ಮುಂತಾದವುಗಳನ್ನು ಇತ್ತು ನಮ್ಮನ್ನು ಮನುಷ್ಯರನ್ನಾಗಿ ಮಾಡಿದ ಶಿವಶರಣರನ್ನು ಸ್ಮರಿಸುವದು ಕ್ರಮಪ್ರಾಪ್ತವಾದ ಪರಮ ಕರ್ತವ್ಯವಾಗಿದೆ. ಆದರೆ ಶರಣರನ್ನು ಹೇಗೆ ಸ್ಮರಿಸಬೇಕು ?

(೧) ಯಾವಾಗಲೂ ಶರಣರನ್ನು ಸ್ಮರಿಸಬೇಕು. ಬಸವಲಿಂಗ ನಾಮಾವಳಿ, ಪುರಾತನರ ತ್ರಿವಿಧಿ, ಗುರುಕರುಣ ತ್ರಿವಿಧಿ, ಮೊದಲಾದ ಗ್ರಂಥಗಳನ್ನು ಓದುತ್ತಿರಬೇಕು. ದಿನಾಲು ಸ್ವಲ್ಪಾದರೂ ವಚನಗಳನ್ನು ಓದಬೇಕು. ಇದು ನಿತ್ಯಕ್ರಮವಾಗಬೇಕು. ಮೂಢಭಕ್ತಿಯಿಂದ ಪಾರಾಯಣ ಮಾಡುವದಕ್ಕಿಂತ ಅರ್ಥ ತಿಳಿದು ಓದುವದು ಮೇಲು. ಅರ್ಥವು ಭಾವಕ್ಕೆ ತಲ್ಪಿ ಮನಸ್ಸಿನಮೇಲೆ ಸಂಸ್ಕಾರವಾದರೆ ಶೀಲವು ಮಾರ್ಪಡುತ್ತದೆ. ವ್ಯಕ್ತಿತ್ವವು ರೂಪುಗೊಳ್ಳುತ್ತದೆ. ಇಡೀ ಕುಟುಂಬದ ಜನರಿಗೆ ಹಾಗೆ ಅಭ್ಯಾಸ ಮಾಡಿಸಬೇಕು.

(೨) ಹೃದಯ ಪೂರ್ವಕವಾಗಿ ಶರಣರನ್ನು ಸ್ಮರಿಸಬೇಕು. ರೂಢಿಬದ್ಧರಾಗಿ ಅರ್ಥ ಜ್ಞಾನವಿಲ್ಲದೆ ಶರಣರ ಭಜನೆ, ಪೂಜೆ, ಧ್ಯಾನ, ಸ್ತೋತ್ರ, ಇತ್ಯಾದಿಗಳನ್ನು ಮಾಡುವದಕ್ಕಿಂತ ಅರ್ಥ ತಿಳಿದುಕೊಂಡು ಸ್ಮರಿಸಬೇಕು. ವಚನಗಳಿಗೆ ಅರ್ಥ ವಿವರಣೆಯಿಲ್ಲದ್ದರಿಂದ ಅವು ತಿಳಿಯುವದು ಕಠಿಣ. ತಿಳಿಯದಿದ್ದರೆ ಬೇಸರವಾಗಿ ಓದುವದಕ್ಕೆ ಮನಸ್ಸಾಗುವದಿಲ್ಲ. ಆದಕಾರಣ ಬಲ್ಲವರು ವಚನಗಳಿಗೆ ಅರ್ಥ ವಿವರಣೆಯನ್ನು ಬರೆಯಬೇಕು. ನಾವೂ ಪ್ರಯತ್ನಮಾಡಿ ಅರ್ಥ ತಿಳಿಯಲು ಹವಣಿಸಬೇಕು. ಅರ್ಥವಾಗುವದಿಲ್ಲವೆಂಬ ನೆವದಿಂದ ಓದುವದನ್ನೇ ಬಿಟ್ಟುಬಿಡಬಾರದು.

(೩) ದೇವರ ಕೋಣೆಯಲ್ಲಾದರೂ ಓದಬಹುದು. ಮಲಗುವ ಕೋಣೆಯಲ್ಲಾದರೂ ಓದಬಹುದು. ಅಭ್ಯಾಸದ ಕೋಣೆಯಲ್ಲಾದರೂ ಓದಬಹುದು. ಒಬ್ಬನೇ ಏಕಾಂತವಾಗಿಯಾದರೂ ಓದಬಹುದು. ಹೇಗೆ ಎಲ್ಲಿ ಓದಿದರೂ ಲಕ್ಷ್ಯಗೊಟ್ಟು ಓದಬೇಕು.

(೪) ಪ್ರತಿಯೊಬ್ಬ ಲಿಂಗಾಂಗಿಯು ಶಿವಾನುಭವ ಸಂಘ, ಅಥವಾ ಅನುಭವ ಮಂಟಪವನ್ನು ಸೇರಿ ಅಲ್ಲಿ ಸಮೂಹಿಕವಾಗಿ ಶರಣರನ್ನು ಸ್ಮರಿಸಬೇಕು. ವಚನಗಳನ್ನು ಓದಬೇಕು. ಚರ್ಚಿಸಬೇಕು. ಜಿಜ್ಞಾಸೆ ಮಾಡಬೇಕು. ವಿಮರ್ಶೆಮಾಡಿ ತತ್ವ ತಿಳಿದುಕೊಳ್ಳಬೇಕು. ಇದರಿಂದ ಸಾಮೂಹಿಕ ಜೀವನವು ಬೆಳೆದು ವ್ಯಕ್ತಿಯ ದೋಷಗಳು ನಿವಾರಣೆಯಾಗಲು ಸಹಾಯವಾಗುತ್ತದೆ.

(೫) ಪ್ರಾತಃಕಾಲದಲ್ಲಿ ಎದ್ದಾಗ, ಸಾಯಂಕಾಲದಲ್ಲಿ, ರಾತ್ರಿ ಮಲಗುವಾಗ, ಶರಣರನ್ನು ಸ್ಮರಿಸಬೇಕು.

(೬) ದೀಕ್ಷಾಕಾಲ, ಮತ್ತು ಲಗ್ನಕಾಲ ಈ ಕಾಲಗಳು ಶರಣರ ಸ್ಮರಣೆಯನ್ನು ಸ್ಥಿರೀಕರಿಸಲು ಸಹಾಯಕವಾದ ದಿನಗಳು. ಆಗ್ಗೆ ಶರಣರ ಬಗ್ಗೆ ಪ್ರವಚನ, ಉಪನ್ಯಾಸ, ಕೀರ್ತನೆಗಳನ್ನು ಸಾಗಿಸಬೇಕು. ಈಗಿನ ದೀಕ್ಷಾವಿಧಿ, ಲಗ್ನವಿಧಿಗಳು ಹೋಗಿ ಕನ್ನಡದಲ್ಲಿ ಶರಣರ ದೀಕ್ಷಾಕ್ರಮ ಮತ್ತು ಕಲ್ಯಾಣಕ್ರಮ (ಕಲ್ಯಾಣವೆಂದರೆ ಲಗ್ನ) ಗಳು ರೂಢಿಯಲ್ಲಿ ಬರುವಂತೆ ಅನುಭಾವಿಗಳು ಯತ್ನಿಸಬೇಕು

(೭) ಶರಣರ ಜಯಂತಿಗಳನ್ನು ತಪ್ಪದೇ ಮಾಡಬೇಕು. ಶರಣೆಯರ ಜಯಂತಿಗಳನ್ನೂ ಮಾಡಬೇಕು. ಆಗ ವಿಶೇಷ ಆಡಂಬರಗಳಲ್ಲಿ ಕಾಲಕಳೆಯುವದಕ್ಕಿಂತ ತತ್ವಪ್ರಚಾರ ಮಾಡಬೇಕು. ಗ್ರಂಥಗಳನ್ನು ಪ್ರಕಟಿಸಿ ಪುಕ್ಕಟೆಯಾಗಿ ಹಂಚಬೇಕು. ಜ್ಞಾನದಾನಕ್ಕಿಂತ ಮಿಗಿಲಾದ ದಾನ ಉಂಟೇ?

(೮) ಶಿವಶರಣರ ಮತ್ತು ಶಿವಶರಣೆಯರ ಬಗ್ಗೆ ಸಾಮೂಹಿಕವಾದ ಪ್ರಾರ್ಥನೆಯ ಒಂದು ಪುಸ್ತಕವನ್ನು ತಯಾರಿಸಿ ಸಮಾಜದ ತುಂಬ ಹಂಚಬೇಕು.

(೯) ಶಿಶು ಲಿಂಗೋದ್ಭವವಾದಾಗ (ಅಂದರೆ ಹುಟ್ಟಿದಾಗ) ಮತ್ತು ಲಿಂಗಾಂಗಿಯು ಲಿಂಗೈಕ್ಯನಾದಾಗ (ಸತ್ತಾಗ) ಶಿವಶರಣರ ಸ್ಮರಣೆಯನ್ನು ಸಾಮೂಹಿಕವಾಗಿ ಮಾಡಬೇಕು.

(೧೦) ಶರಣ-ಶರಣೆಯರ ಸುಂದರವಾದ ಭಾವ ಪೂರ್ಣ ಚಿತ್ರಗಳನ್ನು ನಮ್ಮ ಕೋಣೆಗಳಲ್ಲಿಯೂ, ಅನುಭವ ಮಂಟಪಗಳಲ್ಲಿಯೂ (Church) ಹಾಕಬೇಕು. ಶರಣನು ಲಿಂಗೋದ್ಭವನಾಗಿ ಲಿಂಗೈಕ್ಯನಾಗುವ ವರೆಗೆ ಜೀವನ ಚರಿತ್ರೆ ತಿಳಿಯುವಂತೆ ಭಾವ ಚಿತ್ರಗಳನ್ನು ತಯಾರಿಸಲಿಕ್ಕೆ ಕಲಾಕೋವಿದರಿಗೆ ಪ್ರೋತ್ಸಾಹ ಕೊಡಬೇಕು. ಇದರಿಂದ ಬಾಲಕರಿಗೂ, ಹೆಂಗಸರಿಗೂ ಚಿತ್ರಗಳ ಮೂಲಕವಾಗಿ ಶರಣರ ಚರಿತ್ರೆಗಳು ತಿಳಿಯುತ್ತವೆ.

(೧೧) ಶರಣ-ಶರಣೆಯರ ಚರಿತ್ರೆಗಳು ಆಧುನಿಕ ರೀತಿಯಲ್ಲಿ ಬರೆಯಲ್ಪಡಬೇಕು. ಆಧುನಿಕವಾಗಿ ಚರಿತ್ರೆಗಳನ್ನು ಬರೆಯುವಾಗ ಶ್ರೀ. ಹಳಕಟ್ಟಿಯವರ ಶಿವಶರಣರ ಚರಿತ್ರೆಗಳ ಸಹಾಯ ತಕ್ಕೊಳ್ಳಬೇಕು. ಈ ಚರಿತ್ರೆ ಬರೆಯುವ ಎಲ್ಲ ಲೇಖಕರಿಗೂ ಸಹಾಯ ಮಾಡಬೇಕು. ಕಾಲ್ಪನಿಕವಾದ ಪುರಾಣಗಳನ್ನು ಓದಿಸುವದಕ್ಕಿಂತ ನಿಜವಾದ ಚರಿತ್ರೆಗಳನ್ನೇ ಕಾವ್ಯಗಳ ರೂಪದಲ್ಲಿ ಮತ್ತು ಗದ್ಯದಲ್ಲಿ ಬರೆಯಿಸಬೇಕು.

---

## ಆದಿಪ್ರಸಾದಿ, ಅಂತ್ಯಪ್ರಸಾದಿ, ಸೇವ್ಯಪ್ರಸಾದಿ.

೧. ಜಂಗಮ ಪಾದೋದಕವ ಲಿಂಗ ಮಜ್ಜನಕ್ಕೆರೆದು ಆ ಜಂಗಮದ ಪ್ರಸಾದವೇ ಲಿಂಗಕ್ಕರ್ಪಿಸುವ ಅವಿವೇಕಿಗಳು ನೀವು ಕೇಳಿರೋ. ಅಟ್ಟೋಗರವನಟ್ಟಿಹೆನೆಂಬ, ಕಾಷ್ಠವ ಸುಟ್ಟ ಬೂದಿಯ ಮರಳಿ ಸುಟ್ಟಿಹೆನೆಂಬ ಭ್ರಮಿತರು ನೀವು ಕೇಳಿರೋ. ಪದಾರ್ಥ ಪ್ರಸಾದವಾದುದು ಇಷ್ಟಲಿಂಗ ಮುಖದಿಂದ. ಆ ಇಷ್ಟಲಿಂಗವ ಸೋಂಕಿ ಬಂದ ಪ್ರಸಾದವೇ ಪ್ರಾಣಲಿಂಗಕ್ಕೆ ಅಂತ್ಯಪ್ರಸಾದ. ಆ ಪ್ರಾಣಲಿಂಗ ಮುಖದಿಂದೊದಗಿದ ಅಂತ್ಯ ಪ್ರಸಾದವೇ ಭಾವಲಿಂಗಕ್ಕೆ ತೃಪ್ತಿ ಮುಖದಲ್ಲಿ ಸೇವ್ಯಪ್ರಸಾದ. ಇಂತೀ ಆದಿಪ್ರಸಾದ ಅಂತ್ಯಪ್ರಸಾದ ಸೇವ್ಯಪ್ರಸಾದ ಗ್ರಾಹಕವೇ ಜಂಗಮ. ಇಷ್ಟಲಿಂಗವಿಡಿದು ಗುರು, ಇಷ್ಟಲಿಂಗವಿಡಿದು ಭಕ್ತ, ಇಷ್ಟಲಿಂಗವಿಡಿದು ಜಂಗಮ. ಇಷ್ಟಲಿಂಗಕ್ಕೆ ಅಷ್ಟವಿಧಾರ್ಚನೆ ಷೋಡಶೋಪಚಾರವ ಮಾಡಿ ಪ್ರಸನ್ನ ಪ್ರಸಾದವ ಪಡೆದು ಅಷ್ಟ ಭೋಗವ ಭೋಗಿಸುವಾತನೇ ಗುರು. ಇಂತೀ ಆದಿಕುಳ ಮಹಾನಂದ ಪ್ರಸಾದದ ನಿಜಾನುಭಾವಿಯೇ ಜಂಗಮ. ಇಂತೀ ಗುರು ಲಿಂಗ ಜಂಗಮದಲ್ಲಿ ಭಕ್ತಿ ನೆಲೆಗೊಂಡ ನಿರುಪಾಧಿಕನೇ ಭಕ್ತ. ಆ ಭಕ್ತನು ಲಿಂಗಮುಖದಲ್ಲಿ ಶುದ್ಧ ಪ್ರಸಾದವ ಪಡೆದು ಭೋಗಿಸುವುದು. ಜಂಗಮ ಮುಖದಲ್ಲಿ ಸಿದ್ಧ ಪ್ರಸಾದವ ಪಡೆದು ಭೋಗಿಸುವುದು. ಸ್ವಚ್ಛಂದ ಲಲಿತ ಭೈರವಿಯಲ್ಲಿ 'ಲಿಂಗಾರ್ಪಿತ ಪ್ರಸಾದಂಚ। ನ ದದ್ಯಾತ್ ಜಂಗಮೇಷು। ಜಂಗಮಸ್ಯ ಪ್ರಸಾದಂ ಚ ನ ದದ್ಯಾತ್ ಲಿಂಗಮೂರ್ತಿಷು। ಜಂಗಮಸ್ಯ ಪ್ರಸಾದಂಚ। ಸ್ವೇಷ್ಟೇನ ಚಾರ್ಪಯೇತ್। ಪ್ರಸಾದ ದರ್ಪಯೇ ಯದ್ದೇವೀ ಪ್ರಸಾದೇ ನಿಷ್ಫಲೋ ಭವೇತ್॥' ಇಂತೆಂದುದಾಗಿ ಅಂದಾದಿಯಿಂದಾದಿಯಾಗಿ ಎಂದೆಂದು ಇದೇ ಪ್ರಸಾದದಾದಿಕುಳ. ಈ ಆದಿ ಕುಳದರಿವುವಿಡಿದು ಪ್ರಸಾದವಿಡಿವ ಮಹಾಪ್ರಸಾದ ಸಾಧ್ಯ ಗ್ರಾಹಕರಿಗೆ ನಮೋ ನಮೋ ಎಂಬೆ. ಉಳಿದ ಉದ್ದೇಶಗಳೆನಿಸುವ ಭ್ರಾಂತಿಹೊದಕರಿಗೆ ಜಾತ್ಯಂಧಕರಿಗೆ ನಾನಂಜುವೆನಯ್ಯ ಮಹಾಲಿಂಗ ಕಲ್ಲೇಶ್ವರಾ.

---

# ಏಕಾದಶ ಪ್ರಸಾದಗಳು.

## ೧ ನೇ ವಿಧ.

೧. ಪ್ರಥಮದಲ್ಲಿ ಗುರು ಪ್ರಸಾದ, ದ್ವಿತೀಯದಲ್ಲಿ ಲಿಂಗ ಪ್ರಸಾದ, ತೃತೀಯದಲ್ಲಿ ಜಂಗಮ ಪ್ರಸಾದ, ಚತುರ್ಥದಲ್ಲಿ ಪ್ರಸಾದಿಯ ಪ್ರಸಾದ, ಪಂಚಮದಲ್ಲಿ ಸಮಯ ಪ್ರಸಾದ, ಷಷ್ಠಮದಲ್ಲಿ ಭೋಜ್ಯ ಪ್ರಸಾದ, ಸಪ್ತಮದಲ್ಲಿ ಆಪ್ಯಾಯನ ಪ್ರಸಾದ, ಅಷ್ಟಮದಲ್ಲಿ ಭಕ್ಷ್ಯ ಪ್ರಸಾದ, ನವಮದಲ್ಲಿ ಚೋಹ್ಯ ಪ್ರಸಾದ, ದಶಮದಲ್ಲಿ ಲೇಹ್ಯ ಪ್ರಸಾದ, ಏಕಾದಶದಲ್ಲಿ ತೃಪ್ತಿ ಪ್ರಸಾದ, ಇವು ಹನ್ನೊಂದು. ಪ್ರಥಮದಲ್ಲಿ ಮಂತ್ರ ವಿಧಾನದಿಂದ ಹಸ್ತ ಸ್ಪರ್ಶನವ ಮಾಡುವುದೇ ಗುರು ಪ್ರಸಾದ. ದ್ವಿತೀಯದಲ್ಲಿ ಲಿಂಗಕ್ಕೆ ಮೂರು ವೇಳೆ ಅರ್ಪಿತವ ಮಾಡಿದಲ್ಲಿಗೆ ಲಿಂಗ ಪ್ರಸಾದ. ತೃತೀಯದಲ್ಲಿ ಲಿಂಗ ಪ್ರಸಾದವನ್ನು ಜಿಹ್ವೆಗೆ ಮುಟ್ಟಿಸಿದಲ್ಲಿಗೆ ಜಂಗಮ ಪ್ರಸಾದ. ಚತುರ್ಥದಲ್ಲಿ ಜಂಗಮ ಪ್ರಸಾದವನ್ನು ತಮ್ಮ ಹಸ್ತಕ್ಕೆ ಬಂದಲ್ಲಿಗೆ ಪ್ರಸಾದಿಯ ಪ್ರಸಾದ. ಪಂಚಮದಲ್ಲಿ ಪ್ರಸಾದವ ನೀಡುವುದೇ ಅಥವಾ ಮೇಲುಪದಾರ್ಥವ ನೀಡಿಕೊಂಬುವುದೇ ಸಮಯ ಪ್ರಸಾದ. ಷಷ್ಠಮದಲ್ಲಿ ಆ ಸಮಯ ಪ್ರಸಾದವನ್ನು ಸಮರಸದಿಂದೆ ಭೋಜ್ಯವ ಕಟ್ಟುವುದೇ ಭೋಜ್ಯ ಪ್ರಸಾದ. ಸಪ್ತಮದಲ್ಲಿ ಆ ಭೋಜ್ಯ ಪ್ರಸಾದವನ್ನು ಜಿಹ್ವೆಗೆ ಮುಟ್ಟಿಸಿ ಸ್ವೀಕರಿಸುವುದೇ ಆಪ್ಯಾಯನ ಪ್ರಸಾದವೆಂದರಿವುದು. ಅಷ್ಟಮದಲ್ಲಿ ಆಪ್ಯಾಯನ ಪ್ರಸಾದವಾದ ಬಳಿಕ ಸಕಲ ಪದಾರ್ಥವನ್ನು ದಂತದಿಂದ ಜಗಿಜಗಿದು ಕೊಂಬುವುದೇ ಭಕ್ಷ್ಯ ಪ್ರಸಾದ. ನವಮದಲ್ಲಿ ಭಕ್ಷ್ಯ ಪ್ರಸಾದವಾದ ಬಳಿಕ ಹಸ್ತದಿಂದ ಸರ್ವ ಪದಾರ್ಥದಿಂದ ಚಪ್ಪರಿಸುವುದೇ ಚೋಹ್ಯ ಪ್ರಸಾದ. ದಶಮದಲ್ಲಿ ಆ ಚೋಹ್ಯ ಪ್ರಸಾದವಾದ ಬಳಿಕ ಬಟ್ಟಲವ ಖಂಡಿತ ಮಾಡುವುದೇ ಲೇಹ್ಯ ಪ್ರಸಾದ. ಏಕಾದಶಿಯಲ್ಲಿ ಲೇಹ್ಯ ಪ್ರಸಾದವಾದ ಬಳಿಕ ಜಿಹ್ವೆಯಲ್ಲಿ ಖಂಡಿತ ಮಾಡುವುದೇ ತೃಪ್ತಿ ಪ್ರಸಾದವೆಂದರಿವುದು. ಇಂತೀ ಏಕಾದಶ ಪ್ರಸಾದ ನಿರ್ಣಯ ಸಮಾಪ್ತ.

---

## ೨ ನೇ ವಿಧ.

೨. ಗುರುಮುಖದಿಂದ ಬಂದುದೇ ಗುರುಪ್ರಸಾದ ಆ ಪ್ರಸಾದವನು ಲಿಂಗಕ್ಕೆ ಅರ್ಪಿಸಿದಲ್ಲಿ ಲಿಂಗ ಪ್ರಸಾದ. ಭೋಜ್ಯ ಕಟ್ಟಿ ಲಿಂಗಕ್ಕೆ ಕೊಟ್ಟು ಸಲಿಸುವುದೇ ಜಂಗಮ ಪ್ರಸಾದ. ತತ್ ಪ್ರಸಾದಿಗಳಲ್ಲಿ ಯಾಚಿಸಿ ಅವರ ಪ್ರಸಾದವ ಕೊಂಬುವುದೇ ಪ್ರಸಾದಿಯ ಪ್ರಸಾದ. ಅಪೇಕ್ಷೆಯಿಂದ ಸಲಿಸುವುದೇ ಆಸ್ವಾಯನ ಪ್ರಸಾದ. ಗುರುಲಿಂಗ ಜಂಗಮವ ಕಂಡು ಆ ಸಮಯದಲ್ಲಿ ತೆಗೆದುಕೊಂಬುವುದೇ ಸಮಯ ಪ್ರಸಾದ. ಪಂಚೇಂದ್ರಿಯಂಗಳಲ್ಲಿ ಬರಲ್ಪಟ್ಟ ಪಂಚ ವಿಷಯ ಪದಾರ್ಥಗಳನು ಪಂಚವಿಧ ಲಿಂಗಕ್ಕೆ ಸಮರ್ಪಣ ಮಾಡುವುದೇ ಪಂಚೇಂದ್ರಿಯ ವಿರಹಿತ ಪ್ರಸಾದ. ಮನವೇ ಲಿಂಗ, ಬುದ್ಧಿಯೇ ಶಿವಜ್ಞಾನ, ಚಿತ್ತವೇ ಶಿವದಾಸೋಹ, ಅಹಂಕಾರದಲ್ಲಿ ಶಿವ ಚಿಂತನೆಯುಳ್ಳವನಾಗಿ ಸಲಿಸಿದ್ದೇ ಅಂತಃಕರಣ ವಿರಹಿತ ಪ್ರಸಾದ. ತ್ರಿವಿಧಾಂಗದಲ್ಲಿ ತ್ರಿವಿಧ ಲಿಂಗವ ಸಂಬಂಧಿಸಿ ಆ ಚಿದ್ಘನ ಲಿಂಗ ತಾನೆಂದರಿದು ಆ ತ್ರಿವಿಧ ಲಿಂಗಕ್ಕೆ ಕೊಡುವುದೇ ಸದ್ಭಾವ ಪ್ರಸಾದ. ಬಹಿರಂಗದ ಪ್ರಪಂಚವ ನಷ್ಟ ಮಾಡಿ ಅರುಹುವಿಡಿದು ಸಲಿಸುವುದೇ ಸಮತೆ ಪ್ರಸಾದ. ಶ್ರೀಗುರುವಿನ ಪ್ರಸನ್ನತ್ವವೇ ಜ್ಞಾನ ಪ್ರಸಾದ. ಇಂತೀ ಏಕಾದಶ ಪ್ರಸಾದವನು ಒಳಹೊರಗೆ ಪರಿಪೂರ್ಣವಾಗಿ ತಿಳಿವುದೇ ಶಿವತಂತ್ರ, ಗುರು ಶಾಂತೇಶ್ವರನಲ್ಲಿ ಲಿಂಗೈಕ್ಯವು.

---

## ೩ ನೇ ವಿಧ

೪. ಇನ್ನು ಏಕಾದಶ ಪ್ರಸಾದಃ— ಪ್ರಥಮದಲ್ಲಿ ಮಹಾದೇವಂಗೆ ಮನವರ್ಪಿತ, ದ್ವಿತೀಯದಲ್ಲಿ ಮಹೇಶ್ವರಂಗೆ ವೀರಾರ್ಪಿತ, ತೃತೀಯದಲ್ಲಿ ಶಂಕರಂಗೆ ಸಮಾಧಾನಾರ್ಪಿತ, ಚತುರ್ಥದಲ್ಲಿ ನಿರ್ವಿಷಯಾರ್ಪಿತ, ಪಂಚಮದಲ್ಲಿ ಪಂಚವಸ್ತ್ರಾರ್ಪಿತ, ಷಷ್ಠಮದಲ್ಲಿ ನಷ್ಟ ರೂಪಾಗಿ ನಿರೂಪಾರ್ಪಿತ, ಸಪ್ತಮದಲ್ಲಿ ಆತ್ಮಾರ್ಪಿತ, ಅಷ್ಟಮದಲ್ಲಿ ತನ್ನ ಮರೆದು ಮಹಾರ್ಪಿತ, ನವಮದಲ್ಲಿ ನಿಃಶೂನ್ಯಾರ್ಪಿತ, ದಶಮದಲ್ಲಿ ಮಹಾರ್ಪಿತ, ಏಕಾದಶದಲ್ಲಿ ಏಕಾದಶ ಪ್ರಸಾದವ ನೋಡ ಹೋದರೆ ತನ್ನ ನುಂಗಿತ್ತಯ್ಯ. ಉಪಮಿಸಬಾರದು ಮಹಾಘನವ ಕೂಡಲ ಚನ್ನ ಸಂಗಮದೇವಾ.

ಏಕಾದಶ ಪ್ರಸಾದನೆಂತೆಂದೊಡೆ:-- ಪ್ರಥಮದಲ್ಲಿ ಹಸ್ತಸ್ಪರ್ಶನವ ಮಾಡಿದಂಥಾದ್ದೇ ಗುರು ಪ್ರಸಾದವೆನಿಸುವುದಯ್ಯಾ. ಇಷ್ಟ ಮಹಾ ಲಿಂಗಕ್ಕೆ ಮಂತ್ರ ಸ್ಮರಣೆಯಿಂದ ಮೂರು ವೇಳೆ ರೂಪನರ್ಪಿಸಿದಲ್ಲಿಗೆ ಲಿಂಗ ಪ್ರಸಾದವೆನಿಸುವುದಯ್ಯಾ. ಎರಡು ವೇಳೆ ಇಷ್ಟಮಹಾಲಿಂಗ ದೇವಂಗೆ ರೂಪನರ್ಪಿಸಿ ಜಿಹ್ವೆಯಲ್ಲಿಟ್ಟಲ್ಲಿ ಜಂಗಮ ಪ್ರಸಾದವೆನಿಸು ವುದಯ್ಯಾ. ಆಮೇಲೆ ಲಿಂಗದೇವಂಗೆ ತೋರಿ ಬೋಜೆಗಟ್ಟೆ ಲಿಂಗ ದೇವಂಗೆ ತೋರಿ ಜಿಹ್ವೆಯಲ್ಲಿಟ್ಟಂಥಾದ್ದೇ ಪ್ರಸಾದಿಯ ಪ್ರಸಾದವೆನಿ ಸುವುದಯ್ಯಾ. ಆ ಭೋಜ್ಯ ರೂಪಾದ ಪ್ರಸಾದಿಯ ಪ್ರಸಾದದೊಳಗೆ ಮಧುರ, ಒಗರು, ಖಾರ, ಆಮ್ಲ, ಕಹಿ, ತೃಪ್ತಿ, ಮಹಾ ತೃಪ್ತಿಯೇ ಆಪ್ಯಾಯನ, ಸಮಯ, ಪಂಚೇಂದ್ರಿಯ ವಿರಹಿತ, ಕರಣ ಚತುಷ್ಟಯ ವಿರಹಿತ, ಸದ್ಭಾವ, ಸಮತೆ, ಜ್ಞಾನ ಪ್ರಸಾದ ಮೊದಲಾದ ಸಪ್ತ ವಿಧ ಪ್ರಸಾದವೆನಿಸುವುದಯ್ಯಾ. ಇಂತು ಪರಾಧೀನತೆಯಿಂ ಭಿಕ್ಷವ ಬೇಡ ಲಾರದಿರ್ದಡೆ ಅರಣ್ಯದಲ್ಲಿ ಫಳ ರಸಯುಕ್ತವಾದ ಹಣ್ಣು-ಕಾಯಿಗಳ ಲಿಂಗಾರ್ಪಿತ ಭಿಕ್ಷೆ ಎಂದು ಆ ಫಲಾದಿಗಳ ತೆಗೆದುಕೊಂಡು ಶೋಧಿಸಿ ಪವಿತ್ರವ ಮಾಡಿ ಲಿಂಗಾರ್ಪಿತ ಭೋಗಿಯಾದಾತನೇ ಸ್ವಯಂಭು ಪ್ರಸಾದ ಭಕ್ತನಾದ ಚಿತ್ಕಲಾ ಪ್ರಸಾದಿ ನೋಡಾ ಕಪಿಲ ಸಿದ್ಧ ಮಲ್ಲಿ ಕಾರ್ಜುನಾ.

೫ ಅನಾದಿ ಕುಳ ಸನ್ಮತವಾದ ಏಕಾದಶ ಪ್ರಸಾದದ ಕುಳವ ತಿಳಿದಡೆ, ಪ್ರಥಮದಲ್ಲಿ ಗುರು ಪ್ರಸಾದ, ದ್ವಿತೀಯದಲ್ಲಿ ಲಿಂಗ ಪ್ರಸಾದ, ತೃತೀಯದಲ್ಲಿ ಜಂಗಮ ಪ್ರಸಾದ, ಚತುರ್ಥದಲ್ಲಿ ಪ್ರಸಾದಿಯ ಪ್ರಸಾದ, ಪಂಚಮದಲ್ಲಿ ಆಪ್ಯಾಯನ ಪ್ರಸಾದ, ಷಷ್ಠಮದಲ್ಲಿ ಸಮಯ ಪ್ರಸಾದ, ಸಪ್ತಮದಲ್ಲಿ ಪಂಚೇಂದ್ರಿಯ ವಿರಹಿತ ಪ್ರಸಾದ, ಅಷ್ಟಮ ದಲ್ಲಿ ಅಂತಃಕರಣ ಚತುಷ್ಟಯ ವಿರಹಿತ ಪ್ರಸಾದ, ನವಮದಲ್ಲಿ ಸದ್ಭಾವ ಪ್ರಸಾದ, ದಶಮದಲ್ಲಿ ಸಮತೆ ಪ್ರಸಾದ, ಏಕಾದಶದಲ್ಲಿ ಜ್ಞಾನ ಪ್ರಸಾದ, ಇಂತೀ ಏಕಾದಶ ಪ್ರಸಾದ ಸ್ಥಲವನತಿಗಳೆದ ಕೂಡಲ ಚನ್ನ ಸಂಗಯ್ಯನಲ್ಲಿ ಐಕ್ಯಪ್ರಸಾದಿಗೆ ನಮೋ ನಮೋ ಎಂಬೆ.

ಅರ್ಥ: – ಜ್ಞಾನೋದಯವಾಗಿ ಗುರುವನರಸುವಾತಂಗೆ ಗುರು ಕರುಣಿಸಿ ಪ್ರಸನ್ನವಾದುದೀಗ ಪ್ರಥಮವಾದ ಕಾರಣ ಪ್ರಥಮದಲ್ಲಿ

ಗುರು ಪ್ರಸಾದವೆಂಬ ಶಬ್ದಕ್ಕರ್ಥ. ಅಂತು ಗುರು ಕರುಣವಾದಲಿ ಮಹಾಘನಲಿಂಗವು ಕರಸ್ಥಲಕ್ಕೆ ಬಂದು ಪ್ರಸನ್ನವಾದುದು ಎರಡನೆಯ ದೆಂಬುದೀಗ ದ್ವಿತೀಯದಲ್ಲಿ ಲಿಂಗಪ್ರಸಾದವೆಂಬ ಶಬ್ದಕ್ಕರ್ಥ. ಅಂತಪ್ಪ ಲಿಂಗಕಳಾ ಚೈತನ್ಯವೇ ಜಂಗಮವಾದ ಕಾರಣ ಆ ಲಿಂಗಕಳಾ ಚೈತನ್ಯವು ತನ್ನ ಅರಿವಿಗೆ ಪ್ರಸನ್ನವಾದುದೀಗ ಮೂರನೆಯದೆಂಬುದೀಗ ತೃತೀಯ ದಲ್ಲಿ ಜಂಗಮ ಪ್ರಸಾದವೆಂಬ ಶಬ್ದಕ್ಕರ್ಥ. ಅಂತಪ್ಪ ಗುರು ಲಿಂಗ ಜಂಗಮದ ಪ್ರಸನ್ನ ಪ್ರಸಾದವ ಪಡೆದಿಪ್ಪ ತ್ರಿವಿಧ ಲಿಂಗಾನುಭಾವಿಗಳ ಅನುಭವವು ತನ್ನರಿವಿಂಗೆ ಪ್ರಸನ್ನವಾದುದು ನಾಲ್ಕನೆಯದೆಂಬುದೀಗ ಚತುರ್ಥದಲ್ಲಿ ಪ್ರಸಾದಿಯ ಪ್ರಸಾದವೆಂಬ ಶಬ್ದಕ್ಕರ್ಥ. ಅಂತು ಶಿವ ಶರಣ ಅನುಭಾವ ಸಂಗದಿಂದ ತನ್ನರಿವಿಗೆ ಶಿವಾಪೇಕ್ಷೆಯ ಆಪ್ಯಾಯನ ಘನವಾದುದು ಐದನೆಯದೆಂಬುದೀಗ ಪಂಚಮದಲ್ಲಿ ಆಪ್ಯಾಯನ ಪ್ರಸಾ ದವೆಂಬ ಶಬ್ದಕ್ಕರ್ಥ. ಅಂತು ಶಿವಶರಣರ ಅನುಭಾವ ಸಂಗದಿಂದ ತನ್ನರಿವಿಗೆ ಶಿವಾಪೇಕ್ಷೆ ಘನವಾಗಿ ಶಿವಲಾಂಛನವೆಲ್ಲ ಶಿವನೆಂಬ ದೃಢ ಭಾವ ಘಟಿಸಿ ಅವರ ಪ್ರಸಾದವ ಕೊಂಬುದು ಆರನೆಯದೆಂಬುದೀಗ ಷಷ್ಠಮದಲ್ಲಿ ಸಮಯ ಪ್ರಸಾದವೆಂಬ ಶಬ್ದಕ್ಕರ್ಥ ಅಂತು ಶಿವಲಾಂಛ ನವೆಲ್ಲ ಶಿವನೆಂಬ ದೃಢಭಾವದಿಂದ ಶಿವಲಾಂಛನಕ್ಕೆ ರೂಪಾದಿ ಪದಾ ರ್ಥಗಳನರ್ಪಿಸಿ ಸಂಚದ ಸಮಯ ಪ್ರಸಾದ ರೂಪ ಇಷ್ಟಲಿಂಗಾರ್ಪಿತ ಮಾಡಿ ಪ್ರಸಾದನ ಭುಂಜಿಸುವಡೆ ದೇಹೇಂದ್ರಿಯಂಗಳೆಲ್ಲ ಲಿಂಗರೂಪ ವಾದ ಕಾರಣ ಅದು ಏಳನೆಯದೆಂಬುದೀಗ ಸಪ್ತಮದಲ್ಲಿ ಪಂಚೇಂ ದ್ರಿಯ ವಿರಹಿತ ಪ್ರಸಾದವೆಂಬ ಶಬ್ದಕ್ಕರ್ಥ. ಅಂತು ಇಷ್ಟಲಿಂಗಕ್ಕ ರ್ಪಿಸಿದ ರೂಪಿನೊಳಗಣ ರುಚಿ ಪ್ರಸಾದವ ಪ್ರಾಣಲಿಂಗಕ್ಕೆ ಅರ್ಪಿಸಲು ಪ್ರಾಣ ಮೊದಲಾದ ಅಂತಃಕರಣಂಗಳೆಲ್ಲ ಲಿಂಗವಾಗಿಪ್ಪುದು ಎಂಟನೆ ಯದೆಂಬುದೀಗ ಅಷ್ಟಮದಲ್ಲಿ ಅಂತಃಕರಣ ಚತುಷ್ಟಯ ವಿರಹಿತ ಪ್ರಸಾದವೆಂಬ ಶಬ್ದಕ್ಕರ್ಥ. ಅಂತು ಸಗುಣ ಪ್ರಸಾದದ ರೂಪು ರುಚಿ ಗಳ ಆನಂದ ಪ್ರಸಾದವ ಭಾವಲಿಂಗಕ್ಕೆ ಅರ್ಪಿಸಿ, ಭಾವಲಿಂಗವಾದುದು ಒಂಬತ್ತನೆಯದೆಂಬುದೀಗ ನವಮದಲ್ಲಿ ಸದ್ಭಾವ ಪ್ರಸಾದವೆಂಬ ಶಬ್ದ ಕ್ಕರ್ಥ. ಅಂತು ಒಳಹೊರಗೆನ್ನದೆ ಸರ್ವಾಂಗ ಲಿಂಗವಾಗಿ ಭಿನ್ನದೋ ರದೆ ಇರ್ದ ಶರಣಂಗೆ ಲಿಂಗವು ದೂರಸ್ಥವೆಂದು ಭಾವಿಸಬೇಕು, ಬೆರ ಸಬೇಕು ಎಂಬ ಅವಸ್ಥೆಗಳೇನೂ ಇಲ್ಲದೆ ನಿರಾತಂಕವಾಗಿ ಸಮಾಧಾ

ನವನೆಯ್ದಿರ್ದುದು ಹತ್ತನೆಯದಾದ ಕಾರಣ ದಶಮದಲ್ಲಿ ಸಮತೆ ಪ್ರಸಾದವೆಂಬ ಶಬ್ದಕ್ಕರ್ಥ. ಅಂತು ಭಿನ್ನಾವಸ್ಥೆಗಳೇನೂ ಇಲ್ಲದೆ ಸಮಧಾಸಿಸಿ ನಿಂತ ನಿಲುಕಡೆಯಲ್ಲಿ ನಿರ್ಧರವಾಗಿ ಲಿಂಗ ತಾನಾಗಿ ಕಾಣುತ್ತಿಪ್ಪ ಅಭಿನ್ನ ಜ್ಞಾನಾನಂದ ಸುಖದಲ್ಲಿಪ್ಪುದು ಹನ್ನೊಂದನೆಯದಾದ ಕಾರಣ ಏಕಾದಶದಲ್ಲಿ ಜ್ಞಾನ ಪ್ರಸಾದವೆಂಬ ಶಬ್ದಕ್ಕರ್ಥ. ಅಂತು ಪ್ರಸಾದ ಹನ್ನೊಂದೆಂಬ ಖಂಡಿತವಳಿದು ಅಖಂಡಿತ ಲಿಂಗದೊಳಗೆ ಬೆರೆತು ಬೇರಿಲ್ಲದಿಪ್ಪ ಶರಣ ಭೋಗಿಸಿದುದೆಲ್ಲ ಲಿಂಗಾರ್ಪಿತವಾಗಿ ಪ್ರಸಾದವಪ್ಪುದು. ಅಂತಪ್ಪ ಅಖಂಡಿತ ಪ್ರಸಾದಿಗೆ ನಮಸ್ಕಾರವ ಮಾಡುತ್ತಿರ್ದನು ಶರಣನೆಂಬುದೀಗ ಇಂತೀ ಏಕಾದಶ ಪ್ರಸಾದವನತಿಗಳೆದ ಐಕ್ಯ ಪ್ರಸಾದಿಗೆ ನಮೋ ನಮೋ ಎಂಬೆನೆಂಬ ಶಬ್ದಕ್ಕರ್ಥ.

---

## ಅಚ್ಚಪ್ರಸಾದಿ, ನಿಚ್ಚಪ್ರಸಾದಿ, ಸಮಯಪ್ರಸಾದಿ.

೧. ಅಚ್ಚಪ್ರಸಾದಿ ನಿಚ್ಚಪ್ರಸಾದಿ ಸಮಯಪ್ರಸಾದಿಗಳ ವಿವರ ಅದೆಂತೆಂದೊಡೆ:– ಗುರುವು ಮೊದಲು ಆಚರಿಸುವಂಥ ಮರ್ಮವನು ತಿಳಿದು ಶಿವಸಂಸ್ಕಾರ ಸಾಮರ್ಥ್ಯವನ್ನು ಹೊಂದಿ ನಡೆ, ಎಂದು ಅತಿ ಮೋಹನದಿಂದ ಸಮಸ್ತ ಮರ್ಮವನು ತಿಳುಹಿ. ಹಿಡಿದ ವ್ರತಾಚರಣೆಗೆ ಸಂದು ಇಲ್ಲದ ಹಾಗೆ ಅಪಮೃತ್ಯು ಬಂದು ಸೋಂಕದ ಹಾಗೆ ಪ್ರಮಥ ಕೃಪಾಕಟಾಕ್ಷದಿಂದ ನಡೆದು ಹೋಗುವರು. ಅವರೇ ಅಚ್ಚಪ್ರಸಾದಿಗಳು, ಮರ್ತ್ಯಲೋಕದ ಮಹಾಗಣಂಗಳೆನಿಸುವರು. ಮಿಕ್ಕಿನ ನಿಚ್ಚಪ್ರಸಾದಿಗಳು, ಸಮಯಪ್ರಸಾದಿಗಳು ಆವರು ನಡೆದ ಮೇಲು ಪಂಚಾಚರಣೆಯು ನೋಡಿ ಅವರಂಥ ಸುವಿವೇಕವು ನಮಗೆ ಬಾರದೆಂಬುದ ತಿಳಿದು ಅವರೇ ತಮ್ಮ ಇಷ್ಟಲಿಂಗವಾಗಿ ತಾವೇ ಅವರಿಗೆ ಭೃತ್ಯರಾಗಿ ನಡೆವುತ್ತ ಏಕಾರ್ಥ ಪರಮಾರ್ಥಕ್ಕೆ ಸಮಾನವಾಗಿ ಆಚರಿಸಬೇಕೆಂಬಂಥ ಅನುಸರಣೆ ಅವರಲ್ಲಿ ಹುಟ್ಟಿದ ನಿಮಿತ್ಯ ಅದೇ ಜಂಗಮ ಬಂದು ನಿಚ್ಚಪ್ರಸಾದಿಗಳಿಗೆ ಒಪ್ಪತ್ತು ತೀರ್ಥ ಪ್ರಸಾದ ಮುಂತಾಗಿ ಆಚರಿಸಿ, ಉಳಿದ ಒಪ್ಪತ್ತು ಸಂಬಂಧವಿಟ್ಟು ಅನುಸರಿಸಿ ಎಂದು ಕಟ್ಟುಮಾಡಿ ಕೊಡುವರು. ಸಮಯಪ್ರಸಾದಿಗಳಿಗೆ ಎರಡರಲ್ಲಿ ಅಶಕ್ತರೆಂದು ತಿಳಿದು ಅತಿ ಸೂಕ್ಷ್ಮವಾಗಿ ಅವರಿಬ್ಬರ ಆಚರಣೆಯನ್ನು ಇವರಿಬ್ಬರಲ್ಲಿ ಹರಿಸಿ

ಆಯಾಯ ತತ್ಕಾಲಕ್ಕೆ ಜಂಗಮ ದೊರೆದಂಥಾದ್ದೇ ಆಚರಣೆ, ಜಂಗಮ ದೊರೆಯುದಂಥಾದ್ದೇ ಸಂಬಂಧವೆಂದು, ಅರುಹಿ ಕೊಟ್ಟಲ್ಲಿ ದೊರೆದಾಗಲಿಂತು ಆಚಾರ ಒಡಂಬಡಿಕೆ, ದೊರೆಯುದಾಗೆ ಆಚಾರ ಒಡಂಬಡಿಕೆಯಾಗದು, ಎಂದು ಮಾರ್ಗವನು ತಿಳಿದು, ಜಂಗಮವು ಇಲ್ಲದ ವೇಳೆಗೆ ಅತಿ ಸೂಕ್ಷ್ಮವಾಗಿ ಅತಿ ವಿಶಾಲದಿಂದ ನಿರೂಪಿಸುತ್ತಿರ್ದರು. ಆ ಗುರುವು ಮೊದಲಲ್ಲಿ ಲಿಂಗವ ಕರುಣಿಸಿಕೊಟ್ಟಂಥಾದ್ದೇ ನಿಮ್ಮ ಕಳೆ, ನಾ, ನಿಮ್ಮ ಚಿತ್ತು, ಎರಡರ ಸಮರಸವೇ ನಿಮ್ಮ ಬಿಂದು, ಆ ಬಿಂದುವೇ ಅಕಾರ ಪ್ರಣವು ನಿಮ್ಮ ಇಷ್ಟ ಲಿಂಗದ ಶಕ್ತಿ ಪೀಠದಲ್ಲಿ ಗುರುವಾಗಿ, ಆ ಕಳೆಯೇ ಮಕಾರ ಪ್ರಣವು. ನಿಮ್ಮ ಲಿಂಗದ ಗೋಮುಖದಲ್ಲಿ ಜಂಗಮವಾಗಿ, ಆ ಎರಡರ ಕೂಟವೇ ನಾದ, ಅದೇ ಉಕಾರ ಪ್ರಣವು. ಆ ಲಿಂಗದ ಗೋಳಕದಲ್ಲಿ ಲಿಂಗವಾಗಿ ಅದೇ ಲಿಂಗವೇ ನಿಮ್ಮ ರಮಣನೆಂದು ಭಾವಿಸಿದ ನಿಮಿತ್ಯ ನೀವೇ ಲಿಂಗವಾದ ಕಾರಣ ಆ ಲಿಂಗವೇ ನಿಮ್ಮ ಅಂಗವಾಗಿ, ಆ ಜಂಗಮವೇ ನಿಮ್ಮ ಪ್ರಾಣವಾಗಿ ಗುರುವೇ ನಿಮ್ಮ ಆಚರಣೆಯಾಗಿರ್ದ ನಿಮಿತ್ಯ, ಅದೇ ಗುರುವೇ ನಿಮ್ಮ ಮಾಙ್ಮನದಲ್ಲಿ, ಅದೇ ಲಿಂಗವೇ ನಿಮ್ಮ ಕರಕಮಲದಲ್ಲಿ, ಅದೇ ಜಂಗಮವೇ ನಿಮ್ಮ ವಿಗ್ರಹದಲ್ಲಿ, ನೆಲೆಗೊಂಡಿರ್ಪುದೆಂದು ಸಂಬಂಧಿಸಿ ಕೊಟ್ಟಲ್ಲಿ, ಆ ಗುರುವು ಹೇಳಿದಂಥ ಪತಿವ್ರತಾ ಧರ್ಮವು ತಿಳಿಯದೆ ತಾವು ಆಚರಿಸಿದ ಕಾರಣ, ಆಯಾಯ ತತ್ಕಾಲದಲ್ಲಿ ಕ್ರಿಯಕ್ಕೆ ಬಂದೊದಗುವವು. ಅದೇ ಸಮರಸಾಚರಣೆಯ ಉಪಚಾರವು. ನೀವು ಯಾವ ಸ್ಥಲವನ್ನು ಹಿಡಿದು ಆಚರಿಸಿದರೂ ಆಯಾಯ ಸ್ಥಲಂಗಳಲ್ಲಿ ಆರು ಸ್ಥಲಂಗಳು ಬಂದು ಸಂಬಂಧವಾಗುವವು. ಮಿಕ್ಕಿನ ಗುರೂಪದೇಶವಿಲ್ಲದೆ ಶುದ್ಧ ಶೈವರಿಗೆ ಗುರುವು ಅಷ್ಟಷ್ಟು ಜಪ ಶಿವಾರ್ಚನೆಯ ಹೇಳಿ ಹೀಗೆ ಆಚರಿಸು ಎಂದು ಅರುಹಿ ಕೊಟ್ಟಲ್ಲಿ, ಅವರಿಗೆ ಒಂದೇ ಸ್ಥಲವು ಸಂಬಂಧವು. ಅವರಿಗೆ ಮತ್ತೊಂದು ಸ್ಥಲದ ಮಾರ್ಗವನ್ನು ಗುರುವು ಅರುಹಿ ಕೊಡಲಿಲ್ಲ. ಏನು ಕಾರಣವೆಂದೊಡೆ, ಅವರು ಅಶಕ್ತರಾದ ನಿಮಿತ್ಯ. ಅವರು ಖಂಡಿತಾಚರಣೆಯುಳ್ಳವರು. ಅವರಿಗೆ ಸಮರಸಾಚರಣೆ ಹೊಂದದ ನಿಮಿತ್ಯ ಅವರು ಮೂರು ಜನ್ಮಕ್ಕೆ ಮುಕ್ತರು. ಅದರಲ್ಲಿ ತಪ್ಪಿ ನಡೆದರೆ ನೂರು ಜನ್ಮಕ್ಕೆ ಮುಕ್ತರು. ಎರಡನು ಬಳಸಿ

ನಡೆದರೆ ಸಹಸ್ರ ಜನ್ಮಕ್ಕೆ ಮುಕ್ತರು. ಹಾಂಗಾದರೂ ಖಂಡಿತ ಮುಕ್ತ ರಲ್ಲದೆ ನಿಜ ಮುಕ್ತರಲ್ಲ. ಇದನರಿತು ಶ್ರೀಗುರುನಾಥನು ಅವಂಗೆ ತಕ್ಕಂಥ ನಡತೆಯನು ಅರುಹಿಕೊಡುವರಲ್ಲದೆ ಹೆಚ್ಚಾಗಿ ಅರುಹಿ ಕೊಡರು ಕೂಡಲಚನ್ನಸಂಗಮದೇವಾ.

೨. (ಅಚ್ಚಪ್ರಸಾದಿಯ ವಿಷಯದ ಸಂಬಂಧವಾಗಿ ಹಿಂದೆ 'ಪಾದೋದಕವಿಧಿ' ಇದರಲ್ಲಿಯ ಎರಡನೇ ವಚನವನ್ನು ನೋಡಬೇಕು.

೩. ಅಯ್ಯಾ ಪರಾತ್ಪರ ಸತ್ಯ ಸದಾಚಾರ ಗುರು ಲಿಂಗ ಜಂಗಮದ ಶ್ರೀ ಚರಣವನ್ನು ಅಚ್ಚಪ್ರಸಾದಿಯೋಪಾದಿಯಲ್ಲಿ ನಿರ್ವಂಚಕತ್ವದಿಂದ ಗುರು ಲಿಂಗ ಜಂಗಮಕ್ಕೆ ಅರ್ಥ ಪ್ರಾಣಾಭಿಮಾನವ ಸಮರ್ಪಿಸಿ ಒಪ್ಪತ್ತು ಅಷ್ಟವಿಧಾರ್ಚನೆ ಷೋಡಶೋಪಚಾರದಿಂದ ಪಾದಾರ್ಚನೆಯ ಮಾಡಿ ಪಾದೋದಕ ಪ್ರಸಾದವನ್ನು ತನ್ನ ಸರ್ವಾಂಗದಲ್ಲಿ ನೆಲಸಿರ್ಪ ಇಷ್ಟ ಮಹಾಲಿಂಗ ದೇವಂಗೆ ಕೊಟ್ಟು ಕೊಂಬುವಂಥಾದ್ದೇ ಇದಿರಿಟ್ಟು ಜಂಗಮ ಪಾದೋದಕ ಪ್ರಸಾದವ ಕೊಂಬ ಆಚರಣೆಯ ನಿಲುಕಡೆಯು ನೋಡಾ. ಆಮೇಲೆ ಒಪ್ಪತ್ತು ಸಂಬಂಧವಿಟ್ಟು ಆಚರಿಸುವ ನಿಲುಕಡೆಯು ಎಂತೆಂದೊಡೆ:— ಅಯ್ಯಾ ನಿನ್ನ ಷಟ್‌ಸ್ಥಲದಲ್ಲಿ ನೆಲಸಿರ್ಪ ಇಷ್ಟ ಮಹಾಲಿಂಗದೇವನ ತ್ರಿವಿಧ ಸ್ಥಾನದಲ್ಲಿ, 'ಓಂ ಬಸವಣ್ಣ ಚನ್ನಬಸವಣ್ಣ ಅಲ್ಲಮಪ್ರಭು' ಎಂಬ ತ್ರಿವಿಧ ನಾಮಸ್ವರೂಪವಾದ ಷೋಡಶಾಕ್ಷರಂಗಳೇ ಷೋಡಶವರ್ಣವಾಗಿ ನೆಲಸಿರ್ಪುದು ನೋಡಾ. ಅಂತು ಷೋಡಶ ಕಲಾಸ್ವರೂಪವಾದ ಚಿಧ್ಘನ ಮಹಾಲಿಂಗದೇವನ ನಿರಂಜನ ಜಂಗಮದೋಪಾದಿಯಲ್ಲಿ ಸಗುಣ ನಿರ್ಗುಣ ಪೂಜೆಗಳ ಮಾಡಿ ಜಂಗಮ ಚರಣ ಸೋಂಕಿನಿಂ ಬಂದ ಗುರು ಪಾದೋದಕವಾದರೂ ಸರಿಯೇ, ಅದು ದೊರೆಯದಿರ್ದಡೆ ಲಿಂಗಾಣತಿಯಿಂ ಬಂದೊದಗಿದ ಪರಿಣಾಮೋದಕವಾದರೂ ಸರಿಯೇ. ಒಂದು ಭಾಜನದಲ್ಲಿ ಸೂಕ್ಷ್ಮದಿಂದ ರಚಿಸಿ ಆ ಉದಕದೊಳಗೆ ಹಸ್ತೋದಕ ಮಂತ್ರೋದಕವ ಮಾಡಿ, ಆಮೇಲೆ ಅನಾದಿ ಪ್ರಣವ ಪ್ರಸಾದ ಪ್ರಣವದೊಳಗೆ ಅಖಂಡ ಜ್ಯೋತಿ ಪ್ರಣವ ಅಖಂಡ ಮಹಾ ಜ್ಯೋತಿ ಪ್ರಣವವ ಲಿಖಿತವ ಮಾಡಿ ಶ್ರದ್ಧಾದಿಯಾದ ಪೂರ್ಣ ಭಕ್ತಿಯಿಂದ ಮಹಾ ಚಿದ್ಘನ ತೀರ್ಥವೆಂದು ಭಾವಿಸಿ

ಶಂಕರ ದಾಸಿಮಯ್ಯನನ್ನು ಕಂಡು, ಅವನಾರೆಂಬುದನ್ನು ಅರಿಯದೆ ಅವಳು ಪೂದಂಬುಲ ವೀಳ್ಯೆ, ಕರ್ಪೂರ, ಅರಳಮಲ್ಲಿಗೆ ಮೊದಲಾದ ಪೂಜಾ ಸಾಮಗ್ರಿಗಳನ್ನು ಅವನ ಕಯ್ಯಲ್ಲಿ ಕೊಟ್ಟು ಇವುಗಳಿಂದ ತನ್ನಪರವಾಗಿ ಮೈಲಾರನ ಪೂಜೆಮಾಡಿ ಬರಲು ತಿಳಿಸಿದಳು. ಆದರೆ ಅವನು ಹಾಗೆ ಮಾಡದೆ ತನ್ನ ಕಯ್ಯಲ್ಲಿ ಕೊಟ್ಟ ಗಂಧವನ್ನು ತಾನೇ ಪೂಸಿಕೊಂಡನು. ಮಲ್ಲಿಗೆಯ ಮಾಲೆಯನ್ನು ತಾನೇ ಧರಿಸಿಕೊಂಡನು. ಅದನ್ನು ಆ ಸ್ತ್ರೀಯಳು ನೋಡಿ ಕೋಪಿಸಿ ಮೈಲಾರನಿಗೋಸ್ಕರ ಕೊಟ್ಟಿದ್ದನ್ನು ನೀನು ಹೀಗೆ ತೆಗೆದುಕೊಳ್ಳಬಹುದೇ ? ಮೈಲಾರನು ಅತ್ಯುಗ್ರನು, ಅವನು ಇನ್ನುಮೇಲೆ ನಮಗೆ ಕೆಡಕುಮಾಡದೆ ಬಿಡನು, ಎಂಬ ಭೀತಿಯುಳ್ಳವಳಾಗಿರಲು ಅದನ್ನು ಶಂಕರ ದಾಸಿಮಯ್ಯನು ತಿಳಿದು ಅವಳನ್ನು ಸಂತವಿಸಬೇಕೆಂದು ಅವನು ಮೈಲಾರನ ಮೂರ್ತಿಯನ್ನು ದಿಟ್ಟಿಸಿ ನೋಡಿ—ಎಲೋ ಮೈಲಾರನೇ ಇಲ್ಲಿಗೆ ಬಾ, ಈ ತಂಬುಲವನ್ನು ಹಿಡಿ ಎಂದು ನುಡಿದು ಬಾಯ ತಂಬುಲವನ್ನು ಮುಂದೆ ಮಾಡಲು ಆ ಪ್ರತಿಮೆಯು ನಡುಗುತ್ತ ಬೀಳುತ್ತ ಮುಂದೆ ಬಂದು ಆ ತಂಬುಲವನ್ನು ಕೈಯೊಡ್ಡಿ ತೆಗೆದುಕೊಂಡು ಸವಿದು ಅದರ ರಸವನ್ನು ತನ್ನ ಮೈಯಿಗೆಲ್ಲ ತೊಡೆದುಕೊಂಡಿತು.

ಅಲ್ಲಿದ್ದ ಪುರಜನರು ಇದನ್ನು ನೋಡಿ ಇದು ಧರೆಗೆ ಹೊಸತಾಯಿತು, ಈ ಮೈಲಾರನು ಈ ಜಂಗಮನ ಎಂಜಲನ್ನು ತಿಂದನು, ಇವನ ಮಹಿಮೆಯು ಹೊರಟು ಹೋಯಿತು, ಇನ್ನೇಕೆ ಇವನನ್ನೂ ದೂಳವಿಯನ್ನೂ ಪೂಜಿಸುವುದು ಎಂದು ನುಡಿಯಹತ್ತಿದರು.

ಬಳಿಕ ಶಂಕರ ದಾಸಿಮಯ್ಯನು ಮುಂದೆ ತನ್ನ ಪಯಣ ಮಾಡಬೇಕೆಂದು ಸಿದ್ಧನಾಗುತ್ತಿರಲು ವಕ್ರಪಾದನಿಗೆ ತನ್ನ ಕೊಡೆಯನ್ನು ಹಿಡಿದುಕೊಂಡು ನಡೆ ಎಂದು ಹೇಳುತ್ತಿರುವಾಗ ಮೈಲಾರನು ಈ ಮಾತನ್ನು ಕೇಳಿ ಶಂಕರ ದಾಸಿಮಯ್ಯನು ತನಗೆಯೇ ಆ ಕೊಡೆಯನ್ನು ಹಿಡಿಯಲಿಕ್ಕೆ ಹೇಳಿದನೆಂದು ತಿಳಿದು ಅತ್ಯಂತ ಆನಂದಬಟ್ಟು ಆ ಕೊಡೆಯನ್ನು ತಾನೇ ತೆಗೆದುಕೊಂಡು ದಾಸಿಮಯ್ಯನ ಮೇಲೆ ಹಿಡಿದು ಅವನೊಡನೆ ನಡೆಯಲು ಮುಂದಾದನು.

ಇದನ್ನು ಪುರಜನರು ನೋಡಿ ಮೈಲಾರನು—ನಮ್ಮನ್ನು ಬಿಟ್ಟುಹೋಗಹತ್ತಿದ್ದಾನೆ, ಎಂದು ಮರುಗಹತ್ತಲು ಶಂಕರ ದಾಸಿಮಯ್ಯನು ಮೈಲಾ

ರನಿಗೆ—ನೀನು ನನ್ನ ಕೂಡ ಬರಬೇಡ. ಆ ಕೊಡೆಯನ್ನು ವಕ್ರ್ತಪಾದನಿಗೆ ಕೊಡು ಎಂದು ಹೇಳಲು, ಅದಕ್ಕೆ ಮೈಲಾರನು—ಶಂಕರ ದಾಸಿಮಯ್ಯನೇ, ಈ ಕೊಡೆಯು ನನ್ನ ಹತ್ತಿರವಿರಲಿ. ನಾನು ಅದನ್ನು ಕೊಡುವದಿಲ್ಲ. ನಿನ್ನ ಗುರುತಿಗಾಗಿ ನಾನು ಇದನ್ನು ಹಿಡಿದುಕೊಂಡಿರುವೆನು. ಇನ್ನು ಮುಂದೆ ಈ ಕೊಡೆಯ ಮೂಲಕವೇ ಜನರು ನನ್ನನ್ನು ಮನ್ನಿಸುವರು. ಇಲ್ಲದಿದ್ದರೆ ಅವರು ನನ್ನನ್ನು ಮನ್ನಿಸಲಾರರು ಎಂದು ಹೇಳಲು ಶಂಕರ ದಾಸಿಮಯ್ಯನು ಹಾಗೆಯೇ ಆಗಲೆಂದು ಅದಕ್ಕೆ ಒಪ್ಪಿ ಮುಂದೆ ಸಾಗುವವನಾದನು.

ಅಂದಿನಿಂದ ಕೊಡೆಯ ಮೈಲಾರನೆಂದು ಈ ಮೈಲಾರನು ಈ ಸ್ಥಳದಲ್ಲಿ ಪ್ರಸಿದ್ಧನಾಗಿದ್ದಾನೆ. ಈ ಹೆಸರೇ ಇದಕ್ಕೆ ಪ್ರಾಪ್ತವಾಗಿದೆ. ಈ ಪೆಂಬರ ಗ್ರಾಮದಲ್ಲಿ ಈಗಿರುವ ದೇವತೆಯ ಪ್ರಭಾವಳಿಯ ಮೇಲೆ ಈಗಲೂ ಒಂದು ಕೊಡೆಯ ಗುರುತು ಉಂಟು. ಅದು ಶಂಕರ ದಾಸಿಮಯ್ಯನಿಂದ ಅದಕ್ಕೆ ಬಂದುದೆಂದು ತಿಳಿಯಲ್ಪಟ್ಟಿದೆ. ಈ ಪ್ರಕಾರ ಶಂಕರ ದಾಸಿಮಯ್ಯನು ಪೆಂಬರದಲ್ಲಿ ಪೊವಾಡವನ್ನು ಮಾಡಿ ತನ್ನ ಗ್ರಾಮವಾದ ನವಿಲೆಯ ಕಡೆಗೆ ನಡೆದನು.

ಅವನು ಮಾರ್ಗಕ್ರಮಣ ಮಾಡುತ್ತಿರುವಲ್ಲಿ ನವನಾಥಸಿದ್ಧರ ಸಾಂಪ್ರದಾಯಿಕರಾದ ಸಿದ್ಧರು ವಾಸಿಸುತ್ತಿದ್ದ ಒಂದು ಗ್ರಾಮಕ್ಕೆ ಬಂದನು. ಇವರು ಸಿದ್ಧಿಗಳನ್ನು ಮಾಡುವದೇ ತಮ್ಮ ಮುಖ್ಯ ಧ್ಯೇಯವಾಗಿಟ್ಟುಕೊಂಡು ಮಾಂತ್ರಿಕರಾಗಿ ಭೈರವ, ಶಕ್ತಿ, ಇಂಥ ಕ್ರೂರ ದೇವತೆಗಳ ಉಪಾಸನೆಯನ್ನು ಮಾಡುತ್ತ, ಜಟಾಧಾರಿಗಳಾಗಿ ಸಿಂದಿ ಸರಾಯಿಗಳನ್ನು ಕುಡಿಯುತ್ತ, ಮಾಂಸಾಹಾರಿಗಳಾಗಿ ಕಾಮಪರವಶರಾಗಿ ನೀತಿಯನ್ನು ಬಿಟ್ಟು ಆಚರಿಸುವವರಾಗಿದ್ದರು. ಶಂಕರದಾಸಿಮಯ್ಯನು ಇವರನ್ನು ಕಂಡು ಇವರಿಗೆ-ನಿಮ್ಮ ಮಾರ್ಗವು ಅತ್ಯಂತ ಹೀನತರವ್ಹೆಂದು ನುಡಿಯಲಾಗಿ ಅವರು ಸಿಟ್ಟಿಗೆದ್ದು—ಲೋಕದಲ್ಲಿ ಜೋಗಿಯೇ ಎಲ್ಲರಿಗೆ ಗುರುವು. ಭೈರವಾಚರ್ಕರು ಸಿದ್ಧಿಗಳನ್ನು ಸಾಧಿಸಿ ವಿಖ್ಯಾತರಾಗಿದ್ದಾರೆ. ಅವರು ಒಂದೇ ಸ್ಥಳದಲ್ಲಿರದೆ ಕ್ಷೇತ್ರಗಳನ್ನು ಸುತ್ತುತ್ತ ಕಡೆಗೆ ಅವುಗಳಲ್ಲೊಂದರಲ್ಲಿ ತಮ್ಮ ಶರೀರವನ್ನು ತ್ಯಜಿಸಿದರೆ ಅವರಿಗೆ ಮೋಕ್ಷವಾಗುವದೆಂದು ನಮ್ಮ ಕಾಪಾಲಿಕ ಮತವಿದೆ, ಎಂದು ವಾದಿಸಿದರು. ಅದಕ್ಕೆ ಶಂಕರದಾಸಿಮಯ್ಯನು ನಿಮಗೆ ವಸ್ತುವಿವೇಕವಿಲ್ಲ. ಇಂತಹ ಸಂಚಾರದಿಂದ ಮೋಕ್ಷವಾಗಲಾರದು. ನೀವು

ಸ್ಥಿರಚಿತ್ತರಾಗಿ ನೀತಿಮಾರ್ಗವನ್ನು ಅನುಸರಿಸುತ್ತ ತ್ರಿಲಿಂಗಗಳನ್ನು ನಿಮ್ಮಲ್ಲಿ ಸಾಧಿಸಬೇಕು ಎಂದು ಹೇಳಲು ಅವರು—ನಮ್ಮ ಮಾರ್ಗದಿಂದ ಸಾಕ್ಷಾತ್ ಶಿವನಳವಡುವನು. ಬೇಕಾದರೆ ನಮ್ಮ ಪರಾಕ್ರಮವನ್ನು ನೋಡು ಎಂದು ನುಡಿಯುತ್ತ ಅವನ ಮೇಲೆ ಮಂತ್ರ ಪ್ರಯೋಗ ಮಾಡಲು ಪ್ರಾರಂಭಿಸಿದರು.

ಮೊದಲು ಅವರು ಒಂದು ಮಹಾಸರ್ಪವನ್ನು ಶಂಕರ ದಾಸಿಮಯ್ಯನ ಮೇಲೆ ಬಿಡಲು ಅವನು ಅದರ ಮೇಲೆ ಉದಕವನ್ನು ಸಿಂಪಡಿಸಲಾಗಿ ಅದು ಗರುಡನಂತೆ ಸರ್ಪವನ್ನು ಎತ್ತಿಕೊಂಡು ಹೋಯಿತು. ಒಂದು ಮದ್ದಾನೆಯನ್ನು ಬಿಡಲು ಒಂದು ಹುಲ್ಲು ಕಡ್ಡಿಯನ್ನು ಶಂಕರ ದಾಸಿಮಯ್ಯನು ಮಂತ್ರಿಸಿ ಅದರ ಮೇಲೆ ಚೆಲ್ಲಲು ಅದು ಅದನ್ನು ಸೀಳಿ ಬಿಟ್ಟಿತು. ತರುವಾಯ ಅವರು ಒಂದು ಭೂತವನ್ನು ಬಿಡಲು ಶಂಕರ ದಾಸಿಮಯ್ಯನ ಆತ್ಮ ಶಕ್ತಿಯ ಮೂಲಕ ಅದು ಅವನನ್ನು ಸಮೀಪಿಸಲಾರದೆ ಹೋಗಿ ಅವನ ಅಪ್ಪಣೆಯಂತೆ ತಿರುಗಿ ಭೈರವ ಭೂತನನ್ನೇ ತಿಂದು ಜೋಗಿಗಳನ್ನು ತಿನ್ನಲು ಮುಂದುವರಿಯಲು ಅವರು ಭೀತರಾಗಿ ಶಂಕರ ದಾಸಿಮಯ್ಯನ ಮೊರೆಹೊಕ್ಕರು. ಅಗ ಅವರು—"ನೀನೇ ಆದಿನಾಥನು. ಅಜ್ಞಾನದಿಂದ ನಿನ್ನೊಡನೆ ನಾವು ವಾದಿಸಿದೆವು. ನಮ್ಮನ್ನು ಕ್ಷಮಿಸಬೇಕೆಂದು ಬೇಡಿಕೊಂಡರು. ಹೀಗೆ ಶಂಕರ ದಾಸಿಮಯ್ಯನು ಶಿವಶರಣರ ಮಾರ್ಗವು ಸಿದ್ಧರ ಮಾರ್ಗಕ್ಕಿಂತಲೂ ಉಚ್ಚತರದ್ದೆಂದು ಸಿದ್ಧಪಡಿಸಿ ಲೋಕದಲ್ಲಿ ಸಿದ್ಧರನ್ನು ತ್ಯಜಿಸಬೇಕೆಂದು ಜನರಿಗೆ ಬೋಧಿಸುತ್ತ ತನ್ನ ಗ್ರಾಮವಾದ ನವಿಲೆಗೆ ಬಂದು ಮುಟ್ಟಿದನು. ಆಗ ಅಲ್ಲಿಯ ಭಕ್ತರು ಅವನನ್ನು ಸಂತೋಷದಿಂದ ಇದಿರ್ಗೊಂಡು ಜಡೆಯ ಶಂಕರನ ಮಂದಿರಕ್ಕೆ ಬಂದರು. ಶಂಕರ ದಾಸಿಮಯ್ಯನು ಪರಮಾತ್ಮನನ್ನು ವಂದಿಸಿ ತನ್ನ ಬಿಡಾರಕ್ಕೆ ಬಂದು ಎಲ್ಲರನ್ನು ಕಳುಹಿಸಿಕೊಂಡನು.

ಆ ಮೇಲೆ ಮರುದಿವಸ ವಕ್ತ್ರಪಾದನು ಧಾನ್ಯಕ್ಕೋಸ್ಕರ ಪುರದಲ್ಲಿ ಹೋಗಿರಲಾಗಿ ಪುರಜನರು ಅತ್ಯಂತ ಸಂತೋಷಭರಿತರಾಗಿ, ಹೆಚ್ಚಾಗಿ ಧಾನ್ಯವನ್ನು ಅವನಿಗೆ ನೀಡಲು ಅದು ರಾಶಿಯಾಗಿ ಮನೆಯ ಮುಂದೆ ಬಿದ್ದುದನ್ನು ಶಂಕರ ದಾಸಿಮಯ್ಯನು ನೋಡಿ ಅದರಿಂದ ಒಂದು ಮಹತ್ತರವಾದ ಗಣ ಪರ್ವವನ್ನು ಮಾಡಲು ಬಯಸಿದನು. ಆಗ ವಕ್ತ್ರಪಾದನು ಆ

ಬತ್ತವನ್ನು ಕುಟ್ಟಬೇಕೆಂದು ಪುರಜನರ ಮನೆಗಳಿಗೆ ಕಳಿಸುತ್ತಿರಲು ಒಬ್ಬ ಒಕ್ಕಲತಿಯು ಶಂಕರ ದಾಸಿಮಯ್ಯನಲ್ಲಿಗೆ ಬಂದು—ಕುಟ್ಟುವದು ನನ್ನಿಂದ ಆಗದು. ಬೇಕಾದರೆ ನೀನು ಮಾರಿಕವ್ವೆಯಿಂದ ಮಿದಿಯಿಸಬೇಕು ಎಂದು ಹೇಳಲು—ಈಕೆಯು ನನಗೆ ಬುದ್ಧಿ ಗಲಿಸಿದಳು, ಎಂದು ನುಡಿದು ಅವನು ಆ ಧಾನ್ಯವನ್ನೆಲ್ಲ ಊರ ಹೊರಗಿದ್ದ ಮಾರಿ ಮಸಣಿಗಳ ಗುಡಿಗಳ ಮುಂಪೆ ರಾಶಿ ಮಾಡೆಂದು ಹೇಳಲಾಗಿ ಪಕ್ತ್ರಪಾದನು ಹಾಗೆಯೇ ಮಾಡಿದನು.

ಆಗ ಮಾರಿ ಮಸಣಿಗಳು ರಾತ್ರಿಯಲ್ಲಿ ಅಲ್ಲಿ ನೆರೆದು ಆ ಬತ್ತವನ್ನೆಲ್ಲ ಸರಿಯಾಗಿ ಕುಟ್ಟಿ ಸೂರ್ಯೋದಯವಾಗುವಷ್ಟರಲ್ಲಿ ಅಕ್ಕಿಯನ್ನು ಮಾಡಿದವು. ಆ ಮೇಲೆ ಶಂಕರ ದಾಸಿಮಯ್ಯನು ಶರಣ ಸಮೂಹಕ್ಕೆ ಗಣಪರ್ವವನ್ನು ಮಹತ್ತರವಾಗಿ ಮಾಡಿಸಿದನು.

ಶಂಕರ ದಾಸಿಮಯ್ಯನು ಮುಂದೆ ನವಿಲೆಯಲ್ಲಿ ಶಿವಾನುಭವ ಗೋಷ್ಠಿಯಲ್ಲಿ ಕಾಲಕಳೆಯುತ್ತಿರಲು ಅವನ ಹೆಂಡತಿ ಶಿವದಾಸಿಯು ಗರ್ಭಿಣಿಯಾಗಿ ಒಂದು ಮಗುವನ್ನು ಹೆತ್ತಳು. ಆ ಮಗುವಿಗೆ ಸದ್ಯೋಜಾತನೆಂಬಹೆ ಸರಿಟ್ಟರು.

ಹೀಗೆ ಕೆಲವು ಕಾಲ ಹೋಗಲು ಒಂದು ದಿವಸ ಶಂಕರ ದಾಸಿಮಯ್ಯನು ತನ್ನ ಹೆಂಡತಿಗೆ—ಬರುವ ಸೋಮವಾರ ನಮ್ಮ ಅವಸಾನ ಕಾಲವು. ಇನ್ನು ಮುಂಡೆ ನರಲೋಕದಲ್ಲಿರುವುದು ಸಾಕು ಎಂದು ನುಡಿದು ಜಡೆಯ ಶಂಕರನಿದಿರಿನಲ್ಲಿ ತನ್ನ ಮಡದಿ ಮತ್ತು ವಕ್ತ್ರಪಾದ ಇವರನ್ನೊಡಗೊಂಡು ಬಂದು ಪರಮಾತ್ಮನನ್ನು ಭಜಿಸುತ್ತ ತಮ್ಮನ್ನು ಲಿಂಗದಲ್ಲಿ ಒಳಕೊಳ್ಳಬೇಕೆಂದು ಬೆ ಡಿಕೊಳ್ಳಲು ಉರಿಯೊಳಗೆ ಕರ್ಪೂರವು, ಜಲದಲ್ಲಿ ಜೇನು, ವಾರಿಯಲ್ಲಿ ಲವಣವು ಬೆರೆದಂತೆ ಅವರು ಲಿಂಗದಲ್ಲಿ ಬೆರೆದರು. ಈ ಪ್ರಕಾರ ಶಂಕರ ದಾಸಿಮಯ್ಯನು ಮೊದಲು ನವಿಲೆಯ ಹತ್ತಿರಿನ ಗ್ರಾಮದಲ್ಲಿದ್ದು ಶಿವ ಸಾಲೋಕ್ಯವನ್ನೂ ನವಿಲೆಯಲ್ಲಿರಲು ಶಿವಸಾಮೀಪ್ಯವನ್ನೂ ಹಣೆಗಣ್ಣನ್ನು ಪಡೆದು ಶಿವಸಾರೂಪ್ಯವನ್ನೂ ಶಿವನೊಳಗೆ ಬೆರೆದು ಶಿವಸಾಯುಜ್ಯವನ್ನೂ ಪಡೆದು ಹೆಸರಾದನು.

ಶಂಕರ ದಾಸಿಮಯ್ಯನ ಯೋಗ್ಯತೆಯು ಶಿವಶರಣರಲ್ಲಿ ಬಹಳ ಹೆಚ್ಚಿನದಿದ್ದು ಅವನು ಉನ್ನತವಾದ ಧರ್ಮೋದ್ಧಾರ ಕಾರ್ಯಗಳನ್ನು ಮಾಡಿದ್ದಾನೆ. ಕ್ಷುದ್ರ ದೇವತೆಗಳನ್ನು ನಂಬುವುದರಿಂದ ಸಮಾಜದಲ್ಲುಂಟಾಗುವ ಅಪೇಯಪಾನ, ಮಾಂಸಾಹಾರ, ಹಿಂಸಾಚಾರಗಳನ್ನು ದೂರಮಾ

ಡಲು ಅವನು ಪ್ರಯತ್ನಿಸಿದ್ದಾನೆ. ಮಾರಿ, ಮಸಣಿ, ಬೀರಯ್ಯ, ಮಾರಯ್ಯ, ಭೂತ ಪಿಶಾಚಿಗಳನ್ನು ನಂಬುವದರಿಂದ ಅಜ್ಞಜನರು ಅನಾಚಾರಗಳಿಗೆ ಪ್ರವೃತ್ತರಾಗುತ್ತಾರೆ. ಆದ್ದರಿಂದ ಇಂಥ ದೈವತೆಗಳನ್ನು ನಂಬಬಾರದೆಂದು ಅವನು ಜನರಿಗೆ ಬೋಧಿಸಿದ್ದಾನೆ. ಅವನ ಕಾಲದಲ್ಲಿ ನಾಡಿನಲ್ಲಿ ಸಿದ್ಧರೂ ಕಾಪಾಲಿಕರೂ ಶಾಕ್ತರೂ ವಾಸಮಾಡುತ್ತ ದುಷ್ಟ ಕ್ರಿಯೆಗಳನ್ನು ಹೆಚ್ಚಿಸಲು ಕಾರಣರಾಗಿದ್ದರು. ಆದ್ದರಿಂದ ಅವರ ಮತಗಳನ್ನು ಅವನು ಖಂಡಿಸುತ್ತ ಸಂಚರಿಸಿದ್ದಾನೆ. ಶಿವಶರಣರು ಯಾವಾಗಲೂ ದೇವರ ವಿಷಯವಾಗಿ ಉಚ್ಚತಮ ವಿಚಾರವುಳ್ಳವರು ಮತ್ತು ಶುದ್ಧವಾದ ನೀತಿ ಮಾರ್ಗವನ್ನು ಅನುಸರಿಸುವವರು ಇದ್ದಾರೆ. ಅವರು ಆಚರಿಸುವ ಶಿವಯೋಗವು ಪರಮಾತ್ಮನೆಡೆಗೆ ಒಯ್ಯುವಂತಹದು. ಇಂಥ ಮಾರ್ಗವನ್ನು ಜನರಲ್ಲಿ ಅವನು ಪ್ರಸಾರ ಮಾಡಲು ಪ್ರಯತ್ನಿಸಿದ್ದಾನೆ.

ಶಂಕರ ದಾಸಿಮಯ್ಯನು ತನ್ನ ತತ್ವಗಳನ್ನು ಚಾಲುಕ್ಯರ ರಾಜಧಾನಿಯಾದ ಕಲ್ಯಾಣ ಪಟ್ಟಣದಲ್ಲಿ ಮಾತ್ರವಲ್ಲದೆ ಮಹಾಕಾಳಿಯ ಸ್ಥಾನವಾದ ಉಜ್ಜಯಿನಿ ಮತ್ತು ಮಹಾರಾಷ್ಟ್ರದಲ್ಲಿ ಕೂಡ ಪ್ರಸಾರ ಮಾಡಿದ್ದಾನೆ. ಒಂದು ಸಮಯದಲ್ಲಿ ಅವನು ತನ್ನ ಸಂಚಾರದಲ್ಲಿ ಬಹುಜನ ಸಿದ್ಧರಿದ್ದ ಸ್ಥಾನವನ್ನು ಸಂದರ್ಶಿಸಿದನು. ಇವರು ಆಗ ಇರುತ್ತಿದ್ದ ಮುಖ್ಯ ಸ್ಥಾನವು ಕರಹಾಟಕ (ಕರ್ಹಾಡ) ಮತ್ತು ಕೊಲ್ಲಾಪುರ ಪ್ರಾಂತಗಳಿದ್ದು ಅವರು ಅಲ್ಲಿಂದಲೇ ಹೊರಟು ಹಿಂದುಸ್ತಾನವನ್ನೆಲ್ಲ ಸಂಚಾರ ಮಾಡುತ್ತಿದ್ದರು. ಶಂಕರ ದಾಸಿಮಯ್ಯನು ಅವರನ್ನು ಕಂಡು ಅವರ ಮತವನ್ನು ಖಂಡಿಸಿ ಶಿವಾನುಭವದ ಶುದ್ಧ ಮಾರ್ಗವನ್ನು ನೆಲೆಗೊಳಿಸಿದ್ದಾನೆ.

ಶಂಕರ ದಾಸಿಮಯ್ಯನ ಪ್ರಚಾರ ಕಾರ್ಯಗಳಲ್ಲಿ ಅವನ ಶಿಷ್ಯನಾದ ವಕ್ತ್ರಪಾದ ಗಣೇಶ್ವರನು ಆರಂಭದಿಂದ ಕಡೆಯವರೆಗೂ ಅವನ ಸೇವೆ ಮಾಡುತ್ತ ವಿದ್ವಾಂಸನೂ ಶಿವಾನುಭವಿಯೂ ಆಗಿ ತನ್ನ ಗುರುವಿನ ವಾದ ಕಾಲದಲ್ಲಿ ಆವನಿಗೆ ಸಹಾಯ ಮಾಡುತ್ತ ಬಂದಿದ್ದಾನೆ. ಇದು ಈ ಚರಿತ್ರೆಯ ವೈಶಿಷ್ಟ್ಯವಾಗಿದೆ. ವಕ್ತ್ರಪಾದನು ಒಬ್ಬ ಮಾದರೀ ಶಿಷ್ಯನಾಗಿದ್ದನೆಂದು ನಾವು ಹೇಳಬಹುದು.

ಶಂಕರ ದಾಸಿಮಯ್ಯನು ವಚನಕಾರನಿದ್ದಾನೆ. ಅವನ ಅಂಕಿತವು 'ನಿಜಗುರು ಶಂಕರದೇವಾ' ಎಂದಿದ್ದು ಶೂನ್ಯಸಂಪಾದನೆಯ ಕರ್ತನು

ತನ್ನ ಗ್ರಂಥದಲ್ಲಿ ಅವನವೆಂದು ಎರಡು ವಚನಗಳನ್ನು ಉದಹರಿಸಿದ್ದಾನೆ. ಆದರೆ ಈತನು ಸಂದರ್ಭಕ್ಕನುಸರಿಸಿ ತಾನೇ ವಚನಗಳನ್ನು ರಚಿಸಿ ತನ್ನ ಗ್ರಂಥದಲ್ಲಿ ಸೇರಿಸುವದರಿಂದ ಈ ವಚನಗಳು ದೃಢವಾಗಿ ಅವನವೇ ಎಂದು ಹೇಳಲು ಬರಲಾರದು. ಆದರೆ ಈ ಗ್ರಂಥಕಾರನು ಉಪಯೋಗಿಸುವ ಮುದ್ರಿಕೆಗಳು ಬಹುಶಃ ಆಯಾ ವಚನಕಾರರವೇ ಇರುವದು ಕಂಡುಬರು ವದರಿಂದ ಮತ್ತು ನಿಜಗುರು ಶಂಕರದೇವಾ ಎಂಬ ಮುದ್ರಿಕೆಯು ಶಂಕರ ದಾಸಿಮಯ್ಯನದಿರುತ್ತದೆಂದು ಭೈರವೇಶ್ವರ ಕಾವ್ಯಕಥಾ ಗರ್ಭಸೂತ್ರ ರತ್ನಾಕರದ ಗ್ರಂಥಕಾರನು ಹೇಳಿರುವದರಿಂದ ಶಂಕರ ದಾಸಿಮಯ್ಯನ ಮುದ್ರಿಕೆಯು ಇದೇ ಇರಬಹುದೆಂದು ನಮಗೆ ತೋರುತ್ತದೆ. ಆದರೆ ಈ ಮುದ್ರಿಕೆಯುಳ್ಳ ವಚನಗಳು ನಮಗೆ ಈ ವರೆಗೂ ಸ್ವತಂತ್ರವಾಗಿ ದೊರಿ ತಿಲ್ಲ. ಆದರೆ ಸಂಶೋಧಕರು ಶೋಧಿಸಿದಲ್ಲಿ ಇವು ನಮಗೆ ದೊರೆಯಬಹು ದೆಂದು ನಮ್ಮ ಭರವಸೆ ಇದೆ.

ವೀರ ಶಂಕರ ದಾಸಿಮಯ್ಯನೆಂಬ ಇನ್ನೊಬ್ಬ ವಚನಕಾರನಿದ್ದಾನೆ. ಆದರೆ ಅವನು ಬೇರೊಬ್ಬ ಶಿವಶರಣನೆಂದು ನಮಗೆ ತೋರುತ್ತದೆ. ಯಾ ಕಂದರೆ ಅವನ ಚರಿತ್ರೆಯು ಭೈರವೇಶ್ವರ ಕಾವ್ಯಕಥಾ ಗರ್ಭಸೂತ್ರ ರತ್ನಾ ಕರ, ಬಸವೇಶ್ವರ ಪುರಾಣದ ಕಥಾಸಾಗರ ಮತ್ತು ಸಂಸ್ಕೃತ ಬಸವೇಶ ವಿಜಯ ಇವುಗಳಲ್ಲಿ ಬಂದಿದ್ದು ಅದು ಶಂಕರ ದಾಸಿಮಯ್ಯನ ಚರಿತ್ರೆಯಿಂದ ಭಿನ್ನವಾಗಿದೆ. ಅದನ್ನು ನಾವು ಈ ಗ್ರಂಥದಲ್ಲಿ ಮುಂದೆ ಕೊಟ್ಟಿದ್ದೇವೆ. ಈ ವೀರ ಶಂಕರದಾಸನು ವಚನಕಾರನಿದ್ದು ಅವನ ಅಂಕಿತವು 'ಘನಗುರು ಶಿವಲಿಂಗ ರಾಮನಾಥ' ಎಂದಿದೆ. ಈ ಮುದ್ರಿಕೆಯಿಂದ ಅವನು ಮುದು ನೂರಲ್ಲಿದ್ದ ರಾಮನಾಥನ ಭಕ್ತನಾಗಲಿ ಇಲ್ಲವೆ ದೇವರ ದಾಸಿಮಯ್ಯನ ಕೆಲವೊಬ್ಬ ಅನುಯಾಯಿಯಾಗಲಿ ಇರಬೇಕೆಂದು ನಮಗೆ ತೋರುತ್ತದೆ. ವಚನಕಾರರು ತಮ್ಮ ಗುರುಗಳ ಅಥವಾ ಇಷ್ಟ ದೇವತೆಯ ಹೆಸರುಗಳುಳ್ಳ ಮುದ್ರಿಕೆಗಳನ್ನು ಯಾವಾಗಲೂ ಉಪಯೋಗಿಸುವದುಂಟು. ಆದರೆ ವೀರ ಶಂಕರದೇವನು ಶಂಕರದಾಸಿಮಯ್ಯನ ಇಷ್ಟದೇವತೆ ಅಥವಾ ಅವನ ಗುರು ವಿಗೆ ಸಂಬಂಧಿಸದೆ ಇದ್ದ ಬೇರೊಂದು ಮುದ್ರಿಕೆಯನ್ನು ಉಪಯೋಗಿಸು ವದರಿಂದ ಅವನು ಶಂಕರ ದಾಸಿಮಯ್ಯನಿರದೆ ಬೇರೊಬ್ಬ ಶರಣನೆಂದು ನಮಗೆ ತೋರುತ್ತದೆ.

ಶಂಕರ ದಾಸಿಮಯ್ಯನು ಬಸವೇಶ್ವರನಕಿಂತಲೂ ಒಂದು ನೂರು ವರ್ಷ ಮೊದಲಿನವನಾಗಿದ್ದಾನೆ. ಅವನು ದೇವರ ದಾಸಿಮಯ್ಯನ ಸಮಕಾಲೀನನಾ ವರೂ ದೇವರ ದಾಸಿಮಯ್ಯನಕಿಂತಲೂ ಸ್ವಲ್ಪ ಹಿಂದುಗಡೆ ಪ್ರಸಿದ್ಧಿಗೆ ಬಂದ ವನೆಂದು ನಮಗೆ ತೋರುತ್ತದೆ. ಶಂಕರ ದಾಸಿಮಯ್ಯನು ಕಂದಗಲ್ಲಿನಿಂದ ನವಿಲಿಗೆ ಬರುವವರೊಳಗಾಗಿಯೇ ದೇವರ ದಾಸಿಮಯ್ಯನು ಪ್ರಸಿದ್ಧಿಗೆ ಬಂದು ತವನಿಧಿಯನ್ನು ಪಡೆದವನಾಗಿದ್ದನು. ಇದು ಶಂಕರ ದಾಸಿಮಯ್ಯನ ಚರಿ ತ್ರೆಗಳಿಂದ ತಿಳಿದು ಬರುತ್ತದೆ. ಶಂಕರ ದಾಸಿಮಯ್ಯನು ಹಿಂದಿನವನೆಂ ಬುದು ಕೆಳಗಿನ ಸಂಗತಿಯಿಂದಲೂ ದೃಢಪಡುತ್ತದೆ.

ಜಯಸಿಂಹನು ಪೊಟ್ಟಲ ಕೆರೆಯನ್ನು ತನ್ನ ರಾಜಧಾನಿಯನ್ನಾಗಿ ಮಾಡಿಕೊಂಡು ರಾಜ್ಯವಾಳುತ್ತಿದ್ದು ಅವನು ೧೦೪೦ ಮತ್ತು ೧೦೪೨ ರ ಮಧ್ಯದಲ್ಲಿ ತೀರಿಕೊಂಡನು. ದೇವರ ದಾಸಿಮಯ್ಯನು ಪೊಟ್ಟಲ ಕೆರೆಯಲ್ಲಿ ಜಯಸಿಂಹನನ್ನು ಕಂಡನೆಂಬ ಉಲ್ಲೇಖಗಳು ಅವನ ಎಲ್ಲ ಗ್ರಂಥಗಳಲ್ಲಿಯೂ ಇರುತ್ತವೆ. ಇವುಗಳಲ್ಲಿ ಕಲ್ಯಾಣದ ಉಲ್ಲೇಖವಾವುದೂ ಇರುವದಿಲ್ಲ. ಆದರೆ ಶಂಕರ ದಾಸಿಮಯ್ಯನು ಪೊಟ್ಟಲ ಕೆರೆಗೆ ಬಂದಿದ್ದನೆಂಬ ಉಲ್ಲೇಖಗಳು ಅವನ ಯಾವ ಚರಿತ್ರೆಯಲ್ಲಿಯೂ ಬರದೆ, ಅವನ ಪವಾಡವು ಆದದ್ದು ಕಲ್ಯಾಣದಲ್ಲಿ, ಎಂದು ಅವುಗಳಲ್ಲಿ ಹೇಳಲ್ಪಡುತ್ತಿದೆ. ಆದರೆ ಕಲ್ಯಾಣವು ಚಾಲುಕ್ಯರ ರಾಜಧಾನಿಯಾದದ್ದು ೧೦೫೩ ರಲ್ಲಿ. ಅದು ಅದೇ ವರ್ಷದಲ್ಲಿ ಸ್ಥಾಪಿಸಲ್ಪಟ್ಟಿತೆಂದು ಬಿಲ್ಹಣ ಕವಿಯು ತಾನು ಸಂಸ್ಕೃತದಲ್ಲಿ ಬರೆದ ವಿಕ್ರಮಾಂಕ ದೇವ ಚರಿತ್ರೆಯಲ್ಲಿ ಹೇಳಿದ್ದಾನೆ. ಹೀಗೆ ಉಲ್ಲೇಖವಿದ್ದ ಶ್ಲೋಕದ ಅರ್ಥವನ್ನು ಡಾ|| ಪ್ಲೀಟರು ಕಲ್ಯಾಣವನ್ನು ರಾಜನು ಶೃಂಗರಿಸಿದನೆಂದು ಮಾಡುತ್ತಿದ್ದರೂ ಸಂಸ್ಕೃತಜ್ಞರಾದ ಡಾ|| ಭಾಂಡಾರಕರರವರು ಅದರ ಅರ್ಥವು ಹಾಗಿರವೆ ರಾಜನು ಅದನ್ನು 'ರಚಿಸಿದನೆ'ಂದು ಆಗುತ್ತ ದೆಂದು ತಮ್ಮ 'ಹಿಸ್ಟರಿ ಆಫದಿ ಡೆಕ್ಕನ್ನ' ಈ ಗ್ರಂಥದಲ್ಲಿ ಬರೆದಿದ್ದಾರೆ. ಆದು ದರಿಂದ ಶಂಕರ ದಾಸಿಮಯ್ಯನು ಪ್ರಸಿದ್ಧಿಗೆ ಬಂದುದು ೧೦೫೩ ರ ತರು ವಾಯ ಅಂದರೆ ದೇವರ ದಾಸಿಮಯ್ಯನು ಪೊಟ್ಟಲ ಕೆರೆಗೆ ಬಂದು ಹೋದ ಬಳಿಕ ಕೆಲವು ವರ್ಷಗಳಾದ ಮೇಲೆ ಎಂದು ಗೊತ್ತಾಗುತ್ತದೆ.

ಜಯಸಿಂಹ ರಾಜನು ರಾಜ್ಯವಾಳಿದುದು ೧೦೪೨ ರ ವರೆಗೆ ಮಾತ್ರ. ಆ ಮೇಲೆ ೧ ನೇ ಸೋಮೇಶ್ವರ-ಆಹವಮಲ್ಲ-ತ್ರೈಲೋಕ್ಯ ಮಲ್ಲನು ೧೦೪೨

ರಿಂದ ೧೦೬೯ ರ ವರೆಗೆ ರಾಜ್ಯವಾಳಿದನು. ಇವನೇ ಕಲ್ಯಾಣ ಪಟ್ಟಣವನ್ನು ಕಟ್ಟಿಸಿ ಅಲ್ಲಿ ರಾಜ್ಯವಾಳ ಹತ್ತಿದನು. ಆದ್ದರಿಂದ ಶಂಕರ ದಾಸಿಮಯ್ಯನು ಪ್ರಸಿದ್ಧಿಗೆ ಬಂದದ್ದು ಜಯಸಿಂಹ ರಾಜನಲ್ಲಿ ಅಲ್ಲ, ಆದರೆ ೧ ನೇ ಸೋಮೇಶ್ವರ ಅಥವಾ ಆಹವಮಲ್ಲ ಈತನ ಕಾಲದಲ್ಲಿ ಎಂದು ತಿಳಿಯಬೇಕಾಗುತ್ತದೆ.

ಒಂದು ವೇಳೆ ನಾವು ಶಂಕರ ದಾಸಿಮಯ್ಯನು ಜಯಸಿಂಹನ ಕಾಲದಲ್ಲಿ ಪ್ರಸಿದ್ಧಿಗೆ ಬಂದನೆಂದ. ಭಾವಿಸಿದರೆ ಜಯಸಿಂಹನು ಮೊದಲು ಜೈನನಿದ್ದು ಆ ಮೇಲೆ ಅವನು ದೇವರ ದಾಸಿಮಯ್ಯ-ಸುಗ್ಗಳಿಯರ ಮೂಲಕ ವೀರಶೈವನಾದನು, ಆ ಮೇಲೆ ವೀರಶೈವ ಧರ್ಮವನ್ನು ಬಿಟ್ಟುಕೊಟ್ಟು ವಿಷ್ಣು ಧರ್ಮವನ್ನು ಪಾಲಿಸಹತ್ತಿದನು, ಆ ಮೇಲೆ ಶಂಕರ ದಾಸಿಮಯ್ಯನ ಮೂಲಕ ಪುನಃ ಅವನು ವೀರಶೈವ ಧರ್ಮವನ್ನು ಪುರಸ್ಕರಿಸುವವನಾದನು ಹೀಗೆ ತಿಳಿಯಬೇಕಾಗುತ್ತದೆ. ಅಂದರೆ ಅವನು ಅನೇಕ ಬಾರಿ ಧರ್ಮಾಂತರ ಮಾಡಿದನೆಂದು ಅನುಮಾನ ಮಾಡಬೇಕಾಗುತ್ತದೆ. ಇದು ಸಂಭವನೀಯವಾಗಿ ತೋರುವದಿಲ್ಲ.

ಆದರೆ ಜಯಸಿಂಹನು ದೇವರ ದಾಸಿಮಯ್ಯನ ಮೂಲಕ ವೀರಶೈವ ಧರ್ಮವನ್ನು ಹೊಂದಿದ ಬಳಿಕ ಅವನು ಅದನ್ನೇ ಪರಿಪಾಲಿಸುತ್ತ ಬಂದುದೂ ಅವನ ತರುವಾಯ ಅರಸನಾದ ಸೋಮೇಶ್ವರನು ಚಾಲುಕ್ಯರ ಮೊದಲಿನ ವಿಷ್ಣು ಧರ್ಮವನ್ನು ಅನುಸರಿಸುತ್ತಿರಲು ಶಂಕರ ದಾಸಿಮಯ್ಯನ ಮೂಲಕ ಅವನು ಶಿವೋಪಾಸಕನಾದುದೂ ಹೆಚ್ಚಿಗೆ ಸಂಭವನೀಯವೂ ಸ್ವಾಭಾವಿಕವಾದುದೂ ಇರುತ್ತದೆ.

ಸೋಮೇಶ್ವರನು ೧೦೬೯ ರಲ್ಲಿ ತೀರಿಕೊಳ್ಳುವ. ಮುಂದೆ ಅವನಿಗೆ ಜ್ವರ ಬರಲು ತುಂಗಭದ್ರೆಯಲ್ಲಿ ಜಲ ಸಮಾಧಿಯನ್ನು ಹೊಂದಿದನೆಂದೂ ಆ ಸಮಯದಲ್ಲಿ ಅವನು ತಾನು ಶಿವಭಕ್ತನೆಂದು ಹೇಳುತ್ತ ಸಮಾಧಿಸ್ಥನಾದನೆಂದೂ ಶಾಸನಗಳಲ್ಲಿ ಉಲ್ಲೇಖಗಳಿವೆ. ಇದು ಲಕ್ಷಿಸತಕ್ಕ ಸಂಗತಿಯಾಗಿದೆ.

ಆದರೆ ಶಂಕರ ದಾಸಿಮಯ್ಯನ ಉಲ್ಲೇಖಗಳಲ್ಲೆಲ್ಲ ಅವನು ಜಯಸಿಂಹನ ಕಾಲದಲ್ಲಿದ್ದನೆಂತಲೇ ಹೇಳಲ್ಪಟ್ಟಿದೆ. ಆದರೆ ಅವುಗಳನ್ನು ಲಿಖಿಸಿದವರು ಪುರಾತನ ರಾಜಮನೆತನಗಳ ಇತಿಹಾಸವನ್ನು ಅರಿಯದವರಾದ

ದ್ದರಿಂದ ಅವರು ಹೀಗೆ ಬರೆದಿರಬಹುದು. ಇಷ್ಟೇ ಅಲ್ಲ, ಕೆಲವೆಡೆಗಳಲ್ಲಿ ಶಂಕರ ದಾಸಿಮಯ್ಯ ದೇವರ ದಾಸಿಮಯ್ಯ ಈ ಉಭಯತರ ಚರಿತ್ರಾಂಶ ಗಳನ್ನು ಬಸವೇಶ್ವರನಿಗೆ ಸಂಬಂಧಿಸಿ ಸಹ ಹೇಳುವದುಂಟು. ಆದರೆ ಇತಿಹಾಸ ಸಂಶೋಧನೆಯ ಈ ಕಾಲದಲ್ಲಿ ಯಾವುದು ಇತಿಹಾಸದಲ್ಲಿ ಹೆಚ್ಚಿಗೆ ಸಂಭವನೀಯವೋ ಅದನ್ನೇ ನಾವು ಜನರ ಮುಂದಿಡುವದು ಅವಶ್ಯವೆಂದು ತೋರುತ್ತದೆ.

ದೇವರ ದಾಸಿಮಯ್ಯ, ಶಂಕರ ದಾಸಿಮಯ್ಯ ಇವರ ಹೆಸರುಗಳನ್ನು ಯಾವಾಗಲೂ ಜೋಡಿಯಾಗಿಯೇ ತೆಗೆದುಕೊಂಡು ಹೇಳುವ ಸಾಂಪ್ರ ದಾಯ ಉಂಟು. ಹೇಗೆ ಬಸವ-ಚನ್ನಬಸವ, ಪ್ರಭುದೇವ-ಸಿದ್ಧರಾಮ ಇವರ ಹೆಸರುಗಳನ್ನು ಕೂಡಿಯೇ ಹೇಳುವದುಂಟೋ, ಹಾಗೆ ದೇವರದಾಸಿ ಮಯ್ಯ-ಶಂಕರ ದಾಸಿಮಯ್ಯ ಎಂದು ಹೇಳುವ ಪದ್ಧತಿ ಇರುತ್ತದೆ. ಇವರು ಒಂದೇ ಕಾಲದಲ್ಲಿದ್ದ ಡರಿಂದ ಈ ಪದ್ಧತಿಯು ಉಂಟಾಗಿರಬಹುದು.

ಇವರಲ್ಲಿ ದೇವರ ದಾಸಿಮಯ್ಯನು ಕರ್ನಾಟಕದ ಮಧ್ಯಭಾಗವಾದ ಮುದುನೂರಲ್ಲಿ ಇದ್ದು ಈಗಿನ ವಿಜಾಪುರ ಜಿಲ್ಲೆಯ ಪೂರ್ವಭಾಗ, ಮತ್ತು ಕಲಬುರ್ಗಿ, ಬೀದರ ಜಿಲ್ಲೆಗಳಲ್ಲಿ ಹೆಚ್ಚಾಗಿ ಧರ್ಮ ಜಾಗ್ರತಿಯ ಕಾರ್ಯ ಮಾಡಿದ್ದರಿಂದ ಅವನ ಉಲ್ಲೇಖಗಳಿದ್ದ ಶಿಲಾಶಾಸನಗಳು ನಮಗೆ ಇಲ್ಲಿಉಪ ಲಬ್ಧವಾಗಿರುತ್ತವೆ. ಇವರಿಂದ ಅವನು ರಚಿಸಿದ ವಚನಗಳೂ ಕೂಡ ಹೆಚ್ಚಾಗಿ ಜನರಲ್ಲಿ ಪ್ರಚಾರ ಹೊಂದಿರುತ್ತವೆ. ಆದರೆ ಶಂಕರ ದಾಸಿಮ ಯ್ಯನ ಚರಿತ್ರೆಯನ್ನು ನಾವು ನಿರೀಕ್ಷಿಸಿದಲ್ಲಿ ಅವನು ಹೆಚ್ಚಾಗಿ ಕರ್ನಾಟಕ ದಲ್ಲಿರದೆ ಕಲ್ಯಾಣದ ಉತ್ತರ ಭಾಗದಿಂದ ಉಜ್ಜಯಿನಿ ವರೆಗಿನ ಪ್ರದೇಶ ಮತ್ತು ಮಹಾರಾಷ್ಟ್ರದಲ್ಲಿಯ ಸಾತಾರಾ ಜಿಲ್ಲೆ ಇಲ್ಲಿ ಹೆಚ್ಚಿಗೆ ಕಾರ್ಯಮಾಡಿ ದಂತೆ ಕಂಡುಬರುತ್ತದೆ. ಆದ್ದರಿಂದ ಅವನ ಉಲ್ಲೇಖಗಳಿದ್ದ ಕನ್ನಡ ಶಿಲಾ ಶಾಸನಗಳೂ ಅವನ ವಚನಗಳೂ ನಮಗೆ ದೊರೆಯದಿರಲಿಕ್ಕೆ ಇದು ಒಂದು ಕಾರಣವಾಗಿರಬಹುದು.

ಮಹಾರಾಷ್ಟ್ರ ದೇಶದಲ್ಲಿ ಶಂಕರ ದಾಸಿಮಯ್ಯನು ಹೆಚ್ಚಾಗಿ ಕಾರ್ಯ ಮಾಡಿದ್ದರಿಂದ ಅಲ್ಲಿ ಬಹುಜನರು ಅವನ ಅನುಯಾಯಿಗಳಾಗಿ ವೀರಶೈವ ಧರ್ಮವನ್ನು ಸ್ವೀಕರಿಸಿರಬಹುದು. ಅವನು ಕ್ಷುದ್ರ ದೇವತೆಗಳ ಮೇಲಿನ

ಜನರ ವಿಶ್ವಾಸವನ್ನು ದೂರಮಾಡಿ ಹಿಂಸಾಚಾರಗಳಿಂದ ಅವರನ್ನು ಪರಾ ವೃತ್ತಮಾಡಿ ಪರಮಾತ್ಮನ ಬಗ್ಗೆ ಶಿವಶರಣರ ಉಚ್ಚ ವಿಚಾರಗಳನ್ನು ನೆಲೆ ಗೊಳಿಸಿದ್ದರಿಂದ ಅವನ ಅನುಯಾಯಿಗಳಿಗೆ 'ನಾಗರಿಕರು' ಎಂದರೆ ಸುಧಾ ರಿಸಿದವರು ಎಂಬ ಹೆಸರು ಮಹಾರಾಷ್ಟ್ರದಲ್ಲಿ ಆಗ ಬಂದಿರಬಹುದು. ಆದರೆ ರೂಢಿಯಲ್ಲಿ ಈ ಶಬ್ದವು ಮುಂದೆ ರೂಪಾಂತರ ಹೊಂದಿ 'ನಾಗಲಿಕರು' ಎಂದು ಆಗಿರಬಹುದು. ಶಂಕರ ದಾಸಿಮಯ್ಯನು ಹೊಲಿಗೆಯ ಕಾಯಕವನ್ನು ಮಾಡುತ್ತ ಪ್ರಸಿದ್ಧಿಗೆ ಬಂದವನಾದ್ದರಿಂದ ಈ ಕಾಯಕ ಮಾಡುವವರೆಲ್ಲರು ತಾವು ಶಂಕರ ದಾಸಿಮಯ್ಯನ ಶಿಷ್ಯರೆಂದು ಭಾವಿಸಿಕೊಂಡ ಮೂಲಕ ಮೊದಲು ಸಾಮಾನ್ಯವಾಗಿ ಈ ನಾಡಿನಲ್ಲಿಯ ವೀರಶೈವರಿಗೆಲ್ಲ ಉಪಯೋಗಿಸ ಲ್ಪಡುತ್ತಿದ್ದ ನಾಗರಿಕ ಅಥವಾ ನಾಗಲಿಕ ಈ ಶಬ್ದವು ಈ ಕಾಯಕದವರಿಗೆ ಮಾತ್ರ ಮುಂದೆ ಉಪಯೋಗಿಸಲ್ಪಡುವ ರೂಢಿಯು ಉಂಟಾಗಿರಬಹುದು.

ಮಹಾರಾಷ್ಟ್ರದಲ್ಲಿ ಅನೇಕ ಕಡೆಗೆ ನಾಗಲಿಕರೆಂದು ಕರೆದುಕೊಳ್ಳುವ ಬಣಗಾರ ಸಮಾಜದವರು ಬಹಳ ಜನರು ಇದ್ದಾರೆ. ಇದು ಪೂರ್ವ ಕಾಲ ದಲ್ಲಿ ಶಂಕರ ದಾಸಿಮಯ್ಯನು ಮಹಾರಾಷ್ಟ್ರ ಪ್ರಾಂತದಲ್ಲಿ ವೀರಶೈವ ಧರ್ಮದ ಪ್ರಚಾರ ಮಾಡಿದ್ದರ ಪರಿಣಾಮವಾಗಿರಬಹುದು.

ದೇವರ ದಾಸಿಮಯ್ಯನು ಬಹಳ ಕಾಲ ಕರ್ನಾಟಕದಲ್ಲಿದ್ದುಕೊಂಡು ಕಾರ್ಯ ಮಾಡಿದ್ದರಿಂದ ಅವನ ಇಷ್ಟದೇವತೆಯಾದ ಮುದುನೂರಿನ ರಾಮ ನಾಥನ ಮಹತ್ವವು ಮತ್ತು ದೇವರ ದಾಸಿಮಯ್ಯನ ಕೀರ್ತಿಯು ಬಹಳ ವಿಸ್ತಾರವಾಗಿ ಹಬ್ಬಿದಂತೆ ತೋರುತ್ತದೆ. ಇದರಿಂದ ಅವನು ಒಂದು ಶಾಸ ನದಲ್ಲಿ ಧರೆ ಕೊಂಡಾಡುವ ದಾಸಿಮಯ್ಯನು ಎಂದು ಹೇಳಲ್ಪಟ್ಟಿದ್ದಾನೆ. ಮತ್ತು ರಾಮನಾಥನ ಮುದ್ರಿಕೆಯುಳ್ಳ ಅನೇಕ ವಚನಕಾರರು ಆಗಿ ಹೋಗಿದ್ದಾರೆ. ಆದರೆ ಶಂಕರ ದಾಸಿಮಯ್ಯನು ಬಹಳ ದಿವಸ ಕರ್ನಾ ಟಕದಲ್ಲಿ ವಾಸಮಾಡದೆ ಇದ್ದದರಿಂದ ಅವನನ್ನು ಉಲ್ಲೇಖಿಸುವ ಶಾಸನ ಗಳು ಮತ್ತು ಅವನ ಗುರುತಿನ ಸ್ಥಳಗಳು ಇಲ್ಲಿ ಬಹಳ ಕಡೆಗೆ ದೊರೆ ಯದೆ ಇರಲಿಕ್ಕೆ ಇದು ಒಂದು ಕಾರಣವಾಗಿರಬಹುದು.

ಈಗಿನ ಕಾಲದಲ್ಲಿ ನೆಯ್ಗೆಯ ಕಾಯಕದವರು ದೇವರ ದಾಸಿಮಯ್ಯನ, ಬಣ್ಣಗಾರರು ಶಂಕರ ದಾಸಿಮಯ್ಯನ, ಅಗಸರು ಮಡಿವಾಳ ಮಾಚಿದೇವನ,

ಕುಂಬಾರರು ಕುಂಬಾರ ಗುಂಡಯ್ಯನ ಸಾಂಪ್ರದಾಯದವರೆಂದು ಆಯಾ ಸಮಾಜದವರು ಹೇಳಿಕೊಳ್ಳುವ ರೂಢಿಯುಂಟಾಗಿದೆ. ಆದರೆ ಹಿಂದಿನ ಕಾಲದಲ್ಲಿ ಯಾವ ಶಿವಶರಣರಾದರೂ ಹೀಗೆ ಹೇಳಿಕೊಳ್ಳದೆ ಜಾತಿ, ಮತ, ಗೋತ್ರಗಳನ್ನೆಣಿಸದೆ ಎಲ್ಲರ ಉದ್ಧಾರಕ್ಕಾಗಿ ಪ್ರಯತ್ನಿಸಿದ್ದಾರೆ. ಶಿವಶರಣರ ಹೆಸರುಗಳನ್ನು ಆಯಾ ಪಂಗಡದವರು ಹೀಗೆ ಬೇರೆಬೇರೆಯಾಗಿ ಹೇಳಿಕೊಳ್ಳುವದು ಜಾತಿ ಪ್ರಧಾನವಾದ ಈಚಿನ ಕಾಲದಲ್ಲಿ ಬಂದಿರುತ್ತದೆ.

ಉಜ್ಜಯಿನಿಯು ಬಳ್ಳಾರಿ ಜಿಲ್ಲೆಯಲ್ಲಿರುವ ಉಜ್ಜಿನಿಯಾಗಿರದೆ ಮಾಳವಾ ದೇಶದಲ್ಲಿರುವ ಉಜ್ಜಯಿನಿಯೇ ಇರುತ್ತದೆಂದು ಶಂಕರ ದಾಸಿಮಯ್ಯನ ಚರಿತ್ರೆಯನ್ನು ಒಟ್ಟಾರೆ ನಿರೀಕ್ಷಿಸಿದಲ್ಲಿ ಕಂಡುಬರುತ್ತದೆ. ಈ ಕಾಲದಲ್ಲಿ ಚಾಲುಕ್ಯರಿಗೆ ಗುಜರಾಥ ಮತ್ತು ಮಾಳವಾ ದೇಶದ ಅರಸರುಗಳ ಕೂಡ ಯುದ್ಧ ಮಾಡುವ ಪ್ರಸಂಗಗಳು ಆಗಿಂದಾಗ್ಗೆ ಬರುತ್ತಿದ್ದವು. ಆದ್ದರಿಂದ ಉಜ್ಜಯಿನಿಯು ಹಿಂದಿನಕಾಲದ ಕರ್ನಾಟಕಸ್ಥರಿಗೆ ಅಪರಿಚಿತವಾದ ಪಟ್ಟಣವಾಗಿರಲಿಲ್ಲ. ಗುಜರಾಥ, ಮಾಳವಾ, ಕಾಶಿ, ಕಾಶ್ಮೀರ, ಮತ್ತು ಬಂಗಾಲ ಈ ದೇಶಗಳ ವಿದ್ವಜ್ಜನರು ಕರ್ನಾಟಕಕ್ಕೆ ಬರುತ್ತಿದ್ದದರಿಂದ ಈ ದೇಶಗಳ ಉಲ್ಲೇಖಗಳು ಶಿವಶರಣರ ಚರಿತ್ರೆಗಳಲ್ಲಿ ಆಗಿಂದಾಗ್ಗೆ ಬರುತ್ತವೆ. ಇದಲ್ಲದೆ ರೇವಣಸಿದ್ಧ, ಅಲ್ಲಮ ಪ್ರಭು, ವರದಾನಿ ಗುಡ್ಡಮ್ಮ ಮೊದಲಾದವರು ಧರ್ಮಪ್ರಸಾರ ಮಾಡುತ್ತ ಉತ್ತರ ಮತ್ತು ದಕ್ಷಿಣ ದೇಶಗಳಲ್ಲಿ ಸಂಚಾರ ಮಾಡಿದ್ದು ಅವರವರ ಚರಿತ್ರೆಗಳಿಂದ ಕಂಡುಬರುತ್ತದೆ.

ಶ್ರೀಯುತ ವೀರಭದ್ರಪ್ಪ ಬಸವಪ್ಪ ಹಾಲಭಾವಿಯವರು ನಿವೃತ್ತಮೊದಲನೇ ವರ್ಗ ಸಬ್‌ಜಜ್ಜ ಧಾರವಾಡ ಇವರು ನವಿಲೆ ಗ್ರಾಮವು ಆವುದೆಂಬುದನ್ನು ಬಹು ಪರಿಶ್ರಮ ಪೂರ್ವಕವಾಗಿ ಸಂಶೋಧಿಸಿ ಇದು ಬಳ್ಳಾರಿ ಜಿಲ್ಲೆಯಲ್ಲಿ ತುಂಗಭದ್ರಾ ನದೀತೀರದಲ್ಲಿರುವ ನವಿಲೆಯಾಗಿರದೆ ಕೃಷ್ಣಾನದೀ ತೀರದಲ್ಲಿ ಹುನಗುಂದ ತಾಲೂಕಿನ ಮೇರೆಯಲ್ಲಿ ರಾಯಚೂರ ಜಿಲ್ಲೆಯಲ್ಲಿರುವ ನವಿಲೆ ಎಂದು ಸಿದ್ಧಪಡಿಸಿದ್ದಾರೆ. ಇಲ್ಲಿ ಜಡೆಯ ಶಂಕರನ ದೇವಾಲಯವು ಈಗಲೂ ಇದೆ. ಅದರಲ್ಲಿದ್ದ ಲಿಂಗದ ಹಿಂದೆ ಜಡೆಯನ್ನು ಹಿಕ್ಕಿದ ಹಾಗೆ ಆಕೃತಿಯು ತೋರಿಸಲ್ಪಟ್ಟಿದೆ. ದೇವಾಲಯದ ಆವಾರದಲ್ಲಿ ಮೂರು ಶಿಲಾಶಾಸನಗಳಿದ್ದು ಇವುಗಳಲ್ಲಿ ಚಾಲುಕ್ಯ ರಾಜರಾದ ೫ನೇ ವಿಕ್ರಮಾದಿತ್ಯ—ತ್ರಿಭುವನಮಲ್ಲ,೧ ನೇ ಸೋಮೇಶ್ವರ—ಆಹವಮಲ್ಲ, ೩ನೇ ಸೋಮೇಶ್ವರ—

ಭೂಲೋಕಮಲ್ಲ ಇವರ ಉಲ್ಲೇಖಗಳಿವೆ. ಈ ಶಾಸನಗಳಿಂದ ಈ ಸ್ಥಾನವು ಈ ಕಾಲದಲ್ಲಿ ಪುಣ್ಯಕ್ಷೇತ್ರವಾಗಿ ಭಾವಿಸಲ್ಪಟ್ಟಿದ್ದು ಕಂಡುಬರುತ್ತದೆ. ಇಂಥ ಪುಣ್ಯಸ್ಥಳದಲ್ಲಿ ಶಂಕರ ದಾಸಿಮಯ್ಯನು ಇದ್ದುಕೊಂಡು ಶಿವಾನುಭವದ ರೀತಿ ನಡೆಗಳನ್ನು ನಾಡಿನಲ್ಲಿ ಪ್ರಸಾರಮಾಡಿ ಶಿವಶರಣರಲ್ಲಿ ಅತ್ಯಂತ ಪ್ರಸಿದ್ಧನಾಗಿದ್ದಾನೆ.

---

## ವೀರ ಶಂಕರದೇವ.

ವೀರ ಶಂಕರದೇವನೆಂಬ ಶಿವಶರಣನು ವಚನಕಾರನಿದ್ದಾನೆ. ಅವನ ಮುದ್ರಿಕೆಯು "ಘನಗುರುಶಿವಲಿಂಗ ರಾಮನಾಥಾ" ಎಂದಿರುತ್ತದೆ. ಈ ಮುದ್ರಿಕೆಯ ಮೇಲಿಂದ ಆತನು ಮೂದುನೂರಿನ ರಾಮನಾಥ ಲಿಂಗನ ಭಕ್ತನಾಗಿದ್ದನೆಂದು ವ್ಯಕ್ತವಾಗುತ್ತಿದ್ದು ಅವನು ಈ ದೇವಾಲಯವಿದ್ದ ಪ್ರದೇಶದವನಾಗಿರಬೇಕೆಂದು ತೋರುತ್ತದೆ. ಅವನ ಒಂದೇ ಒಂದು ವಚನವು ಉಪಲಬ್ಧವಾಗಿದ್ದು ಅದಾದರೂ ಬಹು ದೀರ್ಘವಾಗಿದೆ. ಇದರಲ್ಲಿ ಅವನು ವೀರಶೈವರಲ್ಲಿ ಜಾತಿ ಭೇದಗಳಿಲ್ಲ, ಅವರು ಒಬ್ಬನೇ ದೇವನನ್ನು ನಂಬಬೇಕು, ವಿಷ್ಣು ಮೊದಲಾದ ಅನೇಕ ದೈವಗಳನ್ನು ಭಜಿಸಕೂಡದು, ಎಂದು ಅತಿ ಸ್ಪಷ್ಟ ಶಬ್ದಗಳಿಂದ ಬೋಧಿಸಿದ್ದಾನೆ. ಅದನ್ನು ನಾವು ಈ ಚರಿತ್ರೆಯ ಅಂತ್ಯದಲ್ಲಿ ಕೊಟ್ಟಿದ್ದೇವೆ.

ವೀರ ಶಂಕರದೇವನು ಗಣಾಚಾರವನ್ನು ಪಾಲಿಸುವವನಾಗಿ, ಲಿಂಗವನ್ನೊಂದನ್ನೇ ನಂಬುವೆನು, ಲಿಂಗ ವಿರಹಿತರಾದ ಭವಿಗಳನ್ನು ಮುಟ್ಟೆನು, ಒಂದು ವೇಳೆ ಮುಟ್ಟಿದಲ್ಲಿ ತನ್ನಂಗವನ್ನು ಅಗ್ನಿಗೆ ಆಹುತಿಯನಿಕ್ಕುವೆನು ಎಂಬ ಕಟ್ಟಾಚಾರವನ್ನು ಮಾಡಿಕೊಂಡು ಅದರಂತೆ ಅವನು ಆಚರಿಸುತ್ತಲಿದ್ದನು. ಜಾಗ್ರತ್ ಸ್ವಪ್ನಗಳಲ್ಲಿ ಸಹ ಲಿಂಗ ಭಾವವುಳ್ಳವನಾಗಿ ಲಿಂಗವನ್ನೇ ನೆನೆಯುವವನಾಗಿ ಲಿಂಗಾಚಾರವುಳ್ಳವನಾಗಿದ್ದನು.

ಹೀಗಿರುವಲ್ಲಿ ಒಂದು ದಿನ ಅವನು ನಿದ್ದೆ ಹೋಗಿರಲು ಒಬ್ಬ ಅಲಿಂಗಿಯು ಅವನ ಕನಸಿನಲ್ಲಿ ಬಂದು ಅವನೊಡನೆ ಲಿಂಗದ ವಿಷಯವಾಗಿ ವಾದಿಸುತ್ತ ಅವನ ಸೆರಗನ್ನು ಹಿಡಿದು ಎಳೆದನು. ಎಳೆದ ಕೂಡಲೆ ಅವನು

ಎಚ್ಚತ್ತು—ಅಯ್ಯೋ, ನನ್ನ ಆಚರಣೆಯ ಕಟ್ಟಿಗೆ ಭಂಗ ಬಂದಿತೇ? ಈ ರೀತಿ ಸ್ವಪ್ನವಾಗಬೇಕಾದರೆ, ತನ್ನಿಂದ ಕೆಲವೊಂದು ಪ್ರಮಾದವಾಗಿರಬಹುದು ಎಂದು ಯೋಚಿಸಿ—ನಾನು ಕಟ್ಟು ಮಾಡಿಕೊಂಡಂತೆ ಪ್ರಾಯಶ್ಚಿತ್ತದ ಗೊತ್ತನ್ನು ಮುಟ್ಟಬೇಕೆಂದು ನಿಶ್ಚಯಿಸಿಕೊಂಡನು.

ಆಗ ಅವನು ಪುಣ್ಯ ಕ್ಷೇತ್ರವೆನಿಸಿಕೊಂಡ ಶ್ರೀ ಶೈಲಕ್ಕೆ ಬಂದು ಅಲ್ಲಿ ಹಾಟಕೇಶ್ವರ ಲಿಂಗವಿದ್ದಲ್ಲಿಗೆ ಆಗಮಿಸಿ, ಅಲ್ಲಿ ಬಹುಜನ ಶಿವಭಕ್ತರು ನೆರೆದಿರಲು, ಅವರೆದಿರಿಗೆ ಅವನು ಹೋಗಿ ಎಲ್ಲರಿಗೂ ವಂದಿಸಿ ಅವರಿಗೆ—ನನ್ನಿಂದ ಒಂದು ಮಹಾ ಪ್ರಮಾದವಾಗಿದೆ ಎಂದು ತನ್ನ ಸ್ವಪ್ನದಲ್ಲಾದ ಎಲ್ಲ ಸಂಗತಿಗಳನ್ನು ಅವರಿಗೆ ತಿಳಿಸಿ ಒಂದು ಕಾವಲಿಯನ್ನು ಕಾಯಿಸಿ ಅದರ ಮೇಲೆ ತನ್ನನ್ನು ದಹಿಸಿಕೊಳ್ಳಬೇಕೆಂದು ಅದರ ಮೇಲೆ ಕುಳಿತು ಬಿಟ್ಟನು.

ಪರಮಾತ್ಮನು ಅದನ್ನು ನೋಡಿ ಮೆಚ್ಚಿ ಅವನ ಕರವನ್ನು ಹಿಡಿದು ಅವನಿಗೆ—ವೀರ ಶಂಕರ ದೇವನೇ, ನಿನ್ನ ನಿಷ್ಠೆಗೆ ನಾನು ಮೆಚ್ಚಿದೆನು. ನಿನ್ನ ಇಷ್ಟಾರ್ಥವೇನೆಂದು ಕೇಳಲು, ಆ ಶಿವಶರಣನು—ನನ್ನ ಆಚಾರವು ಮೀರಿತ್ತು, ನನ್ನ ಪಂಥಕ್ಕನುಸಾರವಾಗಿ ನಾನು ನನ್ನ ಪ್ರಾಣವನ್ನು ಬಿಡುವೆನೆಂದು ಹೇಳಿದನು.

ಅದಕ್ಕೆ ಪರಮಾತ್ಮನು—ನಿನ್ನ ವೀರಭಕ್ತಿಯನ್ನು ಪರೀಕ್ಷಿಸಲು ನಾನು ಆ ರೀತಿ ಶಂಕೆಯ ಸ್ವಪ್ನವನ್ನು ನಿನಗೆ ಉಂಟು ಮಾಡಿದಿನೇ ಹೊರ್ತು ಬೇರೊಂದಿಲ್ಲ. ನಿನಗೆ ನಾನು ಮೆಚ್ಚಿದೆನು ಎಂದು ಹೇಳಿ ಅವನನ್ನು ತನ್ನಲ್ಲಿ ಅಡಗಿಸಿಕೊಂಡನು.

ವೀರ ಶಂಕರ ದೇವನ ಹೆಸರು ಗಣಸಹಸ್ರದಲ್ಲಿ ಬಂದಿದೆ. ಆದ್ದರಿಂದ ಇವನು ನೂತನ ಶರಣನಲ್ಲ. ಆದರೆ ಇವನಿಗೂ ಶಂಕರ ದಾಸಿಮಯ್ಯನಿಗೂ ಏನೂ ಸಂಬಂಧವಿಲ್ಲೆಂಬುದು ಈ ಚರಿತ್ರೆಯಿಂದ ವ್ಯಕ್ತವಾಗುತ್ತದೆ. ಇದನ್ನು ನಿರ್ದೇಶಿಸಲು ನಾವು ಅವನ ಚರಿತ್ರೆಯನ್ನು ಇಲ್ಲಿ ಕೊಟ್ಟಿದ್ದೇವೆ.

ಅವನ ವಚನವು ಕೆಳಗೆ ಉದಹರಿಸಲ್ಪಟ್ಟಿದೆ. ಅವನು ಇನ್ನೂ ಇದೇ ತೆರನಾಗಿ ಅನೇಕ ವಚನಗಳನ್ನು ರಚಿಸಿರಬಹುದು. ಆದರೆ ಅವು ನಮಗೆ ಉಪಲಬ್ಧವಾಗಿಲ್ಲ.

## ವಚನ.

ಶಿವಶಿವಾ ದ್ವಿಜರಾದ ನೀವು ಕೇಳಿರೋ. ನೀವು ಎಲ್ಲಾ ಜಾತಿಗೂ ಮಿಗಿಲೆಂದು 'ವರ್ಣಾನಾಂ ಬ್ರಾಹ್ಮಣೋ ಗುರುಃ' ಎಂದು ಬಳ್ಳಿಟ್ಟು ನುಡಿವು ತಿಪ್ಪಿರಿ. 'ಆದಿಬಿಂದೂದ್ಭವೇ ಬೀಜಂ' ಎಂಬ ಶ್ರುತಿಯಿಂ ತಿಳಿದು ನೋಡಲು ಆದಿಯಲ್ಲಿ ನಿಮ್ಮ ಮಾತಾಪಿತರ ಕೀವು ರಕ್ತದ ಮಿಶ್ರಣದಿಂದ ನಿಮ್ಮ ಪಿಂಡ ಉದಯಿಸಿತ್ತು. ಆ ಕೀವು ರಕ್ತಕ್ಕೆ ಆವ ಕುಲ ಹೇಳಿರೇ? ಅದೂ ಅಲ್ಲದೆ ಪಿಂಡ ಒಂಬತ್ತು ತಿಂಗಳು ಒಡಲೊಳಗೆ ಕರುಳು ಮಲಮೂತ್ರ ಕೀವು ದುರ್ಗಂಧ ರಕ್ತ ಖಂಡ ಕಾಳಿಜ ಜಂತುಗಳೊಳಗೆ ಪಾಕುಳದೊಳಗಣ ಕ್ರಿಯೆ ಯಂತೆ ಹೊದ ಕುಳಿಯುಂ ಬಂದು, ನೀನಾವ ಕುಲನ ಹೇಳಿರೇ? ಅದು ಅಲ್ಲದೆ ಮೂತ್ರದ ಗುಳಿಯ ಹೊರವಡುವಾಗ, ಹೊಲೆ ಮುಂತಾಗಿ ಮುದುಡಿ ಬಿದ್ದಲ್ಲಿ ಹೆತ್ತವಳು ಹೊಲತಿ ಹೋ. ಹುಟ್ಟಿದ ಮಗುವು ಹೊಲೆಯನೆಂದು ನಿಮ್ಮ ಕುಲಗೋತ್ರ ಮುಟ್ಟಲಮ್ಮದೆ ಹನ್ನೆರಡು ದಿನವಂದು ಪ್ರಾಯಶ್ಚಿ ತ್ತವನಿಕ್ಕಿಸಿ ಕೊಂಬಂದು ನೀವಾವ ಕುಲ ಹೇಳಿರೇ? ಮುಂಜಿಗಟ್ಟಿದ ಮುನ್ನ ಕೀಳು ಜಾತಿ, ಮುಂಜಿಗಟ್ಟಿದ ಬಳಿಕ ಮೇಲು ಜಾತಿಗಳು ಎಂಬ ಪಾತಕರು ನಿಮ್ಮ ನುಡಿಯ ಕೊರತೆಗೆ ನೀವು ಬಲು ನಾಚಬೇಡವೇ? ನೀವು ನಾಚ ದಿರ್ದಡೆ ನಾ ನಿಮ್ಮ ಕುಲದ ಬೇರನೆತ್ತಿ ತೋರಿಹೆನು. ನಾವು ಉತ್ತಮದ ಬ್ರಾಹ್ಮಣರೆಂಬ ನಿಮ್ಮ ದೇಹ ಬ್ರಾಹ್ಮಣವೋ, ನಿಮ್ಮ ಪ್ರಾಣ ಬ್ರಾಹ್ಮಣವೋ ಆವುದು? ದೇಹ ಕುಲಜನೆಂದರೆ ಚರ್ಮಕ್ಕೆ ಕುಲವಿಲ್ಲ. ಮಾಂಸಕ್ಕೆ ಕುಲವಿಲ್ಲ. ಎಲುವಿಂಗೆ ಕುಲನಿಲ್ಲ. ನರವಿಂಗೆ ಕುಲವಿಲ್ಲ, ರಕ್ತಕ್ಕೆ ಕುಲವಿಲ್ಲ. ಕೀವಿಂಗೆ ಕುಲವಿಲ್ಲ. ಕರುಳಿಂಗೆ ಕುಲವಿಲ್ಲ. ಮಲಮೂತ್ರಕಂತೂ ಕುಲವಿಲ್ಲ. ಕುಲವೆ ಲ್ಲಿಯದೋ ಒಡಲಿಂಗೆ? ಅದಂತಿರಲಿ. ನಿಮ್ಮ ಪ್ರಾಣಕ್ಕೆ ಕುಲ ಉಂಟೆಂ ದರೆ, ಪ್ರಾಣ ದಶವಾಯುವಾದ ಕಾರಣ ಆ ವಾಯು ಹಾರುವನಲ್ಲ. ಅದುವ ಲ್ಲದೆ ನಿಮ್ಮ ಒಡಲನಲುಗಾಡಿ ಇರಿವ ಕಾಮ ಕ್ರೋಧ ಲೋಭ ಮೋಹ ಮದ ಮತ್ಸರಂಗಳು ಉತ್ತಮ ಕುಲವೆಂಬ ಅವು ಮುನ್ನವೇ ಪಾಪಕಾರಿ ಗಳಾದ ಕಾರಣ ಅವಕ್ಕೆ ಕುಲವಿಲ್ಲ. ನಿಲ್ಲು ಮಾಣು. ನಿಮ್ಮೊಳಗಣ ಸಪ್ತ ವ್ಯಸನಂಗಳು ಉತ್ತಮ ಕುಲವೆಂಬ ಅವು ಮುನ್ನವೇ ದುರ್ವ್ಯಸನಂಗಳಾದ ಕಾರಣ ಅವಕೆಂದೂ ಕುಲನಿಲ್ಲ. ನಿಲ್ಲು ಮಾಣು. ನಿಮ್ಮ ಅಷ್ಟಮದಂಗಳು ಉತ್ತಮ ಕುಲವೆಂಬರವು ಸುರೆಯ ಸವಿದ ಕೋಡಗದ ಹಾಗೆ ಮುಂದು ಗಾಣಲೀಯವಾದ ಕಾರಣ ಅವಕೆ ಕುಲವಿಲ್ಲ. ಇನ್ನು ಒಡಲ ತಾಪತ್ರಯಂ

ಗಳು ಉತ್ತಮ ಕುಲವೆಂಬಡೆ ಅವು ನಿಮ್ಮ ಉರಿಮುರಿದು ಸುಡುವ ಒಡಲ ಗಿಚ್ಚುಗಳು. ಅವಕೆ ಕುಲವಿಲ್ಲ. ನಿಲ್ಲು ಮಾಣು. ಉಳಿದ ಅಂತಃಕರಣಂಗಳಿಗೆ ಉತ್ತಮ ಕುಲವೆಂಬರೆ, ಅವನು ನೀವು ಕಾಣಿರಿ. ನಿಮ್ಮ ಮನವು ಕಾಣದು. ಇಂತು ನಿಮ್ಮ ಪಂಚಭೂತ ಸಪ್ತಧಾತು ಪಂಚೇಂದ್ರಿಯಂಗಳು ಉತ್ತಮ ಕುಲವೆಂಬ ಅವು ಎಲ್ಲ ಜೀವರಾಶಿಗೂ ನಿಮಗೂ ಸಮಾನ. ಅದೆಂತೆಂದೊಡೆಃ—

> ಸಪ್ತಧಾತು ಸಮಂ ಪಿಂಡಂ ಸಮಯೋನಿ ಸಮುದ್ಭವಂ ।
> ಆತ್ಮ ಜೀವ ಸಮಾಯುಕ್ತಂ ವರ್ಣಾನಾಂ ಕಿಂ ಪ್ರಯೋಜನಂ ॥

ಎಂದುದಾಗಿ ನಿಮ್ಮ ದೇಹಕ್ಕೆ ಕುಲವಾವುದು ಹೇಳಿರೇ ? ಇದಲ್ಲದೆ ಆತ್ಮನು ದೇಹವ ಬಿಟ್ಟು ಒಂದು ಗಳಿಗೆ ತೊಲಗಿರಲು ಆ ದೇಹ ಹಡಿಕೆಯಾಗಿ ಹುಳಿತು ನಾಯಿ ನರಿ ತಿಂಬ ಕಾರಣ ನಿಮ್ಮ ದೇಹ ಅಪವಿತ್ರ ಕಾಣಿರೋ. ಇಂತಪ್ಪ ಅಪವಿತ್ರ ಕಾಯಕ್ಕೆ ಕುಲವಿಲ್ಲ. ಆ ಕಾಯಕ್ಕೆ ಕುಲ ಉಂಟೆಂದರೆ ಮೇಲು ಜಾತಿಯ ದೇಹದೊಳಗೆ ಹಾಲುಳ್ಳರೆ ಕೀಳು ಜಾತಿಯ ದೇಹದೊಳಗೆ ರಕ್ತವುಳ್ಳರೆ ಅದು ಕುಲವಹುದು. ಅಂಥ ಗುಣ ನಿಮಗಿಲ್ಲವಾಗಿ ಎಲ್ಲ ಜೀವರಾಶಿಯ ದೇಹವೂ ನಿಮ್ಮ ದೇಹವೂ ಸಮಾನವಾದ ಕಾರಣ ನಿಮಗೆ ಕುಲವಿಲ್ಲ. ನಿಲ್ಲು ಮಾಣು. ಒಡಲು ಕರಣಾದಿಗಳಿಗೆ ಕುಲವಿಲ್ಲವೆ ಹೋದಡೂ ಎಲ್ಲವನರಿವ ಚೈತನ್ಯಾತ್ಮಕನೆಂದೊಡೆ ಆತ್ಮನು ಆವ ಕುಲಜನೂ ಅಲ್ಲ. ಅದು ಆವ ಕುಲವೆಂದು ಹೆಸರುಗೊಂಬ ಆತ್ಮ ಹೆಣ್ಣಲ್ಲ ಗಂಡಲ್ಲ ನಪುಂಸಕನಲ್ಲ ಸ್ಥೂಲನಲ್ಲ ಸೂಕ್ಷ್ಮನಲ್ಲ ಷಡುವರ್ಣದೊಳಗೆ ಆವ ವರ್ಣನೂ ಅಲ್ಲ. ಅದು ಕಾರಣ ವರ್ಣವ ಹೊದ್ದದ ಆತ್ಮನನರಿಯರಾಗಿ ಆ ಆತ್ಮನು ಆವ ಕುಲದೊಳಗೂ ಅಲ್ಲ. ಶರೀರ ಬೇರೆ, ಆತ್ಮ ಬೇರೆ. ಅದೆಂತೆಂದೊಡೆ—

> ಭೂಯೋಹಿ ಮೃದ್ಭಾಂಡಮನೇಕ ರೂಪಂ ಸುವರ್ಣಮೇಕಂ ಬಹು ಭೂಷಣಾನಾಂ ।
> ಗೋಕ್ಷೀರಮೇಕಂ ಬಹುವರ್ಣಧೇನವಃ ಶರೀರ ಭಿನ್ನಂ ಪರಮಾತ್ಮಮೇಕಂ ॥

ಎಂದುದಾಗಿ ಶರೀರಂಗಳು ಅನಂತ, ಆತ್ಮನೊಬ್ಬನೆ. ಅದು ಕಾರಣ ಆ ಆತ್ಮನು ಆವ ಕುಲದಲೂ ಇಲ್ಲ. ಇನ್ನು ಆವ ಠಾವಿನಲ್ಲಿ ನಿಮ್ಮ ಕುಲವ

ಪ್ರತಿಷ್ಠೆಯ ಮಾಡಿ ತೋರುವಿರೋ ? ದೇಹ ಮೃತ್ತಿಕೆ, ಆತ್ಮ ನಿರಾಕಾರ ನೆನುತ್ತಿರಲು ಇನ್ನಾವ ಪರಿಯಲ್ಲಿ ನೀವು ಉತ್ತಮ ಕುಲಜರೆಂಬಿರೋ?

ಜೀವಃ ಶಿವಃ ಶಿವೋ ಜೀವಃ ಕೇವಲಂ ಶಿವಃ |
ಪಾಶಬದ್ಧಸ್ಥಿತೋ ಜೀವಃ ಪಾಶಮುಕ್ತಃ ಸದಾಶಿವಃ ||

ಎಂಬ ಶ್ರುತಿಯಂ ತಿಳಿದು ನೋಡಲು ನೀವೆಲ್ಲ ಪಾಶಬದ್ಧ ಜೀವಿಗಳಾಗುತ್ತ ಇರಲು ನಿಮಗೆಲ್ಲಿಯ ಉತ್ತಮ ಕುಲವು ? ಪಾಶಮುಕ್ತರಾದ ನಿಮ್ಮ ಶಿವ ಭಕ್ತರೇ ಕುಲಜರಲ್ಲದೆ ನಿಮಗೆ ಉತ್ತಮ ಕುಲ ಉಂಟಾದರೆ ನಿಮ್ಮ ದೇಹ ದೊಳಗೆ ಹೊರಗೆ ಇಂಥ ಠಾವೆಂದು ಬೆರಳ ಮಾಡಿ ತೋರಿ. ಅದು ಅಲ್ಲದೆ ಒಂದು ಪಕ್ಷಿಯ ತತ್ತಿಯೊಳಗೆ ಹಲವು ಮರಿ ಹುಟ್ಟಿದರೆ, ಒಂದರ ಮರಿಯೋ ಹಲವು ಪಕ್ಷಿಯ ಮರಿಯೋ ? ತಿಳಿದು ನೋಡಿದರೆ ಅವಕ್ಕೆ ಬೇರೆ ಬೇರೆ ಪಕ್ಷಿಗಳೆಂಬ ಕುಲವಿಲ್ಲ. ಆ ಹಾಗೆ ಒಬ್ಬ ಬ್ರಹ್ಮನ ಅಂಡವೆಂಬ ತತ್ತಿಯೊಳಗೆ ಸಕಳ ಜೀವರಾಶಿ ಎಲ್ಲವೂ ಉದಯಿಸಿದವು. ಅದೆಂತೆಂದೊಡೆ—

ಪೃಥಿವ್ಯಾಕಾಶಮಜಾಂಡಂ ತಸ್ಯಾಂಡೆ ಜಾಬುತೆ ಕುಲಂ |
ಅಂತ್ಯಜಾತಿದ್ವಿಜಾತೀನಾಂ ಏಕಯೋನಿ ಸಹೋದರಾಃ |

ಎಂಬುದಾಗಿ ಇರುಹೆ ಮೊದಲು ಆನೆ ಕಡೆಯಾದ ಸಚರಾಚರವೆಲ್ಲವೂ ಒಬ್ಬ ಬ್ರಹ್ಮನ ಅಂಡದೊಳಗೆ ಹುಟ್ಟಿ ಏಕಯೋನಿ ಸಹೋದರಾಃ ಎಂದು ಪ್ರತಿಷ್ಠಿಸುತ್ತಿರಲು ನಿಮಗೆಲ್ಲಿಯ ಕುಲವೋ ?. ಶಿವಭಕ್ತರೇ ಉತ್ತಮರು ಕುಲಜರೆಂದು ಮಿಕ್ಕಿದವರೆಲ್ಲ ಕೀಳು ಜಾತಿ ಎಂಬುದನು ಓದಿ ಬರುದೊರೆಯಾದರು. ನಾನು ಹೇಳುವೆನು ಕೇಳು.

ಶ್ವಪಚೋಽಪಿ ಮುನಿಶ್ರೇಷ್ಠಃ ಶಿವಸಂಸ್ಕಾರ ಸಂಯುತಃ |
ಶಿವಸಂಸ್ಕಾರ ಹೀನಸ್ತು ವಿಪ್ರೋಽಪಿ ಶ್ವಪಚಾಧಮಃ ||

ಎಂಬ ಶ್ರುತಿಯ ನೋಡಿದಲ್ಲಿ ಅರಿದ ಶಿವಭಕ್ತರೇ ಸತ್ಕುಲಜರು. ಅಲ್ಲದ ಅಜ್ಞಾನದವರಾದುದೆಲ್ಲ ಒಂದುಕುಲ, ಸುಜ್ಞಾನದವರಾದುದೆಲ್ಲ ಒಂದು ಕುಲವೆಂದು ಶಾಸ್ತ್ರಂಗಳು ಹೇಳುತ್ತಿದ್ದಾವೆ. ಅದೆಂತೆಂದೊಡೆ—

ಆಹಾರ ನಿದ್ರಾ ಭಯ ಮೈಥುನಂ ಚ ಸಾಮಾನ್ಯ
ಮೇತತ್ ಪಶುಭಿರ್ನರಾಣಾಂ |
ಜ್ಞಾನಂ ನರಾಣಾಮಧಿಕೋ ವಿಶೇಷೋ ಜ್ಞಾನೇನ
ಹೀನಃ ಪಶುಭಿಃ ಸಮಾನಃ ||



# ಶಿವಾನುಭವ

ಸಂಪುಟ ೨೨ ]

[ ಸಂಚಿಕೆ ೬



ಮಾರ್ಚ ೧೯೪೮

ವಿಜಾಪುರ.

# ವಿಷಯ


೧ ಜೀವನದ ಉದ್ದೇಶ ಸಾಧನೆ—
ಶ್ರೀ. ಮ. ಮಲ್ಲಪ್ಪ, ಹೆಲಗೂರ.

೨ ಕುಲವಾವುದಯ್ಯ?
ವಿದ್ವಾನ್ ಕೆ. ಎಂ. ರಾಜಶೇಖರಯ್ಯ.

೩ ಶಿವಶರಣರ ಯೋಗ—
ಶ್ರೀ. ಎಂ. ದೊಡ್ಡಯ್ಯನವರು, ನಾಗರಹಾಳ.

೪ ಕಾಳಿ ಬಾರೆ—
ಶ್ರೀ. ಸಿಂಪಿ ಲಿಂಗಣ್ಣ.

೫ ವಿಶ್ವಕವಿ ಸರ್ವಜ್ಞ—
ಶ್ರೀ. ಎಸ್. ಸಿ. ಬೂದಿಹಾಳಮಠ.

೬ ಶಿವಾನುಭವ ಸಂಸ್ಥೆಯ ವಿಧಾಯಕ ಕಾರ್ಯಗಳು— [illegible]
ಶ್ರೀ. ಕಲ್ಯಾಣಪ್ಪ ಬ್ಯಾಳಿ.

೭ ಸ್ಫುಟ ಸೂಚನೆಗಳು— [illegible]

೮ ವಚನಶಾಸ್ತ್ರಸಾರ ಭಾಗ ೩— ೪೯—೫೬
ಉತ್ತರಾರ್ಧ.
ರಾ॥ ಬ॥ ಫ. ಗು. ಹಳಕಟ್ಟಿ.

೯ ಶಿವಶರಣರ ಚರಿತ್ರೆ ಭಾಗ ೩— ೧೦೩—೧೧೮
ರಾ॥ ಬ॥ ಫ. ಗು. ಹಳಕಟ್ಟಿ.

# ಶಿವಾನುಭವ

ವರ್ಷ ೨೨ | ಮಾರ್ಚ ೧೯೪೮ | ಸಂಚಿಕೆ ೬


## ಜೀವನದ ಉದ್ದೇಶ ಸಾಧನೆ.


ಲೇಖಕಃ—ಶ್ರೀಯುತ ಮ. ಮಲ್ಲಪ್ಪ ಕನ್ನಡಜಾಣ.

( ಜನತಾ ಜ್ಞಾನ ಪ್ರಚಾರಕ ಜ್ಞಾನ ಮಂದಿರ ಹಲಗೂರು. )


---

ಜಗತ್ತಿನಲ್ಲಿ ಜನಿಸಿದ ಮಾನವನಿಗೆ ಒಂದು ಉದ್ದೇಶವಿದೆ. ಸಕಲ ಜೀವಿಗಳಲ್ಲಿ ಸಕಲ ಜನ್ಮಗಳಲ್ಲಿ ಮಾನವ ಜನ್ಮವೇ ಶ್ರೇಷ್ಠವು. 'ನರಜನುಮವತ್ಯಧಿಕ, ಎಂಬ ವಿದುರ ನೀತಿಯು ಇಂದು ಸರ್ವ ಸಾಮಾನ್ಯವಾಗಿ ಹೋಗಿ ಬಿಟ್ಟಿದೆ. ಒಮ್ಮೆ ಕೈಲಾಸ ಪತಿಯು ಬಸವಣ್ಣನಿದ್ದ ಭೂಲೋಕಕ್ಕೆ ಬಂದು, ಬಸವಣ್ಣನನ್ನು ಬಾ ಎನ್ನಲು ಅದಕ್ಕೆ ಉತ್ತರವಾಗಿ ಇಲ್ಲಿಯ ಸುಖವು ಕೈಲಾಸದಲ್ಲಿ ಸಿಕ್ಕುವುದಿಲ್ಲವಾದುದರಿಂದ ನಾನು ಬರುವುದಿಲ್ಲ ಎಂಬುದು ಬಂದಿತು. ಇದರಿಂದ ಮಾನವಜನ್ಮದ ಶ್ರೇಷ್ಠತೆಯು ಗೋಚರವಾಗುವುದಿಲ್ಲವೇ? ಜೀವನಕ್ಕೆ ತಕ್ಕ ಉದ್ದೇಶವಿದ್ದರೆ ಅದು ಸಿದ್ಧಿಯಾಗುವುದು. ಮಾನವನು ತಾನು ಮಾಡುವ ಕಾರ್ಯದಲ್ಲಿ ಯಾವ ಗುರಿಯನ್ನೂ ಇಟ್ಟುಕೊಳ್ಳದೆ ಯತ್ನಿಸಿದ ಕಾರ್ಯವು ಫಲಕಾರಿಯಾಗುವುದಿಲ್ಲ. ಗಾಳಿಪಟಕ್ಕೆ ಸೂತ್ರವಿಲ್ಲದಿದ್ದರೆ ಅದು ಎಂತು ಹಾರಲಾರದೋ ಅಂತೆಯೇ ಉದ್ದೇಶವಿಲ್ಲದೆ ಕಾರ್ಯ ಮಾಡುವಾತನು ವಿಫಲನಾಗುವನು. ನಮ್ಮ ನಮ್ಮ ಗುರಿಗಳನ್ನು ಮೊದಲು ನಿರ್ದಿಷ್ಟಪಡಿಸಿಕೊಂಡು ಕಾರ್ಯಕ್ಕೆ ಕೈಹಾಕಬೇಕು. ನಮ್ಮ ಬಾಳಿನಲ್ಲಿ ಸಾಧಿಸಬೇಕಾದ ಗುರಿಗಳ ಸ್ಪಷ್ಟತೆಯು ಮೊದಲು; ಅನಂತರ ಯತ್ನ ಮತ್ತು

ನಿರಂತರ ಸಾಧನೆ. ಅದರ [illegible]ಲವು ತ್ಯಜಿಸುವ ಮತ್ತು ಕೈಕೊಳ್ಳುವ ವಿಷಯ ಆಗತ್ಯ ಮತ್ತು ಅನಾಗತ್ಯ ಸಂಗತಿಯ ಸಾಕ್ಷಾತ್ಕಾರವು ಸಿಕ್ಕುವುದು. ಕೊನೆಗೆ ಯುಕ್ತ ಪ್ರಯೋಜನವು ಲಭಿಸಿ ಪುರುಷಾರ್ಥವನ್ನು ಸಾಧಿಸಿ ಮೋಕ್ಷ ಸಾಧನೆಯು ಲಭ್ಯವಾಗುವುದು. ವಿಶ್ವಕ್ಕೂ ನಮಗೂ ನಿಕಟ ಸಂಬಂಧವನ್ನು ಕಲ್ಪಿಸಿ ಆತ್ಮೋದ್ಧಾರದ ಮೂಲಕ ಜಗದೋದ್ಧಾರವಾಗುವ ಕಾರ್ಯದಲ್ಲಿನ ಗುರಿಗಳನ್ನು ಸಾಧಿಸಲು ಎಂದೆಂದಿಗೂ ಹಿಂಜರಿಯದೆ ಅಚಲ ಬುದ್ಧಿಯಿಂದ, ಸ್ಥಿರ ಯತ್ನದಿಂದ ಮುನ್ನುಗ್ಗಬೇಕು. ಗುರಿಯಿಲ್ಲದ ಜೀವನು ಅಶ್ವವಿಲ್ಲದ ಅರಸನು.

ಸುಖವನ್ನು ಪಡೆದು ಬಾಳುವುದೇ ಬಾಳಿನ ಗುರಿಯು. ಮಾನವನು ತನ್ನನ್ನು ತಾನೇ ತಿಳಿದುಕೊಳ್ಳುವುದೇ ಪ್ರಧಾನ ಕರ್ತವ್ಯವು. ಜ್ಞಾನದ ಒಲವು ನಲಿವು ಮಾನವನಿಗೆ ಮಾತ್ರ ಭಗವಂತನಿಂದ ಬಂದ ಗಂಟಾಗಿದೆ. ಈ ವಿಧಿಯಿಂದ ನಿಜವಾದ ಸುಖವನ್ನು ಮಾನವನು ಪಡೆಯಲು ಯತ್ನಿಸಬೇಕು. ಸಂತೋಷಕ್ಕೆ ಮೂಲವು ಸತ್ಕರ್ಮವು. ಸತ್ಕರ್ಮಾನುಷ್ಠಾನದ ಫಲವು ಸದ್ಗತಿಯು. ಇದಕ್ಕಾಗಿ ಭಗವಂತನ ನಿಯಮಗಳನ್ನು ಪರಿಪಾಲಿಸಬೇಕು. ಭಗವಂತನ ಸೃಷ್ಟಿಯಲ್ಲಿ ಅಕ್ಕರೆ ಆದರಣೆಯನ್ನು ತೋರಿಸಬೇಕು. ಭಗವದ್ವಿಭೂತಿಯ ಜೀವಕೋಟಿಗಳನ್ನು ಪ್ರೀತಿಯಿಂದ ನೋಡಿ ಸತ್ಕಾರ ಮಾಡುವುದೇ ಕರ್ಮವು. ಈ ಕರ್ಮಾಚರಣೆಗೆ ಭಕ್ತಿಯೇ ಮೂಲವು. ದೇವರಲ್ಲಿ ಮನುಷ್ಯರಿಗಿರುವ ಅಚಲ ಪ್ರೇಮವೇ ಭಕ್ತಿಯು. ಸರ್ವಾಂತರ್ಯಾಮಿಯಾದ ಜಗದೀಶ್ವರನನ್ನ ಸಕಲ ಭೂತಗಳಲ್ಲಿಯೂ ಸಂದರ್ಶನ ಮಾಡುವುದೇ ಜ್ಞಾನವು. ಈ ತ್ರಿವೇಣಿ--ಕರ್ಮ, ಭಕ್ತಿ, ಜ್ಞಾನ-ಸಂಗಮವೇ ಮಾನವ ವ್ಯಕ್ತಿಯನ್ನು ಅಮರ ವ್ಯಕ್ತಿಯನ್ನಾಗಿ ಮಾಡುವುದು. ಜೀವಾತ್ಮನು ಸಕಲ ಸದ್ಗುಣಾಂಕುರ ವಿಶಿಷ್ಟನು. ಅದನ್ನು ಚಿಗುರಿಸಿ ಸೌಂದರ್ಯವಾಗಿಯೂ, ಕಾಯಪುಷ್ಟವಾಗಿಯೂ, ಲೋಕೋಪಕಾರಿಯಾಗಿಯೂ ಇರಿಸುವಂತೆ ಪ್ರತಿಯೊಬ್ಬ ಮಾನವನೂ ಮಾಡಬೇಕು. ವಿಶ್ವ ಸೌಹಾರ್ದತೆಯೇ ಆತ್ಮೋನ್ನತಿಯ ಪ್ರಥಮ ಸೋಪಾನವು. ಜೀವನ ಸಾರ್ಥಕವಾಗಬೇಕಾದರೆ ತಾರುಣ್ಯದಲ್ಲಿ ಉನ್ನತಾಲೋಚನೆಗಳಿಗೆ ಮನಗೊಟ್ಟು, ಅವುಗಳನ್ನು ಕ್ರಿಯಾ ಪೂರ್ಣವಾಗುವಂತೆ ಮಾಡುವುದು.

**BOOK-POST** R. N. B. 2554

*From,*
**Shivanubhava**
**Office**
**Bijapur.**

ಶ್ರೀ. ರಾ|| ರ ಚನ್ನಮಲ್ಲಪ್ಪ ಸಿದ್ದಪ್ಪ ಬಡೇರಿ
ಪೋ. ಬನಹಟ್ಟಿ
ವ್ಹಾಯಾ-ಕುಡಚಿ ಸ್ಟೇಶನ್






ಈ ಪತ್ರಿಕೆಯನ್ನು ಇದರ ಸಂಪಾದಕರಾದ, ರಾ|| ರಾ|| ಪಿ. ಜಿ. ಹಳಕಟ್ಟಿ ಬಿ. ಎ. ಎಲ್. ಎಲ್. ಬಿ. ಇವರು ವಿಜಾಪುರ ವಾರ್ಡ [illegible] ಮನೆ ನಂ. ೧೩೭೮ ರಲ್ಲಿರುವ ತಮ್ಮ ಹಿತಚಿಂತಕ ಪ್ರೆಸ್ಸಿನಲ್ಲಿ ಮುದ್ರಿಸಿ ಅಲ್ಲಿಯೇ ಪ್ರಸಿದ್ಧಿಸಿದರು.

# ವಿಷಯಗಳು.


ಪುಟ.

೧ ಸೇವಾಧರ್ಮದ ಪ್ರೇರಕ ಶಕ್ತಿ ಎಲ್ಲಿದೆ? ಜಗದಣ್ಣ ಬಸವಣ್ಣನಲ್ಲಿ! ೧೯೩

— ಶ್ರೀ ಅನ್ನದಾನೀಶ್ವರ ವಿರಕ್ತಮಠ, ರಾಣೇಬೆನ್ನೂರ

೨ ಜಗದಣ್ಣ ಬಸವಣ್ಣನ ಸಮಾಜ ಕ್ರಾಂತಿಯ ಒಂದು ನೋಟ- ೧೯೮

— ಶ್ರೀ. ಅನ್ನದಾನೀಶ್ವರ ವಿರಕ್ತಮಠ, ರಾಣೇಬೆನ್ನೂರ

೩ ನೂರೊಂದು ಸ್ಥಲಗಳು. ೨೦೪

—ಶ್ರೀ. ಬಸವಪ್ಪ ಚನ್ನಪ್ಪ ಪಟ್ಟೇದ, ಮಂಟಮುರಿ

೪ ವಿಭೂತಿ. (ಕವಿತೆ) ೨೧೪

—ಶ್ರೀ. ಎಸ್. ಕರಿಯಪ್ಪ ಮಹದೇವರಹಳ್ಳಿ

೫ ಬಾಳಿನಲ್ಲಿ ಸಾವು. ೨೧೫

—ಶ್ರೀ. ಉಪಾಧ್ಯಾಯ ಮ. ಮಲ್ಲಪ್ಪ ಕನ್ನಡಜಾಣ, ಹಲಗೂರು

೬ ಜೀವನದ ಹಾಡು. ೨೧೯

—ಶ್ರೀ. ಕರಿಬಸವ ತನಯ

೭ ಯತಿವಿರಕ್ತೆ... ಅಕ್ಕಮಹಾದೇವಿ. ೨೨೦

—ಶ್ರೀ ಬೂದಿಹಾಳಮಠ ಎಂ. ಎ. ಬಿ. ಟಿ.—ವಿಜಾಪುರ.

೮ ವಚನಗಳು. ... ೨೨೪

— ಶ್ರೀ. ಆರ್ ಕೆ. ಹಿರೇಮಠ, ಮು. ಧಾರವಾಡ

೯ ವಚನಶಾಸ್ತ್ರಸಾರ ಭಾಗ ೩— ೬೫—೭೨

ಉತರಾರ್ಧ

ರಾ॥ ಬ॥ ಫ. ಗು. ಹಳಕಟ್ಟಿ

೧೦ ಶಿವಶರಣರ ಚರಿತ್ರೆ ಭಾಗ ೩— ೧೩೫—೧೪

ರಾ॥ ಬ॥ ಫ. ಗು. ಹಳಕಟ್ಟಿ

# ವಿಷಯಗಳು.


೧ ಆತ್ಮ ಕಲ್ಯಾಣವೂ ಲೋಕ ಕಲ್ಯಾಣವೂ— ೨

ವಿದ್ವಾನ್ ಕೆ. ಎಂ. ರಾಜಶೇಖರಯ್ಯ, ತೀರ್ಥಹಳ್ಳಿ.

೨ ಸೊಲ್ಲಾಪುರ ಸಿದ್ಧರಾಮೇಶ್ವರ ಅಷ್ಟೋತ್ತರ ಶತನಾಮಾವಳಿ— ೨

ಶ್ರೀ. ಪ. ಪ್ರ. ಶಾಂತವೀರ ಶಿವಾಚಾರ್ಯ ಸ್ವಾಮಿಗಳು,
ಗುಲಬುರ್ಗಾ.

೩ ನೂರೊಂದರ ಪರಿ—

ಶ್ರೀ. ಸಿ. ನಾ. ಮಹಂತಣ್ಣವರ, ಹೂನೂರ.

೪ ಶ್ರೀಗುರುಮಲ್ಲಸ್ವಾಮಿಗಳು—

ಶ್ರೀ. ಎಸ್. ಕರಿಯಪ್ಪ, ಮಹದೇವರಹಳ್ಳಿ.

೫ ವಚನ ಸೃಷ್ಟಿಯೊಂದಿಗೆ ಕೆಲ ನಿಮಿಷಗಳು—

ಶ್ರೀ. ಶಾಂತವೀರ ಬಸವಂತಪ್ಪ, ಮುಮ್ಮಿಗಟ್ಟಿ.

೬. (೧) ಆರ್ಯ ಸಂಸ್ಕೃತಿಯಲ್ಲಿಯ ದೋಷಗಳು—

— (೨) ವೈದಿಕ ಧರ್ಮವು ಸ್ತ್ರೀ ಸ್ವಾತಂತ್ರ್ಯದ ವೈರಿಯು— ೨೬೧

ಶ್ರೀ ಅನ್ನದಾನೀಶ್ವರ ವಿರಕ್ತಮಠ, ರಾಣೇಬೆನ್ನೂರ.

೭ ವಚನಗಳು— ೨೬೩

ಶ್ರೀ. ಆರ್. ಕೆ. ಹಿರೇಮಠ, ಮು. ಧಾರವಾಡ.

೮ ವಚನಶಾಸ್ತ್ರಸಾರ ಭಾಗ ೩— ೭೩—೭೬
ಉತ್ತರಾರ್ಧ

ರಾ॥ ಬ॥ ಫ. ಗು. ಹಳಕಟ್ಟಿ

೯ ಶಿವಶರಣರ ಚರಿತ್ರೆಗಳು ಭಾಗ ೩— ೧೪೫—೧೪೮

ರಾ॥ ಬ॥ ಫ. ಗು. ಹಳಕಟ್ಟಿ

# ಶಿವಾನುಭವ

ವರ್ಷ ೨೨ | ಜೂನ ೧೯೪೮ | ಸಂಚಿಕೆ ೯

## ಆತ್ಮಕಲ್ಯಾಣವೂ ಲೋಕಕಲ್ಯಾಣವೂ.

(ಲೇಖಕರು:— ವಿದ್ವಾನ್ ಕೆ. ಎಂ. ರಾಜಶೇಖರಯ್ಯನವರು
ಸಂಸ್ಕೃತ ಪಂಡಿತರು ಗೌ॥ ಹೈ॥ ತೀರ್ಥಹಳ್ಳಿ.)

"ಮರ್ತ್ಯಲೋಕವೆಂಬುದು ಕರ್ತಾರನ ಕಮ್ಮಟವಯ್ಯ. ಇಲ್ಲಿ ಸಲ್ಲುವರು ಅಲ್ಲಿಯೂ ಸಲ್ಲುವರು." ಎಂಬಂತೆ ಭರತಖಂಡ ಕರ್ತಾರನ ಕಮ್ಮಟವೇ ಹೌದು. ಅಡಿಗಲ್ಲಿನ ಮೇಲೆ ಲೋಹಗಳು ಸುಸಂಸ್ಕೃತವಾಗಿ, ಸುಲಕ್ಷಣ ಲಕ್ಷಿತವಾಗಿ ಹೊರಬಿದ್ದು ಉತ್ತಮೋತ್ತಮವಾದ ಆಭರಣಗಳೆನಿಸಿಕೊಂಡು ಅದೃಷ್ಟವಶಾತ್ ಅವುಗಳ ಸ್ಥಾನಮಾನಗಳನ್ನು ಅವು ಗಳಿಸಿಕೊಂಡಂತೆ ಮಾನವನಾಗಿ ಹುಟ್ಟಿದ ಬಳಿಕ ಪ್ರತಿಯೊಬ್ಬನೂ ಭರತಖಂಡವೆಂಬ ಅಡಿಗಲ್ಲಿನ ಮೇಲೆ ಭಕ್ತಿಜ್ಞಾನ, ವೈರಾಗ್ಯಗಳ ಫಲದಿಂದ ಮಾನವನು ಮಾನವತ್ವದಿಂದ ಆತನ ಉತ್ತಮೊತ್ತಮವಾದ ಅಂತಸ್ತುಗಳನ್ನು ಗಳಿಸಿಕೊಳ್ಳಲು ತುಂಬಾ ಅವಕಾಶವುಂಟು. ಏತಕ್ಕೆಂದರೆ ಇದು ಕರ್ಮಭೂಮಿ, ಉಳಿದುವು ಭೋಗಭೂಮಿಗಳು ಎಂಬ ವಿಷ್ಣು ಪುರಾಣದ ಮಾತನ್ನು ಇಲ್ಲಿ ಗಮನಕ್ಕೆ ನಾವು ತಂದುಕೊಳ್ಳಬಹುದು. * ಅದು ಭಾರತದೇಶ ಪ್ರಶಂಸಾಸಮಯದಲ್ಲಿ. ನಿಜವಾಗಿಯೂ ಇದು ಕರ್ಮಭೂಮಿಯು. ಇದು ಸ್ವರ್ಗಾಪವರ್ಗಗಳಿಗೆ

* ಯತೋಹಿಕರ್ಮಭೂಮಿಶೇಷಾ ಅಪೋಽನ್ಯಾಭೋಗಭೂಮಯಃ ವಿಷ್ಣುಪುರಾಣ, ಅಂಕ ೨.

# ಶಿವಾನುಭವ

ವರ್ಷ ೨೨ | ಜೂನ ೧೯೪೮ | ಸಂಚಿಕೆ ೯

## ಆತ್ಮಕಲ್ಯಾಣವೂ ಲೋಕಕಲ್ಯಾಣವೂ.

(ಲೇಖಕರುಃ— ವಿದ್ವಾನ್ ಕೆ. ಎಂ. ರಾಜಶೇಖರಯ್ಯನವರು
ಸಂಸ್ಕೃತ ಪಂಡಿತರು ಗಾ|| ಹೈ|| ತೀರ್ಥಹಳ್ಳಿ.)

"ಮರ್ತ್ಯಲೋಕವೆಂಬುದು ಕರ್ತಾರನ ಕಮ್ಮಟವಯ್ಯ. ಇಲ್ಲಿ ಸಲ್ಲುವರು ಅಲ್ಲಿಯೂ ಸಲ್ಲುವರು." ಎಂಬಂತೆ ಭರತಖಂಡ ಕರ್ತಾರನ ಕಮ್ಮಟವೇ ಹೌದು. ಅಡಿಗಲ್ಲಿನ ಮೇಲೆ ಲೋಹಗಳು ಸುಸಂಸ್ಕೃತವಾಗಿ, ಸುಲಕ್ಷಣ ಲಕ್ಷಿತವಾಗಿ ಹೊರಬಿದ್ದು ಉತ್ತಮೋತ್ತಮವಾದ ಆಭರಣಗಳೆನಿಸಿಕೊಂಡು ಅದೃಷ್ಟವಶಾತ್ ಅವುಗಳ ಸ್ಥಾನಮಾನಗಳನ್ನು ಅವು ಗಳಿಸಿಕೊಂಡಂತೆ ಮಾನವನಾಗಿ ಹುಟ್ಟಿದ ಬಳಿಕ ಪ್ರತಿಯೊಬ್ಬನೂ ಭರತಖಂಡವೆಂಬ ಅಡಿಗಲ್ಲಿನ ಮೇಲೆ ಭಕ್ತಿಜ್ಞಾನ, ವೈರಾಗ್ಯಗಳ ಫಲದಿಂದ ಮಾನವನು ಮಾನವತ್ವದಿಂದ ಆತನ ಉತ್ತಮೊತ್ತಮವಾದ ಅಂತಸ್ತುಗಳನ್ನು ಗಳಿಸಿಕೊಳ್ಳಲು ತುಂಬಾ ಅವಕಾಶವುಂಟು. ಏತಕ್ಕೆಂದರೆ ಇದು ಕರ್ಮಭೂಮಿ, ಉಳಿದುವು ಭೋಗಭೂಮಿಗಳು ಎಂಬ ವಿಷ್ಣು ಪುರಾಣದ ಮಾತನ್ನು ಇಲ್ಲಿ ಗಮನಕ್ಕೆ ನಾವು ತಂದುಕೊಳ್ಳಬಹುದು. * ಅದು ಭಾರತದೇಶ ಪ್ರಶಂಸಾಸಮಯದಲ್ಲಿ. ನಿಜವಾಗಿಯೂ ಇದು ಕರ್ಮಭೂಮಿಯು. ಇದು ಸ್ವರ್ಗಾಪವರ್ಗಗಳಿಗೆ

---

* ಯತೋಹಿಕರ್ಮಭೂಮಿಶೇಷಾ ಅಪೋಽನ್ಯಾಭೋಗಭೂಮಯಃ
ವಿಷ್ಣುಪುರಾಣ, ಅಂಕ ೨.

ಬುನಾದಿ. ಉನ್ನತಸ್ಥಾನವನ್ನು ಪಡೆಯಲು ಇದೊಂದು ವ್ಯಾಯಾಮ ಕೇಂದ್ರ. ಇದರಲ್ಲಿ ನಿಸ್ವಾರ್ಥತೆಯಿಂದ ಕಾರ್ಯಮಾಡಿ ಮುಕ್ತಿಪಡೆಯಬೇಕು. ಇಲ್ಲಿಯ ನಿವಾಸಿಗಳು ಪುಣ್ಯಶಾಲಿಗಳು, ಪರೋಪಕಾರಿಗಳು ಎಂದು ದೇವತೆಗಳೂ ಸಹ ಹಾಡುತ್ತಾರೆ. ಏಕೆಂದರೆ "ನಮ್ಮ ದೇವತ್ವದಿಂದಲೆ ಮನುಷ್ಯತ್ವ ಭೂಲೋಕದಲ್ಲಿ. ಭೂಲೋಕವೇ ಕರ್ಮಭೂಮಿ. ಒಂದು ಸಮಯ ಭೂಲೋಕ ನಮಗೆ ಶಾಶ್ವತವಾದುದು ದೇವಲೋಕಕ್ಕಿಂತಲೂ. ಆರ್ಜಿತವಾದ ಪುಣ್ಯ ವೆಲ್ಲವೂ ಕ್ಷೀಣವಾದನಂತರ ಪುನಃ ಭೂಲೋಕಕ್ಕೆ ಸ್ವರ್ಗ ಅಥವಾ ದೇವ ಲೋಕದಿಂದ ಬರಬೇಕು. ಅಂದಮೇಲೆ ಸ್ವರ್ಗಲೋಕ ನಶ್ವರ. ಭೂಲೋಕವೇ ಶಾಶ್ವತವಾದುದು. ನಶ್ವರವಾದ ಸ್ವರ್ಗಕ್ಕಿಂತಲೂ ಕರ್ಮಭೂಮಿಯಲ್ಲಿ ಆವ ಕಾಯಕವನ್ನಾದರೂ ಕೈಗೊಂಡು ನಿಸ್ವಾರ್ಥತೆಯಿಂದ ಅದನ್ನು ನೆರವೇರಿಸಿ ದರೆ ಅಂದೇ ಆತನಿಗೆ ಮುಕ್ತಿ. ಅದು ಪರಮಾತ್ಮನ ಸಾನ್ನಿಧ್ಯದಲ್ಲಿ ಆ ಪರಮ ಪದವಿಯಂತೂ ಸದಾ ಶಾಶ್ವತತಮವಾದುದು. ಅದೇ ಗಣಪದವಿ. ಅದು ಶಂಕರನ ಸಭೆಯಲ್ಲಿ ಆತನ ಸಾಮರಸ್ಯದ ಫಲವೇ ಅದು. ಇದಿಷ್ಟಕ್ಕೂ ಕರ್ಮಭೂಮಿಯಾದ ಭರತಖಂಡವೇ ಬುನಾದಿ.

ಅಂದಮೇಲೆ ಭರತಖಂಡವು ಕರ್ಮಕ್ಷೇತ್ರವೇ ಹೌದು. ಅಥವಾ ಒಂದು ಪುಣ್ಯಕ್ಷೇತ್ರ. ಹಾಗೂ ಪವಿತ್ರಕ್ಷೇತ್ರವು. ಇಂಥ ಕ್ಷೇತ್ರದಲ್ಲಿ ಜನ್ಮತಾಳಿ ಮನುಷ್ಯತ್ವವನ್ನು ಪಡೆದು ಆತ್ಮಕಲ್ಯಾಣ ಮತ್ತು ಲೋಕಕಲ್ಯಾಣ ಈ ಉಭಯಕಲ್ಯಾಣಗಳನ್ನು ಸಾಧಿಸಿಕೊಂಡು ಅಮರರಾದ ಮಹಾವಿಭೂತಿಗಳ ನಾಮಮಾಲೆಯು ಬಹು ಲಂಬವಾಗಿದೆ. ಭಗವಾನ್ ಬುದ್ಧ, ಸಾಕ್ರೆಟೀಸ್ ಏಸುಕ್ರಿಸ್ತ, ದಯಾನಂದ ಸರಸ್ವತಿಗಳು, ರಾಮಕೃಷ್ಣ ಪರಮಹಂಸರು, ಸ್ವಾಮಿ ವಿವೇಕಾನಂದರು, ಸ್ವಾಮಿರಾಮತೀರ್ಥರು, ಮಹಾತ್ಮಾ ಗಾಂಧಿ, ಬೆಂಜ ಮಿನ್ ಫ್ರಾಂಕಲಿನ್, ಲಿಂಕನ್, ಕಬೀರ್ ಮುಂತಾದವರು. ಇವರೇ ತತ್ವಜ್ಞಾನಿಗಳು. ಸುವರ್ಣಾಕ್ಷರಗಳಲ್ಲಿ ಲೇಖನೀಯವಾದ ಇಂಥ ಮಹಾ ವಿಭೂತಿಗಳ ನಾಮಮಾಲೆಯಲ್ಲಿ ಪ್ರಥಮತಃ ಸೇರಬಹುದಾದ ಮಹಾತ್ಮಾ ಬಸವೇಶ್ವರನ ಸುಗೃಹೀತ ನಾಮವೊಂದೆಂಬುದು ಚಿರಸ್ಮರಣೀಯ ಹಾಗೂ ಬಹು ಜನಸ್ಮರಣೀಯ. ಅಷ್ಟೇಕೆ ಲೋಕಸ್ಮರಣೀಯವೆಂದರೆ ತಪ್ಪಾಗಲಾರದು.

ಈ ಮಹಾಪುರುಷನು ಅವತರಿಸಿ ಸಮಾಜದಲ್ಲಿ ಕೈಗೊಂಡ ಕಾರ್ಯ ಕ್ಷೇತ್ರ ಅತಿ ವಿಶಾಲವಾದುದು. ಸ್ವಕೀಯ ಸಮಾಜಕ್ಕೇ ಅಲ್ಲ ಪರಕೀಯ ಸಮಾಜ ಅಥವಾ ಇಡೀ ಜನಾಂಗದ ಕಲ್ಯಾಣವನ್ನು ಎಸಗುವುದೇ ಈತನ

ವಿಶಾಲ ಕಾರ್ಯಕ್ಷೇತ್ರ. ಈ ಕ್ಷೇತ್ರದಲ್ಲಿ ಆತನ ಆತ್ಮ ಮತ್ತು ಲೋಕ ಕಲ್ಯಾಣ ಈ ಉಭಯ ಕಲ್ಯಾಣಕಾರಕ ಕಾರ್ಯಗಳನ್ನು ಸ್ಥೂಲತಃ ವಿಚಾರಮಾಡೋಣ,

ಕನ್ನಡನಾಡು ಸುಮಾರು ೧೧-೧೨ನೇ ಶತಮಾನದಲ್ಲಿ ಅನೇಕ ಕ್ಷೇತ್ರ ಗಳಲ್ಲಿ ಕ್ರಾಂತಿಗೆ ನೆಲೆವೀಡಾಗಿತ್ತು. ಅದರಲ್ಲಿ ಮುಖ್ಯವಾದವು ಸಾಹಿತ್ಯ ಕ್ಷೇತ್ರ ಮತ್ತು ಧಾರ್ಮಿಕಕ್ಷೇತ್ರ. ಹಿಂದೂ ಸಮಾಜದಲ್ಲಿ ಸ್ವಾರ್ಥಪರತೆ, ಉಚ್ಚನೀಚ ಭಾವನೆ, ದ್ವೇಷ, ಅಸೂಯಾದಿಗಳು ತಾಂಡವನ್ನಾಡುತ್ತಿದ್ದುವು. ವೈದಿಕಮತೀಯ ಕೆಲವು ಧಾರ್ಮಿಕ ಶಿರೋಮಣಿಗಳು ಕರ್ಮಕಾಂಡಕ್ಕೆ ಪ್ರಾಶಸ್ತ್ಯ ಕೊಟ್ಟು ಯಜ್ಞಯಾಗಾದಿಗಳಲ್ಲಿ ಪ್ರಾಣಿವಧೆ ಮುಂತಾದುವನ್ನು ಆಚರಿಸುತ್ತಿದ್ದರು. ಅಲ್ಲದೆ ವೈದಿಕ ಧರ್ಮದ ಹೆಮ್ಮೆಯಿಂದ ನಾನಾ ದೇವತೆಗಳ ಪೂಜೆ ಹರಕೆ ಮುಂತಾದವು ನಡೆಯುತ್ತಿದ್ದುವು. ಅಷ್ಟೇ ಅಲ್ಲದೆ ಜನತೆಯ ಉಚ್ಚನೀಚ ಭಾವನೆಯಿಂದ ದೇಶವೇ ಅಧೋಗತಿಗಿಳಿ ಯುವ ಸಂಭವ ಬಂದಿತು. ಅದರಲ್ಲೂ ಕೆಲವು ಆಗಮಿಕರು ಸ್ವಾರ್ಥತೆ ಯಿಂದ ಜನತೆಯಲ್ಲಿ ಮೌಢ್ಯವನ್ನು ಹರಡಿ ನಾವೇ ಸಮಾಜದಲ್ಲಿ ಗಣ್ಯ ವ್ಯಕ್ತಿ ಜಾತೀಯರೆಂದು ಪ್ರಚಾರ ಮಾಡತೊಡಗಿದರು. "ಚಾತುರ್ವರ್ಣ್ಯಂ ಮಯಾ ಸೃಷ್ಟಂ ಗುಣಕರ್ಮವಿಭಾಗಶಃ" ಎಂಬ ಗೀತೋಕ್ತಿಯನ್ನೆ ಮರೆತು ಜನ್ಮತಃ ಬ್ರಾಹ್ಮಣರೆಂದೇ ಪರಿಗಣಿಸುತ್ತಾ ಬಂದರು. "ಜನ್ಮನಾ ಜಾಯತೆ ಶೂದ್ರಃ ಕರ್ಮಣಾ ದ್ವಿಜ ಉಚ್ಯತೆ" ಎಂಬುದು ಅವರ ಬುದ್ಧಿಗೆ ಗೋಚರ ವಾಗದಿದ್ದುದು ಅವರ ಪಾಂಡಿತ್ಯದ ಕುರುಹು.

ಅರ್ಥವಿಲ್ಲದ ಅರ್ಥಾತ್ ಶಬ್ದಪ್ರಧಾನವಾದ ಮಂತ್ರವನ್ನು ಉಚ್ಚ ರಿಸುತ್ತಾ ಸ್ವೇಚ್ಛಾಚಾರಿಗಳಾಗಿ ನಡೆಯುತ್ತಾ ಬಂದರು. ಇದರಿಂದ ಜನ ತೆಯು ತಮ್ಮ ಮೌಢ್ಯದಿಂದ ವೈದಿಕರಿಗೆ ಹಿಮ್ಮೇಳದಂತೆ ನಡೆಯಲು ಪ್ರಾರಂಭಿಸಿತು. "ಅಂಧಕನ ಅಂಧಕನು ಹಿಡಿದಂತೆ ಇಬ್ಬರೂ ಹೊಲಬು ಗೆಟ್ಟರೂ ಕಾಣಾ ರಾಮನಾಥ" ಎಂಬ ಈ ಅಮೃತವಾಣಿಯು ಜನತೆಗೆ ರುಚಿಸದಿರಲು ಸಹವಾಸ ದೋಷವೇ ಕಾರಣವಾಗಿರಬೇಕಲ್ಲವೆ?

ಅಂತೆಯೇ ವೇದಕಾಲದಲ್ಲಿ ಮಹಿಳೆಯರ ಸ್ಥಿತಿ ಉತ್ತಮಗೊಂಡಿತ್ತು ಆಗ ಜನರು ನಿಸ್ವಾರ್ಥತೆಯಿಂದ ಸಂಘಜೀವಿಗಳಾಗಿಯೂ ಧಾರ್ಮಿಕರ್ರಾ

ಗಿಯೂ ಇದ್ದರು. ಮಾನವ ಜೀವನದ ಪ್ರತಿ ಸ್ವಾತಂತ್ರ್ಯವೂ ಪ್ರತಿಯೊಬ್ಬ ರಿಗೂ ಮೀಸಲಾಗಿತ್ತು. ಮಹಿಳೆಯರಂತೂ ಅವರವರ ಸ್ಥಾನಮಾನಗಳನ್ನು ಅವರು ಸಂಪಾದಿಸಿಯೇ ಇದ್ದರು.

ವೇದಗಳ ಮಂತ್ರತಂತ್ರಗಳಿಗೆ ಯಜ್ಞಯಾಗಾದಿಗಳು ಪ್ರಾಧಾನ್ಯ ವಷ್ಟೆ. ಇಂದು, ದಕ್ಷಿಣಾ, ಯಮೀ, ಶಚಸೀ, ಜಲಹು ಮುಂತಾದ ಮಹಿ ಳೆಯರೇ ಮಂತ್ರಗಳನ್ನು ತಯಾರಿಸುತ್ತಿದ್ದರು. ಅವುಗಳಿಗೆ ಮುಖ್ಯವಾದ ಯಜ್ಞಯಾಗಾದಿಗಳನ್ನು ಅವರೇ ನೆರವೇರಿಸುತ್ತಿದ್ದರು. ಅವರೇ ಹೋತೃ ಉದ್ಗಾತೃ, ಅಧ್ವರ್ಯು ಮತ್ತು ಬ್ರಹ್ಮ ಈ ಋತ್ವಿಜರೇ ಆಗುತ್ತಿದ್ದರು. ಕರ್ಮಗಳನ್ನು ವೇದೋಕ್ತವಾಗಿ ಸ್ವತಃ ಆಚರಿಸುತ್ತಿದ್ದರು. ಅಷ್ಟೇ ಅಲ್ಲವೆ "ಪುರಾ ನಾರೀಣಾಂ ಮೌಂಜೀ ಬಂಧನಮಿಷ್ಯತೆ" ಎಂಬಂತೆ ಅವರಿಗೆ ಉಪ ನಯನಾದಿ ಬ್ರಾಹ್ಮಣ್ಯ ಸಂಸ್ಕಾರಗಳೂ ಸಹ ಇದ್ದುವು. ಅಂದಮೇಲೆ ಈ ಉಪನಯನ ಸಂಸ್ಕಾರವು ವೇದಾಧಿಕಾರಕ್ಕೆ ಅಥವಾ ವೇದಾಧ್ಯಯನಕ್ಕೆ ಮೂಲ. ಈ ಸಂಸ್ಕಾರ ಸಂಸ್ಕೃತರಿಂದವರಿಗೆ ಯಜ್ಞಯಾಗಾದಿಗಳನ್ನು ಶಾಸ್ತ್ರೋ ಕ್ತವಾಗಿ ನೆರವೇರಿಸಲು ಅಧಿಕಾರವಿತ್ತು. ಈ ಕರ್ಮಕ್ಕೆ ಮೂಲಭೂತವಾ ದುವು ಮಂತ್ರತಂತ್ರಗಳು. ಇವುಗಳನ್ನು ರಚಿಸುತ್ತಿದ್ದವರೇ ಮಹಿಳೆಯರೆಂದು ಹಿಂದೆಯೇ ತಿಳಿಸಿದೆ.

ಈ ಅಧಿಕಾರ ಕ್ರಮೇಣ ಕಡಿಮೆಯಾಯಿತು. ಬರಬರುತ್ತಾ ವಿಶೇಷ ಧರ್ಮಕರ್ಮಗಳನ್ನು ಮಾಡುವ ಸಂದರ್ಭದಲ್ಲಿ ಅವರಿಗೆ ಅಧಿಕಾರ ತಪ್ಪಿತು. ಯಜ್ಞಯಾಗಾದಿಗಳಲ್ಲಿ ತಪ್ಪದೆ ನಡೆಯಬೇಕಾದ ಸುರಾಪಾನ, ಪ್ರಾಣಿ ಹಿಂಸೆ ಮುಂತಾದವು ಹೆಂಗಸರಿಗೆ ರುಚಿಸದಿರುವುದೇ ಅಧಿಕಾರ ಹಾನಿಗೆ ಕಾರಣ. ತಾಯಿತಂದೆಗಳಿಗೆ ಮಕ್ಕಳಲ್ಲಿ ಪ್ರೀತಿಯಿದ್ದರೂ ವಿಶೇಷತ: ತಾಯಿಯ ಪ್ರೀತಿಯೇ ಪ್ರೀತಿಯು ಮಕ್ಕಳ ಮೇಲೆ ಎಂಬುದು ಸಾರ್ವಜನಿಕರ ಅನುಭವ ವಷ್ಟೆ. ಮಕ್ಕಳನ್ನು ಪಡೆದು ಪ್ರೀತಿಯಿಂದ ಸಾಕುವ ಅವರ ಮೇಲೆ ದಯೆ ಯನ್ನು ತೋರಿಸುವ ಮಹಿಳೆಯರು ಪ್ರಾಣಿಹಿಂಸೆಯನ್ನು ಹೇಗೆ ತಾನೆ ಸಹಿಸುವರು ? ಸುರಾಪಾನವಂತೂ ಅವರ ಸ್ವಪ್ನಕ್ಕೂ ಬರುವಂತಿಲ್ಲ. ಅದ ರಲ್ಲಿ ತುಂಬಾ ಜುಗುಪ್ಸೆ. ಅಂತು ಇವೆರಡು ಕಾರ್ಯಗಳು ಅವರಿಗೆ ರುಚಿ ಸಲಿಲ್ಲ. ಇವು ಮುಖ್ಯವಾಗಿ ನಡೆಯಬೇಕಾದ್ದು ಯಜ್ಞಯಾಗಾದಿಗಳಲ್ಲಿ. ಅವಲ್ಲದೆ ಅದಿಲ್ಲ. ಅಂದಮೇಲೆ ಅದನ್ನು ನಡೆಸಲು ಮನಗೊಡದ ಮಹಿ

ಳೆಯರು ಆ ಕರ್ಮದಲ್ಲಿ ಅಯೋಗ್ಯರು. ಯಜ್ಞಯಾಗಾದಿಗಳಲ್ಲಿ ಅರ್ಹತೆ ಯಿಲ್ಲದಿದ್ದರೆ ವೇದಾಭ್ಯಾಸಕ್ಕೂ ಅರ್ಹತೆಯಿಲ್ಲ. ಅಧಿಕಾರವೂ ಇಲ್ಲ. ವೇದವು ಧರ್ಮಮೂಲವಷ್ಟೆ. ವೇದಕ್ಕೆ ಹೊರಗಾದ ಮೇಲೆ ಧರ್ಮಕ್ಕೂ ಹೊರಗು. ಇಷ್ಟೆಲ್ಲ ಅವರ ಮೇಲೆ ಬಿದ್ದ ಪಾಪ. ಆದ್ದರಿಂದ ಅವರು "ಪಾಪಯೋನಿ"ಗಳು. ಪಾಪದ ಹಾದಿಯೇ ಮಹಿಳೆಯರ ಹಾದಿ. ಪಾಪವಿಮುಕ್ತರಾಗಬೇಕಾದರೆ ಪತಿಸೇವೆಯೇ ನಿದಾನ. (ನಿದಾನಂತ್ವಾದಿ ಕಾರಣಂ ಅಮರಸಿಂಹಃ) ಆತನ ಉಪದೇಶದಂತೆ ಅವರು ನಡೆಯಬೇಕು. ಗುಲಾಮರಂತೆ ಸಂಸಾರ ಮಾಡಬೇಕು. ಉಪದೇಶವು ಸನ್ಮಾರ್ಗಕ್ಕೊಯ್ಯಲಿ. ಅಥವಾ ಅಸನ್ಮಾರ್ಗಕ್ಕೊಯ್ಯಲಿ. ಅದನ್ನು ಅವಳು ಕಾಯೇನ ವಚಸಾ ಮನಸಾ ಆಚರಿಸಲೇ ಬೇಕು. ಮೀರಿದರೆ ಅವಳಿಗೆ ಅಧೋಗತಿ. ಆಗ ಅವರಿಗೆ ನಮ್ಮ ಜನ್ಮವೇ ಕಾಯಿತೊ ? "ಇಹಲೋಕ ದೂರನ ಪರಲೋಕ ದೂರನ ನನ್ನನ್ನೇಕೆ ಹುಟ್ಟಿಸಿದೆ. ಎನಗಾಗಿ ಗಿಡಮರಾದಿಗಳಿಂಲಿಲ್ಲವೆ", ಶರಣರ ವಚನವನ್ನು ಅವರು ಹಾಡಲೇಬೇಕು. ಆಗ ಧರ್ಮದ ಸಮಾಧಾನೋಕ್ತಿ. "ಪ್ರಜಾಯೈಗೃಹ ಮೇಧಿನಾಂ ಅಥವಾ ಪುತ್ರಾರ್ಥೆ ಭಾರ್ಯಾ:....." ಎಂದು ಸಂತಾನಕ್ಕಾಗಿಯೇ ಸತಿಯೊಂದು ಸಿದ್ಧಾಂತವಾಯಿತು.

ಸಂತಾನಕ್ಕೆ ಸದ್ವಿದ್ಯಾ ದಾನ ಮಾಡುವರಾರು ಎಂಬ ಪ್ರಶ್ನೆಗೆ ಉತ್ತರ ಎಲ್ಲೂ ಇಲ್ಲ. ಮಕ್ಕಳಿಗೆ ಹೀಗೆ ಬೋಧಿಸಬೇಕು ? ಆಹಾರವಾವುದು ವಯೋನುಗುಣವಾಗಿ ? ಉಡಿಗೆತೊಡಿಗೆಗಳಾವುವು ? ಶಿಕ್ಷಣವಾವುದು? ಇವೆಲ್ಲಕ್ಕೂ ಜನ್ಮವಿತ್ತ ದೇವರು ಅನ್ನವೀಯಲಾರನೇ? ನವಿಲಿಗೆ ಕುಣಿಯುವುವನ್ನು, ಮೀನಿಗೆ ಈಸುವುದನ್ನು ಹಕ್ಕಿಗೆ ಹಾರುವುದನ್ನು ಕೋಗಿಲೆಗೆ ಹಾಡುವುದನ್ನು ಕಲಿಸಿದವರಾರು ? ಇದಿಷ್ಟು ಶಿಕ್ಷಣದ ವಿಷಯದಲ್ಲಿ ಧರ್ಮದ ಸಮಾಧಾನಗಳು. ಮಕ್ಕಳ ಪೋಷಣೆ ಮತ್ತು ಶಿಕ್ಷಣದಲ್ಲಿ ಆವ ಗ್ರಂಥಗಳು ಜನ್ಮವೆತ್ತಲಿಲ್ಲ. ಅಂದಮೇಲೆ ಮಹಿಳೆಯರು ಪುರುಷರ ಕೇವಲ ನೀಚ ಸುಖಾಭಿಲಾಷೆಗಳಿಗಾಗಿಯೇ ಮೀಸಲು. ಹಾಗೆನ್ನಲು ಧೈರ್ಯ ಸಾಲದು. ಅದಕ್ಕಾಗಿ ಧರ್ಮದ ಸಮಾಧಾನ ಪುತ್ರಾರ್ಥೆ ಭಾರ್ಯಾ.... ಎಂಬುವುದು. ಒಟ್ಟಿನಲ್ಲಿ ಯಜ್ಞಯಾಗಾದಿಗಳಲ್ಲಿ ಸುರಪಾನ ಪ್ರಾಣಿಹಿಂಸೆ ಮುಂತಾದ ಅಸಹ್ಯಕರವಾದ ಕಾರ್ಯಗಳಲ್ಲಿ ಮಹಿಳೆಯರು ಮನಮಾಡಿದ್ದರೆ ಈ ದುಃಸ್ಥಿತಿಯು ಅವರಿಗೆ ಅನ್ವಯಿಸುತ್ತಿರಲಿಲ್ಲ. ಅವರೂ ಸಹ ಅವರ ಸ್ಥಾನಮಾನಗಳನ್ನು ಉಳಿಸಿಯೇ ಉಳಿಸಿಕೊಳ್ಳುತ್ತಿದ್ದರು. ವೇದ

ಗಳ ಕಾಲಕ್ಕೂ ಈಗಿನ ಕಾಲಕ್ಕೂ ಮಹಿಳೆಯರ ಸ್ಥಿತಿ ಹೇಗಿದೆಯೆಂಬುದನ್ನು ವಿವರಿಸಲಾಯ್ತು. "ದೇವೋ ದುರ್ಬಲ ಘಾತಕಃ" ಅಲ್ಲವೆ!

ಈ ಸಮಯದಲ್ಲಿ ಬೌದ್ಧ ಧರ್ಮವು ಉದಯಿಸಿತು. ಅಲ್ಲಿಯ ವರೆಗೆ ಸ್ತ್ರೀಯರೂ ಶೂದ್ರರೂ ಬ್ರಾಹ್ಮಣ ಕ್ಷತ್ರಿಯ ವೈಶ್ಯರ ಅತ್ಯಾಶೆಗಳ ಆಹುತಿಗಳೇ ಆಗಿದ್ದರು. ಬುದ್ಧನು ಸನಾತನ ಧರ್ಮದ್ವೇಷಿಯಾದನು. "ಸ್ವಾತಂತ್ರ್ಯವು ಒಂದು ಜನಾಂಗದ ಸ್ವತ್ತಲ್ಲ. ಎಲ್ಲರಿಗೂ ಅದರಲ್ಲಿ ಭಾಗವುಂಟು. ನಿಸ್ವಾರ್ಥ ತೆಯಿಂದ ಸಮಾಜದಲ್ಲಿ ಸಾಮಾಜಿಕನು ವ್ಯವಹರಿಸಬೇಕು. ಆತನ ವ್ಯವ ಹಾರದಿಂದ ಯಾರೊಬ್ಬರ ಹಕ್ಕುಬಾಧ್ಯತೆಗಳಿಗೆ ಧಕ್ಕೆ ದೊರೆಯಬಾರದು. ಸತ್ಯ ಪ್ರೇಮ ಸಹನೆ ಮತ್ತು ದಯೆ ಮುಂತಾದವುಗಳೇ ಧರ್ಮದ ತಳ ಹದಿ. ಈ ಧರ್ಮವೇ ಉತ್ತಮವಾದ ಧರ್ಮ ಇದನ್ನು ಆಚರಿಸುವವರೇ ಧಾರ್ಮಿಕರು. ಅವರೇ ಉಚ್ಚ ಜಾತಿಯವರು. ಬ್ರಾಹ್ಮಣರೇ ಅಲ್ಲ. ಯಾರಾ ದರೂ ಆಗಲಿ. ಇಂಥ ಸದಾಚಾರಸಂಪನ್ನತೆಯಿಂದ ಯುಕ್ತನಾದವನೇ ಕುಲೀನ" ಮುಂತಾಗಿ ಸಾರಿದನು. ಇದು ಸನಾತನಿಗಳಿಗೆ ರುಚಿಸಲಿಲ್ಲ. ಸ್ವಾರ್ಥಿಗಳಷ್ಟೆ ಅವರು! ಅವರ ಬೂಟಾಟಿಕೆ ನಡೆಯದೆ ನಿಲ್ಲಲು ಪ್ರಾರಂಭಿ ಸಿತು. ಆಗ ಜನರು ಬೌದ್ಧಮತವನ್ನು ಗುಂಪುಗುಂಪಾಗಿ ಸೇರಲು ಪ್ರಾರಂಭಿ ಸಿದರು. ಅಂತು ಬುದ್ಧನ ಕಾಲದಲ್ಲಿ ಪ್ರಾಣಿವಾತ್ಸಲ್ಯ. ಸದಾಚಾರ ಸನ್ನೀತಿ ಸದ್ಧರ್ಮ ಸಚ್ಛೀಲ ಮುಂತಾದ ಸದ್ಗುಣಗಳು ನೆಲೆಗೊಂಡುವು. ಅಂತೆಯೇ ಸಮಾಜದಲ್ಲಿ ಸೂಕ್ತ ಬದಲಾವಣೆಗಳು ಅಂಕುರಿಸಿ ಕುಸುಮಿಸಿ ಫಲಿಸಿ ದುವೆಂದೂ ಹೇಳಬಹುದು.

ಜೈನಮತವೂ ಹಿಂದೂಮತಕ್ಕೆ ಜ್ಞಾನದಾಯಕವಾಗಿಯೇ ಇತ್ತು. ಅದರ ಮಹೋನ್ನತ ತತ್ವ. "ಅಹಿಂಸಾ ಪರಮೋ ಧರ್ಮ" ಎಂಬುದು. ಈ ತತ್ವವು ಜನತೆಯಲ್ಲಿ ಒಂದು ವಿಧವಾದ ಪರಿಣಾಮವನ್ನು ನೀಡಿತು. ಜನ ತೆಯ ಜ್ಞಾನದ ಆಳವು ತಿಳಿಯಾಯಿತು. ಸ್ವತಂತ್ರವಾದ ಜ್ಞಾನವು ಹರ ಡಿತು. "ಮೂಢಃ ಪರಪ್ರತ್ಯೆಯನೇಯ ಬುದ್ಧಿಃ" ಎಂಬಂತೆ ಆಗಲು ಅವ ಕಾಶ ದೊರೆಯಲಿಲ್ಲ. ಸನ್ನಿವೇಶ ಸಹವಾಸ ಹಾಗಿರಲಿಲ್ಲ. ಕೊನೆಗೆ ಜೈನ ಮತದಲ್ಲೂ ಚಾತುರ್ವರ್ಣದ ಬೀಜವು ಬಿದ್ದಿತು. ಅದು ಅಂಕುರಿಸಲು ಅನೇಕ ಪೋಷಕರು ಅವರಲ್ಲಿಯೇ ಮೂಡಿದರು. ಇದಕ್ಕೆ ಮಾರು ಹೋದ ಪ್ರತಿಯೊಬ್ಬರೂ ಸ್ವತಂತ್ರ ವಿಚಾರ, ಸ್ವತಂತ್ರ ವಿಮರ್ಶೆ, ಸ್ವತಂತ್ರ ಆಚಾರ

ಸರ್ವಧರ್ಮ ಸಮಾನತಾದಿ ಸದ್ಗುಣಗಳು ಅವರ ಗಮನಕ್ಕೆ ಬರಲಿಲ್ಲ. ಸಮಾಜವು ಹೊಡೆಯಿತು. ಮೌಢ್ಯ ಸರ್ವೋದಯವಾಯಿತು. ಅದರ ಫಲಿತಾಂಶವೇ ಅನೀತಿಯ ಅನ್ಯಾಯದ ಉಗಮ.

ಜನತೆಯಲ್ಲಿ ನಿಜವಾದ ಧರ್ಮದ ತಿರುಳು ಅದರ ಸ್ವರೂಪ, ಸಾಧನಾ ಮಾರ್ಗ ಇವೊಂದನ್ನೂ ಕಾಣದೆ ಅಂಧಕಾರ ಹರಡಿತು. ಆದ್ದರಿಂದ ಅವರ ಮುಂದಿನ ಗುರಿಯೇನೆಂಬುದು ಅನ್ಯರಿಗೆ ಗೋಚರವಾಗಲಿಲ್ಲ. ಮಹಿಳೆಯರಂತೇ ಪುನಃ ಅವರ ಗುಲಾಮಗಿರಿಯನ್ನು ಅವರು ಅನುಭವಿಸಲೇ ಬೇಕಾಯಿತು. ಸಂತಾನಕ್ಕಾಗಿ ಸತಿಯರೆಂಬುದನ್ನು ಪುನಃ ಅವರು ಅರಿತರು.

ಬರಬರುತ್ತಾ ಜನತೆಯು ದೃಢಭಕ್ತಿ, ದೃಢನಿಷ್ಠೆ ಮುಂತಾದ ಸಲ್ಲಕ್ಷಣಗಳಿಂದ ಆವನಾದರೂ ಒಬ್ಬ ದೇವರನ್ನೆ ನಂಬಿ ಪೂಜಿಸಿ ಸದ್ಗತಿಯನ್ನು ಪಡೆಯಬೇಕೆಂಬ ಗೊಂದಲಕ್ಕೆ ಸಿಕ್ಕಿತು. ಮೌಢ್ಯ ಮಲಿನವಾಗುತ್ತಾ ಬಂದಿತು. ಅದೇನು ಕಾಲಕರ್ಮದ ಸಂಯೋಗವೊ ! ಇಂಥ ಒಂದು ಪರ್ವ ಕಾಲದಲ್ಲಿಯೇ ಮಹಾತ್ಮಾ ಬಸವೇಶ್ವರನು ಅವತಾರ ಮಾಡಿದನು. ಈತನು ಅವತಾರ ಪುರುಷನು. ಜನತೆಯ ಉದ್ಧಾರಕ್ಕಾಗಿಯೇ ಮಾನವ ಲೋಕದಲ್ಲಿ ಎತ್ತಿದ ಪವಿತ್ರವಾದ ಜನ್ಮ. ಅದಕ್ಕಾಗಿಯೇ ಈ ಮರ್ತ್ಯಲೋಕ ಕರ್ಮಭೂಮಿ. ಇಲ್ಲಿಯ ಕರ್ಮ ಸರ್ವತೋಮುಖವಾಗಿ ಎಲ್ಲರಿಗೂ ಉಪಯೋಗವಾಗಬೇಕು. ಕೇವಲ ಒಂದೇ ಜನಾಂಗದ ಸ್ವತ್ತಲ್ಲ. ಅದು ಸರ್ವರಿಗೂ ಸಾಮಾನ್ಯವಾದುದು. ಈ ತತ್ವವೆ ಮೂರುಮತ್ತಾಗಿ ಆವಿರ್ಭವಿಸಿತು. ಆ ಮೂರ್ತಿಯೇ ಬಸವೇಶ್ವರ ಮೂರ್ತಿ. ಆ ಮೂರ್ತಿಯು ಇಡಿ ಜನತೆಯನ್ನು ಉದ್ಧರಿಸಿ ಜನತೆಯನ್ನು ಸ್ವತಂತ್ರಾಚಾರ, ಸ್ವತಂತ್ರ ವಿಚಾರ, ಸ್ವತಂತ್ರ ವಿಮರ್ಶೆಗಳ ಕಡೆ ಗಮನ ಕೊಡುವಂತೆ ಮಾಡಿದನು. ಆಗ ಜನತೆಯು ಕಣ್ಣು ತೆರೆಯಿತು. ಅದಕ್ಕೆ ಒಳ್ಳೆಯ ದಾರಿ ಸಿಕ್ಕಿತು. ಅದೇ ದಾರಿಯಲ್ಲಿ ನಡೆದು ತನ್ನ ಸತ್ಪಥವನ್ನು ಸೇರಿತು. ಇದಿಷ್ಟನ್ನು ಸಾಧಿಸಬೇಕಾದರೆ ಆತನ ಕಾರ್ಯಕ್ಷೇತ್ರ ಬಹು ವಿಶಾಲವಾಗಿರಬೇಕಲ್ಲವೆ ! ಆದಷ್ಟು ಮಟ್ಟಿಗೆ ಯಥಾಮತಿ ಆ ಕ್ಷೇತ್ರವನ್ನು ಪರಿಶೀಲಿಸೋಣ.

## ಕೊಲ್ಲುವನೇ ಮಾದಿಗ

ಜನ್ಮದಿಂದ ಮಾತ್ರ ಮನುಷ್ಯನ ಜಾತಿಯನ್ನು ತೀರ್ಮಾನ ಮಾಡಬಾರದು. ಅದು ಸರಿಯಲ್ಲ. ಅದು “ ಗತಾನುಗತಿಕೋ ಲೋಕಃ ” ಆವ

ಜಾತೀಯನಾದರೂ ಆತನಲ್ಲಿ ಗುಣಶೀಲಗಳು ಉತ್ತಮವಾದುವಿದ್ದರೆ ಆತನೇ ಉತ್ತಮ ಜಾತೀಯ, ಕುಲೀನ. ವರ್ಣಾಶ್ರಮಗಳಲ್ಲಿ ಉತ್ತಮ ಜಾತಿಯಲ್ಲಿ ಜನಿಸಿದ್ದರೂ ಅವರ ಕರ್ಮವು ದುಷ್ಕರ್ಮವಾದರೆ ಆ ಕರ್ಮದಿಂದ ಜಾತಿಯ ತೀರ್ಮಾನವೇ ?

ಕೊಲ್ಲುವವನೇ ಮಾದಿಗ. ಆವ ಜಾತೀಯನಾದರೂ ಇಂಥ ಹೀನ ಕೃತ್ಯವನ್ನೆಸಗುವವನೇ ಮಾದಿಗನಲ್ಲವೆ ? ಅಂದರೆ ಪ್ರಾಣಿಗಳನ್ನು ಕೊಲ್ಲು ವವನು ಮಾದಿಗನೇ ವಿನಾ ಮಾದಿಗರ ಜಾತಿಯಲ್ಲಿ ಹುಟ್ಟಿ ಹೀನ ಕೃತ್ಯ ವನ್ನೆಸಗದಿರುವವನು ಹೇಗೆ ಮಾದಿಗನಾದಾನು? ಆಗಲಾರ. ಜಾಲಗಾರನು ಮೀನು ಮುಂತಾದ ಜಲಚರಪ್ರಾಣಿಗಳನ್ನು ವ್ಯಾಧನು ಮೊಲ ಮುಂತಾದ ಮೃಗಗಳನ್ನು ಹಿಂಸಕನು ಗೋ ಮುಂತಾದ ಪೂಜ್ಯ ಪ್ರಾಣಿಗಳನ್ನು ಹಿಂಸಿ ಸುವಾಗ ಮನೆಯಲ್ಲಿ ಬಂಧುಗಳು ಮಕ್ಕಳು ಮೇಲಾಗಿ ಮಡದಿಯು ಮಡಿದಾಗ ಮರುಗುವಂತೆ ಅವರೇಕೆ ಮರುಗಲಾರನು? ಇವರಲ್ಲಿ ಮಾತ್ರ ಪ್ರಾಣಗಳಿವೆ. ಪ್ರಾಣಿಗಳಲ್ಲಿ ಪ್ರಾಣವಿಲ್ಲವೆ ? ಪ್ರಾಣಿಗಳಿಗೆ ಅವುಗಳ ಪ್ರಾಣದ ಮೇಲೆ ಭಯವಿಲ್ಲವೆ? ಪ್ರತಿಯೊಬ್ಬರಿಗೂ ಪ್ರಾಣದ ಮೇಲೆ ಭಯವಿದ್ದಂತೆ ಕಿರ್ಯಗ್ಜಂತುಗಳಿಗೂ ಪ್ರಾಣದ ಮೇಲೆ ಭಯವುಂಟೇ ? ಉಂಟು. "ಮರ ಣವೇ ಮಹಾನವಮಿ." ಆದರೂ ಅಪಮೃತ್ಯು ಮರಣಲ್ಲ. ಅಷ್ಟೇ ಅಲ್ಲ. ಅದು ಮುಂದಿನ ಜನ್ಮದ ಬುನಾದಿ. ಅಂಥ ಮರಣಕ್ಕೆ ಅಂಜಲೇಬೇಕು. ಆವು ದಾದರೂ ರೋಗಗಳು ಜೀವನಿಗೆ ಅಂಟಿದಾಗ ಅವುಗಳನ್ನು ತಡೆಯಲಾ ರದೆ ಜೀವಿಯು ಜೀವ ತ್ಯಾಗ ಮಾಡಲು ಉದ್ದೇಶಪೂರ್ವಕವಾಗಿಯೇ ಪ್ರಯತ್ನಪಡಬಹುದು. ಪಡುವಾಗ ಆತನಿಗೆ ಈ ಆತ್ಮಹತ್ಯಾದೋಷವು. ಅದರಿಂದ ಪುನರ್ಜನ್ಮವು ಮೀಸಲೆಂಬುದು ಗೋಚರವಾಗಿರಬೇಕು. ಆದ್ದ ರಿಂದ ಅವರು ಪ್ರಾಣತ್ಯಾಗ ಮಾಡಲು ಹಿಂಜರಿಯಬಹುದು. ಪ್ರಾಣತ್ಯಾಗ ಮಾಡಿಕೊಳ್ಳಲು ಅನೇಕ ಮಾರ್ಗಗಳಿವೆ. ನೀರಿನಲ್ಲಿ ಬಿದ್ದು ಅಥವಾ ಅಗ್ನಿಯಲ್ಲಿ ಬಿದ್ದು ಅಥವಾ ಮತ್ತಾವುದಾದರೊಂದು ವಿಷಪಾನ ಅಥವಾ ವಿದ್ಯುಚ್ಛಕ್ತಿಯ ಸಹಾಯದಿಂದ ದೇಹತ್ಯಾಗ ಮಾಡಿಕೊಳ್ಳಬಹುದು. ಅವ ಕಾಶವೂ ಉಂಟು. ಈ ದೋಷದಿಂದ ಜೀವನು ಮುಕ್ತನಾಗಲಿಲ್ಲ. ಜನ್ಮವೆತ್ತ ಲೇಬೇಕು. ಅದು ಆತನಿಗಾಗಿ ಕಟ್ಟಿಟ್ಟಿರುವ ಮೀಸಲುಬುತ್ತಿ.

ಅಂದಮೇಲೆ ಪ್ರಾಣಿಗಳನ್ನು ಕೊಂದು ಪುನ: ಜನ್ಮಾಂತರವನ್ನು ಪಡೆಯುವುದು, ಅಪಮೃತ್ಯುವಿಗೆ ಸಿಕ್ಕ ಪ್ರಾಣಿಗಳು ಜನ್ಮಾಂತರವನ್ನು

ಪಡೆಯುವುದು ಯಾವ ನ್ಯಾಯ? ಯಾವ ದೇವರಿಗೆ ಪ್ರೀತಿ? ಆತ್ಮ ಕಲ್ಯಾಣವೇ ಅಥವಾ ಲೋಕಕಲ್ಯಾಣವೇ? ಅಯ್ಯೋ! ಅಯ್ಯೋ!! "ಕಪಿ ತಾನು ಕೆಡುವುದಲ್ಲದೆ ವನವೆಲ್ಲವನ್ನು ಕೆಡಿಸುವುದಲ್ಲಾ" ಎಂಬ ಗಾದೆಗೆ ಸರಿಹೋಗುವುದೆ?

"ಗುಣಾಃ ಪೂಜಾಸ್ಥಾನಂ ಗುಣಿಷು ನ ಚ ಲಿಂಗ ನ ಚ ವಯ:" ಎಂಬ ಮಹಾಕವಿಯ ಮಾತು ಎಂಥ ಅಮೂಲ್ಯವಾದುದು? ಆತನ ಅನುಭವ ಆಳ. ಲೋಕಾನುಭವದ ಆಳ ಎಷ್ಟರ ಮಟ್ಟಿಗಿದೆ? ಗುಣಗಳು ಎಲ್ಲಿದ್ದರೇನು? ಅವು ಪೂಜ್ಯಗಳೆ. ಸದ್ಗುಣಗಳನ್ನು ಉಪಾರ್ಜಿಸಿ ಆಚರಿಸುತ್ತಿರುವ ಗುಣಿಗಳು ಲೋಕವಂದ್ಯರಲ್ಲವೆ! ಗುಣಿಗಳಾದರೂ ಇಂಥವರೇ ಆಗಬೇಕೆಂಬ ನಿಯಮವು ಇಲ್ಲವೇ ಇಲ್ಲ. ಅವರು ಮಹಿಳೆಯರಾಗಲಿ ಮಹನೀಯರಾಗಲಿ. ವ್ಯಕ್ತಿಗಳಲ್ಲಿಯೋ ಅಲ್ಲ. ವಯಸ್ಸಿನಲ್ಲಿಯೂ ಹಾಗೆಯೇ ಗುಣಿಗಳ ನಿರ್ದಿಷ್ಟತೆಯು ಇಲ್ಲ. ಚಿಕ್ಕವರಾದರೂ ಆಗಲಿ. ದೊಡ್ಡವರಾದರೂ ಆಗಲಿ. ಅವರಲ್ಲಿ ಗುಣಗಳು ಪ್ರಶಂಸನೀಯಗಳೆಂದರೆ ಸಾಕು. ವಯಸ್ಸಿನ ಮಾತೇಕೆ? ಯಾವ ವ್ಯಕ್ತಿಯಾಗಲೀ ಯಾವ ವಯಸ್ಕನಾಗಲೀ ಗುಣಿಯು. ಆತನಲ್ಲಿಯ ಗುಣಗಳು ಸನ್ಮಾನ್ಯವೆಂದಮೇಲೆ ಆ ವ್ಯಕ್ತಿ ಆ ವಯಸ್ಕನು ಆವ ಜಾತಿಯವನಾದರೂ ಆಗಿರಲಿ. ಎಂಬುದೇ ಶಿವಶರಣರು ಮಹಾಕವಿಗಳಿಗಿಂತ ಮುಂದೆ ಒಂದು ಹೆಜ್ಜೆ ಮುಂದು ವರಿದಿರುವುದು ಶಿವಶರಣರ ಅನುಭವದ ಆಳ. ಲೋಕಾನುಭವದ ಆಳ ಧಾರ್ಮಿಕರಿಗೆ ತಿಳಿದುಬರುತ್ತದೆ.

ಜಾತಿಯ ಭೇದವಂತೂ ಮನುಷ್ಯನನ್ನು ಇಂದಿನ ಕಾಲದಲ್ಲಿ ಬಹಳ ಬೇಜಾರಿಗೆ ಜುಗುಪ್ಸೆಗೆ ಕೊಂಡೊಯ್ದು ಆತನನ್ನು ಒಂದು ಗೊಂಡಾರಣ್ಯದಲ್ಲೋ? ಒಂದು ಗಾಢಾಂಧಕಾರದಲ್ಲೋ? ಚಿಂತಾಚಿತೆಯಲ್ಲೋ ಸಿಕ್ಕಿಸಿಬಿಟ್ಟಿದೆ. ಆತನಿಗೆ ನನ್ನನ್ನು ಪರಮಾತ್ಮನು ಏಕೆ ಹುಟ್ಟಿಸಿದನೆಂದೂ ಅನ್ನಿಸಿಬಿಟ್ಟಿದೆ. ನನಗಾಗಿ ಕಲ್ಲು, ಮರ ಅಥವಾ ಯಾವುದಾದರೂ ಒಂದು ವಿಧವಾದ ಹೀನ ಪ್ರಾಣಿಯ ಜನ್ಮವಾದರೂ ನನಗಾಗಿ ಮೀಸಲಾಗಿರಲಿಲ್ಲವೆ? ಎಂದು ಆತನ ಮನ ಯಾವಾಗಲೂ ನುಡಿಯುತ್ತಿರುತ್ತದೆ. ಆತನಿಗೆ ಸಮಾಜದಲ್ಲಿ ಸ್ಥಾನವಿಲ್ಲ. ಸಾಮಾಜಿಕ ನೈತಿಕ ಧಾರ್ಮಿಕ ಕಾರ್ಯಗಳಲ್ಲಿ ಅಡಿಯಿಡುವ ಹಾಗಿಲ್ಲ. ಇದಿಷ್ಟು ಆತನ

ಮೇಲೆ ಉಚ್ಚ ಜಾತೀಯರೆಂಬುವರು ಹೆಮ್ಮೆಯಿಂದ ವಿಧಿಸಿರುವ ಕರಾಳ ಶಾಸನ. ಅದನ್ನು ಮೀರಿದರೆ ಆತನಿಗೆ ಎಲ್ಲಾ ವಿಧದಲ್ಲೂ ಬಹಿಷ್ಕಾರ. ಅಷ್ಟೇ ಅಲ್ಲ, ಮುಂಡೆಯ ಮೇಲೆ ದಂಡ. ಇದು ಆತನ ಜಾತಿ ಮತ್ತು ಕಸಬುಗಳ ಅಪರಾಧವೆಂಬೋಣವೆ? ಅಥವಾ ಸನಾತನಿಗಳ ಸನಾತನ ಧರ್ಮದ ಅನುಭವದ ಅಳವೆ? ಇರಬೇಕು.

ಮಹಾತ್ಮಾ ಬಸವೇಶ್ವರನು ಜಾತಿಯ ಭೂತವನ್ನು ಹೊಡೆದು ಓಡಿಸಿದನು. ಕಸಬಿಗೆ ಅಥವಾ ವೃತ್ತಿಗೆ ಆತನು ವ್ಯವಹರಿಸುವ ಗೌರವಯುತವಾದ ಕಟ್ಟ ಕಾಯಕ. ಇದು ಆವುದಾದರೂ ಉತ್ತಮ ಕಾಯಕದಿಂದ ಮಾನವನ ಜಾತೀಯತೆಯನ್ನು ನಿರ್ಧರಿಸುವುದು ತಪ್ಪು. ಜಾತೀಯತೆಯ ವಿಭಾಗ ಪುರಾತನವಾದುದು. ಗೀತಾಯುಗಕ್ಕೆ ಸೇರಿದುದು. ಅದೂ ಸಹ ಗುಣಕರ್ಮ ವಿಭಾಗದಿಂದ ಚಾತುರ್ವರ್ಣ್ಯವು ಬೆಳೆಯಿತು. ಬಸವೇಶ್ವರನು "ಕಾಯಕವೇ ಕೈಲಾಸ" ಮುಂತಾಗಿ ಸಾರಿ ಕಾಯಕದ ಮಹತ್ತ್ವವನ್ನು ಬೋಧಿಸುತ್ತಾ ಬಂದನು. ಇದರಿಂದ ಕಾಯಕವಾವುದಾದರೂ ನಿಸ್ವಾರ್ಥತೆಯಿಂದ ಪ್ರತಿಫಲಾಪೇಕ್ಷೆಯಿಲ್ಲದೆ ನಡೆಯುತ್ತಾ ಬಂದು ಕಾಯಕದ ಸ್ಥಾನ ಮತ್ತು ಅದನ್ನು ನಡೆಸುವವನ ಘನತೆಯೂ ಮೇಲ್ಮಟ್ಟಕ್ಕೆ ಏರಿತು. ಆವ ಕಾಯಕ ಮಾಡಿದರೂ ಶಿವಭಕ್ತಿಸಂಪನ್ನರಾದವರೆಲ್ಲರೂ ಒಂದೆ. ಕಾಯಕದಲ್ಲಿ ಅವರಿಗಿದ್ದ ಅಭಿಮಾನ ಎಷ್ಟೆಂದು ಹೇಳಿದರೂ ತೀರದು. ಅವರು ಕಾಯೇನ ವಚಸಾ ಮನಸಾ ಸ್ವಾಗತಿಸುತ್ತಿದ್ದರು. ಕಾಯಕವು ಜನಜೀವನಕ್ಕೆ ಸಹಾಯಕವಾದುದೇ ಹೊರತು ಜನತೆಯ ಗೌರವವನ್ನು ಕಡಿಮೆಮಾಡುವುದಲ್ಲವೆಂಬುದನ್ನು ಎಲ್ಲರಿಗೂ ಸಾರಿದರು. ಕಾಯಕ ಮಾಡುವವನನ್ನು "ನಿನ್ನ ಕಾಯಕವಾವುದು? ನೀನು ಈ ಕಾಯಕವನ್ನು ಮಾಡುವುದರಿಂದ ನಿನ್ನ ಘನತೆ ಕಡಿಮೆ. ಅಷ್ಟೇ ಅಲ್ಲ ನಿನ್ನ ಜಾತಿಯು ಕೀಳಾದುದು. ನಿನಗೆ ಸಮಾಜದಲ್ಲಿ ಸ್ಥಾನವಿಲ್ಲ." ಎಂಬುದಾಗಿ ನುಡಿದವರು ಅವರಲ್ಲ. ಅವರು ಎಲ್ಲಿಯೂ ಕಾಯಕವನ್ನು ಅಳಿದಿಲ್ಲ. ಅಷ್ಟೆ ಏಕೆ? ಕಾಯಕ ವಿಷಯವಾಗಿ ಯಾರನ್ನೂ ಬೆಸಗೊಂಡಿಲ್ಲ. ಅವರ ಅಮೃತವಾಣಿಯನ್ನೆ ನೋಡೋಣ. "ದೇವಸಹಿತ ಭಕ್ತ ಮನೆಗೆ ಬಂದರೆ ಕಾಯಕವಾವುದೆಂದು ಬೆಸಗೊಂಡೆನಾದರೆ ಆಣೆ. ನಿಮ್ಮಾಣೆ. ಭಕ್ತರಲ್ಲಿ ಕುಲವನರಿಸಿದರೆ ಕೂಡಲಸಂಗಮದೇವಾ ನಿಮ್ಮ ರಾಣಿವಾಸದಾಣೆ" ಅಯ್ಯೊ! ಶಿವ! ಶಿವ!! ರಾಣಿವಾಸದಾಣೆ. ಎಂಥ

ಆಣೆ. ಭಾಷೆ ಪ್ರಮಾಣ. ಅದು ಬಸವೇಶ್ವರನ ವಾಣಿ. ಆತನೇ ಮಹಾತ್ಮ. ಸಾಮಾನ್ಯನೇ? ಒಂದು ವೇಳೆ ನಡೆಯೊಂದು ನುಡಿಯೊಂದಾದರೂ ನುಡಿಯೊಂದು ನಡೆಯೊಂದಾದರೂ ಮಹಾತ್ಮನ ವಾಣಿಯಂತೆ ಕಾರ್ಯತಃ ಬರಬಾರದೇ ಆಚರಣೆ? ಅದರಲ್ಲೂ ಶರಣನ ವಾಣಿ. "ಋಷೀಣಾಂಪುನರಾದ್ಯಾನಾಂ ವಾಚಮರ್ಥೋನುಧಾವತಿ" ಎಂಬಂತೆ ನುಡಿಯಂತೇ ನಡೆಯು ಹಾಜರಾಗಬೇಕಲ್ಲವೆ?

ಅಂತೆಯೇ "ಕಾಸಿ ಕಮ್ಮಾರನಾದ. ಬೀಸಿ ಮಡಿವಾಳನಾದ. ಹಾಸನಿಕ್ಕಿ ಸಾಲಿಗನಾದ. ವೇದವನೋದಿ ಹಾರುವನಾದ. ಕುಲವೇನೋ? ಆವಂದಿರ ಕುಲವೇನೋ? ಕರ್ಣದಲ್ಲಿ ಜನಿಸಿದವರುಂಟೆ ಜಗದಲ್ಲಿ? ಸಕಲ ಜೀವಾತ್ಮರಿಗೆ ಲೇಸನೇ ಬಯಸುವ ನಮ್ಮ ಕೂಡಲಸಂಗನ ಶರಣರೇ ಕುಲಜರು." ಸಕಲರಿಗೂ ಲೇಸನ್ನೆ ಬಯಸುವವರಾರಾದರೂ ಆಗಲಿ ಅವರೇ ಕುಲಜರು. ಅವರೆಲ್ಲರೂ ಶಿವಭಕ್ತರೆಂದರೇ ಸಾಕು. ಕಾಯಕದ ವಿಷಯಬೇಕಿಲ್ಲ. ಕಾಯಕವಾವುದಾದರೇನು? ಅದೂ ಸಹ ಪರಮಾತ್ಮನ ಸೇವೆ. ನಿಸ್ವಾರ್ಥತಾ ಬುದ್ಧಿಯಿಂದ ಕೂಡಿದುದು. ಅದೇ ಪರಮಾತ್ಮನಿಗೆ ಉಚ್ಚವಾದ ಸೇವೆ. ಆತನೇ ಉತ್ತಮೋತ್ತಮನಾದ ಸೇವಕ. ನೀಚ ಜಾತಿಯಲ್ಲಿ ಹುಟ್ಟಿ ಆತನ ಕಾಯಕವು ನಿಯಮಬದ್ಧವಾಗಿದ್ದಲ್ಲಿ ಪರಮಾತ್ಮನ ಸಾಕ್ಷಾತ್ಕಾರವೇ ಅಲ್ಲಿ. ಇಂಥ ಉದಾಹರಣೆಗಳು ಎಷ್ಟೋ ಇವೆ. ಉದಾಹರಿಸಿದರೆ ಲೇಖನ ಲಂಬವಾದೀತು!

ಸರ್ವಜ್ಞನೂ ಸಹ ಸರ್ವಜ್ಞನೇ. ಆತನೂ ಸಹ ಜಾತಿಯ ಪೆಡಂಭೂತವನ್ನು ತೊಲಗಿಸಿದವರಲ್ಲಿ ಒಬ್ಬನೆಂದರೆ ತಪ್ಪಾಗಲಾರದು. ಆತನು ಒಳ್ಳೆ ಜ್ಞಾನಿ. ಲೋಕಾನುಭಾವಿ. ದೊಡ್ಡ ದೊಡ್ಡ ಕಾವ್ಯಗಳನ್ನು ರಚಿಸಿ ರಾಜಾಸ್ಥಾನದಲ್ಲಿ ಓದಿ ಅವರ ಕೃಪೆಗೆ ಪಾತ್ರರಾಗಿ ಅವರಿಂದ ದೊಡ್ಡ ದೊಡ್ಡ ಪ್ರಶಸ್ತಿ ಮುಂತಾದವುಗಳನ್ನು ಪಡೆದವನಲ್ಲ. ಒಬ್ಬ ದೇಶಸಂಚಾರಿ ಆತ ಆದ್ದರಿಂದಲೇ ಲೋಕಾನುಭಾವಿ. ಜನತೆಯ ಕುಂದು ಕೊರತೆಗಳನ್ನು ನೋಡಿ, ಹಕ್ಕುಬಾಧ್ಯತೆ ಮುಂತಾದವು ಅವರವರ ಯೋಗ್ಯತೆಗೆ ದೊರೆಯದಿದ್ದಾಗ ಅವುಗಳಿಗಾಗಿ ಹೋರಾಡುವ ಮಹಾ ವ್ಯಕ್ತಿ. ಗರ್ವಿಷ್ಠರಾದ ಸಮಾಜದ ಸ್ವಾರ್ಥಿಗಳನ್ನು ನಿರ್ದಾಕ್ಷಿಣ್ಯವಾಗಿ ಟೀಕಿಸಬಲ್ಲ ಗಂಡುಗಲಿ. ಅಷ್ಟೇ ಏಕೆ? ಕಾರಣ ಪುರುಷನೂ ಹೌದು.

ಈತನೂ ಸಹ ಜಾತಿಯ ವಿಷಯದಲ್ಲಿ ಆಡಿರುವುದು ಪ್ರಶಂಸನೀಯ ವಾದುದು. ಪದ್ಯ ಚಿಕ್ಕದಾದರೂ ಅಥವಾ ಪದ ಚಿಕ್ಕದಾದರೂ ಪದಾರ್ಥ ಬಹು ಗಂಭೀರವಾಗಿದೆ. ಆ ರೀತಿ ಅರ್ಥಮಾಡಿಕೊಂಡು ಆಚರಿಸಬೇಕು. "ಜಾತಿಹೀನನ ಮನೆಯ ಜ್ಯೋತಿ ತಾ ಹೀನವೇ? ಜಾತಿವಿಜಾತಿ ಎನಬೇಡ. ದೇವನೊಲಿದಾತನೆ ಜಾತ" ದೇವನೊಲಿದಾತನೆ ಜಾತ. ದೇವನೊಲಿದ ಜಾತಿಯೇ ಉತ್ತಮ ಜಾತಿ. ದೇವನೊಲಿಯಬೇಕಾದರೆ ಸಾಮಾನ್ಯವಾಗಿ ಎಲ್ಲರಿಗೂ ಒಲಿಯಲಾರ. "ಭಕ್ತ ಪರಾಧೀನ" ಎಂಬ ಪ್ರಶಸ್ತಿ ಆತನಿ ಗುಂಟು. ಆದರೆ ಎಲ್ಲರೂ ಆತನನ್ನು ಅಧೀನನನ್ನಾಗಿ ಮಾಡಿಕೊಳ್ಳಲಾ ರರು. ಆತನೂ ಸಹ ಎಲ್ಲರಿಗೂ ಅಧೀನವಾಗಲಾರ. ಅನೇಕ ವರ್ಷ ಅವಿಚ್ಛಿನ್ನವಾದ ಸೇವೆಯ ಫಲದಿಂದ ಆತನು ಒಲಿಯಬೇಕು. ಆ ಸೇವೆ ನಿಷ್ಕಾಮ ಬುದ್ಧಿಯಿಂದ ನಿಸ್ವಾರ್ಥತೆಯಿಂದ ಕೂಡಿರಬೇಕು. "ಧರ್ಮದ ದೃಷ್ಟಿಯಿಂದ ಗುರೂಪದೇಶಾಮೃತದಿಂದ ನಾನು ಮಾಡುವೆನು" ನಾನು ಮಾಡುವ ಕಾಯಕವು ಪರಮಾತ್ಮನಿಗೆ ಎಲ್ಲಾ ವಿಧದಿಂದಲೂ ತೃಪ್ತಿ ಯಾದರೆ ಅಂದು ನಾನೇ ಧನ್ಯ. ತೃಪ್ತನಾಗಿ ಆತನು ನನಗೆ ಕರುಣಿ ಸುವುದು ಏನೇ ಇರಲಿ, ಅದು ನನಗೆ ಅನಪೇಕ್ಷಿತ ಮತ್ತು ಅನಿರೀಕ್ಷಿತ ವೆಂಬುದೂ ಆತನಿಗಿರಬೇಕು.

"ಧರ್ಮಶಾಸ್ತ್ರಂ ವೈ ಸ್ಮೃತಿಃ" ಸ್ಮೃತಿಗಳೇ ಧರ್ಮಶಾಸ್ತ್ರ. ಇವು ಗಳೇ ಮನುಸ್ಮೃತಿ, ಯಾಜ್ಞವಲ್ಕ್ಯಸ್ಮೃತಿ ಮತ್ತು ಪರಾಶರಸ್ಮೃತಿ ಮುಂತಾದುವು. ಇವೆಲ್ಲವೂ ಋಷಿಪ್ರಣೀತವಾದುವುಗಳಷ್ಟೆ! ಇವುಗಳನ್ನು ನಂಬಿಯೆ ಕೆಲವರು ಓದುವರು. ಬ್ರಾಹ್ಮಣರು ಮುಂತಾಗಿ ಕಾಯಕ ಗಳನ್ನುದ್ದೇಶಿಸಿ ಜಾತಿಯ ವಿಭಾಗಗಳನ್ನು ಜನತೆಯಲ್ಲಿ ಹರಡಿದರು. ಇದೇ ಅಂಶವು ಮಾಮೂಲಿನಂತೆ ಅನೇಕ ವರ್ಷಗಳು ಹಿಂದುಗಳಲ್ಲಿ ರೂಢಿಯಾಗಿ ಬರುತ್ತಾ ಇದೆ. ಇದರಿಂದ ಜನತೆಯಲ್ಲಿ ಮೇಲು ಕೀಳು ಪರಸ್ಪರ ಮತಗಳಲ್ಲಿ ಕೋಲಾಹಲ, ಹೊಡೆದಾಟ, ಪೈಶಾಚಿಕಕೃತ್ಯ, ಮುಂತಾದ ರಾಕ್ಷಸ ಕೃತ್ಯಗಳು ಜನತೆಯಲ್ಲಿ ತಾಂಡವನಾಡುತ್ತಾ ಇಡೀ ಹಿಂದೂ ಸಮಾಜವೆ ಅಧೋಗತಿಗೆ ಇಳಿಯುತ್ತಾ ಬಂದಿತು. ಇದನ್ನೆಲ್ಲಾ ನೋಡಿಯೇ ಬಸವೇಶ್ವರನು ಕಾಯಕದಿಂದ ಜಾತಿಯ ಭೇದಪ್ರಭೇದ ಗಳು ಬೇಡ. ಆವ ಕಾಯಕನಾದರೂ ಶಿವನಿಗೆ ಅದೇ ಪ್ರೀತಿ. ಮುಂತಾಗಿ ಬೋಧಿಸಿ ಜನತೆಯಲ್ಲಿ ಜ್ಞಾನಜ್ಯೋತಿಯನ್ನು ಹರಡಿದನು.

ಇದರಿಂದ ಶರಣರ ವಚನಗಳು ಜನತೆಗೆ ಹೆಚ್ಚು ಸಹಾಯವಾದುವುಗಳೆಂಬುದರಲ್ಲಿ ತಪ್ಪೇನೂ ಇಲ್ಲ. ಎಂಥ ವಿಶಾಲವಾದ ಮನೋಭಾವನೆ. ಗಾಢವಾದ ತತ್ವ, ನೈತಿಕ, ಧಾರ್ಮಿಕ, ಸಾಮಾಜಿಕ, ಮಾನಸಿಕ ಮುಂತಾದ ಗುಣರತ್ನಗಳು ಈ ಸಾಹಿತ್ಯದಲ್ಲಿ ತುಂಬಿ ತುಳುಕಾಡುತ್ತಿವೆ. ಉಚ್ಚ-ನೀಚ ಭಾವನೆಯಿಲ್ಲ. ಪ್ರತಿಯೊಬ್ಬನಿಗೂ ಇದರಲ್ಲಿ ಅಧಿಕಾರವುಂಟು. ಮಹನೀಯರು ಮಹಿಳೆಯರಾದಿಯಾಗಿ ಇದರ ಪ್ರಯೋಜನವನ್ನು ಸರ್ವಥಾ ಪಡೆಯಬಹುದು. ಆವ ಭಿನ್ನಾಭಿಪ್ರಾಯವೂ ಇಲ್ಲ. ಪಕ್ಷಪಾತವೂ ಇಲ್ಲ. ಎಂಥ ಮಹೋನ್ನತ ರತ್ನಗಳು ಜಾಜ್ವಲ್ಯಮಾನವಾಗಿ ದೇದೀಪ್ಯಮಾನವಾಗಿ ಶೋಭಿಸುತ್ತಿವೆ. "ದೇವನೊಬ್ಬ ನಾಮ ಹಲವು. ಪರಮ ಪತಿವ್ರತೆಗೆ ಗಂಡನೊಬ್ಬ" ಎಂಥ ಮಾತು! ಪಾರಮಾರ್ಥಿಕ ಮತ್ತು ಲೌಕಿಕ ವಿಷಯ ಈ ಎರಡು ವಿಷಯಗಳನ್ನೂ ಏಕಕಾಲದಲ್ಲಿ ತಿಳಿಗನ್ನಡದಲ್ಲಿ ಪಂಡಿತ-ಪಾಮರರಿಗೆ ಭೂಪಾಲ ಗೋಪಾಲರಿಗೆ ಹರ-ನರರಿಗೆ ಅರಿವಾಗುವಂತೆ ಬೋಧಿಸಿ, ಆತ್ಮಕಲ್ಯಾಣ ಮತ್ತು ಉಭಯ ಕಲ್ಯಾಣವನ್ನು ಪಡೆದು ಮುಕ್ತನಾದ ಮಹಾತ್ಮಾ ಬಸವೇಶ್ವರನೇ ಪುಣ್ಯಶ್ಲೋಕಿಯಲ್ಲವೆ? ಲೌಕಿಕದಲ್ಲಿ ಸತಿಯು ಪತಿಯಲ್ಲಿ ಪಾತಿವ್ರತ್ಯದಿಂದ ನಡೆದು ಅವನ ಮನವೊಲಿವಂತೆ ಬಾಳ್ವೆ ಮಾಡಬೇಕು. ಆಕೆಗೆ ಮುಕ್ತಿ. ಹಾಗೆಯೇ ಪಾರಮಾರ್ಥಿಕದಲ್ಲೂ ಅಷ್ಟೆ. "ಶರಣಸತಿ ಲಿಂಗಪತಿ" ಎಂಬ ಅಕ್ಕಮಹಾದೇವಿಯ ಗೂಢವಾದ ಅನುಭವ. ಮತ್ತು ಅವಳ ತತ್ವದಂತೆ ಶರಣನು ಸತಿಯಾಗಿ ತನಗೆ ಪತಿಯಾದ ಲಿಂಗದಲ್ಲಿ ಹಗಲಿರಳೂ ನಿಷ್ಕಾಮ ಸೇವೆಯಿಂದ ಮನಃಪೂರ್ವಕವಾಗಿ ಆಚರಿಸುತ್ತಾ ಬಂದರೆ ಆತನಿಗಾಗಿಯೇ ಮುಕ್ತಿ ಮೀಸಲು ಬುತ್ತಿ.

ಇದರಿಂದ ಹಿಂದೂ ಸಮಾಜವೇ ತನ್ನ ಬುದ್ಧಿಯ ಒರೆಗಲ್ಲಿನಲ್ಲಿ ಪರೀಕ್ಷಿಸಿ ಆವನಾದರೂ ಒಬ್ಬ ದೇವರನ್ನೆ ನಂಬಿ ಆತ್ಮವನ್ನು ಉನ್ನತ ಸ್ಥಾನಕ್ಕೆ ಮುಟ್ಟಬೇಕು. ಹಲವು ದೇವರನ್ನು ನಂಬಿ ಕೆಡಬಾರದು. "ಇತೋ ಭ್ರಷ್ಟಸ್ತತೋ ಭ್ರಷ್ಟಃ......" ಎಂಬಂತಾಗಬಾರದು. ಮನುಷ್ಯನಿಗೆ ಸನ್ನಿವೇಶ ಹೇಗೋ ಇರುತ್ತದೆ. ಈ ವಿಷಯದಲ್ಲಿ ಸ್ವಾನುಭವ ಮಹಾತ್ಮರ ಉಪದೇಶ ಸಾಧಕವಾದುದು ಆತನ ಏಳ್ಗೆಗೆ. ಇದು ಸರ್ವಸಾಧ್ಯ. ಹಾಗೆಯೇ ತಾನು ಆಚರಿಸಿ ಆತ್ಮೋದ್ಧಾರ ಮಾಡಿಕೊಂಡು ನೆರೆಹೊರೆಯವರನ್ನೆಲ್ಲಾ ಉದ್ಧಾರ ಮಾಡುತ್ತಾ ಬಂದರೆ ಊರೇ ಊರು,

ಕೊನೆಗೆ ದೇಶವೇ ಮಹೋನ್ನತ ಪದವಿಯನ್ನು ಏರಿ ಜೀವಿಯ ಆತ್ಮ ಕಲ್ಯಾಣ ಲೋಕಕಲ್ಯಾಣವೂ ಸಹ ಉಂಟಾಗಿ ಮಾನವನು ಮಾನವತ್ವ ವನ್ನು ಪಡೆದನೆಂಬುದರಲ್ಲಿ ಲೇಶವೂ ಸಂಶಯ ವಿಲ್ಲ. ಒಟ್ಟಿನಲ್ಲಿ ಇದಕ್ಕೆ ಸ್ವಾನುಭವವೆ ಮುಖ್ಯವೆಂಬುದನ್ನು ಎಲ್ಲರಿಗೂ ಮನಗಾಣಬೇಕು. ಅರಿದು ಆತ್ಮನ ಸತತ ಪ್ರಯತ್ನದಿಂದ ಮಹೋನ್ನತ ಪದವಿಯು ಲಭಿಸುವದು.

( ಮುಂದುವರೆಯುವುದು )

---

ಸೊಲ್ಲಾಪೂರ

## ಶ್ರೀಸಿದ್ಧರಾಮೇಶ್ವರ

# ಅಷ್ಟೋತ್ತರಶತ (೧೦೮) ನಾಮಾವಳಿಗಳು.

(ಲೇ: ಷ ಬ್ರ ಶ್ರೀಶಾಂತವೀರ ಶಿವಾಚಾರ್ಯ ಮಹಾಸ್ವಾಮಿಗಳು,
ಚವದಾಪುರೀ ಹಿರೇಮಠ ಗುಲಬರ್ಗಾ )

---

### ದ್ವಿಪದಿ ರಗಳೆ.

ಭೂವಲಯದಖಿಳ ಜೀವಿಗಳನು ಸಲಹಿ ಸಿದ್ಧರಾಮ
ದೇವರೆನಿಸಿ ಸೊನ್ನಲಿಗೆಯ ಪುರದಿ ಮೆರೆವ ಸಿದ್ಧರಾಮ
ಭೃಂಗಿರಿಟಿಯ ಶಾಪದಿಂದ ಗಂಧರ್ವರು ಸಿದ್ಧರಾಮ
ಭಂಗವಟ್ಟು ಶಿವನ ಬಳಿಗೆ ಬಂದರಾಗ ಸಿದ್ಧರಾಮ
ಹಸಿಯುದುಣ್ಣದೆವೆಯುದಿಕ್ಕುದಿರುವ ಮಗನ ಸಿದ್ಧರಾಮ
ಸಸಿನೆಯಿಂದ ಕೊಟ್ಟು ಶಾಪಬಿಡಿರೆಂದು ಸಿದ್ಧರಾಮ
ಅದ್ರಿಶಿರನು ಊರ್ಧ್ವಶಿರನು ನುತಿಸಲಾಗ ಸಿದ್ಧರಾಮ
ಭದ್ರಮೂರ್ತಿ ಶಿವನು ಮೆಚ್ಚಿ ಅಭಯವಿತ್ತು ಸಿದ್ಧರಾಮ
ನಾನು ನಿಮ್ಮ ಶಾಪಬಿಡಿಸಿ ಪೊರೆವೆನೆಂದು ಸಿದ್ಧರಾಮ
ಸಾನುರಾಗದಿಂದ ಧರೆಗೆ ಕಳುಹಿಸಿದನು ಸಿದ್ಧರಾಮ

ಗಂಧರ್ವರು ಸೊನ್ನಲಿಗೆಯು ನಗರದಲ್ಲಿ ಸಿದ್ಧರಾಮ
ಬಂಧುರ ಕುಡುವಕ್ಕಲಿಗರ ವಂಶದೊಳಗೆ ಸಿದ್ಧರಾಮ
ಜನಿಸಿ ಮುದ್ದುಗೌಡ ಸುಗ್ಗಲಾಂಬೆಯೆಂಬ ಸಿದ್ಧರಾಮ
ವನಿತೆ ಪತಿಗಳೆನಿಸಿ ಬಹಳ ದಿನವ ಕಳೆದು ಸಿದ್ಧರಾಮ
ಮಗನ ಬಯಸೆ ಜಗದಗುರುವು ರೇಣುಕಾರ್ಯ ಸಿದ್ಧರಾಮ
ನಗುತ ಬಂದು ಪುತ್ರವರವ ಕೊಟ್ಟು ಪೋದ ಸಿದ್ಧರಾಮ
ಸುಗ್ಗಲಾಂಬೆ ಜರೆಯು ತನದಿ ಗರ್ಭ ಧರಿಸೆ ಸಿದ್ಧರಾಮ
ಹಿಗ್ಗುತಿರಲು ಐದು ಮಾಸ ಕಳೆಯು ತುಂಬಿ ಸಿದ್ಧರಾಮ
ಒಂದು ದಿವಸ ಸುಗ್ಗಲಾಂಬೆ ಮಲಗಿರಲ್ಕೆ ಸಿದ್ಧರಾಮ
ಸುಂದರಾಂಗದಿಂದ ಶಿಶುವು ಜನಿಸಿ ಮೆರೆಯೆ ಸಿದ್ಧರಾಮ
ಸ್ವರ್ಗಲೋಕದಿಂದ ಗೌರೀ ಸರಸ್ವತಿಯು ಸಿದ್ಧರಾಮ
ಭಾರ್ಗವೀ ಆರುಂಧತಿಯರೆಲ್ಲ ಬಂದು ಸಿದ್ಧರಾಮ
ಜೋಗುಳವನು ಪಾಡಿ ಸಿದ್ಧರಾಮನೆಂದು ಸಿದ್ಧರಾಮ
ಆಗ ನಾಮಕರಣ ಮಾಡಿ ಮುದ್ದಿಸಿದರು ಸಿದ್ಧರಾಮ
ಗಿರಿಜೆ ತನ್ನ ಪತಿಯು ಸರ್ವ ಸಿದ್ಧಿಗಳನು ಸಿದ್ಧರಾಮ
ಹರುಷದಿಂದೆ ನಿನಗೆ ಕೊಟ್ಟು ಪೋದರವರು ಸಿದ್ಧರಾಮ

ಕನಸು ಕಂಡ ತೆರದಿ ಸುಗ್ಗಲಾಂಬೆಯೆದ್ದು ಸಿದ್ಧರಾಮ
ತನಯನನ್ನು ನೋಡಿ ಪತಿಯು ಕರೆದು ತೋರೆ ಸಿದ್ಧರಾಮ
ಬೆರಗುವಟ್ಟು ಜನರ ನೆರಹಿ ಬಣ್ಣಿಸುತ್ತ ಸಿದ್ಧರಾಮ
ಮರೆದು ಧೂಳಿ ಮಹಂಕಾಳನೆಂದರವರು ಸಿದ್ಧರಾಮ
ಕಲ್ಪಲತೆಯು ಬೆಳೆದ ತೆರದಿ ಬೆಳದೆ ನೀನು ಸಿದ್ಧರಾಮ
ಕಲ್ಪಿಸಲಸಾಧ್ಯಮೆನಿಪ ಚರಿತನೆನಿಸಿ ಸಿದ್ಧರಾಮ
ಹಸಿವು ತೃಷೆಯು ವ್ಯಸನ ವಿಷಯವಿಸರವಿಲ್ಲ ಸಿದ್ಧರಾಮ
ಸಸಿನೆ ಹೆಜ್ಜೆ ನೆರಳು ಮೋಹವಿಲ್ಲ ನಿನಗೆ ಸಿದ್ಧರಾಮ
ಮಗನು ಉಣ್ಣಲೆಂದು ದನವ ಕಾಯಲಿರಿಸೆ ಸಿದ್ಧರಾಮ
ತೆಗಳಿ ಧೂಳಿ ಮಹಂಕಾಳನನ್ನು ಕರೆದು ಸಿದ್ಧರಾಮ
ಪಶುವ ಕಾಯ ಪೇಳಿ ಲಿಂಗಪೂಜೆಗೈದು ಸಿದ್ಧರಾಮ
ಸಸಿನೆಯಿಂದ ನವಣೆ ಹೊಲದೊಳಿರಲು ನೀನು ಸಿದ್ಧರಾಮ

ಶಿವನು ಚರನ ರೂಪುಧರಿಸಿ ಹೊಲಕೆ ಬಂದು ಸಿದ್ಧರಾಮ
ನವಣಿ ಬೆಳಸಿ ಬೇಡೆ ಹರುಷದಿಂದ ಕೊಟ್ಟೆ ಸಿದ್ಧರಾಮ
ಗೌರೀ ಸಹಿತ ವೃಡನು ನಿಜವ ತೋರಿ ಕಂಡು ಸಿದ್ಧರಾಮ
ಪೌರವೆಲ್ಲಿ ನಿನ್ನ ಪೆಸರದೇನುಯೆಂದೆ ಸಿದ್ಧರಾಮ
ಶ್ರೀಗಿರಿಯ ಮಲ್ಲಿನಾಥನೆನಗೆ ನೀನು ಸಿದ್ಧರಾಮ
ಬೇಗ ಅಂಬಕಳಮತರುವದೆಂದು ಕಳುಹೆ ಸಿದ್ಧರ ಮ
ಜನನಿ ಬಳಿಗೆ ಬಂದು ಅಂಬಲಿಯನು ಬೇಡೆ ಸಿದ್ಧರಾಮ
ಮನದಿ ಹಿಗ್ಗಿ ಆಕೆ ಬುತ್ತಿ ಕಟ್ಟಿಕೊಡಲು ಸಿದ್ಧರಾಮ
ಹೊಲಕೆ ಬಂದು ನೋಡೆ ಶಿವನುಯಿಲ್ಲದಿರಲು ಸಿದ್ಧರಾಮ
ಹೊಲಬುಗೆಟ್ಟು ಸುತ್ತಲರಸಿ ಮರುಗುತಾಗ ಸಿದ್ಧರಾಮ
ಮಲ್ಲಿನಾಥ ಮಲ್ಲಿನಾಥನೆಂದು ಕೂಗಿ ಸಿದ್ಧರಾಮ
ಅಲ್ಲಿ ನಿಲ್ಲದಾವ ಗಿರಿಯ ಮಾರ್ಗವಿಡಿದೆ ಸಿದ್ಧರಾಮ
ಪರಸಿಜನರು ನಿನ್ನ ಕಂಡು ಕೂಡಿಕೊಂಡು ಸಿದ್ಧರಾಮ
ಗಿರಿಗೆ ಹೋಗಿ ಲಿಂಗವನ್ನು ತೋರಿಸಿದರು ಸಿದ್ಧರಾಮ
ಈತ ಮಲಿನಾಥನಲ್ಲವೆಂದು ನೀನು ಸಿದ್ಧರಾಮ
ಆತುರದೊಳು ಗಿರಿಯನೆಲ್ಲ ತಿರುಗುತಾಗ ಸಿದ್ಧರಾಮ
ರುದ್ರಕಮ್ಮರಿಯ ನೆಲೆಗೆ ಬಂದು ನಿಂತು ಸಿದ್ಧರಾಮ
ಭದ್ರಮೂರ್ತಿಯನ್ನು ನೆನೆದು ಭಾಷೆಗೈದು ಸಿದ್ಧರಾಮ
ಮೂರುಬಾರಿ ಮಲ್ಲಿನಾಥನೆಂದು ಕೂಗಿ ಸಿದ್ಧರಾಮ
ಹಾರುತಿರಲು ಶಿವನು ಬಂದು ಪಿಡಿದ ನಿನ್ನ ಸಿದ್ಧರಾಮ
ಶಿವನ ಕಂಡು ಸಂಭ್ರಮದೊಳು ಚರಣ ಪಿಡಿದು ಸಿದ್ಧರಾಮ
ತವಕದಿಂದ ಮಾತನಾಡಿ ಕುಣಿಯುತಿರಲು ಸಿದ್ಧರಾಮ
ವೃಡನು ಗಿರಿಯೊಳಿರ್ಪ ಸಕಲ ಸೊಬಗ ತೋರಿ ಸಿದ್ಧರಾಮ
ಕಡೆಗೆ ನಿರಧಿಕರಣದೀಕ್ಷೆಯಿತ್ತ ನಿನಗೆ ಸಿದ್ಧರಾಮ
ಸೊನ್ನಲೆಯೊಳು ಎನ್ನ ಕುರುಹು ನೆಲಸುಯೆಂದು ಸಿದ್ಧರಾಮ
ತನ್ನ ಅಭಯವರವ ಕೊಟ್ಟು ಕಳುಹಿಸಿದನು ಸಿದ್ಧರಾಮ
ತಿರುಗಿ ಅಣ್ಣ ಬೊಮ್ಮನೊಡನೆ ಪುರಕೆಬಂದು ಸಿದ್ಧರಾಮ
ಧರೆಯನಗಳುತಿರಲು ಹೊನ್ನರಾಶಿ ಸಿಗಲು ಸಿದ್ಧರಾಮ
ಗುಡಿಯ ರಚಿಸಿ ಲಿಂಗವನ್ನು ರಥದೊಳಿರಿಸಿ ಸಿದ್ಧರಾಮ

ನಡೆಯೆ ನಿನ್ನ ಬೆನ್ನುಹತ್ತಿ ಲಿಂಗ ಬರಲು ಸಿದ್ಧರಾಮ
ಸತ್ತ ಎತ್ತುಗಳಿಗೆ ಪ್ರಾಣವಿತ್ತು ಮುದದಿ ಸಿದ್ಧರಾಮ
ಮತ್ತೆ ಲಿಂಗವನ್ನು ನೆಲೆಸಿ ಪೂಜೆಗೈದೆ ಸಿದ್ಧರಾಮ
ಸುರರು ಗುಡ್ಡರಾಗಿ ಬಂದು ನಿನ್ನ ಬಳಸೆ ಸಿದ್ಧರಾಮ
ಕೆರೆಯನಗುಳಿರೆಂದು ಅವರ್ಗೆ ಆಜ್ಞೆ ಗೈದೆ ಸಿದ್ಧರಾಮ
ನೀನು ಗುದ್ದಲಿಯನು ಪಿಡಿದು ಅಗಳುತಿರಲು ಸಿದ್ಧರಾಮ
ಸಾನುರಾಗದಿಂದ ಶಿವನು ಕಂಡು ಭರದಿ ಸಿದ್ಧರಾಮ
ಗಂಗೆ ಸರಸ್ವತಿಯು ಮುಖ್ಯ ತೀರ್ಥಗಳನು ಸಿದ್ಧರಾಮ.
ಪಿಂಗದಂತೆ ತಂದು ನೆಲೆಸಿ ಮೆರೆಯಿಸಿದನು ಸಿದ್ಧರಾಮ
ನಿಜದಿ ಲಕ್ಷ್ಮಿದೇವಿ ಬಂದು ಭಾಷೆಗೈದು ಸಿದ್ಧರಾಮ
ಭಜಿಸಿ ನಿನ್ನ ನಗರದೊಳಗೆ ವಾಸಿಸಿಹಳು ಸಿದ್ಧರಾಮ
ಸೆಳ್ಳಿಗೀಯ ಬೆನಕ ಬರಲು ಸ್ಥಾನವಿತ್ತು ಸಿದ್ಧರಾಮ
ಜೊಳ್ಳು ಮನದ ಕಬ್ಬಿಲರಿಗೆ ಮಹಿಮೆ ತೋರ್ದೆ ಸಿದ್ಧರಾಮ
ಶುನಕನಾದ ಗಂಧರ್ವಗೆ ಪ್ರಸಾದವಿತ್ತು ಸಿದ್ಧರಾಮ
ಮಿನುಪ ನಾಕಪದವ ಕೊಟ್ಟು ಸಲಹಿದಯ್ಯ ಸಿದ್ಧರಾಮ
ಹೋಮವನ್ನು ರಚಿಸುತಖಿಳಗೋವುಗಳನು ಸಿದ್ಧರಾಮ
ಪ್ರೇಮದಿಂದ ಪಾಲಿಸುತ್ತ ಮಹಿಮನೆನಿಪ ಸಿದ್ಧರಾಮ
ಹಸಿದು ನಿಶಾಚರಿಯು ನಿನ್ನ ಬಸಿರಪೊಕ್ಕು ಸಿದ್ಧರಾಮ
ಪೊಸತ ಕಂಡು ಗುದದಿ ಬಂದಳಧೋದ್ವೈತಿ ಸಿದ್ಧರಾಮ
ನೀಲಪಟನು ಮದನನೊಡನೆ ಬಂದು ನಿನ್ನ ಸಿದ್ಧರಾಮ
ಮೇಲೆ ಪಂಚಶರವನೆಸೆಯೆ ಸೋಲಲಿಲ್ಲ ಸಿದ್ಧರಾಮ
ಸಿಡಿಲು ಬೀಳೆ ಖಡ್ಗದಿಂದಲೆತ್ತಿಪಿಡಿದೆ ಸಿದ್ಧರಾಮ
ಜಡನು ಖರ್ಪರೆಂಬ ಜೋಗಿ ಹೋಮತಡೆಯೆ ಸಿದ್ಧರಾಮ
ನಿಟಿಲ ನೇತ್ರದಿಂದಲವನ ಗರ್ವ ಮುರಿದು ಸಿದ್ಧರಾಮ
ದಿಟದಿ ಉರಿವ ಗುಂಡನೆತ್ತಿ ಭಾಷೆಗೈದೆ ಸಿದ್ಧರಾಮ
ಪಾಪಿಯಾದ ಬಿಲ್ಲೇಶ ಬೊಮ್ಮನಸುವ ಸಿದ್ಧರಾಮ
ಕೋಪದಿಂದ ನರಕದಲ್ಲಿ ಕೆಡಹಿಬಡಿಯೆ ಸಿದ್ಧರಾಮ
ಅದನು ಕೇಳಿ ಅವನ ಬಿಡಿಸಿ ಕರೆದು ತಂದೆ ಸಿದ್ಧರಾಮ
ಮದನಹರನ ಬಯಕೆಯಂತೆ ಸೊನ್ನಲೆಯೊಳು ಸಿದ್ಧರಾಮ

ಆದಿಲಿಂಗಕಾಗ ತುಪ್ಪದಭಿಷೇಕ ಸಿದ್ಧರಾಮ
ಮೋದದಿಂದಲೆರೆದು ಸಹಸ್ರಮದುವೆಗೈದೆ ಸಿದ್ಧರಾಮ
ಮುಡಿದ ಬೆಕ್ಕಿಗಸುವನಿತ್ತು ಸಲಹಿದಯ್ಯ ಸಿದ್ಧರಾಮ
ಮೃಡನು ನೀನೆಯೆಂಮೆ ಜನರು ನುತಿಸುತಿರಲು ಸಿದ್ಧರಾಮ
ಎಮ್ಮೆಗುಂಡನಗಿದುವೊಳಗೆ ಪೊಕ್ಕು ಶಿವನ ಸಿದ್ಧರಾಮ
ನೆಮ್ಮಿದೇವರೆನಿಸಿ ಮೆರೆವೆ ಜಗದಿ ನೀನು ಸಿದ್ಧರಾಮ
ನಿನ್ನ ಮಹಿಮೆ ಪೊಗಳಲೆನಗೆ ಸಾಧ್ಯವಿಲ್ಲ ಸಿದ್ಧರಾಮ
ನಿನ್ನನುತಿಸಲಾದಿಶೇಷಗಾಗದೆಂಬೆ ಸಿದ್ಧರಾಮ
ಕಲ್ಲಬುರಿಗಿ ಹಿರೇಮಠದ ಶಾಂತವೀರ ಸಿದ್ಧರಾಮ
ಬಲ್ಲತೆರದಿ ನುತಿಸಿದಂಥ ನಾಮಾವಳಿಯು ಸಿದ್ಧರಾಮ
ಶಿವನೆ ಸಿದ್ಧರಾಮನೆಂದು ನೆನೆಯುತಿರಲು ಸಿದ್ಧರಾಮ
ಶಿವನು ಮೆಚ್ಚಿ ಸುಖವ ಕೊಡುವ ಶಿವಂಭವತು ಸಿದ್ಧರಾಮ.

ಇತಿ ಶ್ರೀಸಿದ್ಧರಾಮೇಶ್ವರ ೧೦೮ ನಾಮಾವಳಿಯು.

---

## ನೂರೊಂದರ ಪರಿ.

(ಲೇಖಕಃ— ಶ್ರೀಯುತ ಸಿ. ನಾ. ಮಹಾಂತಣ್ಣವರ ನಿವೃತ್ತ ಅ॥ ಡೆಪ್ಯೂಟಿ ಎ. ಇನಸ್ಪೆಕ್ಟರ ಹೂನೂರ ಸಂ॥ ಜಮಖಂಡಿ.)

---

ವೀರಶೈವದ ಕೊನೆಯ ಮಮರ್ಾಧಿಮುರ್ಮಗಳ ಶ್ರೀಶೈಲ ಶಿಖರವನ್ನೇರುವ ಪಾವಟಿಗೆಗಳಂತಿದ್ದ ನೂರೊಂದು ಸ್ಥಲಗಳ ಓದಿ, ಮೋದಿಸಿ, ಆದರದಿಂದ ಬರೆದ, ನೂರೊಂದರ ತಿಳಲು ತಿಳಿದ, ಆತುರತೆಯನ್ನು ತಳೆದ, ಮನದೊಳು ಮೊಳೆದೋರಿದ ಕಳೆಗಳಂಶವನು, ಶಿವಾನುಭವ ಮಂಟಪದ ಮಕರದಂತಿದ್ದ ಎಪ್ರಿಲ ತಿಂಗಳ ಶಿವಾನುಭವ ಪತ್ರಿಕೆಯಲ್ಲಿ ಹೊಂದಿಸಿ, ಸಾಧಿಸಿ, ಸಂಧಿಸಿ, ಬಂಧಿಸಿ ಬರೆದ ಶ್ರೀ. ಪಟ್ಟೇದ ಇವರ ಲೇಖನವಾಲಿಸಿ, ಲಾಲಿಸಿ, ಸಂತೋಷಿಯಾಗಿ ನೂರೊಂದರ ಆನಂದಾಂಶಗಳ ಸಂದೇಶಗಳನ್ನು ಸಮರ್ಪಿಸಿದ ಜ್ಞಾನಾನುಭವಾನಂದಗಳಿಂದ ಈ ಜೀವನದ ಜೇವಣವನು ಸಕಲ ಸಂದೇಹಾಕ್ಷೇಪಗಳು ತಿಳಿವಂತೆ, ಹೊಳೆವಂತೆ, ಹೊಳೆದುದುಳಿವಂತೆ

ಶಿವಾನುಭವ ರುಚಿಯ ಪರಿಯನೊರೆಯಲುದ್ಯುಕ್ತನಾಗಿ ನಮ್ಮ ಶಿವಶರಣರ ಸುವಿಚಾರವನು ಸಂದರ್ಶಿಸುವ ಸಾಹಸಕ್ಕೆ ಬೀಳಲು ಆತುರಪಡುವೆನು.

ಶ್ರೀಶೈಲದ ಶ್ರೀ ಮಲ್ಲಿಕಾರ್ಜುನನ ಕಾಣುವ ಉದ್ದೇಶದಿಂದ ಪೂರ್ವ ದಿಕ್ಕಿನ ಗುಡಿಯ ಬಾಗಿಲಿಗೆ ಎದುರಾದ ನೂರೊಂದು ಪಾವಟಿಗೆಗಳು ಇರುವವೆಂದು ಕೇಳಿದ ನಾನು ತೀರ ಕೆಳಗಿರುವ ಕಡೆಬಾಗಿಲವ ಕಂಡೆನು. ಕಡೆ ಬಾಗಿಲೊಳು ನಿಂದು ನೋಡಲು ದೂರಾಗಿದ್ದ ಗುಡಿಯ ಶಿಖರವು ಎನ್ನ ದೃಷ್ಟಿಗೆ ಹರಿಯುದೆ ನಿಂತೆನು. ತೀರ ಕೆಳಗಿನ ೧೫ ಪಾವಟಿಗೆಗಳು ಎನ್ನ ದೃಷ್ಟಿಪಥಗೊಳಗಾದವು. ಮೊದಲನೇ ಸ್ಥಲದ ಪಾವಟಿಗೆಯ ಆಕಾರದ ಉದ್ದ, ಅಗಲು, ಎತ್ತರಗಳು ಸರಿಯಿದ್ದುದನು ಕಂಡು ಎರಡು ಹೆಜ್ಜೆಗಳನಿಟ್ಟು ನೋಡಲು, ದಾಟಿದ ಪಾವಟಿಗೆಗಳ ಉದ್ದಗಲುಗಳುಳ್ಳ ಎರಡೆತ್ತರದ ೩ ನೇ ಪಾವಟಿಗೆಗೆ ಪುಟನೆಗೆದು, ಮೂರನೇ ಪಾವಟಿಗೆಯೊಳು ನಿಂದೆನು. ಎನ್ನಂಗದ ಆಶೆಯ ಬಿಟ್ಟು ಪಾವಟಿಗೆಗಳನ್ನು ಏರಿ ನಿಂತ ನಾನು, ಮೂರರ (ತ್ರಿಪುಟಿ) ಗಳ ವಿಚಾರ ಆಚಾರ ಕ್ರಿಯೆಗಳನು ಮನದಂದೆನು. ಇದರಂತೆ ಇದ್ದ ಮುಂದುಗಾಣುವ ೧೨ ಪಾವಟಿಗೆಗಳನ್ನು ದಾಂಟಿ ೧೫ ಪಾವಟಿಗೆಗಳ ಮೇಲಿರುವ ಸಮಾನ ಉದ್ದಗಲುಳ್ಳ ಪಡಸಾಲೆಯೊಳು ನಿಂದು ಅದರೊಳಗಿನ ಪೂರ್ವ ಪಶ್ಚಿಮ ಬಾಗಿಲುಗಳನ್ನು ಏಕೀಕರಿಸಿದ ಕೋಟೆಯೊಳಗೆ ಹೊಕ್ಕು ನೋಡಿ, ಅದರ ವಿಸ್ತಾರ, ವಿಸ್ತಾರದೊಳು ಸಿದ್ಧವಾಗಿದ್ದ ನೀರು, ನೆಳಲು, ಪಣ್ಣುಗಳ ನೈಸರ್ಗಿಕ ಸ್ಥಾನದೊಳು, ಹದಿನೈದು ಪಾವಟಿಗೆಗಳನ್ನು ಹತ್ತಿ ಹತ್ತಿ ಮೆತ್ತಗಾದ ನಾನು, ವಿಶ್ರಮಿಸಿ, ದಣುವಾರಿಸಿಕೊಂಡು, ಆ ಕೋಟೆಯ ಪಶ್ಚಿಮ ದ್ವಾರವನು ದಾಂಟಿ, ಮೇಲು ನೋಟಗೊಳಗಾದ ೯ ಪಾವಟಿಗೆಗಳನ್ನು ಏರಲು ಆತುರ ಪಟ್ಟು, ಪ್ರತಿಯೊಂದು ಪಾವಟಿಗೆಗಳನ್ನು ಹತ್ತಲು ಬೇಕಾದ ಅಂಗತ್ರಯ ಲಿಂಗತ್ರಯ ಭಾವತ್ರಯ ಪೂರ್ವಕ ಭಕ್ತ ಸ್ಥಲದೊಳು ನಡೆದು, ಹಿಂದೆ ಪುಟನೆಗೆದಂತೆ ಪುಟನೆಗೆಯುತ್ತ ೯ ಅಂಗ ಸ್ಥಲಗಳ ದಾಂಟ ೨ ನೇ ಪಡಸಾಲೆಗೆ ಬಂದುಬಿಟ್ಟೆನು.

ಅಲ್ಲಿಯ ಕೋಟಿಕೊತ್ತಲಗಳ ನಿರೀಕ್ಷಿಸಿ ನಿಂತೆನು. ಮೊದಲನೆಯ ಪಡಸಾಲೆಯಲ್ಲಿ ನಿಂತು ಅನುಭವಿಸಿದಂತೆ, ಆರಾಮಾಗಿ ೨ನೇ ಕೋಟೆಯ ಪಶ್ಚಿಮದ್ವಾರವನು ಹೊಕ್ಕು ಮೇಲು ನೋಟದಿಂದ ನೋಡಲು ಅಂಗ ಸ್ಥಲಾಂತರ್ಗತ ೭ ಪಾವಟಿಗೆಗಳನ್ನು ಕಂಡು ಹಿಂದಿನ ೨ ಸ್ಥಲಗಳನ್ನು ದಾಂಟ

ದಂತೆ ದಾಂಟಿ, ೩ ನೇ ಚೌಸಪ್ಪೆಯೊಳು ನಿಂದು ವಿಶ್ರಮಿಸಿ, ವಿರಾಮಗೊಂಡೆನು. ಈ ಪರಿಯಂತೆ ಮುಂದಿನ ಸ್ಥಲಗಳ ೫, ೪, ೪ ಪಾವಟಿಗೆಗಳನ್ನು ದಾಂಟಿ ೬ ಸ್ಥಲಗಳ ಹತ್ತಿ ಹರ್ಷಗೊಂಡ ನಾನು ಮೇಲೆ ನೋಡಲು ಶ್ರೀಶೈಲದ ಗುಡಿಯ ಶಿಖರದ ಮೇಲೆ ದೃಷ್ಟಿ ಬಿದ್ದು ಆನಂದಿಸಿ ಗುಡಿಯ ಮಹಾದ್ವಾರವನು ಹೊಗಲಿಕ್ಕೆ ೯, ೯, ೯, ೯, ೯, ೧೨ ಪಾವಟಿಗೆಗಳನ್ನು ದಾಂಟಿ ದಾಂಟಿ ಲಿಂಗಸ್ಥಲದ ಚೌಸಪ್ಪೆಯಲ್ಲಿ ವಿಶ್ರಮಿಸುತ್ತ, ಪ್ರತಿ ಚೌಸಪ್ಪೆಯೊಳಿದ್ದ ಷಟ್‌ಸ್ಥಲಗಳ ಸಣ್ಣ ಗುಡಿಯೊಳಗೆ ಹೊಕ್ಕು, ಷಡ್‌ಲಿಂಗಗಳ ಆರಾಧನೆ, ಪೂಜೆ, ಅರ್ಚನ, ಅರ್ಪಣಗಳ ಇಂಬಿಟ್ಟು, ಆಯಾ ಲಿಂಗಗಳಿಗೆ ವಾಸಿಸಿ, ರುಚಿಸಿ, ರೂಪಿಸಿ, ತಟ್ಟಿಮುಟ್ಟಿ, ಘಂಟಾನಾದದೊಳಗಿದ್ದ ಬೆಳಗಿನ ಬೆಳಗಿನೊಳು ಆನಂದಿಸಿ, ೫೭ ಪಾವಟಿಗೆ ದಾಟಿದ ನಾನು, ಗುಡಿಯ ಮಹಾದ್ವಾರವನು ಹಣಕಿ ನೋಡಲು, ಸಭಾಮಂಟಪದ ಗರ್ಭಗುಡಿಯ ಶ್ರೀ ಮಲ್ಲಿಕಾರ್ಜುನನನ್ನು ನಿರುಕಿಸಿದೆನು. ಬಳಿಕ ಮಹಾದ್ವಾರ ಸಭಾಮಂಟಪಗಳನತಿಗಳೆದು, ಗರ್ಭಗುಡಿಯೊಳು ಹೊಕ್ಕು, ಲಿಂಗಾನುಸಂಧಾನದಿಂದ ಪೂಜೆಯ ಮಾಡಿ ಮಾಡಿ, ಲಿಂಗದ ನೋಟ, ನೋಟನೊಳಗಾದ ಕೂಟ, ಕೂಟನೊಳಗಾದ ಪ್ರಾಣ, ಪ್ರಾಣದೊಳಗಾದ ಏಕತ್ವ, ಏಕತ್ವದೊಳಗಾದ ಸಮರಸ, ಸಮರಸದೊಳಗಾದ ಲಿಂಗದೊಳಡಗಿ ಪರಿಪೂರ್ಣ ಸ್ಥಿತಿಯನ್ನು ಹೊಂದಿದೆನು. ಇದನ್ನೆಲ್ಲ ಅನುಭವಿಸಿದ ಶಿವಶರಣರ ನುಡಿನಡೆಗೊಳಗಾದ ವಚನದ ನೆನವಾದ ನಾನು, "ನೋಟವೇ ಕೂಟ, ಕೂಟವೇ ಪ್ರಾಣ, ಪ್ರಾಣವೇ ಏಕ, ಏಕವೇ ಸಮರಸ, ಸಮರಸವೇ ಲಿಂಗ, ಲಿಂಗವೇ ಪರಿಪೂರ್ಣ, ಪರಿಪೂರ್ಣವೇ ಪರಬ್ರಹ್ಮ." ಈ ಪರಿ ಪರಬ್ರಹ್ಮ ಸ್ಥಿತಿಗೊಳಗಾದೆನು.

ಆಗ ಬ್ರಹ್ಮ-ಶಿಖಾ-ಪಶ್ಚಿಮ ನಾಳಗಳೊಳು ಸುಳಿದ ಸುಳಿವನರಿಯದೆ "ಆದಿಶೂನ್ಯಂ ಮಧ್ಯಶೂನ್ಯಂ ಅಂತ್ಯಶೂನ್ಯಂ ನಿರಾಮಯಂ | ಸರ್ವಶೂನ್ಯಂ ನಿರಾಕಾರಂ ನಿಶ್ಶಬ್ದಂ ಬ್ರಹ್ಮಮುಚ್ಯತೆ||" ಎಂಬ ಶ್ಲೋಕದಂತೆ ದಶಮಚಕ್ರ ಮೆನಿಸಿದ ಅಣುಚಕ್ರದ ಅಣುವಾಗಿ ನಿಂದು, ನಾನು ನೀನೆಂಬದನು ಹೇಳಲು ಶಬ್ದವಿಲ್ಲದವನಾದೆನು. ಈ ಶ್ಲೋಕವನು ಅರ್ಥವಿಟ್ಟು ವಿಸ್ತರಿಸಲು ಬಯಸಿ ಬಯಲಾದ ನಾನು, ಆದಿಶೂನ್ಯಂ= ಅಡಿಯಿಲ್ಲದ, ಮಧ್ಯಶೂನ್ಯಂ= ಪೊಡೆಯಿಲ್ಲದ, ಅಂತ್ಯಶೂನ್ಯಂ =ಮುಡಿಯಿಲ್ಲದ, ನಿರಾಮಯಂ= ರೂಪುಇಲ್ಲದ ಸರ್ವಶೂನ್ಯಂ= ನಿಶ್ಶೂನ್ಯಂ, ನಿರಾಕಾರಂ= ಆಕಾರವಿಲ್ಲದ, ನಿಶ್ಶಬ್ದಂ= ಶಬ್ದವಿಲ್ಲದ ಬ್ರಾಹ್ಮೀ ಸ್ಥಿತಿಗೊಳಗಾದೆನು.

ಇದನರಿದು ಆತುರಪಟ್ಟ ಸಾಧಕನು, (ಅಧಿಕಾರಿಯು) ಆದಿಯೊಳಿದ್ದ ಪಿಂಡಸ್ಥಲದ ಅಂಗಾಂಗಿಯಾಗಲು ತನ್ನ ಅನೇಕ ಜನ್ಮದ ಪುಣ್ಯ ಫಲದಿಂದ ಅಸದ್ವಾಸನೆಯನು ನಸಿಸಿ, ಸದ್ವಾಸನೆಯುಳ್ಳವನಾದನು. ಇದರಂತೆ ಮಾಂಸ ಪಿಂಡವನುಳಿದು ಮಂತ್ರಪಿಂಡಿಯಾಗಿ, ಪಿಂಡಸ್ಥಲದಾದಿಯಾಗಿ ಸಹಜ ಮಾಟ ಸ್ಥಲಾಂತದ ಬಹಿರಾಚಾರ, ಬಹಿರಷ್ಟಾವರಣ ಸಕೀಲಗಳ ಸಾವರಿಸಿ, ತ್ರಿವಿಧ ಜ್ಞಾನಿಯಾಗಿ, ಕರಣಮಥನವಿಲ್ಲದ ಅನುಭಾವಿಯಾಗಿ, ಸುಖಾನಂದ ದೊಳಗಾಗಿ ಸತ್ಕ್ರಿಯೆ ಸುಜ್ಞಾನದೊಳು ಬೆರೆದು, ಪ್ರತಿ ಪಾರಮಾರ್ಥಿಕದೊ ಳಡಕಾದ ಎಲ್ಲ ಸಾಧನಗಳಲ್ಲಿ ಭಕ್ತಿರಸವ ಬೀರಿ, ಇಪ್ಪತ್ತೊಂದು ಸಾವಿ ರದಾ ಆರುನೂರು ಜಪಗಳ ಸಂಖ್ಯೆಗಳನು, ಆಯಾ ಲಿಂಗದ ಕಾಲವನರಿತು ಷಟ್‌ಲಿಂಗ ಜಪಗಳನ್ನು ಜಪಿಸಿ, ನೇಮ ನಿತ್ಯಗಳೊಳು ತಪಿಸಿದವನು, ಹಸಿಯ ಬಿಸಿಲನೇ ಕೊಯ್ದು ಪದಾರ್ಥವನೇ ಮಾಡಿ, ಉಸಿರ ಹೆಸರಿನಲಿ ಕರೆಯುತಿಪ್ಪರಯ್ಯಾ. ಇಕ್ಕಲಿಲ್ಲಾರಿಗೆಯು ಎರೆಯಲಿಲ್ಲಾರಿಗೆಯು ಭಿಕ್ಷಾ ವೃತ್ತಿಗಳು ಬೇಡುತಿಪ್ಪರಯ್ಯಾ, ನಿಮ್ಮ ಒಕ್ಕು ಮಿಕ್ಕುದನು ಉಡಿಯಲ್ಲಿ ಕಟ್ಟಿಕೊಂಡಿಪ್ಪರಯ್ಯಾ, ಗುಹೇಶ್ವರಾ ನಿಮ್ಮ ಶರಣರು. ಹೀಗೆ ಪ್ರಸಾದಿಸ್ಥ ಲದ ಪ್ರಸಾದದ ಪರಿಯನರಿದು ಇದರಂತೆ ಅಂಗಸ್ಥಲಾಂತರ್ಗತ ೪೪ ಸ್ಥಲಾಂ ಗಗಳನು ಆಚರಿಸುತ್ತ ಅಂಗಾಂಗಿಯೆಂದೆನಿಸಿದಾತನು ಲಿಂಗಾಂಗಿಯಾಗಲು ತಕ್ಕವನಾದನು.

ಇನ್ನು ಶ್ರೀಯುತ ಪಟ್ಟೇದ ಇವರು ಬರೆದ ನೇಮುಗಳೊಂದೊಂ ದಾಗಿ ವಿಮರ್ಶಿಸದೆ ಇರೆನು.

(೧) ಲಿಂಗಸ್ಥಳಗಳನುಳಿದು ಅಂಗಸ್ಥಲಗಳನಂಗೀಕರಿಸಿದ ಅಂಗ ರಿಗೆ ಪೂರ್ಣತ್ವವು ಬಾರದು. ಯಾಕಂದರೆ ಅಂಗರು ಅಂಗಾಂಗಿಗಳೇ ಹೊರತು ಲಿಂಗಾಂಗಾನುಭವಿಗಳಲ್ಲ.

(೨) ಲಿಂಗಾಂಗಗಳ ಸಾಮರಸ್ಯವನ್ನು ಪಡೆದ ಗುರುವಿನ ವಿನಾ ಅಂಗಾಂಗಿಯು ಗುರುವಾಗಲು ಅನರ್ಹನು. ಆತನು ತನುಮನವಿಲ್ಲದ, ಪಂಚೇಂದ್ರಿಯ ಸುಖವಿಲ್ಲದ ಕಾಮುಕರ್ಮ ಕಲ್ಪನೆಗಳಿಲ್ಲದ ಹುಸಿ, ಹಸಿವೆ, ತೃಷೆಯಿಲ್ಲದ ಅರಿಷಡ್ವರ್ಗವನು ಮರೆದ ಮದಗಳೆಂಟನು ಅಂಟದ, ಅಹಂಕಾರವಿಲ್ಲದ ಸದ್ಭಕ್ತನು. ಗುರುಲಿಂಗಜಂಗಮ ಪ್ರಸಾದಗಳ ಆಧಾರಿ ಯೆನಿಸುವನು, ಇದು ಅಂಗಸ್ಥಲಾಂತರ್ಗತ ಪ್ರಸಾದಿಸ್ಥಲದ ಸದ್ಭಕ್ತನ ಮಹ ತ್ವವೆಂದು ಪ್ರಸಾದಿಗಳವಗಾಹನೆಯಲ್ಲಿರದಿರದು.

(೩) ಅಂಗಸ್ಥಲದ ಐಕ್ಯಸ್ಥಲದಲ್ಲಿ ಬೆರೆದವನು ಅಂಗಾಂಗಿಯಾನು ಭವಿಯೆನಿಸುವನು. ಲಿಂಗಾಂಗಿ ತೀರ ಸಂಬಂಧಿಕನು ಅಲ್ಲ.

।ವಾರ್ಧಿಕ।। ಶ್ರೀಸದಾಶಿವನ ಭಕ್ತರುಗಳಾರಾದೊಡಂ । ಓಸರಿಸದಂತ ರಂಗದೊಳು ದಶಚಕ್ರನಿ ! ವಾಸದೊಳು, ಪದ್ಮಪ್ರಣವದಿ ಲಿಂಗವನರ್ಚಿಸಲು ಆ ಸದಾಶಿವರಪ್ಪರು ।।

ಲಿಂಗಸ್ಥಲಗಳು ಭಕ್ತನ ಐಕ್ಯನ ಯೋಗ್ಯತೆ, ಆಚರಣೆಗಳು ಭಕ್ತೋದ್ಧಾರಕ್ಕೆಂದು ಸಿ. ಶಿ. ಗ್ರಂಥದಲ್ಲಿ ಹೇಳಿದ್ದರೆ ತಪ್ಪು. ಅಂಗಾಂಗಿಯು ಲಿಂಗಸ್ಥಲಗಳನ್ನು ಪಡೆಯಲು ಒಳ್ಳೇ ಯೋಗ್ಯನು. ಲಿಂಗಸ್ಥಲಗಳನ್ನು ಹೊಂದದೆ ಉಳಿದ ಅಂಗಾಂಗಿಗಳಿಗೆ ಲಿಂಗಾಂಗಿಯಾಗಲು ಅವಸರವೂ ಅವಶ್ಯವು ಇರುವದು.

(೪) ಅಂಗಸ್ಥಲಗಳ ಆಯಾ ಅಂಗರು ತಮ್ಮ ಲಿಂಗಗಳಲ್ಲಿ ಬೆರೆಯಲಿಕ್ಕೆ ಅವಶ್ಯವಾದ ಸಾಧನಗಳು ಅಥವಾ ಗುಣಗಳು ಇರುತ್ತವೆಂದು ಹೇಳುವದು ಅತಿ ಸಮಂಜಸವೆಂದು ಬಲ್ಲವರು ಬಲು ಒಪ್ಪಬಹುದು. ಅದಕ್ಕೇನೇನು ತಡೆಯಿಲ್ಲ.

(೫) ತಡೆಗಳಿಲ್ಲದ್ದರಿಂದ ಲಿಂಗಾಂಗ ಸಾಮರಸ್ಯವನ್ನು ಹೊಂದಲಿಕ್ಕೆ ಲಿಂಗ ಗುಣಗಳು ಅಥವಾ ಸಾಧನಗಳು ಇರುತ್ತವೆಂದು ಹೇಳುವದು. ಬಹು ಸಮಂಜಸ. ಹಾಗು ಸಾಧನಗಳನ್ನು ಮಾತ್ರ ಪಡೆದು ಸಾಧ್ಯಹೊಂದದೆ ಇದ್ದವರು ನಿಷ್ಫಲರಾಗುವರು. ಅವರು ಲಿಂಗಾಂಗ ಸಾಮರಸ್ಯದಿಂದ ದೂರಿರುವ ಕಾರಣ ಗುರುಗಳೆನಿಸಲು ಉಚಿತವೇ ಅಲ್ಲ.

(೬) ಶಿವಲಿಂಗ ಸ್ಥಲದಿಂದ ಪ್ರಸಾದಲಿಂಗ ಸ್ಥಲಗಳನೊಳಕೊಂಡ ಈ ಸ್ಥಲಗಳ ಲಿಂಗಾಂಗಿಯು ಉಂಡ ಉಪವಾಸಿಯಂತೆ, ಬಳಸಿದ ಬ್ರಹ್ಮಚಾರಿಯಂತೆ, ಅವನಿಗೆ ಬೇಕು ಬೇಡ ಎಂಬ ಆಶೆ ನಿರಾಶಿತನಲ್ಲ. ಅವನು ಕ್ರಿಯೆ ಭಾವ ಜ್ಞಾನಗಳ ನಿಷ್ಪತ್ತಿ ಸ್ಥಲಗಳನ್ನು ಹೊಂದಿದರೂ ಲಿಂಗದೊಳು ಬೆರೆದು ಬಿಚ್ಚದೆ ನಿಬ್ಬೆರಗು ಸ್ಥಿತಿಗೆ ಬರಲವಶ್ಯವಾದ ಮುಂದಿನ ಸ್ಥಲಗಳನ್ನು ಅನುಸರಿಸಲರ್ಹನು. ಇಂಥವನು ಸಹಜ ಸಂಬಂಧಿಯೇ ಹೊರತು ಅತಿನಿಕಟ ಸಂಬಂಧಿಯೆನಿಸನು. ಅಂಥವನ ಶಿಷ್ಯರು ಇಷ್ಟೇ ಸ್ಥಲಕ್ಕಾಧಾರನಲ್ಲದೆ, ಮುಂದಿನ ಸ್ಥಲಗಳೀರ್ವರಿಗೂ ಅವಶ್ಯ.

(೭) ಹಿಂದಿನ (೪೪+೨೪) ವುಗಳ ಗುರುಲಿಂಗ ಜಂಗಮ ಸ್ಥಲಗಳನ್ನು ಹೊಂದಿರಲೇಬೇಕು. ನಿಮ್ಮ ಬರಹದಂತೆ ಸಿ. ಶಿ. ಗ್ರಂಥದಲ್ಲಿ ಹೇಳಿದ್ದಾದರೆ ಆ ಗ್ರಂಥವನ್ನು ರಚಿಸಿದವನು ಲಿಂಗಾಂಗ ರಾಮರಸ್ಯದ ಪೂರ್ಣ ಜ್ಞಾನಿಯಲ್ಲ. ಪ್ರತಿಯೊಬ್ಬನು ಅಂಗಲಿಂಗಸ್ಥಲಗಳ ಷಟ್‌ಸ್ಥಲಾನುವರ್ತಿಯಾಗಲು ನೂರೊಂದು ಸ್ಥಲದ ಅತಿ ಹಕ್ಕುದಾರನು.

(೮) ಗುರುತ್ರಯರಲ್ಲಿ ಸೇವೆ, ಲಿಂಗತ್ರಯಗಳಲ್ಲಿ ಪೂಜೆ-ಪುರಸ್ಕಾರಗಳು, ಜಂಗಮತ್ರಯಗಳೊಳು ತೃಪ್ತಿ, ಇವುಗಳನ್ನು ಭಕ್ತಿಯಿಂದನುಸರಿಸುತ್ತಿದ್ದವನು ಬಹಿರ್ಗುರು, ಬಹಿರ್ಲಿಂಗ, ಬಹಿರ್ಜಂಗಮರೊಳು ಬೆರೆಯಲು ತನುಮನಧನಗಳನ್ನರ್ಪಿಸಿದ ಕಾರಣ, ಆತನು ತನು ಇಲ್ಲದ ಮನವಿಲ್ಲದ, ಧನವಿಲ್ಲದವನಾಗಿ, ಹಾಗು ತನ್ನ ಪಂಚೇಂದ್ರಿಗಳ ಸುಖವಿರಹಿತ, ಅರಿಷಡ್ವರ್ಗ ಅಷ್ಟಮದ ಮರ್ದನ, ನಿರಹಂಕಾರಿಯಾಗಿ, ತೃಷೆಯು ಪಾದೋದಕದಲ್ಲಿ, ಅಶನವು ಪ್ರಸಾದದಲ್ಲಿ ಹುಸಿಯುದರಿಂದ ಸತ್ಯನಿಷ್ಠನು, ಆಚಾರ ಲಿಂಗದ ಸದ್ಭಕ್ತನು. ಇಂಥವನು ಭಕ್ತನಲ್ಲವೆಂದು ಹೇಳುವವರಾರು ? ಸ್ಥೂಲವಿಡಿದೇ ಸೂಕ್ಷ್ಮ, ಸೂಕ್ಷ್ಮವಿಡಿದೇ ಕಾರಣಶರೀರಿಯಾಗುವನು. ಇಂಥ ಅಂಗ ಲಿಂಗ ಷಟ್‌ಸ್ಥಲಾಚರಣೆಯಿಂದ ಭಕ್ತಸ್ಥಲನೊಳಕೊಂಡು, ಭಕ್ತಸ್ಥಲದ ಆಚಾರಲಿಂಗಭಕ್ತ, ಭಕ್ತಸ್ಥಲದ ಗುರುಲಿಂಗಭಕ್ತ, ಭಕ್ತಸ್ಥಲದ ಪ್ರಸಾದಿಭಕ್ತ, ಭಕ್ತಸ್ಥಲದ ಪ್ರಾಣಲಿಂಗಿಭಕ್ತ, ಭಕ್ತಸ್ಥಲದ ಶರಣಭಕ್ತ, ಭಕ್ತಸ್ಥಲದ ಮಹಾಲಿಂಗ ಭಕ್ತ, ಈ ಶಕ್ತಿ ಭಕ್ತಿಗಳಿಂದ ಸದ್ಭಕ್ತನಾಗಿ ಸರ್ವರ ಮಾತಾ-ಪಿತನೆನಿಸುವನೆಂದು ಧಾರಾಳವಾಗಿ ಹೇಳಬಹುದು.

ಇಂಥವನು ಹಿಂದೆ ಹೇಳಿದಂತೆ, ಗುರುಲಿಂಗಜಂಗಮರಲ್ಲಿ ನೋಟ, ಕೂಟ, ಪ್ರಾಣ ಏಕತ್ವ, ಸಮರಸ ಹೊಂದಿ ನಿಜಲಿಂಗಿಯಾಗದೆ ಇರನು. ಹೀಗಿದ್ದಲ್ಲಿ ಭಕ್ತನ ಧ್ಯೇಯ ಸಾಧಿಸದೆ ಇರದು. ಆತನು ಷಡ್‌ಲಿಂಗಗಳನೊಳಕೊಂಡು ಐಕ್ಯಸ್ಥಲಗಳಳವಡುವನು. ಈತನು ಗುರುಲಿಂಗಕಾಧಾರ, ಚಿಲ್ಲಿಂಗಕ್ಕಾಧಾರ, ಜಂಗಮಲಿಂಗಕ್ಕಾಧಾರ, ಪ್ರಸಾದಲಿಂಗಕ್ಕಾಧಾರನಾಗಿದ್ದ ಬಳಿಕ ಸಂಶಯವೇನು ?

(೯) ಮಾಡಿಮಾಡಿ, ನೋಡಿನೋಡಿ, ಕೂಡಿಕೂಡಿ ಆಯಾಸ್ಥಲಗಳಳವಟ್ಟ ಬಳಿಕ ಆತನಲ್ಲಿ ಯಾವ ಅಂಗಸ್ಥಲಗಳಿಲ್ಲ ? ಆವ ಲಿಂಗ

ಸ್ಥಲಗಳಿಲ್ಲ ? ಸಾಧಕನಾಗಿ ಸಾಧನಗಳಿಂದ ಸಾಧ್ಯವನ್ನು ಹೊಂದಲು ದುಡಿಮೆ ಬೇಡವೇ ? ಇದಕ್ಕನುಸರಿಸಿ " ಕಣ್ಣಮುಂದಿನ ಕಾಮನ ಕೊಂದು, ಮನದ ಮುಂದಿನ ಆಶೆಯ ತಿಂದು, ಅತನ ಅರಿ, ಆತುರವೈರಿ ಮಾರೇಶ್ವರಾ ".

ತ್ರಿದೀಕ್ಷಾಬದ್ಧನಾಗಿ ಕಡೆಯ ಧ್ಯೇಯವನ್ನು ಹೊಂದಲು ಆತುರನಾದ ಮಹತ್ವಾಕಾಂಕ್ಷಿಗೆ, ಅಷ್ಟಾವರಣದ ನಿಷ್ಠೆ, ಪಂಚಾಚಾರ ಪರಾಯಣತೆ, ಸತ್ಯ ನಿತ್ಯ ಕ್ರಿಯೆ ಜ್ಞಾನ ಭಕ್ತ್ಯಾಚಾರದಲ್ಲಿ ಸದಾಸಂಗಿಯಾಗಿರದೆ, ವಿಸಂಗಿಯಾದರೆ ಆತನ ಅಂತಿಮ ಧ್ಯೇಯವು ಸಾಧಿಸುವದೆಂತು ? ಆಚಾರವರಿಯದೆ, ಸುವಿಚಾರ ಸಂಘಟಿಸದೆ, ಶರಣರ ಸಂಗದಲ್ಲಿರದವರ " ಸಜ್ಜನರ ಸಂಗದಿಂದ ಮಹಾನುಭಾವಿಗಳ ಕಾಣಬಹುದು. ಮಹಾನುಭಾವಿಗಳ ಸಂಗದಿಂದ ಗುರುವಿನ ಕಾಣಬಹುದು. ಗುರುವಿನ ಸಂಗದಿಂದ ಲಿಂಗವ ಕಾಣಬಹುದು. ಲಿಂಗಸಂಗದಿಂದ ಜಂಗಮವ ಕಾಣಬಹುದು. ಜಂಗಮ ಸಂಗದಿಂದ ಪ್ರಸಾದವ ಕಾಣಬಹುದು. ಪ್ರಸಾದ ಸಾಧ್ಯದಿಂದ ತನ್ನ ತಾನರಿಯಬಹುದು. ತನ್ನ ತಾನರಿದೊಡೆ ಆಚಾರವನರಿಯಬಹುದು. ಇಂತಿಲ್ಲದವರನೊಲ್ಲ ನಮ್ಮ ಕೂಡಲ ಸಂಗಮದೇವಾ ". ಹೀಗಿರದವನಿಗೆ ಈ ವಚನದ ಸತ್ಯನಿತ್ಯಾಚಾರಾದಿ ದಶಾಚಾರಗಳು ಅಳವಡವು. ಇದರಿಂದ ಆಚರಣೆಗಳ ಮಹತ್ವವು ಎಷ್ಟಿರುವದೆಂಬದನ್ನು ವಾಚಕರೇ ಊಹಿಸಲಿ.

(೧೦) ಅಂಗ, ಲಿಂಗ, ಕ್ರಿಯೆ, ಆಚಾರ, ಜ್ಞಾನಾದಿಗಳನ್ನು ಮಹಾಜ್ಞಾನಿಗಳಿಂದ ಹೊಂದದಿದ್ದಲ್ಲಿ ನೂರೊಂದು ಸ್ಥಲಗಳೊಳಗೆ ಆತನ ಪ್ರವೇಶವೆಂತು ? ಆತನ ಸ್ಥಿತಿಯು ತ್ರಿಶಂಕುವಿನಂತೆ ಆಗಬಹುದಲ್ಲವೇ ?

(೧೧) ಅಂಗಸ್ಥಲದ ೮ ರಿಂದೊಡಗೂಡಿದ ಬಳಿಕ " ಅಂದಂದಿಗೆ ನೂರು ತುಂಬಿತ್ತೆಂದು ದಿಟವಿರಬೇಕು. ಸಂದ ಶ್ರೀಪುರಾತನರ ನೆನೆಯುತ್ತಿರಬೇಕು. ಜಂಗಮವು ಮನೆಗೆ ಬಂದರೆ ವಂಚನೆಯಿಲ್ಲದಿರಬೇಕು. ಇದೇ ವರವನೀವುದು ಬಸವಪ್ರಿಯ ಕೂಡಲಸಂಗಮದೇವಾ ". ಎಂಬ ೯ ನೇ ಸ್ಥಲದ ಸದ್ಭಕ್ತನಾಗಿ " ಉಭಯಸ್ಥಲ ಆಚರಣೆಯಲ್ಲಿ " ಗತಿಪಥ ಮುಕ್ತಿಯ ಬಯಸಿ ಮಾಡುವಾತ ಭಕ್ತನಲ್ಲ. ಜೀವನೋಪಾಯಕ್ಕೆ ಬೇಡುವಾತ ಜಂಗಮನಲ್ಲ. ಗತಿಪಥ ಮುಕ್ತಿಸೂತಕ ವಿರಹಿತ ಭಕ್ತ, ಹಮ್ಮು ಬಿಮ್ಮು ಗಮನ ನಾಸ್ತಿಯಾದಾತನೇ ಜಂಗಮ. ಮಾಡುವಡೆ ಭಕ್ತ

ಮಾಟದೊಳಗಿಲ್ಲದಿರಬೇಕು. ಬೇಡುವಡೆ ಜಂಗಮ ಕೊಂಬುವದರೊಳಗಿಲ್ಲದಿರಬೇಕು. ಪ್ರಾಣವಿಲ್ಲದಾತ ಭಕ್ತ. ರೂಹಿಲ್ಲದಾತ ಜಂಗಮ. ಈ ಉಭಯ ಸ್ಥಳಕುಳಗಳ ಸಂದೊಂದಾಗಿ ನಿಂದ ನಿಲವು ಕೂಡಲ ಸಂಗಮ ದೇವನಲ್ಲಿ ಭಕ್ತ ಜಂಗಮವೆಂಬೆ". ಇದರಂತೆ ಮುಂದಿನ ಅಂಗಸ್ಥಲ ಗಳನ್ನೆಲ್ಲ "ಏಕೋತ್ತರ ಶತಸ್ಥಲ," ಪುಸ್ತಕ ಓದಿ ನಡೆದದ್ದಾದರೆ ಭಕ್ತ ಸ್ಥಲದ ಅಂಗಾನುಭಾವಿಯಾಗದೆ ಇರನು. ಮುಂದೆ ಹೇಳಿದವುಗಳನ್ನನು ಸರಿಸಿದವನನ್ನು ಹೀಯಾಳಿಸಿ ಅಂಗಸ್ಥಲವಾದ ೭ ನೇ ಸ್ಥಲದಲ್ಲಿ ಶಿವ ಶರಣರು ಸುಗಮವಾಗಿ ವರ್ಣಿಸಿರುವರು. "ಶ್ರೀವಿಭೂತಿಯ ಧರಿಸದವನ, ಶ್ರೀರುದ್ರಾಕ್ಷಿಯ ತಾಳದವನ, ಶ್ರೀಲಿಂಗಾರ್ಚನೆಯ ಅನುದಿನ ಮಾಡದವನ, ಶ್ರೀಜಂಗಮವೆಂದು ಅರಿಯದವನ, ಶ್ರೀಸದ್ಭಕ್ತರ ಸಂಗದಲ್ಲಿರದವನ ತೋರದಿರಾ ಕೂಡಲಸಂಗಮದೇವಾ! ಸೆರಗೊಡ್ಡಿ ಬೇಡುವೆ".

ಇವನ್ನೆಲ್ಲ ಸದ್ಭಕ್ತನು ಆಚರಿಸಬೇಕೆಂಬದು ಮೇಲೆಯೇ ಅದೆ.

ನೂರೊಂದರೊಳಡಗಿದ ಶಿವಶರಣರ ನುಡಿಗಡಣದ ಸೂಳ್ನುಡಿಯೊಳು ಸೂಸುವ ನಸುಗಂಪುವಡೆದ ಸುಳಿಗಾಳಿಯ ಬೀಸಿ ಬೀಸಿ ಕೈಸೋತು ಕಡೆಗಾಗಲನುವಾಗುವೆನು.

ಅನ್ನವ ನೆನೆದರೆ ಹಸಿವು ಹಿಂಗುವದೇ? ರಂಭೆಯ ನೆನೆದರೆ ಕಾಮ ಹಿಂಗುವದೇ? ಜ್ಯೋತಿಯ ನೆನೆದರೆ ತಮಂಧ ಹಿಂಗುವದೇ? ನೋಡಿ, ಕಂಡು ನಿರ್ಧರಿಸಲಲ್ಲದೆ ಸೌರಾಷ್ಟ್ರ ಸೋಮೇಶ್ವರ ತಾನಾಗ ಬಾರದು.

ಹಸುವಿಗೆ ಸುಪ್ರಸಾದವನಿತ್ತು, ಚಿಚ್ಛಕ್ತಿಯೊಳು ಬೆರೆದು, ಅಜ್ಞಾ ನಾಂಧಕಾರವನ್ನು ಓಡಿಸುವ, ಮಹಾಜ್ಞಾನ ಜ್ಯೋತಿಯೊಳು ನಿಲ್ಲುವ, ಶಕ್ತಿವಿಶಿಷ್ಟಾದ್ವೈತ ಮತ ಮಾರ್ಗವ ತೋರುವ ವೀರಶೈವ ರಾಜ ಮಾರ್ಗದೊಳು ರಾಜಿಸುವ ನೂರೊಂದರ ಪರಿಯಿದು.

ಮಹಾಂತನ ಮಂದಿರದೊಳು ಸಿದ್ಧನಾಗಿ ನಾಗೇಶನ ಪಾದಾರ್ಚನೆಯ ನನುದಿನ ಗೆಯ್ಯುವೆ.

---

# ಶ್ರೀ ಗುರುಮಲ್ಲ ಸ್ವಾಮಿಗಳು.

( ದೇವನೂರು, ನಂಜನಗೂಡು ತಾಲೂಕು. )

ದಕ್ಷಿಣ ದೇಶದಿ ಕೆಟ್ಟಿರೆ ಧರ್ಮವು
ರಕ್ಷಿಸ ಲುಟ್ಟಿದ ಮಹಿಮನಿವ ಚರ ||
ಕುಕ್ಷಿಗೆ ನಿತ್ಯಾರಾಧನೆ ಗೈಸಲು
ಭಿಕ್ಷದ ಕಾಯಕ ತಂದ ನಿವ: || ೧ ||

ಶರಣರ ಮಹಿಮೆಯ ಅಣಕವ ಮಾಡಿದ
ಪರ ಮತ ವಾದಿಯ ದರ್ಪಕಿವ
ಮೊರೆಯುತ ತಾ ತನ್ನುದರವ ಬಗೆಯುತ
ಪಿರಿಯ ಪವಾಡವ ತೋರಿದವ: || ೨ ||

ಮಹಿಷಾ ನಾಡಿನೊಳತಿ ದಾಸೋಹದ
ಮಹಿಮಾ ಶ್ರೀಗುರು ಮೂರ್ತಿ ಇವ
ಮಹ ಶಿವ ಯೋಗಿಗ ಳೊಪ್ಪುವ ತೆರದಿ
ಗುಹಪಿತ ಧರ್ಮವ ಹರಡಿದವ: || ೩ ||

ಕರ್ಮದ ಬೆಂಬಲ ವಿಡಿದಾಚಾರದ
ಮರ್ಮವ ನರಿಯುತ್ತೊಗೆದು ಶಿವ
ಧರ್ಮಕೆ ಯೆಡರೊಂದಿಲ್ಲದ ಕಾಯಕ
ನಿರ್ಮಿಸಿದ ಜಗ ಜಟ್ಟಿ ಇವ: || ೪ ||

ಕಾಯಕ ಭಿಕ್ಷದ ಜೋಳಿಗೆ ಹಿಡಿಯುತ
ಮಾಯೆಯ ಪುಂಜನು ಹರಿಯುತಿವ ಛಲ
ಕಾಯವ ದಂಡಿಸಿ ಶರಣರ ನಿತ್ಯಾ
ಕಾಯಕ ದಿಂದಲಿ ಪೊರೆದನಿವ: || ೫

ಭಕ್ತರ ಮನೆಗಳ ತತ್ವದ ಜೀವಿಗೆ
ಮುಕ್ತಿಯ ಬೀಡೆಂದೆನಿಸುತಿವ

ಧಿಕ್ಕಟ ತಲದಲಿ ಭಕ್ತಿಯ ಬೆಳಿಸಿದ:
ಶಕ್ತನು ಶ್ರೀಗುರು ಮಲ್ಲನಿವ: || ೬ ||

ಲಿಂಗದ ಗುರುತುಗಳೊಂದನು ಅರಿಯದ
ಭಂಗದ ಜೀವಿಯ ಕರ ಶೆಳೆದು
ಅಂಗೈಲಿಕ್ಕುತ ಗುರುಮಹಲಿಂಗನ
ಸಂಗವ ಬೆಳಿಸಿದ ಮನವೊಲಿದು: || ೭ ||

ಬಸವಾಕ್ಷರವನ್ನುಸುರುತ ನಾಡಿಗೆ
ಸೊಸಕಳೆ ತಂದಿಹ ಮಹಿಮ ನಿವ
ಬಸವನೆ ಲಿಂಗಪ್ಪನ ತೇರೆನ್ನುತ
ಹೊಸ ಕಲ್ಯಾಣವ ಮಾಡಿದವ: || ೮ ||

ಯಣ್ಣೆಯ ಹೊಳೆ ಕಾವೇರಿಯ ಮಧ್ಯದಿ
ಬಣ್ಣಿಸ ಲಾಗದ ಇವನ ಮಠ
ಹಿನ್ನೆಲೆ ಶರಣರೆ ಹೇಳಿದ ಕುರುಹು
ಚೆನ್ನಾಗಿರೆ ರೇವಣನೆ ದಿಟ: || ೯ ||

ಗುರು ಚರ ಲಿಂಗದ ಅರುಹಿನ ಭಕ್ತಿಯು
ಹರಿಯುವಸಾಗರ ಇವನ ಮಠ
ಚಿರತರ ಗುರುಮಹಲಿಂಗಾನಂದದಿ
ಬೆರೆದಿಹ ಯೋಗಿಯು ಇವನೆ ದಿಟ: || ೧೦ ||

—ಎಸ್. ಕರಿಯಪ್ಪ ಮಹದೇವರಹಳ್ಳಿ
ಶಿವಾನುಭವ ಸಂಘ,
ಕಾನಕಾನಹಳ್ಳಿ ತಾಲೂಕು. ಜಿಲ್ಲಾ ಬೆಂಗಳೂರು.

# ವಚನ ಸೃಷ್ಟಿಯೊಂದಿಗೆ ಕೆಲ ನಿಮಿಷಗಳು.

ಲೇಖಕ:— ಶ್ರೀ. ಶಾಂತವೀರ ಬಸವಂತಪ್ಪ ಮುಮ್ಮಿಗಟ್ಟಿ.

ಹನ್ನೆರಡನೆಯ ಶತಮಾನವೆಂದರೆ ವೀರಶೈವ ಇತಿಹಾಸದಲ್ಲಿಯ ಚಿರಸ್ಮರಣೀಯ ಭಾಗ್ಯೋದಯ ಕಾಲವು. ಅದೊಂದು ಹೆಮ್ಮೆಯ ಕಾಲ. ಸುವರ್ಣಾಕ್ಷರಗಳಿಂದ ಕೊರೆದಿಡುವ ಕಾಲ. ರವಿ ತನ್ನ ಹೊಂಬಣ್ಣದ ಕಿರಣಗಳನ್ನು ಹರವುತ್ತ ವಿಶ್ವವನ್ನು ಜ್ಯೋತಿರ್ಮಯವಾಗಿ ಮಾಡುವಂತೆ, ಮಹಾತ್ಮಾ ಬಸವಣ್ಣನವರ ಉದಯವಾಗಿ ಅಂಧಕಾರದಲ್ಲಿದ್ದ ವೀರಶೈವ ವಿಶ್ವವನ್ನು ತಮ್ಮ ಪ್ರಕಾಶದಿಂದ ಝುಗಝುಗನೆ ಬೆಳಗಿಸಿದ ಕಾಲ! ಅದೊಂದು ಸುಗ್ಗಿ! ವೀರಶೈವ ಭೂಮಿಯನ್ನು ಚೆನ್ನಾಗಿ ಹರಗಿ ಬಿತ್ತಿ ಉತ್ತಮ ಬೆಳೆಯನ್ನು ತೆಗೆದ ಶ್ರೇಯಸ್ಸು ಬಸವಣ್ಣನವರಿಗೆ ಸಲ್ಲುತ್ತದೆ. ವೀರಶೈವರ ಕಣಜವನ್ನು ತಮ್ಮ ವಚನಗಳಿಂದ ತುಂಬಿ ಆ ಕಣಜ ಎಂದೂ ಸವೆಯದ ಹಾಗೆ ಮಾಡಿದರು. ಅಂದಿನಿಂದಲೇ ಉನ್ನತಿಯ ಮಾರ್ಗ.

ಈ ಜ್ಯೋತಿಯ ಮುಂಬೆಳಗಕ್ಕೆ ಇನ್ನಿಷ್ಟು ಹಿಂಬೆಳಕನ್ನು ನೀಡುವ ಕಾಲ ಅದಕ್ಕೆ ಜೊತೆಯಾಯಿತು. ಅದೇ ವಚನ ಸೃಷ್ಟಿಯ ಕಾಲ. ಭರದಿಂದ ಬೆಳೆಯುವ ವೀರಶೈವ ವೃಕ್ಷಕ್ಕೆ ನೀರೆರೆದಂತಾಯ್ತು. ಅದರಿಂದ ವೃಕ್ಷವು ಅಂಕುರಿಸಿ, ಚಿಗಿತು, ಫಲಿತು ಇಂದಿನ ರೂಪುಗೊಂಡಿತು.

ಇವು ಬಣ್ಣಬಣ್ಣದ ಒಣ ಮಾತುಗಳ ಡೊಳ್ಳು ವಚನಗಳಲ್ಲ. ಅವುಗಳ ಸರಳ ಓಘ, ಸುರಸ ವಿಚಾರಗಳು ನಮ್ಮ ಮನವನ್ನೆಳೆಯದೆ ಬಿಡಲಾರವು. ಪ್ರತಿ ವಾಕ್ಯಗಳೂ ಒಂದೊಂದು ಉನ್ನತ ವಿಚಾರಪೂರಿತ, ಅರ್ಥಗರ್ಭಿತವಾದವುಗಳು. ಅವುಗಳ ಮರ್ಮ ವಿಚಾರಿಸಿದಷ್ಟೂ ಹೆಚ್ಚೆಚ್ಚು ವಿಸ್ತರಿಸುತ್ತವೆ. ಶಬ್ದಗಳ ಜೋಡಣೆ ಒಂದಕ್ಕೊಂದು ಸಮರ್ಪಕವಾಗಿ ಹೊಂದಿಕೊಂಡು ಮೇಳವಿಸಿ ಹೋಗುತ್ತಿದೆ. ಅವು ಕಬ್ಬಿನ ಮೇಲೆ ಜೇನು ಇಟ್ಟ ಹಾಗೆ ಮತ್ತಿಷ್ಟು ರುಚಿಯಾಗಿವೆ. ಪ್ರಪಂಚದ ಸರ್ವ ಸೂತ್ರಧಾರಿಗಳಾದ ಬಸವಣ್ಣನವರು ವಚನಗಳ ಮುಖಾಂತರ ಕುಂದು-

ಕೊರತೆಗಳನ್ನು ವಿಶದಪಡಿಸಿದ್ದಾರೆ. ಆಯಾ ಜೀವನ ಚಾಣಾಕ್ಷತೆಯ ತವರ್ಮನೆಯಾದ ವಚನಗಳನ್ನು ಓದಿ ಬೊಟ್ಟು ಕಚ್ಚಿಕೊಳ್ಳದೆಯೇ ಬಿಡೆವು. ವಚನ ಸೃಷ್ಟಿಯಲ್ಲಿ ಸಮಾವೇಶವಾಗದ ವಸ್ತು-ವಿಚಾರಗಳು ಇನ್ನೆಲ್ಲಿಯೂ ಕಾಣುವದು ಅಪರೂಪ. ಅವು ವಿಸ್ತಾರವಾದ ಬ್ರಹ್ಮ ಪ್ರಪಂಚವನ್ನೇ ಸುತ್ತು ಹಾಕಿವೆ. ಬಾಹ್ಯ ನೋಟಕ್ಕೆ ನಿರಸವಾಗಿ ಕಂಡರೂ ಅವುಗಳಲ್ಲಿ ಹುದುಗಿಕೊಂಡ ಅಂತರಾಳದ ರಸಾನುಭವವನ್ನು ಅನುಭವಿಸುವ ಭಾಗ್ಯ ನಮಗೆ ದೊರಕಿದೆ. ಇವು ಹರಡುವ ಮಹಾತ್ಮೆ ಅಗಾಧವಾದುದು. ಅಪ್ರತೀತವಾದುದು. ಬಸವಣ್ಣನವರು ಇವುಗಳ ಮುಖಾಂತರ ನೀತಿ-ಭಕ್ತಿ-ಜ್ಞಾನ-ವೈರಾಗ್ಯ ಮೊದಲಾದವುಗಳನ್ನು ತಿಳುಹಲು ಮತ್ತು ಅನೇಕ ಮೂಢ ವಿಚಾರಗಳನ್ನು ಬದಿಗೊತ್ತಲು ಹೆಣಗಿದರು. ಸರಳ ಭಾಷೆಯಲ್ಲಿಯೂ ಸುಲಭ ಶೈಲಿಯಲ್ಲಿಯೂ ರಚಿಸಿದ ರಚನಾತ್ಮಕ ಕೌಶಲ್ಯವು ನಮ್ಮನ್ನು ಬೆರಗುಗೊಳಿಸುವಂತಹದು. ವೀರಶೈವರಿಗೆ ಇವು ಕುರಾನ, ಬೈಬಲ್ಲುಗಳಂತೆ ಪ್ರಮಾಣ ಗ್ರಂಥಗಳಾಗಿವೆ. ಬೆರಳ ಮೇಲೆ ಎಣಿಸಲು ಸಾಧ್ಯವಿಲ್ಲದಷ್ಟು ಇವುಗಳ ಸಂಖ್ಯೆ ಬೆಳೆದಿದೆ. ಬಸವಣ್ಣನವರನ್ನು ಮೊದಲುಗೊಂಡು ವಚನಕಾರರೂ ವಚನಕಾರ್ತಿಯರೂ ಅನೇಕರು ಇರುವರು. ಎಲ್ಲರದೂ ಒಂದೇ ಧ್ಯೇಯ, ಒಂದೇ ವಿಚಾರ, ಒಂದೇ ಅಂತ್ಯ! ಅನೇಕ ರೀತಿಯಿಂದ ನದಿಗಳು ಹರಿದು ಬಂದರೂ ಅಂತ್ಯದಲ್ಲಿ ಕೂಡುವದು ಸಮುದ್ರಕ್ಕಲ್ಲವೇ ?

ಮುಸುಕಿನ ಮರೆಯಲ್ಲಿದ್ದುಕೊಂಡು ಅನಾಚಾರದ ಆಡಂಬರ ತೋರುವ ಸ್ವಾರ್ಥ-ಸಾಧಕರನ್ನು ಬಯಲಿಗೆಳೆದು ಮೂಢ ನಂಬಿಗೆಯಲ್ಲಿ ಹೊರಳಾಡುವ ಸಮಾಜಕ್ಕೆ ಒಂದು ಅಗಣ್ಯವಾದ ಸೇವೆಯನ್ನು ಈ ವಚನಗಳು ಸಲ್ಲಿಸಿವೆ. ಇದ್ದಕ್ಕಿದ್ದಂತೆ ನಿಜಸಂಗತಿಗಳನ್ನು ಅರುಹುವದು ಸಾಮಾನ್ಯ ಕೆಲಸವಲ್ಲ! ಕಂಡದ್ದನ್ನಾಡಿದರೆ ಕೆಂಡದಂತಹ ಸಿಟ್ಟು ಸಹಜ! ಆದರೆ ಆ ಕೆಂಡದಂತಹ ಸಿಟ್ಟಿಗೆ ನಲು ಮಾತಿನ, ಸವಿಯ ವಚನಗಳ ಬುಗ್ಗೆಯನ್ನೇ ಚಿಮ್ಮಿ ಕೆಂಡ ಹೊತ್ತದಂತೆ ಈ ವಚನಸೃಷ್ಟಿ ಮಾರ್ಪಡಿಸಿದೆ. ಇದಕ್ಕಾಗಿ ವೀರಶೈವರು ವಚನಕಾರರಿಗೆ ಚಿರಋಣಿಯಾಗಿರಬೇಕು.

ಬಸವಣ್ಣನವರ ನಿರೀಕ್ಷಣಾ ಚಾತುರ್ಯವು ನಮ್ಮ ವಿಚಾರ ಪ್ರಫುಲ್ಲತೆಯನ್ನು ಪ್ರತಿಬಿಂಬಿಸುವಷ್ಟು ಆಶ್ಚರ್ಯಜನಕವಾಗಿದೆ. ಒಟ್ಟಿನಲ್ಲಿ ಹೇಳ

ಬೇಕಾದರೆ ಅವರ ವಿಚಾರಗಳು ಅವರ ಬುದ್ಧಿಯೆಂಬ ಬಂಡೆಗಲ್ಲಿನಲ್ಲಿ ಬಿರಿದು ಹೊರಹೊಮ್ಮಿದ ನದಿಯಂತೆ ಜ್ಞಾನವಾಹಿನಿಯಾಗಿವೆ. ಆ ನದಿಯ ವಿಶಾಲ ಪ್ರವಾಹದಲ್ಲಿ ಬಾಳಿನ ಗೋಳನ್ನೂ ತೇಲಿಸಿಕೊಂಡು ಹೋಗಿ ಅದರಲ್ಲಿ ಪಾರಾಗುವ ಹಂಚಿಕೆಯನ್ನಾದರೂ ವಿಶದಪಡಿಸಿದ್ದಾರೆ. ಅನೇಕ ಕಲ್ಪನೆಗಳನ್ನು ತಂದೊಡ್ಡಿದ್ದಾರೆ.

ಈ ವಚನಗಳು ಯಾವುದೇ ತೆರನಾದ ಅನುಕರಣದಿಂದ ಬಂದವುಗಳಲ್ಲ. ಸಮಾಜದ ಅಧೋಗತಿಯಲ್ಲಿ ಪರರ ಹಾವಳಿಯಲ್ಲಿ ಬಳಲಿ-ಬೆಂದು-ಬೆಂಡಾದ ವೀರಶೈವರನ್ನು ಕಣ್ಣಾರೆ ಕಂಡು, ಮನವಾರೆ ನೊಂದು ಹೃದಯದಿಂದ ಮಿಂಚಿನಂತೆ ಪ್ರಜ್ವಲಿತವಾದ ಶ್ರೇಷ್ಠ ವಾಕ್ಯಗಳಿವು! ಘೋರ ಕತ್ತಲಲ್ಲಿ ಕುಳಿತ ಜನಕ್ಕೆ ನವಜ್ಯೋತಿ ಪ್ರಾಪ್ತವಾಯ್ತು! ತಲೆ ಎತ್ತಲು ದಿಕ್ಕು ತೋಚಿತು. ಮನಮೆಚ್ಚುಗೆಗೆ ಪಾತ್ರಯಾಯ್ತು!

ವಚನಗಳೆಂದರೆ ಒಂದು ಹಬ್ಬದ ಊಟದಂತೆ; ಅವುಗಳನ್ನೇ ಉಂಡು ಅವುಗಳಿಂದ ಹೊರಹೊಮ್ಮುವ ದಿವ್ಯ ವಾಕ್ಯಗಳು ಅವು! ಅವುಗಳಲ್ಲಿಯ ರಸವನ್ನು ಸವಿಯುವ ರಸಿಕರಿಗೆ ಒಂದು ವಿನೋದದ ನೋಟವಾಗಿ ಪರಿಣಮಿಸಿವೆ. ಅಂಧಕಾರ ಶ್ರದ್ಧೆಯನ್ನು ಅನುಕರಣ ಮಾಡುವ ಕರ್ಮಠರಿಗೆ ಒಂದು ಕೊಡಲಿಯ ಏಟು ಬಿದ್ದಂತೆ ಅವು ಆಗಿವೆ. ಜೀವನದ ಸತ್ಯಾಸತ್ಯತೆಗಳನ್ನು ಬೀರಿದ ವಚನಗಳು ಇಂಥವರಿಗೆ ಕುಠಾರ ಪ್ರಹಾರದಂತೆ ಪರಿಣಮಿಸಿದ್ದಕ್ಕೆ ಎಳ್ಳಷ್ಟೂ ಶಂಕಾಸ್ಪದವಿಲ್ಲ!

ಇನ್ನು ವಚನಗಳೆಡೆಗೆ ದೃಷ್ಟಿ ಚೆಲ್ಲುವಾ. ಬಸವಣ್ಣನವರ ಸರ್ವ ಜೀವನದ ಪಡಿನೆಳಲು ಒಂದೇಒಂದು ವಾಕ್ಯದಲ್ಲಿ ಹೊಳೆಯುತ್ತದೆ. "ಎನಗಿಂತ ಕಿರಿಯರಾರಿಲ್ಲ; ಶಿವಭಕ್ತರಿಗಿಂತ ಹಿರಿಯರಾರಿಲ್ಲ". ತಮಗಿಂತ ಕಿರಿಯರೂ ಆರೂ ಇಲ್ಲ; ತಾವೇ ಕಿರಿಯರು; ಎನ್ನುವದರಿಂದ ಅವರು ಸ್ವಾರ್ಥತೆಯನ್ನು ಎಷ್ಟು ಕೀಳೆಂದು ಭಾವಿಸಿದ್ದರೆಂಬುದು ತಿಳಿಯುತ್ತದೆ. 'ಮೂರ್ತಿ ಸಣ್ಣದಾದರೂ ಕೀರ್ತಿ ದೊಡ್ಡದು' ಎಂಬದನ್ನು ಗುಟ್ಟಿನಲ್ಲಿ ಹೇಳಲಿಕ್ಕೆ ಹೀಗೆ ಹೇಳಿರಬಹುದೇ? ಅದರಂತೆ ಅವರು ಕಾರ್ಯವನ್ನಾದರೂ ಮಾಡಿ ತೋರಿಗೊಟ್ಟರು. ಶಿವಭಕ್ತರು ಅಂದರೆ ಅವರಿಗೆ ತುಂಬಾ ಪ್ರೇಮ. ಶಿವನ ಸರ್ವಲೀಲೆಯನ್ನು ಅವಲೋಕಿಸಿದ ಅವರೇ ಧನ್ಯರು. ಅವರೇ ಹಿರಿಯರು. ಅವರಿಗಿಂತ ಹಿರಿಯರಾರಿಲ್ಲ ಎಂದು ಇವರ ಹೇಳಿರುವರು.

ಕೈಲಾಸವನ್ನೈದುವ ವಿಚಾರದಲ್ಲಿ ಮನುಜನು ತೊಳಲಾಡುವನು. ಬರಿಯ ಬಾಯಿಂದ ಅದು ಸಾಧ್ಯವಿಲ್ಲ! 'ನುಡಿಯಂತೆ ನಡೆ ಇರಬೇಕು' ಎಂದು ಬಸವಣ್ಣನವರು ಹೇಳಿರುವರು. ಅದರ ಬಗ್ಗೆ ಅನೇಕ ಪೂರ್ಣ ಅನ್ವಯಿತ ವಾಕ್ಯಗಳನ್ನು ಅವರು ನುಡಿದಿರುತ್ತಾರೆ. 'ಕಾಯಕವೇ ಕೈಲಾಸ' 'ಸದಾಚಾರವೇ ಸ್ವರ್ಗ; ಅನಾಚಾರವೇ ನರಕ'; 'ಸತ್ಯವ ನುಡಿಯು ವುದೇ ಸ್ವರ್ಗ; ಮಿಥ್ಯವ ನುಡಿಯುವುದೇ ನರಕ' ಹೀಗೆ ವಚನಗಳು ಅನೇಕವಿವೆ. ಅಂದರೆ ಸರ್ವರೂ ಸದಾಚಾರದಿಂದ ಸದ್ಭಕ್ತರಾಗಿ ನಡೆದರೆ ಕೈಲಾಸ ಬಿನ್ನಣವಕ್ಕು.

ತಂದೆ ತೀರಿದ ಮೇಲೆ ಅವನು ಕೈಲಾಸವಾಸಿಯಾಗಲೆಂದು ಮಗನು ಪ್ರಸ್ತ ಮಾಡಿಸುತ್ತಾನೆ. ದ್ರವ್ಯ ವ್ಯಯ ಮಾಡುತ್ತಾನೆ. ಎಷ್ಟೋಸಾರೆ ಸಾಲದಲ್ಲಿಯಾದರೂ ಬೀಳುತ್ತಾನೆ. ಅನೇಕ ಬ್ರಾಹ್ಮಣರಿಗೆ ಅನ್ನಸಂತ ರ್ಪಣೆ ಮಾಡುತ್ತಾನೆ. ಆದರೆ ಇದೆಲ್ಲ, ಮಿಥ್ಯ. ನರಲೋಕದಲ್ಲಿಯ ಮಗ ನಿಗೂ ಪಂಚಪ್ರಾಣಗಳನ್ನು ತ್ಯಜಿಸಿದ ತಂದೆಗೂ ಅದಾವ ಸಂಬಂಧ? ಇಲ್ಲಿ ಹಣವ್ಯಯ ಮಾಡಿ ಸಾಲದಲ್ಲಿ ಬಿದ್ದರೆ ತಂದೆಗೇನು? ಇಂಥವನು ಸಾಲವೆಂಬ ಶೂಲದಲ್ಲಿ ಬಿದ್ದು ಹೆಂಡಿರು ಮಕ್ಕಳನ್ನು ಗೋಳಾಡಿಸುವನು. ಈ ರೀತಿ ಸರಿಯಲ್ಲವೆಂದು ಬಸವಣ್ಣನವರು ಹೇಳುತ್ತಾರೆ.

ಮಾನವನು ಸದಾಚಾರ ಸಂಪನ್ನನಾಗಿ ಸರ್ವಾಂಗೀಣ ಶುದ್ಧಿಯನ್ನು ಹೊಂದಬೇಕು. ಕಾಯಕ ಮಾಡಬೇಕು. ಸ್ವತಃ ಬಸವಣ್ಣನವರು ಭವಿ ಬಿಜ್ಜಳನ ಮಂತ್ರಿಯಾಗಿ ಜನಸೇವೆಯನ್ನು ಸಲ್ಲಿಸಿದರು. ಪ್ರತಿಯೊಬ್ಬನು ಶ್ರಮಜೀವಿಯಾಗಿರಬೇಕೆಂದು ಅವರ ಕಟ್ಟಳೆ. ಕಾಯಕದಲ್ಲಿ ಉಚ್ಚ-ನೀಚ ಭಾವನೆಗಳಿಲ್ಲ. ತಮ್ಮ ತಮ್ಮ ಯೋಗ್ಯತೆಗೆ ತಕ್ಕಂತೆ ಎಲ್ಲರೂ ಕಾಯಕ ವನ್ನು ಅವಲಂಬಿಸಬೇಕು.

ಪಾಪಪುಣ್ಯಗಳು ಪೂರ್ವ ಜನ್ಮದವು ಅಲ್ಲ. ಸದ್ಯದ ಜನ್ಮದಲ್ಲಿ ಮಾಡುವ ಕೃತಿಗಳಿಗನುಸಾರವಾಗಿ ಬಂದಂತಹವುಗಳು. ಪುಣ್ಯಪಾಪಗಳು ತಮ್ಮ ಇಷ್ಟ-ಎಂಬುದಕ್ಕೆ ಕೆಳಗಿನ ವಚನವನ್ನು ಹೇಳಿರುತ್ತಾರೆ.

"ಪುಣ್ಯಪಾಪಂಗಳೆಂಬುವು ತಮ್ಮ ಇಷ್ಟವು ಕಂಡಿರಯ್ಯ; ಅಯ್ಯಾ ಎಂದಡೆ ಸ್ವರ್ಗ, ಎಲವೊ ಎಂದಡೆ ನರಕ; ದೇವಭಕ್ತ ಜಯಜಯ ಎಂಬ ನುಡಿಯೊಳಗೆ ಕೈಲಾಸವೈದುದು, ಕೂಡಲ ಸಂಗಮದೇವಾ."

ಕುಲ-ಜಾತಿಗಳ ಬಗ್ಗೆ ಅನೇಕರು ಸಂಕುಚಿತ ಭಾವನೆಯನ್ನು ಇಟ್ಟು ಕೊಂಡಿದ್ದಾರೆ. ಹೊಸದಾಗಿ ನಿರ್ಮಿತವಾದ ಜಾತಿ-ಕುಲ-ಗೋತ್ರ ಮೊದಲಾದವುಗಳು ನಿಜವಲ್ಲ. ಅವುಗಳನ್ನು ಕೃತಿಗಳಿಂದಲೇ ಅರಿಯಬೇಕು ಎಂಬ ಸಾರವನ್ನು ಕೆಳಗಿನ ವಚನವು ಹೇಳುತ್ತದೆಃ—

“ ಕೊಲ್ಲುವವನೇ ಮಾದಿಗ, ಹೊಲಸು ತಿಂಬುವವನೇ ಹೊಲೆಯ. ಕುಲವೇನೋ ? ಅವಂದಿರ ಕುಲವೇನೋ ? ಸಕಲ ಜೀವಾತ್ಮರಿಗೆ ಲೇಸನೇ ಬಯಸುವ ನಮ್ಮ ಕೂಡಲ ಸಂಗನ ಶರಣರೆಲ್ಲ ಕುಲಜರು. ” ಹೊಲೆಯನಾದರೇನು ? ಆತ್ಮ ಶುದ್ಧಿಯನ್ನು ಮಾಡಿಕೊಂಡು ಬಾಹ್ಯ ಮತ್ತು ಅಂತರಂಗ ಶುದ್ಧಿಯನ್ನು ಹೊಂದಿದವನು ಶರಣನಾಗಲು ಅರ್ಹನಾಗುತ್ತಾನೆ. ಬಸವಣ್ಣನವರ ಕಾಲದಲ್ಲಿ ಅನೇಕ ಜಾತಿಯವರು ಲಿಂಗಾಂಗಿಗಳಾಗಲಿಲ್ಲವೇ?

ಬಾಹ್ಯ ಶುದ್ಧಿಗಿಂತ ಅಂತರಂಗಶುದ್ಧಿ ಮೊದಲು ಆಗಬೇಕು. ಮೊದಲು ಅಂತರಂಗ ಶುದ್ಧಿಯಾಗದೆ ಬಾಹ್ಯಶುದ್ಧಿಯಾದರೆ ಗುದ್ದಿನೊಳಗೆ ಹೆಗ್ಗಣ ಹೊಗಿಸಿ ಮೇಲೆ ಗುದ್ದು ಬಡಿದು ಚೆನ್ನಾಗಿ ಬಣ್ಣ ಕೊಟ್ಟಂತೆ ಆಗುವದು. ಬಾಹ್ಯಶುದ್ಧಿ ಕ್ಷಣಿಕ, ಆದರೆ ಅಂತರಂಗಶುದ್ಧಿ ಚಿರಕಾಲ ಬಾಳುವಂತಹದು. ಇದನ್ನು ಕೆಳಗಿನ ವಚನದಲ್ಲಿ ಹೇಳಿದೆಃ—

“ ಜನಮೆಚ್ಚು ಶುದ್ಧನಲ್ಲದೆ ಮನಮೆಚ್ಚು ಶುದ್ಧನಲ್ಲವಯ್ಯ. ನುಡಿಯಲ್ಲಿ ಜಾಣನಲ್ಲದೆ ನಡೆಯಲ್ಲಿ ಜಾಣನಲ್ಲವಯ್ಯ. ವೇಷದಲ್ಲಿ ಅಧಿಕನಲ್ಲದೆ ಭಾಷೆಯಲ್ಲಿ ಅಧಿಕನಲ್ಲವಯ್ಯ. ಏಕಾಂತದ್ರೋಹಿ, ಗುಪ್ತಪಾತಕಿ ಯುಕ್ತಿ ಶೂನ್ಯಂಗೆ ಸಕಳೇಶ್ವರ ದೇವರು ಒಲಿಒಲಿ ಎಂದರೆ ಎಂತೊಲಿವನಯ್ಯ.”

ಕಡೆಯದಾಗಿ ಧರ್ಮಾಧರ್ಮದ ವಿಚಾರ. ನಿತ್ಯನೇಮ ಜಪತಪಾದಿಗಳನ್ನು ನೆರವೇರಿಸುವವರಿಗೆ ಕೆಲವೊಂದು ವಿಶಿಷ್ಟ ನಿಯಮವನ್ನು ವಚನಗಳು ಹಾಕಿಕೊಟ್ಟಿವೆ.

“ ಶಿವನೇ ದೈವ. ಕೊಲ್ಲದಿಪ್ಪುದೇ ಧರ್ಮ, ಅಧರ್ಮದಿಂದ ಬಂದುದನೊಲ್ಲದಿಪ್ಪುದೇ ನೇಮ, ಆಶೆಯಿಲ್ಲದಿಪ್ಪುದೇ ತಪ, ರೋಷವಿಲ್ಲದಿಪ್ಪುದೇ ಜಪ, ವಂಚನೆಯಿಲ್ಲದಿಪ್ಪುದೇ ಭಕ್ತಿ, ಹೆಚ್ಚು ಕುಂದಿಲ್ಲದಿಪ್ಪುದೇ ಸಮಯಾಚಾರ. ಇದು ಸತ್ಯ. ಶಿವ ಬಲ್ಲ, ಶಿವನಾಣೆ ಉರಿಲಿಂಗ ಪೆದ್ದಿ ಪ್ರಿಯ ವಿಶ್ವೇಶ್ವರಾ.

ಇಂತು ಮೇಲಿನ ಈ ಉದಾಹರಣೆಗಳಿಂದ ವಚನಗಳ ಗುಟ್ಟು ನಮಗೆ ತಿಳಿಯಬಹುದು. ವಚನಗಳ ಮರ್ಮ ಬಹಳ ಗೂಢ. ಅವುಗಳ ವಿಚಾರ ಘನತೆಯುಳ್ಳದ್ದು. ವೀರಶೈವರು ಇವುಗಳನ್ನು ಚೆನ್ನಾಗಿ ಅಭ್ಯಸಿಸಿದಷ್ಟೂ ಉತ್ತಮ. ಇವುಗಳು ಎಲ್ಲರಿಗೂ ಆದರ್ಶ. ವಚನ ನಿರೂಪಣೆಯ ಉತ್ಸುಕತೆ ವೀರಶೈವರಿಗೆ ಮುನ್ನಡೆಯಾಗಬೇಕು. ಇವು ವಿಶ್ವಜ್ಯೋತಿಗಳಾಗಿ ಪರಿಣಮಿಸಲೆಂದು ನಮ್ಮೆಲ್ಲರ ಹಾರೈಕೆಯಾಗಬೇಕು.

---

# ಆರ್ಯ ಸಂಸ್ಕೃತಿಯಲ್ಲಿಯ ದೋಷಗಳು.

( ಬರೆದವರು:—ಶ್ರೀ. ಅನ್ನದಾನೀಶ್ವರ ವಿರಕ್ತಮಠ )

(೧)

---

ಆರ್ಯ ಸಂಸ್ಕೃತಿಯಲ್ಲಿ ಕೆಲವು ಗುಣಗಳಿರುವಂತೆಯೇ ಅನೇಕ ದೋಷಗಳೂ ಇವೆ. ಕೆಲವು ವಿಶಿಷ್ಟ ವರ್ಗದ ಜನರು ತಾವು ಈ ವಿಷಯದ ಬಗ್ಗೆ ಬರೆದ ಇತಿಹಾಸಗಳಲ್ಲಿ ಆರ್ಯ ಸಂಸ್ಕೃತಿಯನ್ನು ಬಾಯಿ ತುಂಬಾ ಹೊಗಳಿರುವರೇ ವಿನಹಾ ಅದರಲ್ಲಿಯ ದೋಷಗಳನ್ನು ಬಚ್ಚಿಡಲು ಯತ್ನಿಸಿರುವರು. ಇತಿಹಾಸಕಾರರಿಗೆ ಇದು ಸಲ್ಲದ ರೀತಿಯಾಗಿದೆ.

ಆರ್ಯ ಸಮಾಜದವರೂ, ಹಿಂದೂ ಮಹಾಸಭೆಯವರೂ ಮುಂತಾದ ಕೆಲವು ಸಂಸ್ಥೆಗಳ ಜನರು ಆರ್ಯ ಸಂಸ್ಕೃತಿಯೇ ಹಿಂದುಸ್ತಾನದ ಸಂಸ್ಕೃತಿಯೆಂದು ಹೇಳುತ್ತಿರುವರು. ಇದೂ ಕೂಡ ನಿಜವಾದ ಇತಿಹಾಸವನ್ನು ಮರೆಮಾಡುವ ಯತ್ನಗಳಲ್ಲಿ ಒಂದಾಗಿದೆ. ಆರ್ಯ ಸಂಸ್ಕೃತಿಯು ಇಡೀ ಹಿಂದುಸ್ತಾನದ ಸಂಸ್ಕೃತಿಯಲ್ಲ. ಆರ್ಯ-ದ್ರಾವಿಡ ಸಂಸ್ಕೃತಿಗಳ ಮಿಶ್ರಣವೇ ಹಿಂದುಸ್ತಾನದ ಈಗಿನ ಸಂಸ್ಕೃತಿಯೆಂದು ಇತಿಹಾಸ ಸಂಶೋಧಕರು ಹೇಳುತ್ತಾರೆ.

ಹಿಂದೀ ಪ್ರಚಾರಕ ಸಂಘದವರು ಕೇವಲ ಆರ್ಯ ಸಂಸ್ಕೃತಿಯ ಪಠ್ಯ ಪುಸ್ತಕಗಳನ್ನೇ ಮುಖ್ಯವಾಗಿ ತಮ್ಮ ಪರೀಕ್ಷೆಗಳಿಗೆ ನೇಮಿಸಿರುವರು. ಅವರು ಕೂಡ ದ್ರಾವಿಡ ಸಂಸ್ಕೃತಿಯ ಉತ್ತಮೋತ್ತಮ ವಿಚಾರಗಳನ್ನು

ಪ್ರಸಾರ ಮಾಡದೆ ಆರ್ಯ ಸಂಸ್ಕೃತಿಯನ್ನೇ ಪ್ರಚಾರಗೊಳಿಸುತ್ತಾರೆ. ಇದು ತಪ್ಪು ಹಾದಿಯು.

ಹಿಂದು ಸಂಘಟನೆಗಾಗಿ ಯತ್ನಿಸುತ್ತಿರುವವರೂ ಸಹ ಆರ್ಯ ಸಂಸ್ಕೃತಿಯಲ್ಲಿಯ ದೋಷಗಳನ್ನು ನಿವಾರಣೆ ಮಾಡಲು ಸಾಕಷ್ಟು ಯತ್ನಿಸದೆ ಆರ್ಯ ಸಂಸ್ಕೃತಿಯನ್ನೇ ಮುಂದೆ ಮಾಡುತ್ತಿರುವರು. ಇದರಿಂದ ನಿಜವಾದ ಹಿಂದೀ ಜನಾಂಗದ ಸಂಘಟನೆಯಾಗಲಾರದು.

ಕನ್ನಡ ನಾಡಿನಲ್ಲಿಯ ಕನ್ನಡ ಸಾಹಿತ್ಯ ಪರಿಷತ್ತು, ಕರ್ನಾಟಕ ಸಂಘ ಮೊದಲಾದ ಸಂಘಗಳೂ ಕೂಡ ವಿಶೇಷವಾಗಿ ಆರ್ಯ ಸಂಸ್ಕೃತಿಯನ್ನೇ ಪ್ರತ್ಯಕ್ಷಾಪ್ರತ್ಯಕ್ಷ ರೀತಿಗಳಲ್ಲಿ ಹೊಗಳುತ್ತಿರುವವು. ಇದರಿಂದ ಅಖಂಡ ಕರ್ನಾಟಕವನ್ನು ಕಟ್ಟಲಿಕ್ಕೆ ಬೇಕಾದ ಸಂಘಟನೆಯುಂಟಾಗುವದಿಲ್ಲ.

## ಆರ್ಯ ಸಂಸ್ಕೃತಿಯ ದೋಷಗಳು.

(೧) ವೇದಗಳಲ್ಲಿ ಇಂದ್ರಾದಿ ದೇವತೆಗಳನ್ನು ಪೂಜಿಸುವ ರೀತಿಗಳು ಉಕ್ತವಾಗಿವೆ. ಅವುಗಳಲ್ಲಿಯ ಕಾಲ್ಪನಿಕ ದೇವತೆಗಳು, ಕಾಲ್ಪನಿಕ ಸ್ವರ್ಗವು ಜನರ ಮನಸ್ಸನ್ನು ಆಕರ್ಷಿಸಿ ಮೌಢ್ಯತೆಯನ್ನು ಹೆಚ್ಚು ಮಾಡಿದವು. ಸ್ವರ್ಗವು ಸತ್ತಮೇಲೆ ಸಿಗುವದೆಂದು ಹೇಳಿರುವದರಿಂದ ಜನರಲ್ಲಿ ಭವಿಷ್ಯವನ್ನೇ ನಂಬುವ ಚಟ ಹುಟ್ಟಿ ಸದ್ಯದ ಇಹಲೋಕದ ವಿಷಯವಾಗಿ ಸಾಕಷ್ಟು ಕರ್ತವ್ಯ ದಕ್ಷತೆಯುಂಟಾಗಲಿಲ್ಲ. ಅನೇಕ ದೇವತೋಪಾಸನೆಯ ಕಲ್ಪನೆಯು ತತ್ವಜ್ಞಾನ ದೃಷ್ಟಿಯಿಂದ ಒಪ್ಪತಕ್ಕ ಮಾತಲ್ಲ. ಕನ್ನಡನಾಡಿನ ಈಗಿನ ಮುಖ್ಯ ಕವಿಯಾಗಿರುವ ಕೆ. ವಿ. ಪುಟ್ಟಪ್ಪನವರು ಹೇಳುವಂತೆ ನಾವೇ ದೇವತೆಗಳೈ! ಭಾರತವೇ ಸ್ವರ್ಗವೈ! ಎಂಬ ಮಾತೇ ನಿಜ! ಜಗದಣ್ಣ ಬಸವಣ್ಣನು ಹೇಳಿದಂತೆ ಸ್ವರ್ಗ ನಂಕಗಳು ಇಲ್ಲಿಯೇ ಇವೆ. ಮಹಮ್ಮದ ಪೈಗಂಬರರು ಹೇಳಿದಂತೆ ಏಕೇಶ್ವರೀ ಪಂಥದ ತತ್ವವು ಸತ್ಯವಾಗಿದೆ.

(೨) ಯಜ್ಞವು ಆರ್ಯ ಸಂಸ್ಕೃತಿಯ ೨ನೇ ದೋಷವು. ಸ್ವಾಮಿ ರಾಮತೀರ್ಥರೆಂಬ ಮಹಾ ಯೋಗಿಗಳು ಹೇಳಿರುವಂತೆ ಯಜ್ಞದಲ್ಲಿ ತುಪ್ಪವನ್ನು ಸುರುವಿ ಅಪವ್ಯಯ ಮಾಡುವದಕ್ಕಿಂತ ಬಡವರ ಹೊಟ್ಟೆಗೆ ರೊಟ್ಟಿಯನ್ನು ಅರ್ಪಿಸುವದೇ ನಿಜವಾದ ಶ್ರೇಷ್ಠವಾದ ಮಾರ್ಗವು. ಯಜ್ಞದಲ್ಲಿಯ ಪಶು ಹಿಂಸೆಯಂತೂ ಕಾಡುತನದ ದ್ಯೋತಕವೇ ಸರಿ. ಈ ಅನಾ

ಗರಿಕತೆಯನ್ನು ಭಗವಾನ್ ಬುದ್ಧದೇವನು ತನ್ನ ಆತ್ಮ ಪ್ರಭಾವದಿಂದ ತೆಗೆದುಹಾಕಿ ಮಾನವ ಜನಾಂಗಕ್ಕೆಯೇ ಹಿತಮಾಡಿದನು.

(೩) ವೈದಿಕಧರ್ಮವು ವರ್ಣಾಶ್ರಮ ಧರ್ಮವನ್ನು ಸ್ಥಾಪಿಸಿ ಅಸ್ಪೃಶ್ಯತೆಯನ್ನು ಸ್ಥಿರಗೊಳಿಸಿದ್ದಂತೂ ಅತ್ಯಂತ ಹೇಯವಾದದ್ದು. ಸ್ವಾಮಿ ರಾಮತೀರ್ಥರು ಹೇಳಿದಂತೆ ಅಸ್ಪೃಶ್ಯತೆಯು ಆರ್ಯರಿಗೆ ದೊಡ್ಡ ಕಲಂಕವು. ಆರ್ಯರು ಊರಿದ ವಿಷಫಲವನ್ನೇ ಈಗ ನಾವು ಸೇವಿಸಿ ಸಾಯುತ್ತಿದ್ದೇವೆಂದು ಸ್ವಾಮಿ ರಾಮತೀರ್ಥರು ಹೇಳಿದ್ದು ಕಟುವಾದ ಸತ್ಯವಾಗಿದೆ. ಮನುಸ್ಮೃತಿಯ ೧೦ನೇ ಅಧ್ಯಾಯದಲ್ಲಿ ಅಸ್ಪೃಶ್ಯರ ಬಗ್ಗೆ ಮಾಡಿದ ನೇಮಗಳಂತೂ ನೀಚ ಸ್ವಾರ್ಥದ ದ್ಯೋತಕವಾಗಿವೆ. ವರ್ಣಗಳ ವ್ಯವಸ್ಥೆಯ ಪ್ರಕಾರ ಅಸ್ಪೃಶ್ಯರ ಆರ್ಥಿಕ, ಸಾಮಾಜಿಕ, ಧಾರ್ಮಿಕ, ಬೌದ್ಧಿಕ ಮತ್ತು ಆರೋಗ್ಯವಿಷಯಕ ಗುಲಾಮಗಿರಿಯೇ ಸ್ಥಾಪನವಾಯಿತು. ಸನ್ಯಾಸಾಶ್ರಮಕ್ಕೆ ದೊಡ್ಡ ಮಹತ್ವವು ಬಂದು ಇಹಲೋಕದ ಕರ್ತವ್ಯ ದಕ್ಷತೆಯು ಕಡಿಮೆಯಾಗುತ್ತಾ ಬಂದಿತು. ಕ್ರಿಯಾಸಾಮರ್ಥ್ಯವೇ ಲಯವಾಗುತ್ತಾ ಬಂದಿತು.

(೪) ವರ್ಣಾಶ್ರಮ ಪದ್ಧತಿಯ ಪ್ರಕಾರ ಅನೇಕ ಜಾತಿಗಳುಂಟಾಗಿ ಹಿಂದುಸ್ತಾನವು ಇಂದಿಗೂ ಜಾತಿಗಳ ಬಂಧನದಿಂದ ಬಿಡುಗಡೆಯಾಗಲೊಲ್ಲದು. ಇಷ್ಟೇ ಅಲ್ಲ, ವರ್ಣ ವ್ಯವಸ್ಥೆ ಹೋಗದ ವಿನಹಾ, ಅದನ್ನು ಸ್ಥಿರೀಕರಿಸುವ ಯತ್ನಗಳು ನಿಲ್ಲದ ವಿನಹಾ, ವರ್ಣವಾದಿಗಳಿಂದ ಅಸ್ಪೃಶ್ಯತೆಯ ನಿವಾರಣೆಯಾಗದ ವಿನಹಾ ಹಿಂದುಸ್ತಾನದಲ್ಲಿ ಜಾತಿ ಭೇದವು ಹೋಗಲಾರದು. ಈ ಮಾತನ್ನು ದುರ್ಲಕ್ಷಿಸಿ ಮಾಡುವ ಇತರ ಪ್ರಯತ್ನಗಳು ಹೆಗ್ಗಣವನ್ನು ಒಳಗಿಟ್ಟು ಮೇಲೆ ಗುದ್ದು ಮುಚ್ಚಿದಂತೆಯೇ ಸರಿ.

(೫) ವರ್ಣಾಶ್ರಮ ಸ್ವರಾಜ್ಯ ಸಂಘದಂತಹ ಸಂಸ್ಥೆಗಳು ಇರುವ ವರೆಗೆ ಡಾ. ಆಂಬೇಡಕರರ ಪಕ್ಷಗಳು ಇರತಕ್ಕವೇ ಆಗಿವೆ. ಬ್ರಾಹ್ಮಣರಿಗೇನೇ ಪ್ರಾಶಸ್ತ್ಯವಿರುವ ವರೆಗೆ ಬ್ರಾಹ್ಮಣೇತರ ಪಕ್ಷಗಳೂ ಇರತಕ್ಕವೇ. ಈ ಪ್ರಕಾರ ಬ್ರಾಹ್ಮಣ—ಬ್ರಾಹ್ಮಣೇತರ ಮತ್ತು ಸ್ಪೃಶ್ಯ—ಅಸ್ಪೃಶ್ಯ ಎಂಬ ಭೇದಗಳು ಆರ್ಯ ಸಂಸ್ಕೃತಿಯ ಕಹಿಯಾದ ಫಲಗಳೇ ಸರಿ. ಮೇಲಿನ ಹೆಸರುಗಳು ಬದಲಾಗಬಹುದು. ಆದರೆ ಹೊಸ ರೂಪದ ಹೋರಾಟ ತಪ್ಪಿದ್ದಲ್ಲ. ಆರ್ಯ ಸಂಸ್ಕೃತಿಯು ಮೇಲಾದದ್ದು ಮತ್ತು ಇತರ ಸಂಸ್ಕೃತಿ

ಗಳು ಕೀಳಾದವು ಎಂಬ ಭಾವನೆ ಇರುವ ವರೆಗೆ ಜಾತಿ ಭೇದದ ಹೋರಾಟವು ಕಡಿಮೆಯಾಗುವದಿಲ್ಲ.

(೬) ಸ್ತ್ರೀಯರಿಗೆ ಧಾರ್ಮಿಕ, ಸಾಮಾಜಿಕ ಸ್ವಾತಂತ್ರ್ಯವನ್ನು ಕೊಡದೇ ಇದ್ದುದೂ ಆರ್ಯ ಸಂಸ್ಕೃತಿಯ ದೋಷವು. ಇದರಿಂದ ಸಮಾಜ ಪುರುಷನು ಅರ್ಧಾಂಗವಾಯುವಿನಿಂದ ಬಳಲುವಂತೆ ಪರಿಸ್ಥಿತಿಯುಂಟಾಯಿತು.

(೭) ಯಾವ ಸಂಸ್ಕೃತಿಯು ವಿಧವೆಯರಿಗೆ ಅಮಂಗಲೆಯರೆಂದು ಹೇಳಿ, ಅನೇಕ ಕ್ರೂರ ನಿರ್ಬಂಧಗಳನ್ನು ಹಾಕಿ ಅಸ್ವಾಭಾವಿಕ ಪಾಪಗಳಿಗೆ ಎಡೆ ಮಾಡಿ ಕೊಟ್ಟದೆಯೋ ಆ ಆರ್ಯ ಸಂಸ್ಕೃತಿಯು - ನಾಲ್ಕು ಗೋಡೆಗಳ ಮಧ್ಯದಲ್ಲಿ ತಪ ತೆಗೆಯುತ್ತಿರುವ ವಿಧವೆಯರು—ವಿಷಮ ಮತ್ತು ಸ್ವಾರ್ಥ ಪೂರಿತವಾದದ್ದೆಂದು ಕರೆದರೆ ದೋಷವೇನು ?

(೮) ಶ್ರಾದ್ಧ ಕಾಲದಲ್ಲಿ ಮಾಂಸ ತಿನ್ನಬೇಕೆಂದೂ, ಶ್ರಾದ್ಧ ಮಾಡುವದರಿಂದ ಸತ್ತ ಪಿತೃಗಳಿಗೆ ಸ್ವರ್ಗ ಸಿಗುವದೆಂದೂ ಹೇಳುವ ಆರ್ಯ ಸಂಸ್ಕೃತಿಯ ಮೂಢ ನಂಬಿಗೆಯಂತೂ ತೀರ ಹುಚ್ಚಾಟವು !

ಈ ಪ್ರಕಾರ ಇಂಥ ದೋಷಗಳಿಂದ ತುಂಬಿದ ಆರ್ಯ ಸಂಸ್ಕೃತಿಯು ಇಡೀ ಹಿಂದುಸ್ತಾನದ ಸಂಸ್ಕೃತಿಯಾಗಬಲ್ಲುದೇ ? ಆದಕಾರಣ ಆರ್ಯ ಸಂಸ್ಕೃತಿಯ ಅಭಿಮಾನಿಗಳು ಇಂಥ ದೋಷಗಳನ್ನು ತೆಗೆದುಹಾಕಲು ಯತ್ನಿಸಿದರೆ ಎಷ್ಟೋ ದೇಶ ಕಲ್ಯಾಣವಾದೀತು !

---

## ವೈದಿಕ ಧರ್ಮವು ಸ್ತ್ರೀ ಸ್ವಾತಂತ್ರ್ಯದ ವೈರಿಯು !

( ೨ )

---

ನಿಕೋಲ್ ಮ್ಯಾಕ್ನಿಕಾಲ್ ಎಂಬವರು ‘ ಪಂಡಿತ ರಮಾಬಾಯಿ ’ ಎಂಬ ಪುಸ್ತಕದಲ್ಲಿ ೩೭ನೇ ಪುಟದಲ್ಲಿ ಹೀಗೆ ಬರೆದಿರುವರು:—

“ ವೇದಗಳನ್ನೂ ವೇದಾಂತವನ್ನೂ ಓದಲಿಕ್ಕೆ ಸ್ತ್ರೀಯರಿಗೆ ಅಧಿಕಾರವೇ ಇಲ್ಲ. ವೇದ-ವೇದಾಂತ ಜ್ಞಾನವಿಲ್ಲದೆ ಬ್ರಹ್ಮಜ್ಞಾನವಿಲ್ಲ. ಬ್ರಹ್ಮಜ್ಞಾನವಿಲ್ಲದೆ ಮೋಕ್ಷವಿಲ್ಲ. ಹೀಗೆಂದಮೇಲೆ ಸ್ತ್ರೀಯಳಿಗೆ ಮೋಕ್ಷವಿಲ್ಲವೆಂದಂ

ತಾಯಿತು. ಹಾಗಾದರೆ ಅವಳ ಮೋಕ್ಷಮಾರ್ಗವಾವುದು ? ಅವಳು ಪುಣ್ಯ ಕರ್ಮಗಳನ್ನು ಮಾಡುತ್ತಿರಬೇಕು. ಸತ್ತಮೇಲೆ ಉತ್ತಮವರ್ಣದ ಮನುಷ್ಯ ಜನ್ಮವು ಅವಳಿಗೆ ಪ್ರಾಪ್ತವಾಗುವದು. ಆ ಮೇಲೆ ಅವಳು ವೇದ-ವೇದಾಂತ ಗಳನ್ನು ಓದಿ ಮೋಕ್ಷ ಪಡೆಯಬಹುದು. ಪ್ರಾಚೀನ ಕಾಲದಲ್ಲಿ ವೈದಿಕ ಧರ್ಮದ ರೂಢಿಯು ಈ ಪ್ರಕಾರವಿತ್ತು. ಸ್ವತಂತ್ರ ಮನೋವೃತ್ತಿಯ ಮತ್ತು ಜ್ಞಾನಶಕ್ತಿಯುಳ್ಳ ರಮಾಬಾಯಿಗೆ ವೈದಿಕಧರ್ಮವು ಸೇರಲೇ ಇಲ್ಲ. ಇದರಲ್ಲಿ ಯಾವ ಆಶ್ಚರ್ಯವೂ ಇಲ್ಲ.

ಅದೇ ಪುಸ್ತಕದಲ್ಲಿ ಪಂಡಿತ ರಮಾಬಾಯಿಯೇ ಈ ಪ್ರಕಾರ ಹೇಳಿ ರುವಳು:—

" ಹಿಂದೂ ಧರ್ಮ ಶಾಸ್ತ್ರಾಭ್ಯಾಸ ಮಾಡುವಾಗ ನನ್ನ ಕಣ್ಣುಗಳು ಸ್ತ್ರೀಯಳ ಅಸಹಾಯ ಮತ್ತು ಕನಿಕರ ಸ್ಥಿತಿಯ ಬಗ್ಗೆ ಚನ್ನಾಗಿ ತೆರೆದವು. ವೈದಿಕ ಧರ್ಮದಲ್ಲಿ ಸ್ತ್ರೀಯಳಾದ ನನಗೆ ಸ್ಥಾನವೇ ಇಲ್ಲ. ಧಾರ್ಮಿಕ ಶಾಂತಿಯ ಮಾತಂತೂ ದೂರೇ ಉಳಿಯಿತು. ನನ್ನ ಜೀವನವೇ ನನಗೆ ಬೇಸರಾಯಿತು. "

ಮನುಸ್ಮೃತಿಯಲ್ಲಿ ಏನು ಹೇಳಿದೆ ? ಕೇಳಿ ?

" ಸ್ವಾತಂತ್ರ್ಯಕ್ಕೆ ಸ್ತ್ರೀಯಳು ಯೋಗ್ಯಳಲ್ಲ. ಬಾಲ್ಯದಲ್ಲಿ ತಂದೆಯ ವಶದಲ್ಲಿಯೂ, ತಾರುಣ್ಯದಲ್ಲಿ ಗಂಡನ ವಶದಲ್ಲಿಯೂ, ಗಂಡ ಸತ್ತ ಮೇಲೆ ಮಕ್ಕಳ ವಶದಲ್ಲಿಯೂ ಇರಬೇಕು.

ಭಗವದ್ಗೀತೆಯಲ್ಲಿ ೮ನೇ ಅಧ್ಯಾಯದಲ್ಲಿ ಹೀಗೆ ಹೇಳಿದೆಃ—

" ಹಿಂದಿನ ಜನ್ಮದಲ್ಲಿ ಪಾಪ ಮಾಡಿದ್ದರಿಂದ ಈ ಜನ್ಮದಲ್ಲಿ ಸ್ತ್ರೀಯಾಗಿ ಹುಟ್ಟುತ್ತಾಳೆ."

ಇನ್ನು ಪುರಾಣಗಳ ಕಡೆಗೆ ಹೊರಳುವಾ.

ಗಾರುಡ ಪುರಾಣದಲ್ಲಿ ಹೀಗೆ ಹೇಳಿದೆ:—

" ಹಿಂದಿನ ಜನ್ಮಗಳಲ್ಲಿ ಪಾಪಕೃತ್ಯಗಳನ್ನು ಮಾಡಿದ್ದರಿಂದ ನಿನಗೆ ಸ್ತ್ರೀಜನ್ಮವು ಬಂದಿತು. ಸ್ತ್ರೀಯಳಾದರೆ ಬಹಳ ದುಃಖದ ಉಗಮಸ್ಥಾನವು."

ಪದ್ಮ ಪುರಾಣದ ಕತೆಯನ್ನು ಕೇಳಿರಿ.

" ಗಂಡನು ಕುರೂಪಿಯೂ, ಮುದುಕನೂ, ಅಶಕ್ತನೂ, ಅಸಭ್ಯನೂ, ಜೂಜುಗಾರನೂ, ಕುಡುಕನೂ, ಘಟಿಂಗನೂ, ಅವಯವಹೀನನೂ,

ಮರ್ಯಾದೆಗೇಡಿಯೂ ಘೋರಪಾಪಿಯೂ ಇರಲಿ. ಹೆಂಡತಿಯು ಅವನು ದೇವರೆಂದು ತಿಳಿಯಬೇಕು. ಅವನ ಗುಣಶೀಲಗಳನ್ನು ನೋಡದೆ ಅವನು ಸಮಾಧಾನವಾಗುವಂತೆಯೇ ವರ್ತಿಸಬೇಕು. ಗಂಡನು ಅನ್ಯಾಯವಾಗಿ ಸಿಟ್ಟಿಗೆದ್ದು ಬೈಯ್ದು ಹೊಡೆದರೂ ಹೆಂಡತಿಯು ಸುಮ್ಮನೇ ಇರಬೇಕು. ಅಳಬಾರದು. ಅವನ ಕಾಲು ಹಿಡಿದು ಕ್ಷಮೆ ಕೇಳಬೇಕು. ಸತ್ತರೆ ಗಂಡನ ಕೂಡ ಸಾಯಬೇಕು. ಗಂಡನು ಮೊದಲು ಸತ್ತರೆ ಅವನ ಹೆಣ ಸುಡುವ ಬೆಂಕಿಯ ಮೇಲೆ ಹಾರಿ ಸಾಯಬೇಕು. ಅಂದರೆ ಎಲ್ಲರೂ ಅವಳನ್ನು ಸ್ತೋತ್ರ ಮಾಡುವರು.

ರಾಮಾಯಣ ಮತ್ತು ಮಹಾಭಾರತಗಳಲ್ಲಿಯೂ ಸತಿಹೋಗುವ ಅನಿಷ್ಟ ಪದ್ಧತಿಯು ರೂಢಿಯಲ್ಲಿತ್ತು.

ಅಜ್ಞ ಜನರ ಸಲುವಾಗಿ ಬರೆದ ಹಳೇ ಕಟ್ಟುಕತೆಗಳೇ ಪುರಾಣಗಳೆಂದು ಮಿ॥ ಅರ್ವೆಸ್ಟವುಡ್ಡರು ಹೇಳುತ್ತಾರೆ. ಪುರಾಣಗಳು ಹಿಂದೂಜನರ ಬಾಯಿಬಲ್ ಎಂದು ಮಿಸ್ ಮೆಯೋ ಹೇಳಿದ್ದಾಳೆ. ಹೇಗಿದ್ದರೂ ಮಹಾತ್ಮಾ ಗಾಂಧಿಯವರು ಹಿಂದೂ ಧರ್ಮ ಗ್ರಂಥಗಳಲ್ಲಿ ಪುರಾಣಗಳಿಗೆ ಒಂದು ಸ್ಥಾನ ಕೊಟ್ಟಿರುವರು.

ಮನುಸ್ಮೃತಿಯಲ್ಲಿ ಹೇಳಿದ ಸ್ವರ್ಗದ ಕಲ್ಪನೆಯಿಂದ ವಿಧವೆಯರಿಗೆ ಹೇಗೆ ಸಮಾಧಾನವಾಗುತ್ತಿದೆಯೋ ಅವರಿಗೇ ಗೊತ್ತು. ಸ್ವರ್ಗದಲ್ಲಿ ಗಂಡನನ್ನು ಕೂಡುತ್ತೇನೆಂಬ ಭಾವನೆಯಿಂದ ವಿಧವೆಯು ಸನ್ಯಾಸಿಯಂತೆ ತಪ ಸ್ವೀಕರಿಸಬೇಕಾಗುವದು. ಹೀಗೆ ತಪ ತೆಗೆಯುವದು ಸಮಾಜದ ರೂಢಿಯಾಗಿಯೂ ಧಾರ್ಮಿಕ ವಿಧಿಯಾಗಿಯೂ ಪರಿಣಮಿಸಿದೆ.

ಈ ಪ್ರಕಾರ ವೇದ, ಮನುಸ್ಮೃತಿ, ಗೀತೆ, ಪುರಾಣಗಳೆಲ್ಲವೂ ಕೂಡಿ ವೈದಿಕ ಧರ್ಮ ಅಥವಾ ಹಿಂದೂ ಧರ್ಮವಾಗುತ್ತದೆಂದು ಮಹಾತ್ಮಾ ಗಾಂಧಿಯವರು ಹೇಳುತ್ತಾರೆ. ಇಂಥ ವೈದಿಕ ಧರ್ಮವು ಸ್ತ್ರೀ ಸ್ವಾತಂತ್ರ್ಯದ ವೈರಿಯಾಗಿದೆಯೆಂದು ಮೇಲಿನ ಆಧಾರಪೂರ್ವಕವಾದ ಬರವಣಿಗೆಯಿಂದ ವೇದ್ಯವಾಗುವದಿಲ್ಲವೇ ?

ವೈದಿಕ ಧರ್ಮಾಭಿಮಾನಿಗಳೂ, ಆರ್ಯಸಂಸ್ಕೃತಿಯ ಕಟ್ಟಾಳುಗಳೂ, ಇತಿಹಾಸ ಸಂಶೋಧಕರೆಂದು ಹೊಗಳಿಸಿಕೊಳ್ಳುವವರೂ ಕಂನ್ನಾಡಿನ ಆತ್ಮ ನಿರೀಕ್ಷಕರೆಂದೆನಿಸಿಕೊಳ್ಳುವವರೂ ಇಂದಿನ ಸ್ತ್ರೀ ಸ್ವಾತಂತ್ರ್ಯ

ವನ್ನು ಬರೀ ಹೊಗಳುವದರಲ್ಲಿ ಏನು ಅರ್ಥವಿದೆ? ಯಾವ ಉದ್ದೇಶವಿದೆ? ಸ್ತ್ರೀಯರ ಅವನತಿಯ ಬೇರುಗಳು ಮೇಲೆ ಹೇಳಿದ ವೈದಿಕ ಧರ್ಮ ಗ್ರಂಥಗಳಲ್ಲಿಯೇ ಇವೆ. ಸ್ತ್ರೀ ಸ್ವಾತಂತ್ರ್ಯದ ವೈರಿಯಾಗಿರುವ ವೈದಿಕ ಧರ್ಮದ ವಿರೋಧವಾಗಿ ಕ್ರಾಂತಿಯನ್ನು ಯುಗಪ್ರವರ್ತಕ ಬಸವಣ್ಣನವರು ೧೨ ನೇ ಶತಮಾನದಲ್ಲಿಯೇ ಮಾಡಿ ಇಂದಿನ ಸ್ತ್ರೀ ಸ್ವಾತಂತ್ರ್ಯ ಪುರಸ್ಕರ್ತರಿಗೆ ಮಾರ್ಗದರ್ಶಕರಾಗಿ ಹೋಗಿರುವರು. ಇದು ಸಾಮಾನ್ಯ ಸಂಗತಿಯೇ? ಆದಕಾರಣ ದುರಭಿಮಾನದಿಂದ, ಸ್ವಾರ್ಥ ಸಾಧನೆಯ ಉದ್ದೇಶದಿಂದ, ಕ್ರಾಂತಿಕಾರಕ ಮಹಾತ್ಮಾ ಬಸವಣ್ಣನನ್ನು ಹಿಂದೆ ಸರಿಸಲು ಯತ್ನಿಸಿದರೆ ಹಗಲು ಕಂಡ ಬಾವಿಯಲ್ಲಿ ಇರುಳು ಬಿದ್ದಂತೆಯೇ ಸರಿ.

---

## ವಚನಗಳು!

( ಶ್ರೀಯುತ ಆರ್. ಕೆ. ಹಿರೇಮಠ )

೧

ಭಕ್ತಿಯ ಒರತೆಯಲ್ಲಿದೆ, ಸತ್ಯಸಾಧನೆಯ ತಿಳಿನೀರು.
ನಿತ್ಯವೂ ಮನವೊಪ್ಪಿ ಸೇವಿಸಿದಡೆ, ಸಾಧನೆ ಸೆಲೆಯಾಗಿ
ಮೋಕ್ಷ ವಾರಿಧಿಗೆ ಹರಿದು ಕೂಡುವದು ಕಾಣಾ ಸಂಗಮನಾಥ.

೨

ಸಾಧನೆಯ ಶ್ರಮಜೀವಿ ನಾನು. ಅರಿವಿಲ್ಲದ ಮರುಳ ನಾನು.
ದಾರಿಗಾಣದ ಕುರುಡ ನಾನು. ದೇವ! ಕರುಣಿ!! ಭಕ್ತಿಯ
ಬುಗ್ಗೆಯಲಿ ನುಗ್ಗಿಸಿ ಶುದ್ಧ ಜೀವಿಯ ಮಾಡು. ಸಂಗಮನಾಥ.

೩

ತಿಂಗಳಿನ ತಂಗಿರಣ. ಸೊಗಸಾಗಿ ಸೂಸುವ ಸುಳಿಗಾಳಿ.
ಹಚ್ಚಗೆ ಒಪ್ಪುತಿಹ ಗಿಡಗಂಟಿ. ಶಬ್ದ ಸುಳಿಯದ ಬಯಲು.
ಕೆಳಗೆ ತಿಳಿಗೊಳ; ಮೇಲೆ ಶಿವಗುಡಿ. ಇಂತಿರಲು ಬೇರೆ
ಸಾಧನಗಳೇಕೆ? ತಂದೆ! ನಿನ್ನ ಧ್ಯಾನಿಸಲು ಸಂಗಮನಾಥ.

೪

ಧ್ಯಾನದ ಮೊನೆಯಲ್ಲಿ ಜ್ಞಾನ! ದಯೆಯ ಮೊನೆಯಲ್ಲಿ ಧರ್ಮ!!

ಶಾಂತಿಯ ಮೊನೆಯಲ್ಲಿ ಆನಂದ !!! ಸದಾಚಾರದ ಮೊನೆಯಲ್ಲಿ
ಸರ್ವಸುಖ ಸಂಗಮನಾಥ.

೫

ಕೀರ್ತಿಯ ಅಳಿಸು. ಭಕ್ತಿಯ ಬೆಳೆಸು. ಗುರುವಿನ ಕಳಿಸು.
ಆಚಾರವ ಸಲಿಸು. ಜ್ಞಾನವ ಬಲಿಸು. ಮಾಯವ ಗೆಲಿಸು.
ವಿನಯವ ಕಲಿಸು. ಪಿಶುನಿತನ ಬಿಡಿಸು ಸಂಗಮನಾಥ.

೬

ನೀತಿ ಡಾಂಭಿಕ ರೀತಿಯೇ ? ನೀತಿ ಜೀವನದ ಜ್ಯೋತಿ.
ನೀತಿ ಸಾಧನೆಯ ಮಂತ್ರ ! ನೀತಿ ನೆಲೆಗೆ ನಿನ್ನೊಲುಮೆ
ಮೊದಲು ಕಾಣಾ ಸಂಗಮನಾಥ.

೭

ಮನೆ ಮುನಿದು ನನ್ನನೇನು ಮಾಡುವದು ?
ನನ್ನ ಮನ ಮುನಿಯದನ್ನಕ್ಕ ! ಮನೆ
ಮುನಿದು "ಮಹಮನೆಗೆ" ನೂಕುವದು.
ಮಹಮನೆಯಾನಂದ ವಿಮ್ಮಡಿಸುವದು ಸಂಗಮನಾಥ.

## ಶಿವಾನುಭವ ಗ್ರಂಥಮಾಲೆಗೆ ಸಹಾಯ.

ಶಿವಾನುಭವ ಗ್ರಂಥಮಾಲೆಯಲ್ಲಿ ಪ್ರಕಟವಾದ ಅನೇಕ ಪುಸ್ತಕಗಳು ಈಗ ತೀರಿ ಹೋಗಿರುವವು. ಅವುಗಳ ಪುನರ್ಮುದ್ರಣ ಕಾರ್ಯವು ಅತ್ಯಾವಶ್ಯಕವಾಗಿದ್ದು ಇದಕ್ಕೆ ವೀರಶೈವ ಮಹಾಜನರ ಪ್ರೋತ್ಸಾಹವಿಲ್ಲದೆ ಹೋದರೆ ಈ ಗ್ರಂಥಗಳು ಮುಂದೆ ಬೆಳಕನ್ನು ಕಾಣುವದು ದುಸ್ತರವಿರುತ್ತದೆ. ಆದ್ದರಿಂದ ಈ ಮಹತ್ವದ ಕಾರ್ಯಕ್ಕೋಸ್ಕರ ಶಿವಮೊಗ್ಗಾ ಜಿಲ್ಲಾ ಚನ್ನಗಿರಿ ತಾಲೂಕು ಬಿಲ್ಲಹಳ್ಳಿ ವಿರಕ್ತಮಠದ ಶ್ರೀಮನ್ನಿರಂಜನ ಪ್ರಣವ ಸ್ವರೂಪಿಗಳಾದ ಶ್ರೀ ಸಂಗಮನಾಥ ಸ್ವಾಮಿಗಳೂ ಹರಪನಹಳ್ಳಿ ತಾಲೂಕು ಪುಣಬಗಟ್ಟಿ ಮಠದ ಬಸಯ್ಯನವರೂ ತಮ್ಮ ಭಾಗದಲ್ಲಿ ಪ್ರಯತ್ನಿಸಿ ೨೫ ರೂಪಾಯಿಗಳನ್ನು ನಮಗೆ ಮನಿಆರ್ಡರ ಮಾಡಿ ಕಳಿಸಿದ್ದಾರೆ. ಹೀಗೆ ಸಹಾಯ ಮಾಡಿದ ಇವರಿಗೂ ಹಣ ಕೊಟ್ಟವರಿಗೂ ಕೃತಜ್ಞತಾ ಪೂರ್ವಕವಾಗಿ ನಮ್ಮ ವಂದನೆಗಳು.

—ಸಂಪಾದಕ ಶಿವಾನುಭವ ವಿಜಾಪುರ.

# ಶರೀರಕ್ಕೆ ದಶವಿಧ ಪಾದೋದಕ ಮತ್ತು ಏಕಾದಶ ಪ್ರಸಾದ ಇವುಗಳ ಸಂಬಂಧವು.

(೧) ಅಯ್ಯಾ, ಏಕವಿಂಶತಿ ದೀಕ್ಷೆಯ ನಿಲುಕಡೆ, ದ್ವಾದಶಾಚಾರ ಮೊದಲಾಗಿ ಸರ್ವಾಚಾರ ಸಂಪತ್ತಿನ ಆಚರಣೆಯ ಅರ್ಪಿತಾವಧಾನವನರಿಂದಾಚರಿಸಿದಡೆ, ನಿನ್ನ ಸರ್ವಾಂಗವೆಲ್ಲ ಪಾದೋದಕ ಪ್ರಸಾದ, ಮಂತ್ರಮಯ ಪರಬ್ರಹ್ಮಸ್ವರೂಪು ನೋಡಾ. ಅದರ ವಿಚಾರವೆಂತೆಂದೊಡೆ:—

ನಿನ್ನ ಕಾಯದ ಮಧ್ಯದಲ್ಲಿ ಅನಾದಿ ಗುರು ಬಸವೇಶ್ವರ ಸ್ವಾಮಿಗಳೇ ಇಷ್ಟಲಿಂಗ ಮಂತ್ರ, ಚಿದ್ವಿಭೂತಿ, ರುದ್ರಾಕ್ಷಿ, ದೀಕ್ಷಾ ಪಾದೋದಕ, ಶುದ್ಧ ಪ್ರಸಾದವಾಗಿ ನೆಲಸಿರ್ಪರು ನೋಡಾ.

ನಿನ್ನ ಮನದ ಮಧ್ಯದಲ್ಲಿ ಅನಾದಿ ಚರರೂಪು ಚನ್ನಬಸವೇಶ್ವರ ಸ್ವಾಮಿಗಳೇ ಪ್ರಾಣಲಿಂಗ ಸಪ್ತಕೋಟಿ ಮಹಾಮಂತ್ರ, ಶಿಕ್ಷಾ ಪಾದೋದಕ, ಸಿದ್ಧ ಪ್ರಸಾದವಾಗಿ ನೆಲಸಿರ್ಪರು ನೋಡಾ.

ನಿನ್ನ ಭಾವ ಮಧ್ಯದಲ್ಲಿ ಅನಾದಿ ಪರಶಿವರೂಪ ಅಲ್ಲಮಪ್ರಭು ಸ್ವಾಮಿಗಳೇ ಭಾವಲಿಂಗ ಅಗಣಿತ ಮಂತ್ರ, ಜ್ಞಾನ ಪಾದೋದಕ, ಪ್ರಸಿದ್ಧ ಪ್ರಸಾದವಾಗಿ ನೆಲಸಿರ್ಪರು ನೋಡಾ.

ನಿನ್ನಾಧಾರ ಚಕ್ರಮಧ್ಯದಲ್ಲಿ ಆಚಾರ ಮೂರ್ತಿ ಮಡಿವಾಳಸ್ವಾಮಿಗಳೇ ಪಂಚಾಚಾರ ಮೂರ್ತಿ, ಆಚಾರಲಿಂಗ ಮಂತ್ರ, ಸ್ಪರ್ಶನೋದಕ, ಆಪ್ಯಾಯನ ಪ್ರಸಾದವಾಗಿ ನೆಲಸಿರ್ಪರು ನೋಡಾ.

ನಿನ್ನ ಸ್ವಾಧಿಷ್ಠಾನ ಚಕ್ರಮಧ್ಯದಲ್ಲಿ ಸತ್ಕ್ರಿಯಾ ಮೂರ್ತಿ, ಮರುಳು ಶಂಕರಸ್ವಾಮಿಗಳೇ ಮಂತ್ರಮೂರ್ತಿ, ಗುರು ಲಿಂಗ ಮಂತ್ರ, ಅವಧಾನೋದಕ, ಸಮಯ ಪ್ರಸಾದವಾಗಿ ನೆಲಸಿರ್ಪರು ನೋಡಾ.

ನಿನ್ನ ಮಣಿಪೂರಕ ಚಕ್ರ ಮಧ್ಯದಲ್ಲಿ ಸಮ್ಯಕ್ ಜ್ಞಾನಮೂರ್ತಿ ಸಿದ್ಧರಾಮೇಶ್ವರಸ್ವಾಮಿಗಳೇ ನಿರೀಕ್ಷಣ ಮೂರ್ತಿ, ಶಿವಲಿಂಗ ಮಂತ್ರ ಆಪ್ಯಾಯನೋದಕ, ಪ್ರಸಾದಿಯ ಪ್ರಸಾದವಾಗಿ ನೆಲಸಿರ್ಪರು ನೋಡಾ.

ನಿನ್ನ ಅನಾಹತ ಚಕ್ರಮಧ್ಯದಲ್ಲಿ ಷಡ್ಗುಣೈಶ್ವರ್ಯ ಸಂಪನ್ನೆ ನೀಲಲೋಚನೆ ತಾಯಿಗಳೇ ಯಜನ ಸ್ವರೂಪ ಮೂರ್ತಿ, ಜಂಗಮ ಲಿಂಗ ಮಂತ್ರ, ಹಸ್ತೋದಕ, ಪಂಚೇಂದ್ರಿಯ ವಿರಹಿತ ಪ್ರಸಾದವಾಗಿ ನೆಲಸಿರ್ಪರು ನೋಡಾ.

ನಿನ್ನ ವಿಶುದ್ಧಿ ಚಕ್ರಮಧ್ಯದಲ್ಲಿ ಪರಮವಿರಾಗವನುಳ್ಳ ಮಹಾದೇವಿ ತಾಯಿಗಳೇ ಈಳನ ಸ್ವರೂಪವಾದ ಪ್ರಸಾದ ಲಿಂಗ ಮಂತ್ರ, ಪರಿಣಾಮೋದಕ, ಕರಣಚತುಷ್ಟಯ ವಿರಹಿತ ಪ್ರಸಾದವಾಗಿ ನೆಲಸಿರ್ಪರು ನೋಡಾ.

ನಿನ್ನ ಆಜ್ಞಾ ಚಕ್ರಮಧ್ಯದಲ್ಲಿ ಷಟ್‌ಸ್ಥಲ ಸಂಪನ್ನೆಯಾದಂಥ ಅಕ್ಕನಾಗಲಾಂಬಿಕೆ ತಾಯಿಗಳೇ ವೇದ್ಯ ಸ್ವರೂಪವಾದ ಮಹಾಲಿಂಗ ಮಂತ್ರ, ನಿರ್ನಾಮೋದಕ, ಸಮತಾ ಪ್ರಸಾದವಾಗಿ ನೆಲಸಿರ್ಪರು ನೋಡಾ.

ನಿನ್ನ ಬ್ರಹ್ಮಚಕ್ರಮಧ್ಯದಲ್ಲಿ ಸರ್ವಾಚಾರ ಸಂಪನ್ನೆಯಾದಂಥ ಮುಕ್ತಾಯಕ್ಕಗಳೇ ನಿರಾಲಂಬ ಮೂರ್ತಿಯಾದಂಥ ನಿಃಕಳಲಿಂಗ ಮಂತ್ರ, ಸತ್ಯೋದಕ, ಸದ್ಭಾವ ಪ್ರಸಾದ ಜ್ಞಾನ ಪ್ರಸಾದವಾಗಿ ನೆಲಸಿರ್ಪರು ನೋಡಾ.

ನಿನ್ನ ಶಿಖಾ ಪಶ್ಚಿಮ ಚಕ್ರಮಧ್ಯದಲ್ಲಿ ಪರಿಪೂರ್ಣಾನಂದಮೂರ್ತಿ ಅಜಗಣ್ಣ ತಂದೆಗಳು ನಿಃಪ್ರಪಂಚಮೂರ್ತಿ, ಶೂನ್ಯ ನಿರಂಜನ ಲಿಂಗ ಮಂತ್ರ, ಕರುಣ ಜಲ ವಿನಯ ಜಲ ಸಮತಾ ಜಲ, ಚಿತ್ಕಲಾ ಪ್ರಸಾದ ನಿಜ ಪ್ರಸಾದ ಚಿದ್ರೂಪ ಪ್ರಸಾದವಾಗಿ ನೆಲಸಿರ್ಪರು ನೋಡಾ.

ಇಂತು ನಿನ್ನ ಕಳಾ ಚೈತನ್ಯವಾಗಿ ನಿನ್ನ ಸರ್ವಾಂಗವೆಲ್ಲ ಪ್ರಮಥ ಗಣಂಗಳ ಪಾದೋದಕ ಪ್ರಸಾದಲಿಂಗ ಮಂತ್ರವಾಗಿರ್ಪುದು ನೋಡಾ, ಸಂಗನಬಸವೇಶ್ವರಾ.

# ಭಿನ್ನಭೋಜನ ಪ್ರಸಾದಭೋಜನ ಸಹಭೋಜನ.

(೧) ಭಿನ್ನಭೋಜನ ಪ್ರಸಾದಭೋಜನ ಸಹಭೋಜನವೆಂದು ಲಿಂಗಾರ್ಪಿತ ಮೂರಾಗಿರ್ಪವು. ಮುಂದಿಟ್ಟ ಸಕಲ ಪದಾರ್ಥಂಗಳ ಲಿಂಗಕ್ಕೆ ಕೊಟ್ಟು ಆ ಲಿಂಗವಂ ಸೆಜ್ಜೆಯರಮನೆಗೆ ಬಿಜಯಂಗೈಸಿ ಅಂದಂದಿಂಗೆ ಬಂದ ಪದಾರ್ಥವಂ ಲಿಂಗಕ್ಕೆ ಕೊಡದೆ ಕೊಂಬುದೀಗ ಭಿನ್ನಭೋಜನ. ಮುಂದಿಟ್ಟ ಸಕಲ ಪದಾರ್ಥಂಗಳ ಲಿಂಗಕ್ಕೆ ಒಂದು ವೇಳೆ ಕೊಡದೆ ಎತ್ತಿದ ಭೋಜನವಂ ಲಿಂಗಕ್ಕೆ ಕೊಟ್ಟು ಆ ಭೋಜ್ಯವಂ ಇಳುಹದೆ ಕೊಂಬುದೀಗ ಪ್ರಸಾದಭೋಜನ. ಮುಂದಿಟ್ಟ ಸಕಲ ಪದಾರ್ಥಂಗಳ ಲಿಂಗಕ್ಕೆ ಮೊದಲು ಕೊಟ್ಟು ಮತ್ತೆ ಭೋಜ್ಯ ಭೋಜ್ಯಕ್ಕೆ ಲಿಂಗಕ್ಕೆ ಕೊಟ್ಟು ಕೊಂಬುದೀಗ ಸಹಭೋಜನ. ಇಂತೀ ತ್ರಿವಿಧ ಭೋಜನದ ಅಂತರಂಗದ ಸ್ವಯ ನಿಮ್ಮ ಶರಣರೇ ಬಲ್ಲರಯ್ಯ ಘನ ಲಿಂಗಿಯ ಮೋಹದ ಚನ್ನಮಲ್ಲಿಕಾರ್ಜುನಾ.

## ಸಹಭೋಜನ

(೨) ಲಿಂಗಭಾಜನದಲ್ಲಿ ಸಹಭೋಜನ ಮಾಡುವೆವೆಂಬರು. ಲಿಂಗಭಾಜನದಲ್ಲಿ ಸಹಭೋಜನವ ಮಾಡುವವರ ನೋಡಿರೇ. ಕಾಮ, ಕ್ರೋಧ, ಲೋಭ, ಮೋಹ, ಮದ, ಮತ್ಸರ ಆಶೆಯುಳ್ಳನ್ನಕ್ಕರ ಲಿಂಗಭಾಜನದಲ್ಲಿ ಸಹಭೋಜನ ಮಾಡುವವರ ನೋಡಿರೇ. ಹಸಿವು ತೃಷೆ ನಿದ್ರೆ ಜಡ ಆಲಸ್ಯ ವ್ಯಸನ ಉಳ್ಳನ್ನಕ್ಕರ ಲಿಂಗಭಾಜನದಲ್ಲಿ ಸಹಭೋಜನವ ಮಾಡುವ ಪರಿ ಎಂತೋ? ಇಂತಿವೆಲ್ಲವ ಜರಿದು ಗುರುಲಿಂಗಜಂಗಮುನೇಕ ಮಾಡಿದಂಗಲ್ಲದೆ ಸಹಭೋಜನವೆಲ್ಲಿಯದೋ ಕೂಡಲಚನ್ನಸಂಗಯ್ಯ ?

(೩) ವಾಸನೆಯ ಕೊಂಬುದು ಲಿಂಗದ ನಾಸಿಕೆ, ರುಚಿಸುವುದು ಲಿಂಗದ ಜಿಹ್ವೆ, ನೋಡುವುದು ಲಿಂಗದ ನೇತ್ರ, ಕೇಳುವುದು ಲಿಂಗದ ಶ್ರೋತ್ರ, ಸೋಂಕುವುದು ಲಿಂಗದ ತ್ವಕ್ಕು, ನಡೆವುದು ಲಿಂಗ ತಾನೆ, ನುಡಿವುದು ಲಿಂಗ ತಾನೆ, ಮನಬೆರಸಿ ಪರಿಣಾಮಿಸುವುದು ಲಿಂಗ ತಾನೆ, ಎಂಬ ಭಾವನೆ ಸಹಭೋಜನವೆನಿಸಿಕೊಂಡಿತ್ತಯ್ಯ ಮಹಾ ಲಿಂಗ ಗುರು ಶಿವಸಿದ್ಧೇಶ್ವರ ಪ್ರಭುವೇ.

(೪) ಲಿಂಗ ದೇಹೀ ಶಿವಾತ್ಮಕನು ಲಿಂಗದಾಚಾರದಲ್ಲಿಯೇ ನಡೆವನಯ್ಯ. ಲೋಕವರ್ತಕನಲ್ಲ. ಲೋಕವ್ಯವಹರಣೆಯನನುಕರಿಸಿ ನಡೆವನಲ್ಲ. ಶಿವಜ್ಞಾನ ಕ್ರಿಯಾ ಶಿವ ಪ್ರಕಾಶವ ಸಂಬಂಧಿಸಿಕೊಂಡು ಸರ್ವವೂ ಲಿಂಗರೂಪಾಗಿ ಸಮರ್ಪಿಸಿಕೊಂಡು ಲಿಂಗದೊಡನೆ ಭುಂಜಿಸುತಿರ್ಪನಯ್ಯ. ಶಿವಸ್ಮರಣೆಯಿಂದಲೇ ಸ್ವೀಕರಿಸುತಿಪ್ಪುದೇ ಸಹ ಭೋಜನವೆನಿಸಿಕೊಂಡಿತ್ತು ಮಹಾಲಿಂಗ ಗುರು ಶಿವ ಸಿದ್ಧೇಶ್ವರ ಪ್ರಭುವೇ.

(೫) ಲಿಂಗಕ್ಕೆ ತನ್ನ ತನುವೇ ಭಾಜನವಾಗಿ, ಆ ತನುವಿಂಗೆ ಲಿಂಗವೇ ಭಾಜನವಾಗಿ, ತನುವೆಂಬ ಭಾಜನವಳಿದು ಲಿಂಗವೆಂಬ ಭಾಜನವಾಗಿರಬಲ್ಲಡೆ, ಅದು ಲಿಂಗಭಾಜನವೆಂಬೆ. ಮನಕ್ಕೆ ಲಿಂಗವೇ ಭಾಜನವಾಗಿ, ಲಿಂಗಕ್ಕೆ ಮನವೇ ಭಾಜನವಾಗಿ, ಮನವೆಂಬ ಭಾಜನ ವಳಿದು ಮನ ಲಿಂಗವಾಗಿರಬಲ್ಲಡೆ, ಮನ ಲಿಂಗ ಭಾಜನವೆಂಬೆ. ಪ್ರಾಣಕ್ಕೆ ಲಿಂಗವೇ ಭಾಜನವಾಗಿ ಲಿಂಗಕ್ಕೆ ಪ್ರಾಣವೇ ಭಾಜನವಾಗಿ ಪ್ರಾಣವೆಂಬೋ ಭಾಜನವಳಿದು ಪ್ರಾಣಲಿಂಗವಾಗಿರಬಲ್ಲಡೆ ಪ್ರಾಣಲಿಂಗ ಭಾಜನವೆಂಬೆ. ತಾನು ಭಾಜನ, ಮನ ಭಾಜನ, ಪ್ರಾಣ ಭಾಜನ ಇಂತೀ ತ್ರಿವಿಧವು ಚಿದ್ಬ್ರಹ್ಮಾಂಡದಲ್ಲಿ ಅಡಗಿ ಚಿದ್ಬ್ರಹ್ಮವೇ ತಾನಾಗಿರ ಬಲ್ಲಡೆ ಸಹವರ್ತಿ ಕಾಣಾ ಮಹಾಲಿಂಗ ಗುರು ಶಿವ ಸಿದ್ಧೇಶ್ವರ ಪ್ರಭುವೇ.

(೬) ಅಂಗವಿದ್ದ ಹಸ್ತಲಿಂಗಕ್ಕೆ ಪೀಠ ಕಾಣಿರೋ. ಲಿಂಗವ ಪೂಜಿಸುವ ಹಸ್ತವೇ ಶಿವನ ಹಸ್ತ ಕಾಣಿರೋ. ಲಿಂಗವ ಧರಿಸಿಪ್ಪಂಗವೇ ಲಿಂಗದಂಗವಾಗಿ, ಲಿಂಗಕ್ಕೂ ಅಂಗಕ್ಕೂ ಭಿನ್ನವಿಲ್ಲ ಕಾಣಿರೋ. ಲಿಂಗ ಪ್ರಸಾದವ ಕೊಂಬ ಪ್ರಾಣಲಿಂಗ ತಾನೇ ನೋಡಾ. ಒಳ ಹೊರಗೆ ಲಿಂಗ ಭರಿತವಾಗಿಪ್ಪ ಲಿಂಗ ದೇಹಿ ಲಿಂಗ ಪ್ರಾಣಿಗೆ ಲಿಂಗ ಸಹ ಭೋಜನವ ಮಾಡಬೇಕೆಂಬುದೇ ಸದಾಚಾರ. ಹೀಗಲ್ಲದೆ ಅಂಗಕ್ಕು ಲಿಂಗಕ್ಕು ಭೇದ ಭಾವವ ಕಲ್ಪಿಸಿಕೊಂಡು ಲಿಂಗ ಸಹ ಭೋಜನವ ಮಾಡಬಾರದೆಂಬ ಸಂದೇಹಸೂತಕ ಪ್ರಾಣಿಗಳಿಗೆ ಅಂಗ ದಲ್ಲಿ ಲಿಂಗವಿಲ್ಲ, ಮನದಲ್ಲಿ ಮಂತ್ರವಿಲ್ಲ, ಪ್ರಾಣದಲ್ಲಿ ಪ್ರಸಾದವಿಲ್ಲ. ಪ್ರಸಾದವಿಲ್ಲದವರಿಗೆ ಮುಕ್ತಿ ಎಂಬುದು ಎಂದಿಗೂ ಇಲ್ಲ ನೀ ಸಾಕ್ಷಿ ಯಾಗಿ ಮಹಾಲಿಂಗ ಗುರು ಶಿವ ಸಿದ್ಧೇಶ್ವರ ಪ್ರಭುವೇ.

ಮನುಷ್ಯನ ಲಿಂಗ ಶಕ್ತಿಯು ಅವನಲ್ಲಿ ಅಹಂಕಾರವು ಉಂಟಾದರೆ ಮಸುಳಿ ಹೋಗುತ್ತದೆ. ಆದ್ದರಿಂದ ಅವನು ಯಾವಾಗಲೂ ಶರಣುಭಾವವುಳ್ಳವನಾಗಿರಬೇಕು. ಶಂಕರದಾಸಿಮಯ್ಯನು ಈ ಕಾಲದಲ್ಲಿ ತಾನು ಹಣೆಗಣ್ಣನ್ನು ಪಡೆದವನೆಂದು ಅಹಂಕಾರವುಳ್ಳವನಾದ್ದರಿಂದ ಅವನು ತನ್ನ ಕಣ್ಣಿನ ಜ್ವಾಲೆಯಿಂದ ಮಾರಿಕವ್ವೆಯನ್ನು ಸುಡಲು ಶಕ್ತನಾಗಲಿಲ್ಲ. ಇಷ್ಟೇ ಅಲ್ಲ, ಅದು ಅವನ ಹಣೆಗಣ್ಣನ್ನೇ ನುಂಗಿಬಿಟ್ಟಿತು. ಒಮ್ಮೆ ದೇವರದಾಸಿಮಯ್ಯನಿಗೂ ಇದೇ ಸ್ಥಿತಿಯು ಉಂಟಾಯಿತು. ಅವನು ತಾನು ತವನಿಧಿಯನ್ನು ಪಡೆದವನೆಂದು ಅವನಲ್ಲಿ ಅಹಂಕಾರವು ಉಂಟಾದ್ದರಿಂದ ಅವನ ತವನಿಧಿಯೇ ಅಡಗಿಹೋಯಿತು. ಇಂಥ ಸಂಗತಿಗಳು ಅಗ್ಗವಣಿಯ ಹೊನ್ನಯ್ಯ, ಬಸವೇಶ್ವರ ಮೊದಲಾದವರ ಚರಿತ್ರೆಗಳಲ್ಲಿ ಆಗಿಂದಾಗ್ಗೆ ಕಾಣುತ್ತೇವೆ.

ಒಂದು ಕಾಲದಲ್ಲಿ ಇಷ್ಟಲಿಂಗ-ಪ್ರಾಣಲಿಂಗ, ಜಂಗಮಲಿಂಗ-ಸ್ಥಾವರಲಿಂಗ, ಇಷ್ಟಲಿಂಗ-ಪ್ರಾಣಲಿಂಗ-ಭಾವಲಿಂಗ ಇವುಗಳ ಸ್ವರೂಪದ ವಿಷಯವಾಗಿ ಶಿವಶರಣರಲ್ಲಿ ಬಹಳ ವಾದಗಳು ನಡೆದಂತೆ ತೋರುತ್ತದೆ. ಇದು ಅವರ ಚರಿತ್ರೆಗಳಿಂದ ತಿಳಿದುಬರುತ್ತದೆ. ಉದಾಹರಣಾರ್ಥವಾಗಿ ಸಿದ್ಧರಾಮ-ಪ್ರಭುದೇವರ ವಾದ, ನುಲಿಯಚಂದಯ್ಯ-ಮಡಿವಾಳಯ್ಯನ ವಾದ, ಗಟ್ಟಿವಾಳಯ್ಯನ ಲಿಂಗದ ವಿವೇಚನೆ, ಬಸವೇಶ್ವರ ಮತ್ತು ಕೇತಯ್ಯ ಇವರ ಸಂದರ್ಭ ಇವುಗಳಿಂದ ಇದು ಕಂಡುಬರುತ್ತದೆ ಆದರೆ ಶಿವಶರಣರು ಶಿವಾನುಭವ ಮಂಟಪದಲ್ಲಿ ಸೇರಿ ಇಂಥ ವಾದಗ್ರಸ್ತ ವಿಷಯಗಳನ್ನು ಚರ್ಚಿಸಿ ಕೆಲವೊಂದು ಸಿದ್ಧಾಂತಕ್ಕೆ ಬರುತ್ತಿದ್ದರೆಂಬುದು ತಿಳಿದುಬರುತ್ತದೆ.

## ವಚನಗಳು.

(೧) ಅರಿವುಳ್ಳವಂಗೆ ಅರಿವನರಿದಿಹೆನೆಂಬುದೇ ಮಾಯೆ. ಮೂರ ಮರೆದು ಬೇರೊಂದುವ ಕಂಡೆನೆಂಬುದೇ ಮಾಯೆ. ನುಡಿಯ ನುಡಿವವರಲ್ಲಿ ಎಡಮಾತನಾಡಿ ವಾದಿಸುವದೇ ಮಾಯೆ. ಘಟಮಟವೆಂಬ ಮಾರಿಯ ಹೊತ್ತು ಭವವೆಂಬ ಬಾಗಿಲಲ್ಲಿ ತಿರುಗಾಡುತ್ತಿದ್ದೇನೆ. ಢಕ್ಕೆಯ

ದಾವರಕ್ಕೆ ಸಿಕ್ಕಿ ನೊಂದೆನು. ಇದರಚ್ಚುಗವ ಬಿಡಿಸು ಕಾಲಾಂತಕ ಭೀಮೇಶ್ವರ ಲಿಂಗ.

ಭಾವಃ— ಢಕ್ಕೆಯ ಮಾರಯ್ಯನು ಗುರೂಪದೇಶವನ್ನು ಹೊಂದಿ ಇಷ್ಟಲಿಂಗ ಧಾರಕನಾಗುವ ಮೊದಲು ನುಡಿದ ವಚನವು ಇದಾಗಿರ ಬಹುದು. ಅವನು ಇದರಲ್ಲಿ ಅಹಂಕಾರ ಭರಿತನಾಗಿ ವರ್ತಿಸುವುದೇ ಮಾಯೆ ಎಂದು ಹೇಳಿ, ನಾನು ಮಾರಿಯನ್ನು ಹೊತ್ತುಕೊಂಡು ಢಕ್ಕೆಯ ದನಿ ಮಾಡುತ್ತ ನೊಂದು ತಿರುಗುತ್ತಿದ್ದೇನೆ. ತನ್ನ ಈ ಯನ್ನು ದೂರ ಮಾಡೆಂದು ಇಲ್ಲಿ ಪರಮಾತ್ಮನಲ್ಲಿ ಹೇಳಿಕೊಳ್ಳುತ್ತಿ

(೨) ಆವ ಕಾಯಕದಿಂದಾದಡೂ ಆಗಲಿ, ಭಾವ ಶುದ್ಧವಾಗಿ ಮಾಡುವುದೇ ಜಂಗಮ ಪೂಜೆ. ನಿಯಮ ಕ್ರಿ ತಪ್ಪದೆ ಮಾಡುವುದೇ ದೇವ ಪೂಜೆ. ಆವ ಪ್ರಸಂಗ ಬಂದಡೂ ಖಂಡಿಸುವುದೇ ಪಂಡಿತ ರವು. ತ್ರಿವಿಧ ಬಂದು ಮುಂದೆ ನಿಂದಿರಲು ಅದರಂದವ ನೋಡದಿ ದೇ ನಿಸ್ಸಂಗ ಸುಸಂಗಿಯ ಇರವು. ಇಂತೀ ವಿಚಾರವನರಿದಲ್ಲಿ ಢಕ್ಕೆಯ ನಿ ಹೊರಗಾಯಿತ್ತು. ಕಾಲಾಂತಕ ಭೀಮೇಶ್ವರ ಲಿಂಗವು ಒಳಗಾ ಯಿತ್ತು.

ಭಾವಃ— ಬಾಹ್ಯ ಕ್ರಿಯೆಗಳು ಹೋಗಿ ಪರಮಾತ್ಮನನ್ನು ಕಾಣ ಬೇಕಾದರೆ ಭಾವ ಶುದ್ಧವಾಗಿ ಕಾಯಕವನ್ನು ಮಾಡಬೇಕು. ನಿಯ ಮಿಸಿಕೊಂಡ ಕ್ರಿಯೆಗಳನ್ನು ತಪ್ಪದೇ ಮಾಡಬೇಕು. ಎಂಥ ಪ್ರಸಂಗ ಗಳು ಬಂದರೂ ನಿಜವನ್ನು ಸ್ಪಷ್ಟವಾಗಿ ಹೇಳಬೇಕು. ಆಣವಮಲ ಮಾಯಾಮಲ ಕಾರ್ಮಿಕಮಲಗಳು ತನ್ನನ್ನು ಆವರಿಸಿದರೂ ಅವುಗ ಳಿಗೆ ಒಳಗಾಗಬಾರದು. ಹೀಗೆ ವರ್ತಿಸಿದಲ್ಲಿ ಢಕ್ಕೆಯ ಉಲುಹು ಅಡಗಿ ಪರಮಾತ್ಮನು ತನ್ನನ್ನು ಕೂಡುತ್ತಾನೆಂದು ಹೇಳುತ್ತಾನೆ.

(೩) ಕಾಯವೆಂಬ ಢಕ್ಕೆಯ ಮೇಲೆ ಜೀವವೆಂಬ ಹಿಡಿ ಚಂಡು ಬೀಳೆ ತ್ರಿವಿಧವ ತಾ, ತಾ ಎಂಬಾಶೆ ಹಿಂ, ಡಿ, ಡಿಂ, ಡಿ, ಎನ್ನುತ್ತಿದೆ. ಇಂತೀ ಉಲುಹಿನ ಭೇದದಲ್ಲಿ ಹೊಲಬುದಪ್ಪದೆ ಗೆಲಬೇಕು ಕಾಲ ವೆಂಬ ಮಾರಿಯ ಕಾಲಾಂತಕ ಭೀಮೇಶ್ವರ ಲಿಂಗವನರಿಯಬಲ್ಲಡೆ.

ಭಾವಃ— ಢಕ್ಕೆಯ ಮಾರಯ್ಯನು ತಾನು ತನ್ನ ಕಾಯಕವನ್ನು ಹೇಗೆ ಮಾಡುತ್ತಾ ಇದ್ದೇನೆಂಬುದನ್ನು ಇಲ್ಲಿ ಹೇಳಿದ್ದಾನೆ ತನ್ನ ಕಾಯವೆಂ

ಬುದು ಒಂದು ಢಕ್ಕೆಯು, ಅದರಲ್ಲಿ ಜೀವವು ಓಡಾಡುತ್ತಿದೆ, ಆ ಜೀವವು ತನಗೆ ಇದು ಬೇಕು, ಅದು ಬೇಕು ಎಂದು ಆಶೆ ಮಾಡುತ್ತಾ ಇದೆ, ಅದರಿಂದ ಅದು ಅನೇಕ ಯಾತನೆಗಳನ್ನು ಅನುಭವಿಸುತ್ತಲಿದೆ. ಆದರೆ ಆ ಯಾತನೆಗಳನ್ನು ನಿಲ್ಲಿಸಲು ಹೊಲಬುದಪ್ಪದೆ ಮಾಯೆಯನ್ನು ಗೆಲ್ಲ ಬೇಕು, ಎಂದು ಅವನು ತಾನು ಢಕ್ಕೆಯನ್ನು ಹೊಡೆಯುತ್ತಿದ್ದಾಗ ಯಾವ, ಭಾವವುಳ್ಳವನಾಗಿದ್ದೇನೆಂಬುದನ್ನು ಇಲ್ಲಿ ವಿವರಿಸಿ ನುಡಿದಿದ್ದಾನೆ. ಇದೇ ಅವನ ಕಾಯಕದ ರೀತಿಯಾಗಿದೆ.

(೪) ಕ್ರಿಯಾಶಕ್ತಿ ಬ್ರಹ್ಮಂಗೆ ಹಿಂಗಿ, ಇಚ್ಛಾಶಕ್ತಿ ವಿಷ್ಣುವಿಂಗೆ ಹಿಂಗಿ, ಜ್ಞಾನಶಕ್ತಿ ರುದ್ರಂಗೆ ಹಿಂಗಿ, ಉತ್ಪತ್ತಿ ಸ್ಥಿತಿ ಲಯವೆಂಬು ದಕ್ಕೆ ಮಾಯಾದೇವಿ ಒಂದೇ ಗೊತ್ತಾಗಿ, ಬಲ್ಲ ಬಲ್ಲವರೆಲ್ಲರ ತನ್ನಲ್ಲಿಯೇ ಅಡಗಿಸುತ ಅರಿದವರೆಲ್ಲರಿಗೆ ದೇವಿಯಾಗಿ ಮರೆದವರಿಗೆ ಮಾರಿಯಾಗಿ ಮೊರದೊಳಗೆ ಕೊಂಡು ಬಂದಿದೇನೆ. ಮೊರಕ್ಕೆ ಮೂರು ಕೊಟ್ಟು- ತಾಯಿ ಗೈದು, ಬಾಯ ಬೇಡುವಾತನ ಬಾಯಿ ಒಂದೇಯಾಯಿತ್ತು. ಢಕ್ಕೆಯ ಧನಿಗೇಳಿ ಬೆಚ್ಚುವುದಕ್ಕೆ ಮುನ್ನವೇ ಕಾಲಾಂತಕ ಭೀಮೇಶ್ವರ ಲಿಂಗವನರಿಯಿರಣ್ಣಾ.

ಭಾವಃ— ಈ ವಚನವು ಅಲ್ಲಲ್ಲಿ ಅಶುದ್ಧವಾಗಿದೆ. ಇದರಲ್ಲಿ ಅರಿ ದವರಿಗೆ ಮಾಯೆಯು ದೇವಿಯಾಗಿ ರಕ್ಷಿಸುತ್ತಾಳೆ. ಮತ್ತು ಮರೆದ ವರಿಗೆ ಮಾರಿಯಾಗಿ ಕಾಡುತ್ತಾಳೆ ಎಂದು ಹೇಳಿ ಇಂಥ ಮಾರಿಯನ್ನು ನಾನು ಮೊರದಲ್ಲಿ ಇಟ್ಟುಕೊಂಡು ಬಂದಿದ್ದೇನೆ. ನಾನು ಢಕ್ಕೆಯನ್ನು ಹೊಡೆದು ಧ್ವನಿಗೈಯ್ಯುವೆನು. ಈ ಧ್ವನಿಯನ್ನು ನೀವು ಕೇಳಿ ಅಂಜ ಬಹುದು. ಆದರೆ ಹಾಗೆ ಅಂಜಬಾರದು. ನೀವು ಅಂಜುವುದಕ್ಕೆ ಮುನ್ನವೇ ನೀವು ಪರಮಾತ್ಮನನ್ನು ಕಾಣಬೇಕು ಎಂದು ಎಚ್ಚರು ಹೇಳು ತ್ತಾನೆ. ಇಲ್ಲಿ ಢಕ್ಕೆಯ ಮಾರಯ್ಯನು ತಾನು ಕಾಯಕ ಮಾಡುವಲ್ಲಿ ಯಾವ ಬಗೆಯ ಉಪದೇಶವನ್ನು ಮಾಡುತ್ತಾ ಇದ್ದೇನೆಂಬುದನ್ನು ಹೇಳಿ ತನ್ನ ಢಕ್ಕೆಯ ಧ್ವನಿಗೆ ನೀವು ಅಂಜಬಾರದು, ಪರಮಾತ್ಮನನ್ನು ಅರಿ ಯಬೇಕೆಂದು ಬುದ್ಧೀ ಹೇಳಿದ್ದಾನೆಂಬ ಭಾವವಿದೆ.

(೫) ಕೈ ಕೈದುವ ಹಿಡಿದು ಹೊರುವಾಗ ಕೈದೋ, ಕೈಯ್ಯೋ ಮನವೋ? ಅಂಗ ಲಿಂಗ ಸಂಬಂಧದಲ್ಲಿ ಸಂಬಂಧಿಸುವಾಗ ಅಂಗವೋ

ಲಿಂಗವೋ ಆತ್ಮನೋ? ಈ ಮೂರಂಗವನರಿದಲ್ಲಿ ಕಾಲಾಂತಕ ಭೀಮೇ ಶ್ವರ ಲಿಂಗವನರಿದುದು.

ಭಾವಃ— ಇದರಲ್ಲಿ ವಚನಕಾರನು ಕಾಯಕವನ್ನು ಮಾಡುವಲ್ಲಿ ಅದರಲ್ಲಿ ಹೇಗೆ ಏಕಾಗ್ರಚಿತ್ತದಿಂದಿರಬೇಕೆಂಬುದನ್ನು ಬಹು ಸ್ವಾರಸ್ಯ ಪೂರ್ಣವಾಗಿ ನುಡಿದಿದ್ದಾನೆ.

(೬) ತನಗಿದಿರಿಟ್ಟು ಕಾಂಬುದೆಲ್ಲವು ತನಗನ್ಯ ದೈವ. ತಾ ಕುರುಹ ಳಿದು, ತನಗನ್ಯವೆಂಬುದೊಂದಿಲ್ಲವಾಗಿ ಅದು ತನಗೆ ಭಿನ್ನವಿಲ್ಲದ ದೈವ. ಅಹಂಕಾರಾತ್ಮ ಘಟದ ಮಾರಿಯು ಹೊತ್ತು ಉಲುಹೆಂಬ ಢಕ್ಕೆಯು ಪಿಡಿದು ಭವವೆಂಬ ಬಾಗಿಲಲ್ಲಿ ತಿರುಗಾಡುತ್ತಿದೇನೆ. ಢಕ್ಕೆಯ ದನಿಯ ಬಿಡಿಸಾ ಕಾಲಾಂತಕ ಭೀಮೇಶ್ವರ ಲಿಂಗ.

ಭಾವಃ— ಇಲ್ಲಿ ವಚನಕಾರನು ಅನ್ಯದೈವವಾವುದೆಂಬುದನ್ನು ಹೇಳಿ ದ್ದನೆ. ತನಗಿದಿರಿಟ್ಟು ಪೂಜಿಸುವುದೆಲ್ಲವೂ ಅನ್ಯ ದೈವವು. ಆದರೆ ನು ಈ ಮಾರಿಯು ಬಾಹ್ಯ ಕುರುಹು ಎಂಬುದನ್ನು ಅಳಿದು ತನ ನ್ಯವಾದುದೆಂದು ತಿಳಿದಿಲ್ಲ. ಆದುದರಿಂದ ಅದು ತನಗೆ ಭಿನ್ನವಲ್ಲದ ವವು. ಅಂದರೆ ಅದು ಜ್ಞಾನ ಸ್ವರೂಪವೆಂದು ತಿಳಿದಿದ್ದಾನೆ. ಆದರೂ ಸ್ಥಿತಿಯು ನನಗೆ ಇನ್ನೂ ಅಳವಟ್ಟಿಲ್ಲೆಂದು ಅವನು ಇಲ್ಲಿ ದುಃಖಿ ತ್ತ ಇದ್ದಾನೆ. ಅದನ್ನು ಅಳವಡಿಸುವಂತೆ ಮಾಡೆಂದು ವಚನಕಾ ರನು ಇಲ್ಲಿ ಪರಮಾತ್ಮನನ್ನು ಕುರಿತು ಬೇಡಿಕೊಳ್ಳುತ್ತಾನೆ. ವಚನ ಕಾರನ ಚರಿತ್ರೆಯಲ್ಲಿ ಬಂದ ವಿಷಯುವನ್ನೇ ಈ ವಚನವು ಉಲ್ಲೇಖಿ ಸುತ್ತದೆ. ಮಾರಿಯನ್ನು ಯಾವ ಭಾವದಿಂದ ಪೂಜಿಸುತ್ತೇನೆಂಬು ದನ್ನು ಅವನು ಇಲ್ಲಿ ಸ್ಪಷ್ಟಪಡಿಸಿದ್ದಾನೆ. ಆದರೆ ಆ ಭಾವವು ತನಗೆ ಇನ್ನೂ ಅಳವಟ್ಟಿಲ್ಲೆಂದು ಹೇಳಿದ್ದು ಅದು ಆತನ ಅಹಂಕಾರ ರಹಿತವಾದ ಮನೋವೃತ್ತಿ ಎಂದು ತೋರುತ್ತದೆ.

(೭) ತ್ರಿವಿಧ ದೇವ, ಕುಲ, ಜಾತಿ ಆವನಾದಡೂ ಆಗಲಿ, ಪಂಡಿತ ವಿದಗ್ಧ, ಜಾಣ, ಗಂಭೀರ ಸಂಪದನಾದಡೂ ಆಗಲಿ, ಯಾಚಕತನದಲ್ಲಿ ಘಾತುಕತನದಿಂದ ಬೇಡುವುದು ಜೀವನ. ಆ ಜೀವನವ ಮರೆದೊರ ಗಿರುವುದು ಮಾರಿ. ಆ ಮರವೆಯ ಹರಿದುದೇ ಕಾಲಾಂತಕ ಭೀಮೇ ಶ್ವರ ಲಿಂಗವು.



# ಶಿವಾನುಭವ

೨೨ ] [ ಸಂಚಿಕೆ ೧೦



ಜುಲೈ ೧೯೪೮

ವಿಜಾಪುರ.

# ವಿಷಯಗಳು.


ಪುಟ

೧ ಆತ್ಮ ಕಲ್ಯಾಣವೂ ಲೋಕ ಕಲ್ಯಾಣವೂ— ೨೬೫
—ವಿದ್ವಾನ್ ಕೆ. ಎಂ. ರಾಜಶೇಖರಯ್ಯ, ತೀರ್ಥಹಳ್ಳಿ

೨ ಮಧ್ಯಕಾಲದ ಮಹಾಪುರುಷರು ೨೮೩
—ಶ್ರೀ. ಮಧುರಚೆನ್ನ ಹಲಸಂಗಿ.

೩ ಯೋಗದ ಪ್ರಭಾವವು ೨೯೧
—ಶ್ರೀ. ಬಂಥನಾಳ ಶಿವಯೋಗಿಗಳು.

೪ ನೂರೊಂದರ ನುರಿತ ೨೯೬
—ಶ್ರೀ. ಸಿ. ಸಾ. ಮಹಾಂತಣ್ಣವರ, ಹೂನೂರು.

೫ ಬಸವ ಸಂದೇಶ ಸಾರುವ ಅಯ್ಯಗಳಾಗಿರಿ ೩೦೮
—ಶ್ರೀ. ಅನ್ನದಾನೀಶ್ವರ ವಿರಕ್ತಮಠ, ರಾಣೇಬೆನ್ನೂರ.

೬ ಕೂಡಲ ಸಂಗಮವನ್ನು ಕಂಡಾಗ ( ಕವಿತೆ ) ೩೧೧
—ಶ್ರೀ. ಕರಿಬಸವಕುಮಾರ.

# ಶಿವಾನುಭವ

ವರ್ಷ ೨೨ | ಜುಲೈ ೧೯೪೮ | ಸಂಚಿಕೆ ೧೦

## ಆತ್ಮ ಕಲ್ಯಾಣವೂ ಲೋಕ ಕಲ್ಯಾಣವೂ.

ಲೇಖಕರು:— ವಿದ್ವಾನ್ ಕೆ. ಎಂ ರಾಜಶೇಖರಯ್ಯನವರು,
ಸಂಸ್ಕೃತ ಪಂಡಿತರು, ಗವ್ಹರ್ನಮೆಂಟ ಹಾಯಸ್ಕೂಲ, ತೀರ್ಥಹಳ್ಳಿ.

( ಹಿಂದಿನ ಸಂಚಿಕೆಯಿಂದ ಮುಂದೆ ಸಾಗಿದ್ದು )

ಹೊಲಸು ತಿಂಬುವನೇ ಹೊಲೆಯ. ಹೊಲೆಯ ! ಹೊಲೆಯ !! ಎಂದರೆ ಅಸ್ಪೃಶ್ಯರ ಜಾತಿಯಲ್ಲಿ ಹುಟ್ಟಿದ ಮಾತ್ರಕ್ಕೆ ನಾವು ಆತನನ್ನು ಕರೆಯುವಾಗ ಉಪಯೋಗಿಸುವ ಶಬ್ದವು ಇದೆ. ಜಾತಿಯಲ್ಲಿ ಹುಟ್ಟಿ ಆತನ ವ್ಯವಹಾರ ಉತ್ತಮವಾಗಿದ್ದರೂ ಆತನನ್ನು ಕರೆಯುವದು ಇದೇ ಶಬ್ದದಿಂದ. ಆಹಾ ! ಎಂಥ ಸಮಾಜ ನಮ್ಮದು! ಉತ್ತಮ ಜಾತಿಯಲ್ಲಿ ಹುಟ್ಟಿದವನ ವ್ಯವಹಾರ ಹೊಲೆಯನಿಗಿಂತಲೂ ಕೀಳಾಗಿದ್ದರೂ ಅವನನ್ನು ನಾವು ಆ ಶಬ್ದದಿಂದ ವ್ಯವಹರಿಸುವ ಹಾಗಿಲ್ಲ. ಆತನು ಉತ್ತಮ ಜಾತೀಯ. ಆತನ ವ್ಯವಹಾರವೆಲ್ಲವೂ ಉತ್ತಮವಾದುದೆ. ಅಸ್ಪೃಶ್ಯನ ಮತ್ತು ಕುಲೀನರಲ್ಲಿ ತಾರತಮ್ಯವನ್ನು ನೋಡಿದರೆ ಗುಣಶೀಲಗಳ ವಿಮರ್ಶೆ, ವಿಚಾರವಿಲ್ಲ. ಜಾತಿಯ ಪ್ರಶ್ನೆಯೇ ಪ್ರಧಾನವಾದುದು. ಅಲ್ಲವೆ ?

ಶರಣರು ಜಾತಿಯ ಗೊಂದಲೆಗೆ ಮನಗೊಡದೆ ಗುಣಶೀಲಗಳ ಪರಂಪರೆಯ ವಿಚಾರಗಳ ಮೇಲೆ ಮನಗೊಟ್ಟು ಜನತೆಯಲ್ಲಿ ಜ್ಞಾನ ವನ್ನು ಬೀರಿದರು. ಅವರ ಉಪದೇಶಾಮೃತ, "ಕುಲ, ಶೀಲ, ಜನ್ಮ, ವಯಸ್ಸು, ವ್ಯಕ್ತಿ ಯಾವುದಾದರೂ ಇರಲಿ. ಅದರಲ್ಲಿ ನಮಗೆ ದೋಷ

ಕಂಡುಬರುವದಿಲ್ಲ. ಅದು ನಮಗೆ ಪ್ರಧಾನವಲ್ಲ. ಅವುಗಳಲ್ಲಿರುವ ಗುಣ, ಕರ್ಮ ಮುಖ್ಯವಾದವುಗಳು. ಅದಕ್ಕಾಗಿಯೇ ಹಿಂದೆ ಉದಾಹೃತವಾಗಿದೆ "ಗುಣಾಃ ಪೂಜಾ ಸ್ಥಾನಂ ಗುಣಿಷು ನ ಚ ಲಿಂಗಂ ನ ಚ ವಯಃ" ಎಂದು.

ಮದ್ಯ, ಮಾಂಸಾದಿ ಹೊಲಸು ಪದಾರ್ಥಗಳನ್ನು ಸೇವಿಸುವವನು ಹೊಲೆಯನೆಂಬುದು ಶರಣರ ಉಪದೇಶ. ಹೊಲೆಯನ ಜಾತಿಯಲ್ಲಿ ಜನ್ಮ ತಾಳಿದ ಮಾತ್ರಕ್ಕೆ ಹೊಲೆಯನಲ್ಲವೆಂಬುದು ಹಾಗೆಯೇ. ಹೊಲೆಯರಲ್ಲಿ ಇತರ, ಅದಕ್ಕಿಂತ ಸ್ವಲ್ಪ ಉತ್ತಮ ಜಾತಿಯಲ್ಲಿಯೂ ಸಹ ಈ ದುರಭ್ಯಾಸವನ್ನಿಟ್ಟುಕೊಳ್ಳದಿರುವವರು ಬಹು ಮಂದಿ ನಮಗೆ ಸಿಕ್ಕುತ್ತಾರೆ. ಅವರು ದೇವರುಗಳ ಹೆಸರಿನ ಮೇಲೆ ಅಭ್ಯಾಸವನ್ನಿಟ್ಟುಕೊಂಡಿಲ್ಲವೆನ್ನಬಹುದು. ಏನೇ ಇರಲಿ. ಅಂತು ಈ ಅಭ್ಯಾಸವನ್ನು ಬಿಟ್ಟಿರುವವರು ನಮಗೆ ಸಿಕ್ಕಬಹುದು. ಆದರೆ? ಆದರೇನು, ಅವರು ಹೊಲೆಯರ ಜಾತಿಯಲ್ಲಿ ಹುಟ್ಟಿರುವರಷ್ಟೇ. ಆದ್ದರಿಂದ ಅವರು ಹೊಲೆಯರು. ಇದು ಸನಾತನಿಗಳು ಮೊದಲಿನಿಂದಲೂ ಅವರಿಗೆ ಉದಾರವಾಗಿ ಕೊಡುತ್ತಾ ಬಂದಿರುವ ಮಹತ್ವವಾದ ಪ್ರಶಸ್ತಿ. ಅವರು ಇದರಿಂದ ಆ ಜಾತಿಯಲ್ಲಿಯೇ ಇರಬೇಕು. ಅಲ್ಲಿಯೇ ಅವರ ಎಲ್ಲಾ ಪ್ರಾಪಂಚಿಕ ಸಾಮಾಜಿಕ ವ್ಯವಹಾರಗಳು. ಮತ್ತೆಲ್ಲಿಯೂ ಇಲ್ಲ.

ಹೊಲೆಯನು ಹೊಲೆಯರ ಜಾತಿಯಲ್ಲಿ ಮಾತ್ರ ಇಲ್ಲ. ಎಲ್ಲರಲ್ಲಿಯೂ ಇದ್ದಾನೆ. ಮನುಷ್ಯನ ನಡೆವಳಿಕೆಗೆ ಅದು ಬಂದ ಪ್ರಶಸ್ತಿ. ಮನುಷ್ಯನು ಯಾವಾಗಲೂ ಇನ್ನೊಬ್ಬರ ಸುಖ ಸಂತೋಷಗಳನ್ನು ನೋಡಿ ದ್ವೇಷಿಸುತ್ತಿರುವವನು ಹೊಲೆಯ.

ಇದನ್ನೇ ಅನೇಕ ದಾಸರುಗಳು ಹಾಡಿದ್ದಾರೆ. "ಇಬ್ಬರಾಡುವ ಮಾತು ಮರೆಯಲಿ ನಿಂತು ಕೇಳುವವ ಹೊಲೆಯ", "ತಂದೆ ತಾಯಿಗಳ ಬೈಯ್ಯುವವ ಹೊಲೆಯ" ಮುಂತಾದ ಮುತ್ತಿನಂತಹ ಮಾತುಗಳನ್ನು ನಾವು ಕಾಣಬಹುದು. ಅಷ್ಟೇ ಅಲ್ಲ! ಅವುಗಳನ್ನು ಸುವರ್ಣಾಕ್ಷರಗಳಲ್ಲಿ ಬರೆದು ಪ್ರಸಿದ್ಧವಾದ ಸ್ಥಳದಲ್ಲಿ ನೇತು ಹಾಕಿ ಪ್ರತಿದಿನವೂ ಮೂರು ಸಾರಿ ಪಾರಾಯಣ ಮಾಡುತ್ತಿರಬೇಕು. ಅಲ್ಲದೆ ಆಚರಣೆಯಲ್ಲೂ ತಂದುಕೊಳ್ಳಬೇಕು. ಅಂದು ಆತನ ಜೀವನ ಸುಖಮಯವಾದುದು. ಜೀವಿಯೂ ಸಹ ಮೇಲ್ಮಟ್ಟವನ್ನು ಮುಟ್ಟುತ್ತಾನೆ.

ರಾಘವಾಂಕನ ಹರಿಶ್ಚಂದ್ರ ಕಾವ್ಯದಲ್ಲಿ ಹೊಲೆಯನ ಸ್ವರೂಪವನ್ನು ಮನಗಾಣಬಹುದು. ಅದು ಕವಿಯು ಪರಮೇಶ್ವರನ ಬಾಯಿಯಲ್ಲಿ ಆಡಿಸುವ ಮಾತು. ಪರಮೇಶ್ವರನ ವಾಣಿಯು ವೇದಗಳಷ್ಟೂ ಪ್ರಧಾನವಾದುದಲ್ಲವೇ ? ಹರಿಶ್ಚಂದ್ರನು ರಾಜ್ಯಾದಿ ಸರ್ವಸ್ವ ದಾನ ಮಾಡಿ ಉಳಿದ ಹಣವನ್ನು ತೀರಿಸಲು ಪತ್ನಿ ಪುತ್ರರ ಸಮೇತ ಪರದೇಶಿಯಾದ. ಅಲ್ಲಿ ಅವರಿಬ್ಬರನ್ನು ಮಾರಿ ಸ್ವವಿಕ್ರಯುವನ್ನೂ ನಡೆಸಿದನು. ಅದರಲ್ಲಿ ನುಡಿದಂತೆ ನಡೆದು ಎಷ್ಟೆ ಅಸಹ್ಯವಾದ ಕೆಲಸಗಳನ್ನು ಮಾಡಿ ತನ್ನ ವ್ರತದಲ್ಲಿ ಉತ್ತೀರ್ಣನಾದ. ಆಗ ಪರಮೇಶ್ವರನು ಮತ್ತು * "ಮುರಹರಂ ಬಂದನಬ್ಜಾಸನಂ ಬಂದ.................... ಅವರಿವರೆನ್ನಲೇಕೆ ಸರ್ವದೇವರು ಬಂದರಪ್ರತಿಮ ದೇವಾಧಿದೇವ ಪಂಪಾ ವಿರೂಪಾಕ್ಷನಿರ್ದೆಡೆಗೆ" ಸರ್ವದೇವರು ಪ್ರತ್ಯಕ್ಷರಾದರು.

ಹರಿಶ್ಚಂದ್ರ:— ನೆನೆದು ಚಾಂಡಾಲ ಕಿಂಕರನಾಗಿ ಹೊಲೆ ವೇಷ
ವನು ಹೊತ್ತು ಸುಡುಗಾಡ ಕಾದು ಶವಶಿರದಕ್ಕಿ
ಯನು ಹೇಸದುಂಡು ಜೀವಿಸುವವರ ಪುತ್ರನಳಿದು-
ದನು ಕಣ್ಣಾರ ಕಂಡು ||
ಘನ ಪತಿವ್ರತೆಯಪ್ಪ ನಿಜ ಸತಿಯ ಕೊಂದ ನೀ
ಚನು ಮೂರ್ಖನಾನೆನ್ನ ಠಾವಿಂಗಿದೇಕೆ ಪಾ-
ವನ ಮೂರ್ತಿ ನೀವು ಬಿಜಯಂಗೆಯ್ದಿರೆಂದಭವ-
ಸಂಘ್ರಿಯಲಿ ಸೈಗೆಡೆದನು || ೧೨ ||

ಪರಮೇಶ್ವರ:— ಘನ ಸತ್ಯವೇ ಜೀವವೆಂದಿರ್ದ ನಿನ್ನ ಹೊಲೆ ಸಾ
ಯನ ಸೇವೆ ಗುರು ಸೇವೆ ಹೊತ್ತ ಹೊಲೆ ವೇಷ-
ವನ ಪುಣ್ಯ ವೇಷ ಸುಡುಗಾಡ ರಕ್ಷಿಸುವಿರವು ತಾ-
ಯಜ್ಞ ರಕ್ಷ ರಕ್ಷೆಯಿರವು ||
ಅನುದಿನಂ ಭುಂಜಿಸಿದ ಶವದ ಶಿರದಕ್ಕಿಯ
ಲ್ಲನಪೇಯ ಚಾಂದ್ರಾಯಣಂ ಪುತ್ರನಳಿವುಜ
ನ್ಮನಿ ಕಾಯದಳಿವಂಗನಾಹನನ ಮಾಯಾಹನನ-

* ಹರಿಶ್ಚಂದ್ರ ಕಾವ್ಯ, ವಿಶ್ವೇಶ್ವರ ಸಾಕ್ಷಾತ್ಕಾರ, ಪದ್ಯ ೧೦, ೧೨, ೧೩ ಮತ್ತು ೧೫.

ವಂಜ ಬೇಡೆಂದನು || ೧೩ ||
ಅತಿ ಹುಸಿವ ಯತಿ ಹೊಲೆಯ ಹುಸಿಯದಿಹ ಹೊಲೆಯನು
ನ್ನತ ಯತಿವರನು ಹುಸಿದು ಮಾಡುವ ಮಹಾ ಯಜ್ಞ
ಶತವೆಯ್ದೆ ಪಂಚಹ ಪಾತಕ ಸತ್ಯವೆರಸಿದನ್ಯಾಯವದು–
ಲಿಂಗಾರ್ಚನೆ ||
ಶ್ರುತಿಮತವಿನ್ನಾಜ್ಞೆ ನಿನ್ನಂತೆ ಸತ್ಯರೀ
ಕ್ಷಿತಿಯೊಳಿನ್ನಾರುಂಟು ಹೇಳೆಂದು ಪಾರ್ವತೀ
ಪತಿ ಹರಿಶ್ಚಂದ್ರನಂ ತಲೆದಡವಿ ಬೋಳೈಸಿ ಕೌಶಿಕಂ–
ಗಿಂತೆಂದನು || ೧೪ ||

ಮೇಲಿನ ಪಶುಪತಿ ಹರಿಶ್ಚಂದ್ರರ ಸಂಭಾಷಣೆಯಲ್ಲಿ ಹರಿಶ್ಚಂದ್ರನು "ನಾನು ಹೊಲೆ ವೇಷಧಾರಿ. ಹೊಲೆಯ, ಚಾಂಡಾಲನ ಸೇವಕ. ನನ್ನಲ್ಲಿಗೇಕೆ ಬಂದಿರಿ" ಎಂಬುದು. ಅದಕ್ಕೆ ಪರಮೇಶ್ವರನು "ಸತ್ಯವೇ ಜೀವವೆಂದು ಅಥವಾ ಉಸಿರೆಂದು ಭಾವಿಸಿಕೊಂಡ ನಿನ್ನ ಹೊಲೆಯನ ಸೇವೆ ಗುರು ಸೇವೆ, ಹೊಲೆ ವೇಷ ಪಾವನ ಪುಣ್ಯ ವೇಷ, ಅಲ್ಲದೆ ಬಹು ಸುಳ್ಳಾಡುವ ಯತಿಯೇ ಹೊಲೆಯ. ಹುಸಿಯನ್ನಾಡದಿಹ ಹೊಲೆಯನು ಉನ್ನತ ಯತಿವರನು" ಒಂದು ಆತನನ್ನು ಶಿವನು ಸಮಾಧಾನ ಪಡಿಸುವ ಸಂದರ್ಭವು ಕಂಡುಬರುತ್ತದೆ. ಇದರಿಂದ ಹೊಲೆಯನಾರು? ಆ ಹೊಲೆಯ ಭಾವನೆ, ಜಾತಿಯಿಂದಲೆ? ಗುಣಕರ್ಮಗಳಿಂದಲೆ? ಎಂಬುದು ವಿಚಾರಾರ್ಹವಾದುದು.

ಅಲ್ಲಿಂದ ಮುಂದೆ ಶರಣರು ಅವರು ಮುಂದಾಳುಗಳಾದ ಬಸವೇಶ್ವರರೂ ಸಹ ಶಿವಜೀವರ ಸಾಮರಸ್ಯವನ್ನು ಎಷ್ಟು ಸುಲಭವಾಗಿ ಬಿಡಿಸಿ ತಾವೂ ಆಚರಿಸಿ, ಅನುಭವಿಸಿ, ಜನತೆಗೂ ಅಂತೆಯೇ ಮಾಡಿ ಉಭಯ ಕಲ್ಯಾಣವನ್ನು ಪಡೆದರೆಂದರೆ ಸಂತೋಷವಾಗದಿರಲಾರದೇ? ಇದೊಂದು ಉದಾಹರಣೆ ಸಾಲದೆ? "ಸ್ವಾಮಿ ಭೃತ್ಯ ಸಂಬಂಧಕ್ಕೆ ಆವುದು ಪಥವೆಂದೊಡೆ ದಿಟವ ನುಡಿವುದು, ನುಡಿದಂತೆ ನಡೆಯುವುದು | ನುಡಿದು ಹುಸಿವ ನಡೆಮು ತಪ್ಪುವ ಪ್ರಪಂಚಿಯನೊಲ್ಲ ನಮ್ಮ ಕೂಡಲ ಸಂಗಮ ದೇವ ||". ಸ್ವಾಮಿಯೆ ಶಂಕರ. ಭೃತ್ಯನೇ ಕಿಂಕರ, ಅರ್ಥಾತ್ ಕಿಂಕರ ಶಂಕರರ ಸಂಬಂಧವೇ ಸಾಮರಸ್ಯ | ಇದಕ್ಕೆ ಆವುದು ಪಥವೆಂದರೆ ದಿಟವ ನುಡಿಯುವುದು, ನುಡಿದಂತೆ ನಡೆಯುವುದು. ನುಡಿದು ಕಷ್ಟ ಬಂದ ಕಾಲದಲ್ಲಿ

ತಪ್ಪಿ ನಡೆವ ಜೀವನಿಗೆ ಮೋಕ್ಷವಿಲ್ಲ. ಶಿವಜೀವರ ಐಕ್ಯಕ್ಕೆ ಅಥವಾ ಸಾಮರ ಸ್ಯಕ್ಕೆ ನುಡಿಯಂತೆ ನಡೆ, ನಡೆಯಂತೆ ನುಡಿಯೇ ಬುನಾದಿ. ಈ ನಡೆ ನುಡಿಗಳೇ ಶಿವನ ಸಾಮರಸ್ಯಕ್ಕೆ ಸಾಧಕವು. ಇದನ್ನೇ ಪ್ರತಿಯೊಬ್ಬ ಮತಾಚಾರ್ಯರು ಬೋಧಿಸಿರುವರು. ಆದರೂ ಬಸವೇಶ್ವರರು ಮತ್ತೊಂದು ಹೆಜ್ಜೆ ಮುಂದು ವರಿದು ಸುಲಭವಾಗಿ ಜನತೆಗೆ ಉಪದೇಶಿಸಿದ್ದಾರೆಂದು ಅರಿವುದು ಮುಖ್ಯ ವಾದುದು. ಆ ಒಂದಂಶವೇ ಕ್ರಿಯಾಜ್ಞಾನ ವಿಶಿಷ್ಟವಾದ ವೀರಶೈವ ಲಕ್ಷಣ. "ಕ್ರಿಯಾಜ್ಞಾನ ಸಮಾಯುಕ್ತಂ ವೀರಶೈವಸ್ಯ ಲಕ್ಷಣಂ" ಎಂಬುದು ಹೀಗೆಯೇ. ಒಟ್ಟನಲ್ಲಿ ಎಲ್ಲ ಆಚಾರ್ಯರ ತತ್ತ್ವವು ಒಂದೇ. ಆದರೂ ವೀರಶೈವ ಮತಾಚಾರ್ಯರ ತತ್ತ್ವ ಕ್ರಿಯಾಜ್ಞಾನ ವಿಶಿಷ್ಟ ವಾದುದೆಂದು ತಿಳಿಯುತ್ತದೆ.

ಕ್ರಿಯಾ ಜ್ಞಾನಗಳೇ ಆ ಸುಲಭ ಮಾರ್ಗದ ಅಥವಾ ತತ್ವದ ಎರಡು ಮುಖ್ಯಾಂಶಗಳು. "ಛಲ ಬೇಕು ಶಿವಶರಣಂಗೆ ಪರಸತಿಯ ನೊಲ್ಲೆಂಬ. ಛಲಬೇಕು ಶಿವಶರಣಂಗೆ ಪರಸತಿಯನೊಲ್ಲೆಂಬ" ಅಲ್ಲದೆ "ಪರವಧುವನು ಮಹಾದೇವಿಯೆಂಬೆ" ಮುಂತಾಗಿ ಅರಿವುದೇ ಜ್ಞಾನ. ಅರಿದಂತೆ ಆಚರಿಸುವುದೇ ಕ್ರಿಯಾ. "ಪರವಧುವನು ಮಹಾದೇವಿಯೆಂಬೆ" ಎಂದು ಜ್ಞಾನವುಂಟಾಗಿ ಅದರಲ್ಲಿ ಸರಿಯಾಗಿ ನಡೆಯುವುದೇ ಕ್ರಿಯಾ. ಎಂದಮೇಲೆ ನಡೆಯದಿದ್ದರೆ ಜ್ಞಾನವುಂಟಾಗಿ ಫಲವೇನು ? ಆದ್ದರಿಂದ ಜ್ಞಾನ ಕ್ರಿಯೆಗಳ ಸಮಾವೇಶ ಒಂದು ಕಡೆ ಅತಿ ಮುಖ್ಯವಾದುದಲ್ಲವೇ ? ಈ ವಿಷಯದಲ್ಲಿ ಕೇವಲ ಜ್ಞಾನದಿಂದಲೇ ಮೋಕ್ಷವೆಂದು ಕೆಲವು ಆಚಾ ರ್ಯರ ಮತ. ಮೇಲಿನ ನಿರೂಪಣೆಯಿಂದ ಕ್ರಿಯಾ ಜ್ಞಾನಗಳ ಸಮಾ ವೇಶ ವಿಶಿಷ್ಟವಾದ ಮತವು ಮೇಲಾದುದೆಂದು ನನ್ನ ಮತ.

ಅಂದಮೇಲೆ ಜೀವನಿಗೆ ಬಂಧ ಮೋಕ್ಷಗಳು ಸಂಭವಿಸಬೇಕಾದರೆ ಜ್ಞಾನ ಕ್ರಿಯಾಗಳ ಪರಿಣಾಮವೇ ಕಾರಣ. ಪರಧನವನೊಲ್ಲೆ ಅದೇ ಜ್ಞಾನ. ಅದರಂತೆ ಆಚರಣೆ ಅಥವಾ ಕರ್ಮ ಅದೇ ಕ್ರಿಯಾ. ಇವೆರಡೇ ಸಾಮ ರಸ್ಯ ಅಥವಾ ಬಂಧನಕ್ಕೆ ಕಾರಣ. ನುಡಿದು ಹುಸಿವ ಈ ಭವಿಯ ಅಥವಾ ಪ್ರಪಂಚಿಯನೊಲ್ಲನೆಂಬುದು ಉಪದೇಶಕನ ಉಪದೇಶಾಮೃತ. ಈ ಆಚರಣೆ ಸುಲಭವಲ್ಲ. ಹಾಗೂ ಶ್ರಮ ಸಾಧ್ಯವೆನ್ನಲೂ ಬಹುದು. ಮಹಾಮಹಿಮರಿಗೂ ಅಷ್ಟೆ. ಆದರೂ ಆಚರಿಸಿದವರೆಷ್ಟೊ ಮಂದಿಯಿದ್ದಾರೆ. ಸತ್ಯ ಹರಿಶ್ಚಂದ್ರ ಮತ್ತು ಶಿವಶರಣರು ದಾಸರಾದಿಯಾದ ಜ್ಞಾನಿಗಳು.

ಸತ್ಯ ಹರಿಶ್ಚಂದ್ರನು ವ್ರತನಿಷ್ಠ. ಅದು ಮಹತ್ವವಾದುದು. ಇದೆನ್ನು ಹರಿಶ್ಚಂದ್ರನ ಕಾವ್ಯದಲ್ಲಿ ರಾಘವಾಂಕನ ಕೈವಾಡದಿಂದ ಕಾಣಬಹುದು. ನುಡಿದು ನುಡಿದಂತೆ ನಡೆದವನು ಹರಿಶ್ಚಂದ್ರ. ಆದ್ದರಿಂದ ಸತ್ಯಹರಿಶ್ಚಂದ್ರ ನೆಂದು ಆತನಿಗೆ ಪ್ರಶಸ್ತಿಯುಂಟು. ಅದರಲ್ಲಿ ವಿಶ್ವಾಮಿತ್ರ ಮಹರ್ಷಿಗಳು ಪರೀಕ್ಷಕರು. ಇವರು ರಾಜನನ್ನು ಪರೀಕ್ಷಿಸಲು ಚಾಂಡಾಲ ಕನ್ಯೆಯ ರನ್ನು ಸೃಷ್ಟಿಸಿ, ಅವರ ರಾಜನ ಸಂಭಾಷಣೆ, ಫಲಿತಾಂಶವನ್ನು ರಾಘ ವಾಂಕನ ಹರಿಶ್ಚಂದ್ರ ಕಾವ್ಯದಲ್ಲಿ ಓದಬೇಕು. ರಾಜನು ಮುಂದೆ ದೇಶ ಕೋಶಗಳನ್ನು ಮಹರ್ಷಿಗೆ ದಾನ ಮಾಡಿ ಉಳಿದ ಹಣವನ್ನು ತೀರಿಸಲು ಸತೀ ಸುತರ ವಿಕ್ರಯ. ಕೊನೆಗೆ ಸ್ವವಿಕ್ರಯ! ಚಾಂಡಾಲ ವೀರಬಾಹು ವಿನ ಸೇವಾ ವೃತ್ತಿ. ಅದೂ ರುದ್ರಭೂಮಿಯ ಒಡೆತನ! ಇದಿಷ್ಟು ಏಕೆ? ಆತನು ನುಡಿಯಂತೆಯಲ್ಲದೆ ನಡೆಯಲು ಪಡಬಾರದ ಪಾಡು. ಕೊನೆಗೆ ವಿಶ್ವೇಶ್ವರನ ಸಾಕ್ಷಾತ್ಕಾರ.

ರಾಘವಾಂಕನ ಸೋದರಮಾವ ಅಥವಾ ಗುರು ಹರಿಹರನೂ ಸಹ ಇಂಥ ಪರೀಕ್ಷೆಗೆ ಕುಳಿತು ತೇರ್ಗಡೆಯಾದುದನ್ನು ಕಾಣಬಹುದು. ಈತನು ಪಂಪಾಪುರದರಸ ವಿರೂಪಾಕ್ಷನಿಗೆ ಶರೀರವನ್ನು ಮಾರಿ ಸತಿ-ಪತಿಗಳ ಭಾವದಿಂದ ವರ್ತಿಸಿದ್ದಾನೆ. ಅದೇ ಅಲ್ಲವೆ ಪರಮ ವೀರಶೈವ ಮತದ ಸಿದ್ಧಾಂತ ಸಾರ! ವಿರೂಪಾಕ್ಷನ ದೇವಾಲಯದಲ್ಲಿ ಒಂದು ಸಾರಿ ಈತನು ಕಾವ್ಯಗಳನ್ನು ರಚಿಸುತ್ತಿರುವಾಗ ಒಬ್ಬ ತರುಣಿಯು ಬಂದು ಆತನಲ್ಲಿ ಸುಖಪಡಲು ಬಂದಳೆಂದೂ ಆಕೆಗೆ ಹರಿಹರನು "ಪಂಪಾ ಪತಿಯ ಪರಮ ಪತಿವ್ರತೆಯಾದ ನನ್ನಲ್ಲಿ ಯಾವ ಸುಖವನ್ನು ಪಡೆಯಲು ಬಯಸಿದೆಯೊ? ಎಂದು ನಕ್ಕನಂತೆ. ಎಂದು ಒಂದು ಕಥೆಯುಂಟು. ಇದು ದಂತಕಥೆ ಯಾದರೂ ಆಗಿರಲಿ. ಅಂತು ಹೇಗಾದರೂ ಇರಲಿ. ನುಡಿದಂತೆ ನಡೆಯ ಬೇಕಾದಾಗ ಬರುವ ಇಂಥ ಎಷ್ಟೋ ವಿಘ್ನಗಳನ್ನು ತಡೆದು ಸಾಮರಸ್ಯ ವನ್ನು ಪಡೆದನು.

ಅಂತೆಯೇ ಶಿವ ಶರಣರೂ ಸಹ ನುಡಿದಂತೆ ನಡೆದು ಆದರ್ಶ ಮಹಾಮಹಿಮರಾಗಿದ್ದಾರೆ. ಬಸವೇಶ್ವರನು "ಎಲ್ಲಿ ನೋಡಿದಡಲ್ಲಿ ಮನ ವೆರಿಸಿದೊಡೆ ನಿಮ್ಮಾಣೆ ನಿಮ್ಮ ಪ್ರಮಥರಾಣೆ ನಿಮ್ಮ ರಾಣಿವಾಸದಾಣೆ. ಪರವಧುವನು ಮಹಾದೇವಿಯೆಂಬೆ ಕೂಡಲ ಸಂಗಮದೇವ" ಎಂದು

ವಾಗ್ದಾನ ಮಾಡಿ ಅದರಂತೆ ನಡೆದನು. ಆಹಾ! ಎಂಥ ಭಾಷೆ! ಎಂಥ ಮಾತು!! ಪ್ರಮಾಣ!!! ನಿಮ್ಮ ರಾಣಿವಾಸದಾಣೆ! ಪ್ರಮಥರಾಣೆ! ಅಯ್ಯೋ! ಶಿವಶಿವ!! ಎಷ್ಟು ಧೈರ್ಯ! ನುಡಿ ಸಾಮಾನ್ಯವೆ? ನುಡಿದು ನಡೆಯದಿರುವುದು ಸಾಧ್ಯವೆ! ನಡೆಯಲೇಬೇಕು. ನುಡಿಯಂತೆ ನಡೆ ಇದ್ದೇ ತೀರಬೇಕು. ಅದಕ್ಕಾಗಿಯೇ ಹಿಂದೆ ವಾಚಕರು ಅರಿತಿದ್ದಾರೆ. "ಋಷೀಣಾಂ ಪುನರಾದ್ಯಾನಾಂ ವಾಚಮರ್ಥೋ಼ ಸುಧಾವತಿ" ಎಂದು.

ಚನ್ನಬಸವೇಶ್ವರನು "ಛಲಬೇಕು ಶಿವಶರಣಂಗೆ ಪರಧನವನ್ನೊಲ್ಲೆಂಬ. ಛಲಬೇಕು ಶಿವಶರಣಂಗೆ ಪರಸತಿಯನೊಲ್ಲೆಂಬ ಎಂಬುದಾಗಿ ನುಡಿದು ಮಧ್ಯೆ ಬಂದ ವಿಘ್ನಾದಿಗಳನ್ನು ತಡೆದು ನಿಲ್ಲಿಸಿ ಮುಕ್ತನಾದನು."

ಇನ್ನು ಅನೇಕ ಮಹಾಮಹಿಮರು ಜ್ಞಾನಿ ಶಿರೋಮಣಿಗಳೂ ಸಹ ನುಡಿನಡೆಯ ವಿಚಾರದಲ್ಲಿ ಜಾಗರೂಕರಾಗಿ ವರ್ತಿಸಿ ಮುಕ್ತರಾಗಿ ಆದರ್ಶ ವ್ಯಕ್ತಿಗಳಾಗಿದ್ದಾರೆ. ಅದರಂತೆಯೇ ಉಪದೇಶವಿತ್ತಿದ್ದಾರೆ. "ಪರೋಪದೇಶ ಪಾಂಡಿತ್ಯಂ ಸರ್ವೇಷಾಂ ಸುಕರಂ ನೃಣಾಂ। ಧರ್ಮೇಸ್ವೀಯ ಮನುಷ್ಠಾನಂ ಕಸ್ಯಚಿತ್ಸುಮಹಾತ್ಮನಃ" ಎಂಬಂತೆ ಪರರಿಗೆ ಉಪದೇಶ ಮಾಡುವದರಲ್ಲಿಯೇ ಅಲ್ಲ, ಅವರ ಪಾಂಡಿತ್ಯ ಆಚರಣೆಯಲ್ಲಿಯೂ ಉಂಟು. ಇದಕ್ಕೆ ಹೆಚ್ಚು ಬೆಲೆ. ಆದ್ದರಿಂದಲೇ ಇದುವರೆಗೂ, ಮುಂದೆಯೂ ಅವರ ಉಪದೇಶವಾಣಿಗಳು ನಮ್ಮ ಕಣ್ಣು ಮುಂದೆ ನಿಂತು ಮನವನ್ನು ಸೂರೆಗೊಳಿಸಿ "ಉತ್ತಿಷ್ಠತ, ಜಾಗ್ರತ, ಪ್ರಾಪ್ಯವರಾನ್ನಿ ಬೋಧಕಂ ಮುಂತಾಗಿ ಉದ್ಘೋಷಿಸುತ್ತಿರುತ್ತವೆ.

ಮೇಲೆ ನಿರೂಪಿಸಿದ ನುಡಿನಡೆಯು ವ್ರತವೇ ಹೌದಲ್ಲವೇ? ಅದರಲ್ಲೂ ಕಠಿನವಾದ ಮಹಾವ್ರತ. ಅಷ್ಟೇ ಅಲ್ಲ ಅದೊಂದು ಅಸಿಧಾರಾವ್ರತವೇ. ಒಳ್ಳೆ ಹರಿತವಾದ ಕತ್ತಿಯಬಾಯಿಯ ಮೇಲೆ ನಡೆಯುವುದು ಎಷ್ಟು ಸುಲಭವೊ ಅಷ್ಟೇ ಸುಲಭ ಈ ವ್ರತವನ್ನಾಚರಿಸುವುದು. ಅದು ಆಚರಣೆ ಅಥವಾ ಸಾಧನೆಯಿಂದ ಸಾಧ್ಯವಾದೀತು ಸಾಧಕನಿಗೆ. ಆತನಿಗೆ ಮಾರ್ಗವನ್ನು ಮಹಾತ್ಮರು ಸುಲಭವಾಗಿ ಬೋಧಿಸಿದ್ದಾರೆ. ಅವರೇ ಶಿವಶರಣರು. ಅದು ಕನ್ನಡ ಭಾಷೆಯಲ್ಲಿ. ಆ ಮಾರ್ಗವೇ ಅಷ್ಟಾವರಣ, ಪಂಚಾಚಾರ, ಷಟ್ಸ್ಥಲಗಳ ಬುನಾದಿ. ಇವುಗಳ ಬಲವೇ ಬೆಂಬಲ ಜೀವಾತ್ಮನ ಪರಮೋಚ್ಚಸದವಿಗೆ, ಅಥವಾ ಸೋಪಾನ ಮುಕ್ತಿಮಂದಿರಕ್ಕೆ.

ಇನ್ನು ಮುಂದೆ "ಕಳಬೇಡ, ಕೊಲಬೇಡ, ಹುಸಿಯ ನುಡಿಯಲು ಬೇಡ, ಅಸೂಯೆಪಡಬೇಡ, ತನ್ನ ಬಣ್ಣಿಸಬೇಡ, ಇದಿರು ಹಳಿಯಲು ಬೇಡ, ಇದೇ ಅಂತರಂಗದ ಶುದ್ಧಿ, ಇದೇ ಬಹಿರಂಗದ ಶುದ್ಧಿ, ಇದೇ ನಮ್ಮ ಕೂಡಲ ಸಂಗನನೊಲಿಸುವ ಪರಿ" ಎಂದು ಸಾರಿದರು.—"ಇದೇ ನಮ್ಮ ಕೂಡಲಸಂಗನನೊಲಿಸುವ ಪರಿ" ಈ ಪರಿ ಎಷ್ಟು ಮನೋಹರವಾಗಿದೆ. ಎಷ್ಟು ಸುಲಭ! ಎಷ್ಟು ಅರ್ಥಗರ್ಭಿತ. ಎಂಥ ಉದಾರವಾದ ತತ್ವ ನೀತಿ ನಯ ಮುಂತಾದ ಸದ್ಗುಣಗಳ ಪರಂಪರೆ. ಮುತ್ತಿನಂತಹ ಮಾತು ಇದೇ ಅಲ್ಲವೆ? ಇದಕ್ಕಿಂತ ಬೇರೆ ಭಾಷೆ ಬೇಕೆ? ಬೇರೆ ಗದ್ಯ ಬೇಕೆ? ಪದ್ಯ ಬೇಕೆ? ಶಾಸ್ತ್ರ ಬೇಕೆ? ವೇದ ಬೇಕೆ? ಪುರಾಣ ಬೇಕೆ? ಆಗಮಗಳು ಬೇಕೆ? ಉಪ ನಿಷತ್ತು ಬೇಕೆ? ಇವೆಲ್ಲವನ್ನು ಕಡೆದು ಇಳಿಸಿದ ಗಟ್ಟಿ ಅಥವಾ ಸಾರವಿದೇ ಅಲ್ಲವೆ? ಅಂದ ಮೇಲೆ ವೇದಾಗಮ ಪುರಾಣಾದಿ ಆಧಾರಗಳಲ್ಲಿಲ್ಲದ ಮಹೋ ನ್ನತ ತತ್ವ ಇಲ್ಲಿಲ್ಲವೆಂಬ ಹಾಗಿಲ್ಲವಲ್ಲ? ಇಂಥ ಉದಾತ್ತ ತತ್ವವನ್ನು ಉಪ ದೇಶಿಸಿ ಆಚರಿಸಿ ಜನತೆಯನ್ನು ಉದ್ಧಾರ ಮಾಡಿದ ಕೀರ್ತಿ ಯಾವ ಆಚಾ ರ್ಯರಿಗೆ ಸಲ್ಲಬೇಕು? "ಜನತೆಯನ್ನು ಉದ್ಧಾರ ಮಾಡಿದ" ಎಂಬಲ್ಲಿ ಜನತಾ ಶಬ್ದಕ್ಕೆ ಎಷ್ಟು ವಿಶಾಲವಾದ ಅರ್ಥವಿದೆ. ಜನತೆ ಒಂದು ಸಮಾ ಜಕ್ಕೆ ಸೇರದ್ದೇ? ಇಲ್ಲ. ಒಂದೇ ಜನಾಂಗ ಅಥವಾ ಸಮಾಜದಲ್ಲೇ ಇರ ಬೇಕೆಂಬ ನಿಯಮವಿಲ್ಲ ಅದು. ಈ ಜನಾಂಗ ಅಥವಾ ಸಮಾಜವು ವ್ಯಕ್ತಿ ಗಳಿಂದ ನಿರ್ಮಾಣವಾಗಿದೆ. ಓದು ಬರಹ ಬಲ್ಲವರು. ಮತ್ತೊಬ್ಬರ ಮನೆ ಯಲ್ಲಿ ಪೂಜಾದಿಗಳನ್ನು ತಮಗೆ ತಿಳಿದಮಟ್ಟಿಗೆ ನೆರವೇರಿಸಿ ಅವರಿಂದ ಪ್ರತ್ಯುಪಕಾರವನ್ನು ಮಹತ್ತರವಾಗಿ ಪಡೆದು ಅದರಿಂದ ಹೇಗೋ ಜೀವನ ವನ್ನು ನಡೆಸುವವರು ಒಂದು ಗುಂಪು. ಕಾದಾಡುವವರು ದೊಡ್ಡ ದೊಡ್ಡ ಕಲಹಗಳಲ್ಲಿ ಜಯಭೇರಿಯನ್ನು ಬಾರಿಸಿ ಮಹಾನಂದವನ್ನು ಪಡೆದು ಸುಖ ವಾಗಿ ಲೀಲಾಲೋಲರಾಗಿ ಮದಾಂಧತೆಯಿಂದ ಸಂಸಾರಿಕ ಭೋಗೋಪ ಭೋಗಗಳನ್ನು ಪಡೆಯುವವರು ಮತ್ತೊಂದು ಗುಂಪು. ಲೋಕದಲ್ಲಿ ಸಿಕ್ಕುವ ಯಾವುದೊಂದು ಪದಾರ್ಥವನ್ನಾಗಲೇ ಶೇಖರಿಸಿ ಒಂದು ಕಡೆ ಯಿಟ್ಟು ಅದನ್ನು ಬೇಡುವವರಿಗೆ ಕೊಟ್ಟು ಅದರಿಂದ ಬಂದ ಮೊತ್ತವನ್ನು ಪಡೆದು ಉಪ್ಪರಿಗೆಗಳಲ್ಲಿ ಅಷ್ಟೈಶ್ವರ್ಯದಿಂದ ಮೆರೆಯುವವರು ಮಗ ದೊಂದು ಗುಂಪು. ಈ ಗುಂಪುಗಳಿಗೆ ಸೇರದೆ ಊರ ಹೊರಗಿದ್ದುಕೊಂದು ಜನತೆಯ ಜೀವನಕ್ಕೆ ಪ್ರತಿದಿನವೂ ಅತ್ಯವಶ್ಯಕವಾದ ಪ್ರತಿಯೊಂದು

ಸಾಮಾನನ್ನೂ ಬೆಳೆದು ಕೊಡುವವರು ಇನ್ನೊಂದು ಗುಂಪು. ಇವರು ಬಿಸಿಲು, ಮಳೆ, ಹಸಿವು, ದಾಹ, ರೋಗ, ಮುಂತಾದ ಯಾವ ಈತಿಬಾಧೆಗಳನ್ನೂ ಗಮನಿಸದೆ ದುಡಿಯುವವರು. ಆದ್ದರಿಂದ ಈ ಗುಂಪುಗಳು ಕೊನೆಕೊನೆಗೆ ಬರಬರುತ್ತಾ ಪ್ರತ್ಯೇಕವಾಗಿಯೇ ತಮ್ಮ ತಮ್ಮಲ್ಲಿಯೇ ವ್ಯವಹರಿಸಲು ಪ್ರಾರಂಭಿಸಿದುವು. ಇಂಥ ವ್ಯವಹಾರಗಳು ಆಯಾಯ ಗುಂಪಿಗೆ ಸೇರಿತ್ತೇ ವಿನಾ ಪರಸ್ಪರ ಸಂಬಂಧವಿರಲಿಲ್ಲ. ಈ ಗುಂಪುಗಳು ಸಮಾಜ ಅಥವಾ ಜನಾಂಗಗಳ ನಾಮಧೇಯದಿಂದ ಮಾರ್ಪಟ್ಟವು. ಇದರ ಸೃಷ್ಟಿಕರ್ತರೇ ವ್ಯಕ್ತಿಗಳೆಂದರೆ ತಪ್ಪಾಗಲಾರದಲ್ಲವೆ? ಈ ಸಮಾಜದಲ್ಲಿ ಮಾತ್ರ ಜನತೆಯುಂಟು. ಮತ್ತೊಂದು ಜನಾಂಗದಲ್ಲಿ ಜನತೆಯಿಲ್ಲವೆಂಬುವಹಾಗಿಲ್ಲ. ಜನತೆಯೆಂದರೆ "ಜನಗಳ ಸಮೂಹ"ವೆಂದರ್ಥ. * ಸಮೂಹಾರ್ಥದಲ್ಲಿ ಜನಶಬ್ದದ ಮೇಲೆ "ತಲ್" ಪ್ರತ್ಯಯವು ಬಂದಿರುವುದರಿಂದ ಜನತೆಯೆಂದರೆ ಜನಗಳ ಸಮೂಹವೇ ಹೊರತು ಕೇವಲ ಒಂದು ಜನವಲ್ಲ ಅಂದರೆ ಒಬ್ಬ ವ್ಯಕ್ತಿಯೇ ಅಲ್ಲ. ಒಂದು ವ್ಯಕ್ತಿಗೆ ಮಾತ್ರ ಒಂದು ಸಮಾಜವಾಗಲಾರದು. ಆದರೂ ವ್ಯಕ್ತಿಗೆ ಬೇಕಾದ ಎಲ್ಲಾ ಜೀವನದ ಸಹಾಯಗಳು ಒದಗಲು ತುಂಬಾ ತೊಂದರೆಯುಂಟು. ಅದಕ್ಕಾಗಿ ಜನಸಮೂಹವೇ ಸಮಾಜ. ಇಂಥ ಅನೇಕ ಜನಗಳ ಸಮೂಹಗಳು ಒಂದೊಂದು ಗುಂಪಾಗಿ ಒಂದೊಂದು ಕಡೆಯಾದವು. ಅಥವಾ ಪ್ರತ್ಯೇಕವಾಗಿ ವಾಸಿಸಲು ಪ್ರಾರಂಭಿಸಿದುವು. ಜನಸಮೂಹವೇ ಸಮಾಜ. ಸಮಾಜವೇ ಜನಸಮೂಹವೆಂದ ಹಾಗಾಯಿತು. ಅಂದ ಮೇಲೆ ಜನಸಮೂಹ ಪ್ರತಿಜನಾಂಗ ಅಥವಾ ಸಮಾಜದಲ್ಲೂ ಉಂಟಷ್ಟೇ! ಈಗ ಜನತೆಯನ್ನು ಉದ್ಧಾರ ಮಾಡಿದ ಕೀರ್ತಿಯೆಂದರೆ ಜನತೆಯಲ್ಲಾ ಸಮಾಜದಲ್ಲಿಯೂ ಇದ್ದಾರೆಂದರೆ ಎಲ್ಲಾ ಸಮಾಜಗಳನ್ನು, ಎಲ್ಲಾ ದೇಶವನ್ನೂ ಅಂದರೆ ಇಡೀ ಪ್ರಪಂಚವನ್ನೇ ಉದ್ಧಾರ ಮಾಡಿದರೆಂದರೆ ಅವರು ಎಂಥ ಸಮಾಜ ಸುಧಾರಕರು ದೇಶೋದ್ಧಾರಕರು. ಇಂದಿನ ನಮ್ಮ ಯುಗದಲ್ಲಿ ಆಸತ್ಪರಂಪರೆಯನ್ನು ಮುಂದುವರಿಸುತ್ತ ಬಂದಿದ್ದವರಲ್ಲಿ ಮಹಾತ್ಮಾ ಗಾಂಧಿಯವರೊಬ್ಬರೆಂದರೆ ಸಾಕು. ಅವರು ಮಹಾತ್ಮರ ದಾರಿಯನ್ನೆ ಹಿಡಿದು ಸಮಸ್ತ ಜನಾಂಗಕ್ಕೂ ಪ್ರಪಂಚದಲ್ಲಿ ದೊರೆಯಬೇಕಾದ ಹಕ್ಕು ಬಾಧ್ಯವನ್ನು ಒದಗಿಸಲು ಹೋರಾಡಿದರು. ಸಮಾಜದಲ್ಲಿ ಯಾವ ಕಾರಣದಿಂದಲೂ ಪ್ರವೇ

* ಗ್ರಾಮ ಜನ ಬಂದುಭ್ಯಸ್ತತ್ ೪-೨-೪೩ ಪಾಣಿನಿ ಸೂತ್ರ.

ಶಿಸಲು ಅಧಿಕಾರವಿಲ್ಲದಂತಿದ್ದ ಅಸ್ಪೃಶ್ಯರನ್ನು ಸ್ಪೃಶ್ಯರನ್ನಾಗಿ ಮಾಡಿ ಅವರೂ ಸಹ ದೈವದತ್ತವಾದ ಎಲ್ಲಾ ಪ್ರಯೋಜನಗಳನ್ನು ಪಡೆಯುವಂತೆ ಸದಾಃ ಶ್ರಮಿಸಿದರು. ಅದಕ್ಕಾಗಿಯೇ ಅವರಿಗೆ ವಿದ್ಯಾಭ್ಯಾಸ ಅಶುಚಿ ಸದಾಚಾರ ಮುಂತಾದ ಸಮುಪವೇಶಾಮೃತವನ್ನು ಪಾನಮಾಡಿಸಿದರು. "ಅಹಿಂಸಾ ಪರಮೋ ಧರ್ಮಃ ಎಂಬ ಮಹತ್ವವಾದ ತತ್ವವನ್ನು ಬೋಧಿಸಿ ಅದನು ಕಾರ್ಯರಂಗಕ್ಕಿಳಿಸಲು ಬಹಳ ಶ್ರಮಪಡುತ್ತಿದ್ದರು. ಇದಿಷ್ಟು ಅವರು ತಪೋ ಭೂಮಿಯನ್ನಾಗಿ ಮಾಡಿಕೊಂಡಿದ್ದ ವಿಶ್ವದಲ್ಲಿ ಜಗತ್ತಿನಲ್ಲಿ ಕಾರ್ಯರಂಗ ಸಾಮಾನ್ಯವೇ? ಇಂಥ ರಂಗದಲ್ಲಿ ಇಡೀ ಜನತೆಗೆ ವಿಶ್ವಧರ್ಮವನ್ನು ಉಪದೇಶಿಸಿ ಎಚ್ಚರಿಸಿದರು. ಸಮಾನತೆ ಸ್ವಾತಂತ್ರ್ಯ ಮತ್ತು ವಿಶ್ವಬಂಧುತ್ವ ಇವುಗಳೇ ವಿಶ್ವಧರ್ಮದ ಬುನಾದಿಗಳೆಂದು ಹೇಳಬಹುದು. ಇಂದಿನ ಈ ಮಾತು ಹಿಂದಿನವರ "ಮಾತಾ ಗೌರೀ ಪಿತಾ ರುದ್ರ: ಈಶ್ವರಃ ಕುಲಮೇವಚ | ಬಾಂಧವಾಶಿವಭಕ್ತಾಶ್ಚ ಸ್ವದೇಶೋಭುವನತ್ರಯಮ್" || ಎಂಬ ವಾತುಲ ತಂತ್ರೋಕ್ತಿಯನ್ನು ಮತ್ತೊಮ್ಮೆ ನೆನಪಿಗೆ ತರುತ್ತವೆಯೆನ್ನಬಹುದು. ಗಾಂಧೀಜಿಯು ಉಚ್ಚ ನೀಚ ಭಾವನೆಗಳು ಹುಟ್ಟಿ ಜಾತಿ ವಿಭಾಗವಾಗುವ ರಾಕ್ಷಸ ಕೃತ್ಯವನ್ನು ಹಾಳು ಮಾಡಿದರು. ರಾಜಕೀಯದಲ್ಲೂ ಸಹ ಸಮಾನತೆಯನ್ನು ದೊರಕಿಸಲು ಶ್ರಮಿಸಿದರು. "ದೇವನೊಬ್ಬ ನಾಮ ಹಲವು" ಎಂಬ ವಿಶ್ವಧರ್ಮದ ಮಹೋನ್ನತ ತತ್ವವನ್ನು ಜಗಕ್ಕೆ ಬೀರಿದ ಬಸವೇಶ್ವರನಂತೆ ಇವರೂ ಸಹ ಇಡೀ ಜನತೆಯನ್ನೆ ಸೇರಿಸಿಕೊಂಡು ಸಾಮೂಹಿಕ ಪ್ರಾರ್ಥನೆಯನ್ನು ತಪ್ಪದೆ ನಿರ್ದಿಷ್ಟ ಕಾಲದಲ್ಲಿ ನಡೆಸುತ್ತಾ ಬಂದರು. ಇದರಿಂದ ಎಲ್ಲರಿಗೂ ಒಬ್ಬನೇ ದೇವರು. ಆತನಿಗೆ ಯಾವ ಹೆಸರಿದ್ದರೇನು ? ಅದು ನಾವಿಟ್ಟ ಹೆಸರಲ್ಲವೆ ಆತನಿಗೆ ಎಂದು ಪ್ರಜೆಗಳು ಸ್ವಲ್ಪ ಎಚ್ಚತ್ತರು.

" ರಘುಪತಿ ರಾಘವ ರಾಜಾರಾಮ<br>
ಪತಿತಪಾವನ ಸೀತಾರಾಮ<br>
ಈಶ್ವರ ಅಲ್ಲಾ ತೇರೆನಾಮ<br>
ಸಬಕೊ ಸಸ್ಮತಿ ದೆ ಭಗವಾನ<br>
ಮಂದಿರ ಮಸ್ಜಿದ ತೇರೆಧಾಮ<br>
ಸಬಕೋ ಜನ್ಮದಿಯಾ ಭಗವಾನ"

ಇದೇ ಆ ವಿಶ್ವಬಂಧುತ್ವವನ್ನೀಯುವ ರಾಮಧುನ. ಇದರಲ್ಲಿ " ಪರಮಾ

ತ್ಮನು ಯಾವನೇ ಆಗಲಿ. ಆತನ ಹೆಸರೇನೇ ಇರಲಿ. ಸರ್ವರಿಗೂ ಸದ್ಬುದ್ಧಿಯನ್ನು ಕೊಡು" ಎಂಬ ವಿಶಾಲವಾದ ಮನೋಭಾವನೆಯಿಂದ ಹೊರಡುವ ಪ್ರಾರ್ಥನಾ ದುಂದುಭಿಯು ಇದರ ನಾದ ವಿಶ್ವವನ್ನೆ ಆವರಿಸಿತು. ಜನತೆಯು ಉಚ್ಚ ನೀಚ ಭಾವನೆಯನ್ನು ಮರೆಯಬಾರದೆ ಇನ್ನಾದರೂ !

ಇನ್ನು ಉದಾಹರಿಸಿದ ವಚನವನ್ನು ಸಿಂಹಾವಲೋಕನ ಮಾಡೋಣ. "ಕಳಬೇಡ ಕೊಲಬೇಡ ................ ಕೂಡಲಸಂಗನೊಲಿಸುವ ಪರಿ" ಈ ವಚನವು ಕೇವಲ ಒಂದು ಜನಾಂಗವನ್ನು ಮಾತ್ರ ಉದ್ದೇಶಿಸಿ ಉಪದೇಶಿಸಲ್ಪಟ್ಟಿಲ್ಲವೆಂಬುದು ಭಾವದಿಂದ ಗೊತ್ತಾಗಬಹುದಲ್ಲವೆ! ಇದೇ ವಿಶ್ವಧರ್ಮದ ವಿಶಾಲ ಮನೋಭಾವನೆಯು. ಆತ್ಮಕಲ್ಯಾಣವೂ ಆಗಿ ಲೋಕಕಲ್ಯಾಣವೂ ಆಗುವಂತೆ ಕೈಗೊಳ್ಳುವ ಮಹಾತ್ಮರ ಸುಲಕ್ಷಣವಲ್ಲವೆ! ಇದಕ್ಕಿಂತಲೂ ವಿಶಾಲವಾದ ಮಹೋನ್ನತ ತತ್ವ ಬೇರೆ ಬೇಕೆ? ಎಲ್ಲಾ ವೇದಾಗಮಾದಿ ನಿಖಿಲ ಶಾಸ್ತ್ರಗಳ ಸಾರವೇ ಅಲ್ಲವೆ ಇದು? ಜನಾಂಗವನ್ನು ಉದ್ದೇಶಿಸಿ ನುಡಿದರೂ ಜನತೆಯೂ ಇದರಿಂದ ಯಾವ ಫಲವನ್ನು ತಾನೆ ಪಡೆಯಲಾರದು ?

ಸ್ವಾಮಿ ಭೃತ್ಯ ಸಂಬಂಧದ ಸ್ವರೂಪವನ್ನು ಬಹು ಸುಲಭವಾಗಿ ಬೋಧಿಸಿದಂತೆ ಪರಮಾತ್ಮನನ್ನು ಸುಲಭವಾಗಿ ಒಲಿಸಿಕೊಳ್ಳುವ ಸ್ವರೂಪವನ್ನು ಈ ವಚನದಲ್ಲಿ ಬೋಧಿಸಿದ್ದಾರೆ. ಅದರಲ್ಲಿ ಯಾರಿಗಾದರೂ ಪ್ರವೇಶವುಂಟು. ಕೇವಲ ಒಂದು ಜನಾಂಗವಲ್ಲ. ವ್ಯಕ್ತಿಯಲ್ಲ. "ಇದೇ ನಮ್ಮ ಕೂಡಲಸಂಗನೊಲಿಸುವ ಪರಿ" ಅದೂ ಸಹ ಸುಲಭಸಾಧ್ಯ. ಶ್ರಮಸಾಧ್ಯವಲ್ಲ. ಆತನನ್ನು ಒಲಿಸಿಕೊಳ್ಳಬೇಕಾದರೆ ಒಂದು ಬಿಡಿ ಕಾಸೂ ಸಹ ಬೇಕಾಗುವ ಹಾಗಿಲ್ಲ. ಮತ್ತೊಬ್ಬರ ಸಹಾಯವನ್ನಾಗಲೀ ಈ ಕಾರ್ಯಸಾಧನೆಗೆ ಅಪೇಕ್ಷಿಸುವದಿಲ್ಲ. ಆದರೆ ಏನೇ ತೊಂದರೆ ಬರಲಿ ಆತನ ಮಾರ್ಗ ಸುಗಮವಾಗಿರಲಿ. ಬರುವ ವಿಘ್ನಗಳನ್ನೆ ತಡೆದು ಮುಂದುವರಿಯುತ್ತಾ ಇರಬೇಕು. ಕೊನೆಗೆ ಪರಮಾತ್ಮನ ಒಲುಮೆ ಈ ಸ್ಥಿತಿಯುಂಟಾದಾಗ ಮುಕ್ತಿ.

ಬ್ರಹ್ಮಚರ್ಯ, ತಪ, ಆಸ್ತೇಯ, ಸತ್ಯ, ಇಂದ್ರಿಯ ನಿಗ್ರಹ, ಅಹಿಂಸಾ ಮುಂತಾದ ಮಹಾಮಂತ್ರಗಳು ಮೇಲಿನ ವಚನವನ್ನೆ ನೆನ

ಪಿಗೆ ತಂದುಕೊಡುತ್ತವೆ. "ಸತ್ಯ, ಆಸ್ತೇಯ" ವೆಂಬುದರ ಅಭಿಪ್ರಾಯವೇ *"ಹುಸಿಯ ನುಡಿಯಲು ಬೇಡ. ಕಳಬೇಡ" ಎಂಬುದರಲ್ಲಿ ತುಂಬಿತುಳುಕಾಡುತ್ತಿದೆ. ಸ್ನಾನಾದಿ ಬಾಹ್ಯ ಕ್ರಿಯೆಗಳು ಬಹಿರಂಗವನ್ನು ಪರಿಶುದ್ಧಗೊಳಿಸುವಂತೆ ಸತ್ಯ, ಅಹಿಂಸಾ, ಆಸ್ತೇಯ ಮುಂತಾದ ಸದ್ಗುಣಗಳು ಅಂತರಂಗವನ್ನು ಪರಿಶುದ್ಧಗೊಳಿಸುತ್ತವೆ. ಇದರ ಮೂಲಕ ಬಹಿರಂಗವೂ ಪರಿಶುದ್ಧಿಗೊಂಡಂತೆಯೇ ಅಲ್ಲವೇ ?

ನಮ್ಮ ಪದಾರ್ಥವನ್ನು ನಾವು ಉಪಯೋಗಿಸಿಕೊಂಡರೆ ಕಳ್ಳತನವಲ್ಲ. ಹೌದು. ಆದರೆ, ಆದರೇನು? ನಮ್ಮ ಜೀವನಕ್ಕೆ ಸಾಕಾಗಿ ಉಳಿಯುವ ಪದಾರ್ಥವು ಮತ್ತೊಬ್ಬರಿಗೆ ಬೇಕಾಗಿದ್ದಿರಬಹುದು. ಅವರಿಗೆ ಬೇಕಾಗುವಾಗ ನಾವು ಜೀವನಕ್ಕಾಗುವುದಕ್ಕಿಂತ ಹೆಚ್ಚಿಗೆ ಸಂಗ್ರಹಿಸಿದಂತಾಗಲಿಲ್ಲವೆ? ಇದು ಕಳ್ಳತನವೆಂದೇ ಪರಿಗಣನೆ. ಇದೇ ಗಾಂಧೀ ಬೋಧಾಮೃತವು. ಆತನ ಇನ್ನೆರಡು ಮಾತನ್ನು ಇಲ್ಲಿ ನಿರೂಪಿಸೋಣ. "ಮನುಷ್ಯ ಇತರರ ವಸ್ತುವನ್ನಷ್ಟೇ ಅಲ್ಲ. ತನ್ನದೇ ಆದ ವಸ್ತುಗಳನ್ನೂ ಕದಿಯಬಹುದು. ಉದಾಹರಣೆಗೆ ತನ್ನ ಮಕ್ಕಳಿಗೆ ಗೊತ್ತಿಲ್ಲದಂತೆ ಯಾವ ಪದಾರ್ಥಗಳನ್ನಾದರೂ ತಿನ್ನುವುದು. ಹೆಂಡತಿಗೆ ಗೊತ್ತಿಲ್ಲದಂತೆ ಗಂಡನು ತಿನ್ನುವುದು. ಅವನಿಗೆ ಗೊತ್ತಿಲ್ಲದಂತೆ ಅವಳು ತಿನ್ನುವುದು. ಇಬ್ಬರಿಗೂ ಗೊತ್ತಿಲ್ಲದಂತೆ ಮಕ್ಕಳು ತಿನ್ನುವುದು. ಮಡದಿ, ಮಕ್ಕಳು ಮತ್ತು ಮನೆ ಯಜಮಾನ ಇವರೆಲ್ಲರಿಗೂ ಗೊತ್ತಿಲ್ಲದಂತೆ ಮನೆಯ ಸೇವಕನೂ ತಿನ್ನುವುದು. ಇವೆಲ್ಲವೂ ಕಳ್ಳತನ. ಅಷ್ಟೇ ಅಲ್ಲ. ಯಜಮಾನನು ಹೊರಗಡೆ ಫಲಾಹಾರ (*Hotel*) ಮಂದಿರಗಳಲ್ಲಿ ಮನಃಪೂರ್ತಿಯಾಗಿ ತಿಂಡಿ ತಿಂದು ಮನೆಯಲ್ಲಿ "ಈ ದಿನ ನನಗೆ ಹಸಿವಿಲ್ಲ. ಏಕೋ ಜೀರ್ಣವಾಗಿಲ್ಲ. ಶರೀರಕ್ಕೂ ಆಯಾಸವಾಗಿಲ್ಲ. ಆದ್ದರಿಂದ ನನಗೆ ಈ ದಿನ ಊಟ ಬೇಕಾಗಿಲ್ಲ" ವೆಂದು ಮಲಗಿದರೂ ಕಳ್ಳತನ. ಅದು ಎರಡು ವಿಧ ವಂಚನೆ. (೧) ಆತ್ಮವಂಚನೆ. (೨) ಹೆಂಡತಿಯ ಉಪವಾಸ. ಇದು ಕಳ್ಳತನಕ್ಕಿಂತಲೂ ಹೆಚ್ಚಿನದು. ಇದಕ್ಕೆ ಲೂಟಿ ಎಂದು ಕರೆಯಬಹುದು. ಒಂದು ಸಂಘ ಅಥವಾ ಆಶ್ರಮದಲ್ಲಿ ಸೇರಿ ಅಲ್ಲಿರುವ ಯಾವುದಾದರೂ

---

* ಗಾಂಧಿಯ ಪ್ರಮಾಣ ವಚನಗಳು. ಗ್ರಾಮಸೇವಾನಿಲಯ ಮೈಸೂರ ಪುಟ ೨೩, ೨೪.

ಒಂದು ಪದಾರ್ಥವನ್ನು ಪಡೆದರೂ ತಾನು ಕಳ್ಳನೆಂದು ಮುದ್ರೆಯನ್ನು ಒತ್ತಿಕೊಂಡಂತೆಯೆ. ಅಲ್ಲಿಯ ಯಾವ ಪದಾರ್ಥವನ್ನೂ ಮುಟ್ಟಬಾರದು. ಅದು ಅನೇಕರ ಸ್ವತ್ತು. ಕಳ್ಳತನ ಮಾಡಿದರೆ ಅನೇಕರಿಗೆ ಋಣಿಯೆಂಬು ದನ್ನು ಮರೆಯಬಾರದು.

ಒಟ್ಟನಲ್ಲಿ ತಮಗೆ ಅವಶ್ಯಕನಲ್ಲದ ಯಾವ ಪದಾರ್ಥವನ್ನೂ ತೆಗೆದುಕೊಳ್ಳಲೇ ಕೂಡದು. ಇದು ಆಹಾರದ ವಿಚಾರದಲ್ಲಿ. ತಮಗೆ ಅಗತ್ಯವಿಲ್ಲದ ಹಣ್ಣನ್ನು ತೆಗೆದುಕೊಳ್ಳುವುದೂ ತಪ್ಪು. ಮನುಷ್ಯನು ಯಾವಾಗಲೂ ತನಗೆ ಯಾವುದು ಅಗತ್ಯಾನಗತ್ಯವೆಂಬ ಅಂಶವನ್ನು ಮೊದಲು ಗಮನಿಸಬೇಕು. ನಿಷ್ಕಾರಣವಾಗಿ ಮನುಷ್ಯನು ಆತನ ಆವಶ್ಯ ಕತೆಗಳನ್ನು ಹೆಚ್ಚು ಹೆಚ್ಚಿಗೆ ಬೆಳಿಸುತ್ತಾ ಹೋಗುತ್ತಾನೆ. ಆಗ ಆತನ ಅಭ್ಯಾಸದಂತೆ ಬೇಕಾದ ಪದಾರ್ಥಗಳನ್ನು ಆವುದಾದರೊಂದು ಮಾರ್ಗ ದಿಂದ ಪಡೆಯಲೇಬೇಕು. ಪದಾರ್ಥಗಳನ್ನು ಪಡೆಯುವಾಗ ಆತನ ಮೇಲೆ ಹೇಗಾದರೂ ಕಳ್ಳತನದ ಮುದ್ರೆ ಬಿದ್ದೇ ಬೀಳುತ್ತದೆ. ಆದ್ದರಿಂದ ಮನುಷ್ಯನು ಅವಶ್ಯಕತೆಗಳನ್ನು ಸಾಕಾದಷ್ಟು ಮಟ್ಟಿಗೆ ಕಡಿಮೆ ಮಾಡಿ ಕೊಳ್ಳಬೇಕು. ಆಗಲೇ ಕಳ್ಳತನಕ್ಕೆ ಕ್ರಮವಾಗಿ ದೂರ ಮಾಡಿದಂತಾ ಯಿತು. ಕ್ರಮೇಣ "ಕದಿಯದಿರುವುದು" ಎಂಬುದರ ಆಚರಣೆಯು ಕಾರ್ಯರಂಗಕ್ಕೆ ಬರುವುದು. ಕಳ್ಳತನವನ್ನು ಬಾಹ್ಯ ಅಥವಾ ದೈಹಿಕ ವೆಂಬುದಾಗಿ ಕರೆಯಬಹುದು. ಮಾನವತೆಯನ್ನು ಉನ್ನತಿಯಿಂದ ಅಧೋ ಗತಿಗೆ ತರುವ ಮತ್ತೊಂದು ವಿಧವಾದ ಕಳ್ಳತನವುಂಟು. ಅದೇ ಮಾನಸಿಕ ಕಳ್ಳತನ. ಮತ್ತೊಬ್ಬರಿಗೆ ಸೇರಿದ ಪದಾರ್ಥಗಳನ್ನು ಪಡೆಯಬೇಕೆಂಬ ಆಶೆ ಅಥವಾ ದುರಾಶಾ ಪೂರಿತವಾದ ನೋಟ ಇವೆರಡೂ ಮಾನಸಿಕ ಕಳ್ಳತನವೆಂದೇ ಹೇಳಬಹುದು. ಒಬ್ಬನು ಉಪಾಸವ್ರತವನ್ನಾಚರಿಸಿ ಮತ್ತೊಬ್ಬನು ಊಟ ಮಾಡುತ್ತಿರುವುದನ್ನು ನೋಡಿ ಆಹಾರದ ವಿಷಯ ದಲ್ಲಿ ಆಶೆ ಪಡುವುದಾದರೂ ಮಾನಸಿಕ ಕಳ್ಳತನವಷ್ಟೆ ಅದು. ಉಪ ವಾಸವನ್ನು ಮುಗಿಸಿ ಆತನು ಪಾರಣೆ ಮಾಡುವಾಗಲೂ ಈತನು ನಿಶ್ಚಿಂ ತನಾಗಿದ್ದರೆ ಸರಿ. ಇಲ್ಲದಿದ್ದರೆ ಅದೂ ಕಳ್ಳತನ ಮಾಡಿದಂತೆಯೇ ಸರಿ. ಇದೆಲ್ಲಕ್ಕೂ "ಕದಿಯದಿರುವುದು" ಎಂಬ ಮಹಾಮಂತ್ರವನ್ನು ಅಹೋ ರಾತ್ರಿ ಜಪಿಸಿ ಚರಿಸುತ್ತಾ ಬಂದರೆ ದೈಹಿಕ ಮಾನಸಿಕ ಕಳ್ಳತನಗಳು ತಾವಾಗಿಯೇ ನಾಶವಾಗುತ್ತವೆ.

ಹಾಗೆಯೇ ಐಹಿಕ ವಸ್ತುಗಳನ್ನು ಕದಿಯುವುದಲ್ಲದೆ ಇತರ ಅಭಿಪ್ರಾಯಗಳನ್ನು ಕದಿಯುವುದೂ ಸಹಜ. ತನ್ನ ಅನುಭವಕ್ಕೆ ಹೊಳೆಯದ ಅಭಿಪ್ರಾಯವನ್ನು "ತನಗೆ ತೋರಿತೆಂ"ದು ಹೆಮ್ಮೆಯಿಂದ ಹೇಳಿಕೊಂಡು ಒಳ್ಳೆಯ ಭಾವವನ್ನು ಹೊರಗೆಡಹಿದರೆ ಆಗ ಅವನು ಕಳ್ಳನೆಂದೇ ಭಾವಿಸಬೇಕು. ಚರಿತ್ರೆಗಳಲ್ಲೂ ಹಿಂದಿನಿಂದ ಉದ್ದಾಮ ಜ್ಞಾನಿಗಳು ಈ ರೀತಿಯ ಕಳ್ಳತನವನ್ನು ಮಾಡಿಕೊಂಡೇ ಬಂದಿದ್ದಾರೆ. ಈಗಲೂ ಸಹ ಕೃತಿಚೌರ್ಯವಂತೂ ಸಾಮಾನ್ಯವೆ. ನಾವು ಒಂದು ಹೊಸ ಬಗೆಯ ಪುಸ್ತಕವನ್ನೊ ಅಥವಾ ಮೂರ್ತಿಯನ್ನೊ ತಯಾರು ಮಾಡಿ "ಇದು ಹೊಸದಾಗಿ ತಯಾರಾಗಿ ಹೊರಬಿದ್ದಿದೆ" ಎಂದು ಪ್ರಚಾರ ಮಾಡಿದರೆ ಅಸತ್ಯವನ್ನಾಡಿದಂತಲ್ಲದೆ, ಮತ್ತೊಬ್ಬನ ಸಂಶೋಧನೆಯನ್ನು ಕದ್ದು ಅಪರಾಧವನ್ನು ಪ್ರತ್ಯಕ್ಷವಾಗಿ ಮಾಡಿದಂತಾಗುತ್ತದೆ.

ಒಟ್ಟಿನಲ್ಲಿ "ಕದಿಯದಿರುವುದು" ಎಂಬುದರ ಆಚರಣೆಯನ್ನು ಮಾಡುವವನು ದೀನನೂ, ಆಲೋಚನಾಪರನೂ, ಜಾಗರೂಕನೂ ಮತ್ತು ತನ್ನ ಅಭ್ಯಾಸದಲ್ಲಿ ಸರಳನೂ ಆಗಿರಬೇಕಾಗುತ್ತದೆ.

ಹೀಗೆಯೇ "ಕೊಲಬೇಡ, ಹುಸಿಯ ನುಡಿಯಲು ಬೇಡ" ಮುಂತಾದ ವಾಕ್ಯಗಳ ಸ್ವರೂಪವನ್ನು ಸ್ಥೂಲವಾಗಿ ವಿಚಾರ ಮಾಡೋಣ. ಕೊಲಬೇಡ, ಮತ್ತೊಬ್ಬರನ್ನು ಹಿಂಸಿಸಬೇಡ. ಯಾವ ಕಾರಣದಿಂದಲಾದರೂ ಆಗಿರಲಿ. ಗಾಂಧೀಜಿಯು ಇದನ್ನು ಮರಣಾವಧಿ ಸಾಧಿಸಿ ಅಮರರಾದರು. ಅದೇ ಈ ಮಹಾಮಂತ್ರ "ಅಹಿಂಸಾ ಪರಮೋಧರ್ಮಃ" ಬಸವೇಶ್ವರರೂ ಈ ಹಿಂದೆಯೇ ಉಪದೇಶಿಸಿದ್ದಾರೆ. "ದಯವಿಲ್ಲದ ಧರ್ಮವದಾವುದು ದಯವೇ ಬೇಕು ಸಕಲ ಪ್ರಾಣಿಗಳಲ್ಲಿ, ಅಂತಲ್ಲದೆ ಕೂಡಲ ಸಂಗಮನೊಲ್ಲ." ಅಂದಮೇಲೆ ಯಾವ ಪ್ರಾಣಿಗಳನ್ನಾಗಲೀ ಮನುಷ್ಯನನ್ನಾಗಲೀ ಯಾವಾಗಲೂ ಯಾರೂ ಹಿಂಸಿಸಬಾರದು. ಮನುಷ್ಯರಿಗೆ ಮಾತ್ರ ನೋವು, ಸಾವುಗಳನ್ನು ಅನುಭವಿಸುವ ಸೂಚಿಸುವ ಶಕ್ತಿಯುಂಟು ಅವುಗಳಿಗಿಲ್ಲವೆಂದೋ ಈ ಮನುಷ್ಯರ ದಬ್ಬಾಳಿಕೆ ಪ್ರಾಣಿಗಳ ಮೇಲೆ? ಅವುಗಳಿಗೆ ಮಾತಾಡಲು ಶಕ್ತಿಯಿಲ್ಲ. ಹೌದು. ಆದುದರಿಂದಲೇ ಅವುಗಳಿಗೆ ಮೂಕ ಜಂತುಗಳು ಎಂದು ನಾವು ಕರೆಯುವುದು. ಆದರೆ ಮಾತಾಡಲು ಶಕ್ತಿಯಿಲ್ಲವೆಂದರೆ ನಾವು ಅವುಗಳನ್ನು ಹಿಂಸಿಸುವುದು ಯಾವ ನ್ಯಾಯ?

ಹಿಂಸೆಯಿಂದಲೇ ಜೀವನಿಗೆ ಬಂಧನ. ಅಹಿಂಸೆಯಿಂದಲೇ ಜೀವನಿಗೆ ಮೋಕ್ಷ. ನಿರ್ದಯೆಯ ಲಕ್ಷಣವೇ ಹಿಂಸೆ. ದಯೆಯ ಲಕ್ಷಣವೇ ಅಹಿಂಸೆ. ಇದರಿಂದಲೇ ಅಲ್ಲವೆ ಮೋಕ್ಷ ?

ಪ್ರಾಣಿಗಳು ನಮ್ಮ ಹಿಂಸೆಯಿಂದ ಅಂದರೆ ನಾವು ಮಾಡುವ ಹಿಂಸೆಯಿಂದ ಮೃತ ಪಟ್ಟಾಗ ಅವುಗಳಿಗಾಗಿ ನಾವು ಮರಗುವದಿಲ್ಲ. ಮನೆಯವರಿಗೆ ನಾವು ಹೊಡೆದಾಗ ಅಥವಾ ಮಡದಿ ಮಕ್ಕಳು ಮೃತರಾದಾಗ ಮರುಗುವಂತೆ, ಜಾಲಗಾರನಾಗಲೀ ವ್ಯಾಧನಾಗಲೀ ಪ್ರಾಣಿಗಳನ್ನು ಹಿಡಿದು ಕೊಲ್ಲುವಾಗ ಅವರೇಕೆ ಮರುಗಲಾರರು ? ಮಹಾತ್ಮರ ಉಪದೇಶವೂ ಇದೆಯೆ. ಎಂಥ ವಾಣಿ ! ಇದಕ್ಕಿಂತ ಬೇರೆ ಮತ್ತೇನು ? ಇಂಥ ಉದಾತ್ತವಾದ ಇಡೀ ಜನತೆಯನ್ನೇ ಉನ್ನತ ಸ್ಥಿತಿಗೆ ತರುವ ತಾವೂ ಆಚರಿಸುವ ಅಥವಾ ಆಚರಿಸಿದವರ ಜೀವನವೇ ಅಲ್ಲವೆ ಅಮೃತ ಜೀವನ ! ಅದಕ್ಕಾಗಿಯೇ ನೀತಿಕಾರನು ಘೋಷಿಸಿದನು "ಆತ್ಮವತ್ಸರ್ವ ಭೂತಾನಿ ಯಃಪಶ್ಯತಿ ಸ ಪಶ್ಯತಿ" ಎಂದು. ಸುಲಭವಾಗಿ ಸರಳ ಜೀವನದಿಂದ ಇದು ಸರ್ವರಿಗೂ ಸಾಮಾನ್ಯವಾಗಬಹುದು.

ಗಾಂಧೀಜಿಯು ಸಹ ಅಹಿಂಸೆಯ ವಿಷಯದಲ್ಲಿ ಕೆಲವು ಸೂತ್ರ ರೂಪವಾಗಿ ಮಾತಾಡಿದ್ದಾರೆ. "ಅಹಿಂಸೆಯೇ ಪರಮ ಧರ್ಮ. ವಿಶ್ವ ಪ್ರೇಮಕ್ಕಿಂತ ಅಹಿಂಸೆ ಬೇರೆಯಲ್ಲ" ಅಂದರೆ ಅಹಿಂಸೆಯೇ ವಿಶ್ವಪ್ರೇಮ. ವಿಶ್ವಪ್ರೇಮವೇ ಅಹಿಂಸೆ. ಎಂಥ ಬೋಧೆ. ಮತ್ತೂ ಉಪದೇಶಿಸಿದ್ದೇನೆಂದರೆ "ಮನುಷ್ಯನ ಪ್ರಕೃತಿ ಹಿಂಸೆಯಲ್ಲ, ಅಹಿಂಸೆ. ಚಿತ್ತವೃತ್ತಿಗಳನ್ನು ಜಯಿಸುವುದು ಸಹಜವಾದುದು."

ಹುಸಿಯ ನುಡಿಯಲು ಬೇಡ. ಅಂದರೆ ಸುಳ್ಳಾಡಬಾರದು. ಅಂದು ಆತ್ಮೋನ್ನತಿ. ಅದರಿಂದ ಯಾವ ಕೆಲಸವನ್ನಾದರೂ ಸಾಧಿಸಿ ಮನುಷ್ಯತ್ವವನ್ನು ಉಳಿಸಿಕೊಳ್ಳಬಹುದು. ಸುಳ್ಳು ನರಕ. ಸತ್ಯನಾಕ ಅಥವಾ ಅಸತ್ಯವೇ ನರಕಕ್ಕೆ ಒಯ್ಯುವದು. ಸತ್ಯವೇ ನಾಕಕ್ಕೆ ಒಯ್ಯುವದು. ಅಥವಾ ಈ ಲೋಕಗಳ ಕಲ್ಪನೆಯಿಲ್ಲದಿದ್ದರೆ ಅಸತ್ಯವೇ ಆತ್ಮನ ಅವನತಿಯ ಬುನಾದಿ. ಸತ್ಯವೇ ಆತ್ಮನ ಉನ್ನತಿಯ ಬುನಾದಿ ಎಂದಾದರೂ ಅರಿಯಬಹುದಲ್ಲವೇ ? ಉನ್ನತಿಯಾದರೆ ಮೋಕ್ಷ, ಅವನತಿ ಹೊಂದಿದರೆ ಬಂಧನ. ಇದು ಸಹಜ ಅಥವಾ ಜೀವಿಯು ಅನುಭವಿಸಬೇಕಾದ ಅನು

ಭವ. ಅಲ್ಲದೇ ಸತ್ಯಕ್ಕೆ ಜಯ ಸದಾ. ಅಸತ್ಯಕ್ಕೆ ಅಪಜಯವಂತೂ ಸದಾ ಸಿದ್ಧ. "ಸತ್ಯಮೇವ ಜಯತಿ ನಾನೃತಂ'' ಎಂಬುದು ಅಷ್ಟೆ. ಈ ಮಾತುಗಳೆಲ್ಲವನ್ನೂ ನೋಡಿದರೆ ಸೂತ್ರ ಪಾಯದಂತಿವೆ.

ಸತ್ಯ ಅಸತ್ಯ ವಿಚಾರ ವಿಮರ್ಶೆ ಮಾಡುವಾಗ ಸನಾತನ ಧರ್ಮದ ಸ್ವರೂಪವನ್ನೂ ಸ್ವಲ್ಪ ಗಮನಿಸುವುದು ಸೂಕ್ತವಾಗಿ ಕಾಣುತ್ತದೆ. "ಸತ್ಯಂ ಬ್ರೂಯಾತ್ ಪ್ರಿಯಂ ಬ್ರೂಯಾತ್ ನ ಬ್ರೂಯಾತ್ಸತ್ಯಮಪ್ರಿಯಂ । ಅಸತ್ಯಂ ಪ್ರಿಯಂ ನ ಬ್ರೂಯಾತ್ ಏಷ ಧರ್ಮಃಸನಾತನಃ ॥ ಏಷ ಧರ್ಮಃ ಸನಾತನಃ ಅಂದರೆ ಇದೇ ಸನಾತನ ಧರ್ಮ. ಸನಾತನ ಶಬ್ದಕ್ಕೆ ಅಮರ ಸಿಂಹನು 'ಶಾಶ್ವತಸ್ತು ಧೃವೋ ನಿತ್ಯಂ ಸದಾತನ ಸನಾತನಾಃ' ಎಂದು ವ್ಯಾಖ್ಯಾನ ಅಥವಾ ನಿಘಂಟನ್ನು ಹೇಳುತ್ತಾನೆ. ಏನೇ ಆಗಲಿ ಹಿಂದಿನಿಂದ ಹಿರಿಯವರು ಅನೂಚೀನವಾಗಿ ನಡೆಸಿಕೊಂಡು ಬರುತ್ತಿರುವ ಆಚರಣೆಯ ಪರಂಪರೆಗೆ ಧರ್ಮವೆಂದು ನಾವು ವ್ಯಾಖ್ಯಾನ ಮಾಡಬಹುದು. ಇನ್ನು ಧರ್ಮದ ಲಕ್ಷಣ "ಯತೋ ಅಭ್ಯುದಯಃ ನಿಶ್ರೇಯಸಃ ಸಿದ್ಧಿ: ಸ ಧರ್ಮ:" ಎಂದು ಹೇಳಬಹುದು. ಈ ಸನಾತನ ಧರ್ಮದ ಲಕ್ಷಣವೇನಂದರೆ ಸತ್ಯ ನುಡಿಯ ಬೇಕು. ಪ್ರಿಯವನ್ನು ನುಡಿಯಬೇಕು ಅಪ್ರಿಯವಾದ ಸತ್ಯವನ್ನೂ ಅಸತ್ಯವಾದ ಪ್ರಿಯವನ್ನೂ ನುಡಿಯಬಾರದೆಂದು ಅವರು ಹೇಳುವ ಅಂದರೆ ಸನಾತನಿ ಗಳು ಹೇಳುವ ಸನಾತನ ಧರ್ಮದ ಸಾಮಾನ್ಯ ಲಕ್ಷಣ. "ಅಪ್ರಿಯವಾದ ಸತ್ಯ ಬೇಡ" ಎಂಬುವದಕ್ಕೆ ಒಂದು ವಿಷಯವನ್ನು ಇಲ್ಲಿ ನಾವು ಉದಾ ಹರಿಸಬಹುದು. ಒಂದಾನೊಂದು ಕಾಲದಲ್ಲಿ ಒಬ್ಬ ಋಷಿಯು ಒಂದು ಕಡೆ ಕುಳಿತು ತಪಸ್ಸು ಮಾಡುತ್ತಿರುತ್ತಾನೆ. ಅದೇ ಕಾಲದಲ್ಲಿ ಒಬ್ಬ ಕಳ್ಳನು ಸಾಮಾನುಗಳನ್ನು ಲೂಟಿ ಮಾಡಿಕೊಂಡು ಬರುತ್ತಿರುವಾಗ ನಗರ ರಕ್ಷ ಕರು ಆತನನ್ನು ಹಿಂಬಾಲಿಸುತ್ತಾರೆ. ಆಗ ಕಳ್ಳನು ಎಲ್ಲಿಯಾದರೂ ಅಡ ಗಿಕೊಳ್ಳಲು ಪ್ರಯತ್ನಿಸುವಾಗ ಋಷಿಯು ಕಾಣುತ್ತಾನೆ. ಕಳ್ಳನು ಆತನ ಹಿಂದೆ ಇರುವ ಮರಗಳ ಗುಂಪಿನಲ್ಲಿ ಅಡಗಿಕೊಳ್ಳುತ್ತಾನೆ. ನಗರ ರಕ್ಷ ಕರು ಬಂದು ಋಷಿಯನ್ನು ಕುರಿತು "ಋಷಿಗಳೇ ಇಲ್ಲಿಗೆ ಒಬ್ಬ ಕಳ್ಳನು ಬಂದ ಹಾಗಾಯ್ತು ಎಲ್ಲಿದ್ದಾನೆ ತೋರಿಸಿ" ಎಂದು ಕೇಳುತ್ತಾರೆ. ಆಗ ಋಷಿಯು "ಉಭಯತ: ಪಾಶಾರಜ್ಜುಃ" ಆಗುತ್ತಾನೆ. ಏಕಂದರೆ ನಿಜ ಹೇಳಿದರೆ ಕಳ್ಳನ ಪ್ರಾಣ ಹಾನಿ: ಸುಳ್ಳು ಹೇಳಿದರೆ ಆತ್ಮವಂಚನೆ. ಆದ್ದರಿಂದ ಏನು ಮಾಡಬೇಕು ಎಂದು ಯೋಚಿಸಿ ಕೊನೆಗೆ 'ಮರೆಹೊಕ್ಕವರನ್ನು

ರಕ್ಷಿಸಬೇಕು' ಎಂದು ಯೋಚಿಸಿದನು. ಅಲ್ಲದೆ 'ವಿಶ್ವಾಸಘಾತುಕಾಶ್ಚೈವ ಶರಣಾಗತ ಘಾತುಕಾಃ | ವಸಂತಿ ನರಕೆ ಘೋರೆಯಾವಚ್ಚಂದ್ರದಿವಾಕರಂ' ಶರಣಾಗತ ಘಾತುಕಾಃ ಘೋರೆನರಕೆಯಾವಚ್ಚಂದ್ರದಿವಾಕರಂ ವಸಂತಿ. ಆದ್ದರಿಂದ ಯಾರು ತಾನೆ ಶರಣಾಗತರನ್ನು ರಕ್ಷಸಲು ಹಿಂದೆಗೆಯುತ್ತಾರೆ. ಶರಣಾಗತರನ್ನು ರಕ್ಷಿಸಲೇಬೇಕು. ಅದೇ ಸನಾತನ ಧರ್ಮ. ಆದ್ದರಿಂದಲೇ 'ನ ಭ್ರೂಯಾತ್ ಸತ್ಯಮ ಪ್ರಿಯಂ' ಇದೇ ಆ ಅಪ್ರಿಯವಾದ ಸತ್ಯಂ. ಆದ್ದರಿಂದ ಋಷಿಗಳು ನಗರ ರಕ್ಷಕರಿಗೆ "ಅಯ್ಯಾ ನಗರ ರಕ್ಷಕರಿರಾ ಇಲ್ಲಿ ಇದು ವರೆಗೂ ಯಾರೂ ಬರಲಿಲ್ಲ. ಬಂದದ್ದು ನಾನು ನೋಡಲೇ ಇಲ್ಲ. ಇಲ್ಲಿಯೇ ಬಹಳ ಹೊತ್ತಿನಿಂದ ನಾನು ಧ್ಯಾನಮಗ್ನನಾಗಿದ್ದೇನೆಂದು ಹೇಳಿ ಕಳುಹಿಸಿದನು. ಏನೇ ಆಗಲಿ ಅದೂ ಸಹ ಅಸತ್ಯವೇ ಹೌದು. ಆದರೂ ಶರಣಾಗತರನ್ನು ರಕ್ಷಿಸುವ ದೃಷ್ಟಿಯಿಂದ ಆ ವಿಧವಾದ ಅಭಿಪ್ರಾಯವನ್ನು ಸೂಚಿಸಬೇಕಾಯ್ತು. ಒಟ್ಟಿನಲ್ಲಿ ಸನಾತನಿಗಳು ಅವರ ಧರ್ಮವನ್ನು ಅನೂಚೀನವಾಗಿ ರಕ್ಷಿಸುತ್ತಾ ಬಂದಿರುವುದು ಆಶ್ಚರ್ಯಕರ. ಅದರ ತಿರುಳು ವಿಧಿ ನಿಷೇಧಗಳಿಂದ ಕೂಡಿದ್ದರೂ ಒಂದೊಂದು ಕಡೆ ವಿಧಿಗಿಂತ ನಿಷೇಧವೇ ಹೆಚ್ಚಾಗಿ ಕಂಡು ಬಂದರೂ ಅವರು ಸಂಪ್ರದಾಯಬದ್ಧರು ಎಂದಿಷ್ಟು ಹೇಳಬಹುದು.

ಅಸತ್ಯವಾದ ಪ್ರಿಯವೂ ಅಷ್ಟೆ. ಯಾರಾದರೂ ಒಬ್ಬ ಮನುಷ್ಯನು ಒಬ್ಬ ಲೋಭಿಗೆ "ಅಯ್ಯಾ ನಿನಗೆ ಈ ಸಾರಿ ಲಾಟ್ರಿ (ಸಟ್ಟಾ ವ್ಯಾಪಾರ) ಯಲ್ಲಿ ಮೂವತ್ತು ಸಾವಿರ ರೂಪಾಯಿಗಳು ಬಂದಿವೆ" ಎಂದು ಹೇಳಿ ಆತನಿಂದ ಒಂದು ನೂರು ರೂಪಾಯಿಗಳನ್ನು ಪಡೆದುಕೊಳ್ಳಬಹುದು. ಆದರೆ ಅದು ಲೋಭಿಗೆ ಪ್ರಿಯವಾದರೂ ಅದು ಅಸತ್ಯವಾದ ಪ್ರಿಯವಷ್ಟೆ. ಇದೆಲ್ಲವೂ ಸನಾತನಿಗಳು ಮುಂದುವರಿಸುತ್ತಾ ಕಾಯೇನ ವಾಚಾ ಮನಸಾ ಆಚರಿಸುತ್ತಾ ಬಂದಿರುವ ಧರ್ಮ. ಇದಕ್ಕೆ "ಸನಾತನ ಧರ್ಮ" ಎಂದು ಹೇಳಿಕೊಂಡೇ ಬರುತ್ತಿದ್ದಾರೆ. ನಿಯಮ. ಅದಕ್ಕೆ ಅನಂತ ಅಪವಾದಗಳು ಎಲ್ಲಾ ಕಡೆ ಕಂಡುಬರುತ್ತವೆ. ಅದೂ ಸಹ ಆರ್ಯಸಂಸ್ಕೃತಿಯಲ್ಲಿ ಬಹಳವೆಂದೇ ಹೇಳಬಹುದು.

"ಅಸೂಯೆಪಡಬೇಡ" ಯಾವುದರಿಂದಲೂ ಯಾರನ್ನೂ ದ್ವೇಷಿಸಬೇಡ. ಮತ್ತೊಬ್ಬರ ಐಶ್ವರ್ಯ, ಸತಿ, ಸುತಾದಿಗಳ ವಿಷಯಗಳಲ್ಲಿಯೂ, ಅವರ ಪುರೋಭಿವೃದ್ಧಿಗಳ ಕಾಲದಲ್ಲೂ ಯಾವ ಕಾರಣದಿಂದಲೂ

ನೋಡಿ ಅಸೂಯಪಡಬೇಡ. ಎಂದು ಅವರ ಉಪದೇಶ. ಆತ್ಮೋನ್ನ ತಿಗೆ ಅವರ ಒಂದೊಂದು ಮಾತೂ ಒಂದು ಮೆಟ್ಟಲಿನಂತೆ ಇದೆ. ಅದೇ ಮೆಟ್ಟಲನ್ನು ಏರುತ್ತಾ ಹೋದರೆ ಮುಕ್ತಿಮಂದಿರ ಅನಾಯಾಸವಾಗಿ ಲಭಿಸದಿರದು. ಗೀತೆಯಲ್ಲಿ ಪರಮಾತ್ಮನು ಅರ್ಜುನನಿಗೆ ಭಕ್ತನ ಲಕ್ಷಣವನ್ನು ಉಪದೇಶಿಸುವಾಗ ಈ ಅಂಗವೇ ಕಂಡುಬರುತ್ತದೆ. ಅದು ಹನ್ನೆರಡನೆ ಅಧ್ಯಾಯದ ಕೊನೆಯಲ್ಲಿ "ಯೋ ನ ಹೃಷ್ಯತಿ ನ ದ್ವೇಷ್ಟಿ ನ ಶೋಚತಿ ನ ಕಾಂಕ್ಷತಿ । ಶುಭಾಶುಭ ಪರಿತ್ಯಾಗೀ ಭಕ್ತಿ ಮಾನ್ಯಃ ಸ ಮೇ ಪ್ರಿಯಃ" "ನ ದ್ವೇಷ್ಟಿ" ಮತ್ತೊಬ್ಬರನ್ನು ಯಾವಕಾರಣದಿಂದಲೂ, ಅವರ ಪುರೋಭಿವೃದ್ಧಿಯನ್ನು ನೋಡಿ ಸಹಿಸಿ ಅಸೂಯೆ ಪಡುವದಿಲ್ಲವೋ ಆತನೇ ನನಗೆ ಪ್ರಿಯಭಕ್ತನೆಂದು ಉಪದೇಶ. ಚರಾಚರಾತ್ಮಕವಾದ ಪ್ರಪಂಚದಲ್ಲಿ ಪರಮಾತ್ಮಾನು ಸರ್ವಾಂತರ್ಯಾಮಿಯಾಗಿರುವುದರಿಂದ ಯಾರನ್ನು ಯಾರು ತಾನೇ ನೋಡಿ ಅಸೂಯೆ ಪಡಬೇಕು. ಅಲ್ಲಿಲ್ಲ ವ್ಯಾಪಕನಿಲ್ಲವೆ ಪರಬ್ರಹ್ಮನು. "ಸ್ವದೇಶೋ ಭುವನತ್ರಯಂ" ಎಂಬ ವಿಶ್ವಧರ್ಮದಿಂದ ಆಚರಿಸುತ್ತಾ ಬಂದರೆ ಪರಸ್ಪರ ಅಸೂಯಾದಿ ವಿಷಕ್ರಿಮಿಗಳು ಏಕೆ ಸಮಾಜದಲ್ಲಿ ಮೂಡುವವು.

"ತನ್ನ ಬಣ್ಣಿಸಬೇಡ" ಆತ್ಮಸ್ತುತಿಯು, ಪರನಿಂದೆಯು ಕೇಳಿಸದಿರಯ್ಯ ಎಂದು ಹಾಡಿದಂತೆ ಆತ್ಮಸ್ತುತಿಯೂ ಬೇಡ. ಪರನಿಂದೆಯೂ ಬೇಡ. ಮತ್ತೊಬ್ಬನನ್ನು ನಾವು ಹೀಯಾಳಿಸಿದರೆ ಆತನು ನಮ್ಮನ್ನು ಹೀಯಾಳಿಸಿಯೇ ಹೀಯಾಳಿಸುತ್ತಾನೆಂಬ ದೃಷ್ಟಿಯಿಂದ ಆತನನ್ನು ಹೀಯಾಳಿಸಬಾರದೆಂಬುದೂ ತಪ್ಪು. ಯಾವ ಅಭಿಪ್ರಾಯದಿಂದಲೂ ಪರನಿಂದೆ ಮಾಡಬಾರದು. "ಆತ್ಮಪ್ರಶಂಸಾಂ ಪರಗರ್ಹಾಂಚ ವರ್ಜಯೇತ್" ಎಂಬುದಾಗಿ ಸ್ಮೃತಿಯೂ ಕೂಡ ಸಾರುವಾಗ ನಾವೇಕೆ ಆ ಕಾರ್ಯವನ್ನೆಸಗಬೇಕು? ಇದಿರುಇದಿರ. ಎದುರಿನಲ್ಲಿಯೂ ಹಿಂದೆಯೂ ಮುಂದೆಯೂ ಮೇಲು ಕೆಳಗೂ ಎಲ್ಲೆಡೆಯಲ್ಲಿಯೂ ನಿಂದಿಸಬಾರದು. ಎಲ್ಲರಲ್ಲು ಪರಮಾತ್ಮನಿರುವಾಗ ಆತನನ್ನೇ ಎಲ್ಲ ಕಡೆಯಲ್ಲು ಕಾಣು. ಆತನಲ್ಲಿಯೇ ಮಗ್ನನಾಗು. ಸಮಾಧಿಯಾಗು. ಅದೇ ಅಂತರಂಗಶುದ್ಧಿ. ಅಂತರಂಗ ಶುದ್ಧಿಯೆಂದೂ ಬಹಿರಂಗ ಒಂದೇ ಶುದ್ಧಿ. ಒಳಗೂ ಹೊರಗೂ ಆತನೇ ಸದಾಸಿದ್ಧ.

---

# ಶ್ರೀ ಬಸವೇಶ್ವರರು ಹಾಗೂ ಶ್ರೀ ಚೆನ್ನಬಸವೇಶ್ವರರ ಪುನರಾಗಮನ--ಭಾವನೆ

# ಅಥವಾ ಮಧ್ಯಕಾಲದ ಮಹಾ ಪುರುಷರು.

( ಲೇಖಕ:— ಮಧುರಚೆನ್ನ ಹಲಸಂಗಿ. )

---

ಶ್ರೀ ಚೆನ್ನಬಸವೇಶ್ವರ ಪುರಾಣದಲ್ಲಿ ಶ್ರೀ ಬಸವೇಶ್ವರ ಶ್ರೀ ಚೆನ್ನಬಸವೇಶ್ವರರು ಪುನಃ ಭೂಮಿಗೆ ಬರುವ ಕಾಲನಿರ್ಣಯದ ಬಗೆಗೆ ಒಂದು ಪದ್ಯವು ಕಾಲಜ್ಞಾನ ಸಂಧಿಯಲ್ಲಿ ಹೇಳಲಾಗಿದ್ದು ಅಲ್ಲಿ ಹೇಳಿದ ಕಲಿಯುಗ ಶಕವರ್ಷವೂ, (೪೬೮೩) ಕೊನೆಯ ಸಂಧಿಯಲ್ಲಿ ಹೇಳಿದ ಅದೇ ಪುರಾಣದ ಮುಗಿತಾಯದ ಶಾಲಿವಾಹನ ಶಕವರ್ಷವೂ (೧೫೦೭) ಲೆಕ್ಕದಿಂದ ಒಂದೇ ವರ್ಷ (ಅಂದರೆ ಕ್ರಿಸ್ತಶಕ ೧೫೮೫) ಆಗುತ್ತದೆ. ಅರ್ಥಾತ್ ಶ್ರೀಚೆನ್ನಬಸವೇಶ್ವರ ಪುರಾಣವನ್ನು ಬರೆದ ಕವಿ ವಿರೂಪಾಕ್ಷ ಪಂಡಿತನ ಕಾಲವೂ ಶರಣರ ಪುನರಾಗಮನ ಕಾಲವೂ ಒಂದೇ ಎಂದರೆ ಸಮಕಾಲವೆಂದು ಇದರಿಂದ ಸಿದ್ಧವಾಗುತ್ತದೆ. * ಈ ವಿರೂಪಾಕ್ಷ ಪಂಡಿತನಿದ್ದ ಕಾಲವು ವಿಜಯನಗರ ಸಾಮ್ರಾಜ್ಯವು ಹಾಳಾದ ತೀರ ಕೆಲವೇ ವರುಷಗಳ ಅನಂತರ ಅಂದರೆ ಕ್ರಿಸ್ತಶಕ ೧೫೮೫ ರಲ್ಲಿ.

ವಿಜಯನಗರ ಸಾಮ್ರಾಜ್ಯವು ಹಾಳಾದ ಬಳಿಕ ದೇಶದಲ್ಲಿ ಶಾಂತತೆ ನೆಲಿಸುವ ಕೆಲಸವನ್ನು ಅನೇಕ ಮಹಾಪುರುಷರು ಅನೇಕ ಪ್ರಕಾರದಿಂದ ಅಲ್ಲಲ್ಲಿ ಮಾಡಿದಂತೆ ಕಾಣುತ್ತದೆ. ಅವರಲ್ಲಿ ಈ ವಿರೂಪಾಕ್ಷ ಪಂಡಿತನೂ ಅಂಥ

---

* ಚರಿತ್ರೆಗೆ ಸಂಬಂಧಪಟ್ಟ ಕೆಲವಂಶಗಳೂ ಇದರಲ್ಲಿ ( ಶ್ರೀಚೆನ್ನಬಸವ ಪುರಾಣದಲ್ಲಿ) ಹೇಳಿವೆ:—

ಕಲಿ ( ಕಲಿಯುಗ ಶಕದ) ೪೬೮೩ ನೆಯ ಸ್ವಭಾನುವಿನಲ್ಲಿ ( ಕ್ರಿ. ಶ. ೧೫೮೫ ) ವೀರ ವಸಂತರಾಯನು ಕರ್ಣಾಟ ದೇಶಕ್ಕೆ ಬಂದು ಆಳುವನು. ”

—ಕವಿಚರಿತ್ರೆ ಭಾಗ ೨, ಪುಟ ೩೧೦.

ಒಬ್ಬ ಮಹಾಪುರುಷರ ಮಂಡಲದಲ್ಲಿದ್ದನು. ಹೇಗೆಂದರೆ ತನ್ನ ಕಾಲದಲ್ಲಿದ್ದ "ಮಳೆಯ ಮಲ್ಲೇಶ" ನೆಂಬ ಜ್ಞಾನಿಯು ಮಕ್ಕಾ ಪಟ್ಟಣಕ್ಕೆ ಹೋಗಿ ಅಲ್ಲಿದ್ದ ಏಳುನೂರು ಮಂದಿ ಕಲಂದರರಿಗೆ ಗುರುವಾಗಿ ಬಂದು ಮಹಾತ್ಮ್ಯ ನೆನಿಸಿಕೊಂಡಿದ್ದನೆಂದು ಹೇಳಿದ್ದಲ್ಲದೆ ಆತನಿಗೂ ತನಗೂ ಸಾಂಪ್ರದಾಯಿಕ ಸಂಬಂಧವಿದ್ದ ಬಗೆಗೆ ವಿರೂಪಾಕ್ಷ ಪಂಡಿತನು ಹೇಳಿಕೊಂಡಿದ್ದಾನೆ. ಈತನು ತನ್ನ ಗುರು ಪರಂಪರೆಯನ್ನು ಹೀಗೆ ಹೇಳಿದ್ದಾನೆ:—

ಶಿವನೇ ಮಲ್ಲೇಶನೆಂಬ ಅಭಿಧಾನದಿಂದ ಭೂಮಿಯಲ್ಲಿ ಅವತರಿಸಿ ದನು. ಸಕಲ ದೇಶಗಳನ್ನು ಸಂಚರಿಸಿ ೭೦೦ ಖಲಿಂದರರಿಗೆ ಗುರುವಾಗಿ ಮಖ್ಯಕ್ಕೆ (ಮಕ್ಕೆಗೆ) ಹೋಗಿ ಮಹಿಮೆಯನ್ನು ತೋರಿ ತುರುಕಾಣ್ಯ ದಲ್ಲಿ ಪ್ರಾಪ್ತವಾಗಿದ್ದ ಅನಾವೃಷ್ಟಿಯನ್ನು ಪವಾಡದಿಂದ ನಿವಾರಣೆ ಮಾಡಿ ಸುರಿತಾಳನಿಂದ (ಸುಲ್ತಾನನಿಂದ ?) ಪೂಜೆಯನ್ನು ಕೈಕೊಂಡು ಘನತರ ವಾದ ಕೀರ್ತಿಯನ್ನೂ ಮಳೆಯ ಮಲ್ಲೇಶ ಎಂಬ ಹೆಸರನ್ನೂ ಪಡೆದನು. ಇವನ ಸಂಪ್ರದಾಯದಲ್ಲಿ ಷಟ್‌ಸ್ಥಲಾಬ್ಧಿವರ್ಧನ ಪೂರ್ಣ ಸೋಮನಾದ ಸಿದ್ಧವೀರೇಶನು ಪ್ರಖ್ಯಾತನಾಗಿ ವಿದ್ಯಾನಗರಿಯ (ವಿಜಯನಗರದ ?) ಹಿರಿಯ ಮಠದಲ್ಲಿ ಗುರುವಾಗಿದ್ದನು. ಇವನ ಶಿಷ್ಯ ಕವಿ ವಿರೂಪಾಕ್ಷ ಪಂಡಿತ.

—ಕವಿಚರಿತ್ರೆ ಭಾಗ ೨, ಪುಟ ೩೦೭—೮.

ಇಷ್ಟೇ ಏಕೆ ? ಶ್ರೀಚೆನ್ನಬಸವೇಶ್ವರ ಪುರಾಣದ ಪೀಠಿಕಾದಿ ಆರಂಭ ಭಾಗದಲ್ಲಿ "ಆದಿ ನಂದೀಶ್ವರನು ತನ್ನ ಎರಡೂ ಕೋಡುಗಳಿಂದ ಭೂಮಿಯು ಖದ್ದಿ ಹೊಡೆದದ್ದರ ಫಲವಾಗಿ ಒಂದು ಕೋಡು ತಾಕಿದಲ್ಲಿ ಮಕ್ಕಾ ಪಟ್ಟಣವೂ, ಇನ್ನೊಂದು ಕೋಡು ತಾಕಿದಲ್ಲಿ ಕಲ್ಯಾಣ ಪಟ್ಟಣವೂ ಉದಯಿಸಿದವು" ಎಂದು ಸ್ವತಃ ವಿರೂಪಾಕ್ಷ ಪಂಡಿತನೇ ಹೇಳಿರುವದ ರಿಂದ ಮೇಲಿನ ಮಾತಿಗೆ ಬೇಕಾದಷ್ಟು ಪುಷ್ಟಿ ಸಿಗುತ್ತದೆ.

ಇದರ ಮೇಲಿಂದ ಸಿದ್ಧವಾಗುವದೇನು ? ವಿಜಯನಗರ ಸಾಮ್ರಾ ಜ್ಯದ ಅಸ್ತಮಾನದ ಅನಂತರ ಅನೇಕ ಮಹಾಪುರುಷರು ಹಿಂದೂ ಮುಸ ಲ್ಮಾನರಲ್ಲಿ ಐಕ್ಯವನ್ನು ಸ್ಥಾಪಿಸಲಿಕ್ಕೆ ಬಹು ದೊಡ್ಡ ಪ್ರಮಾಣದಿಂದ ಪ್ರಯ ತ್ನಿಸಿದರೆಂಬುದು ಇದರ ಮೇಲಿಂದ ಸಹಜವಾಗಿ ಗೊತ್ತಾಗುವದು.

ಈ ಮೊದಲು ಶಿವಾನುಭವ ಪತ್ರಿಕೆಯಲ್ಲಿ ಸಾಲೋಟಗಿ (ತಾ|| ಇಂಡಿ, ಜಿಲ್ಲಾ|| ಬಿಜಾಪುರ) ಶ್ರೀ ಶಿವಯೋಗೀಶ್ವರರೆಂಬ ಶಿವಯೋಗಿವರ್ಯರು ವಿಜಾಪುರದ ಇಬ್ರಾಹಿಮ್ ಬಾದಶಹನ ಕಾಲದಲ್ಲಿ ಇಂಥದೊಂದು ಪ್ರಯತ್ನ ಮಾಡಿದ ವಿಷಯವನ್ನೂ ಅವರ ಯೋಗ ಮಹಿಮೆಯನ್ನೂ ನಾನು "ಶಿವಯೋಗೀಶ್ವರರ ಶಿವಪೂಜೆ" ಎಂಬ ಲೇಖದಲ್ಲಿ ವರ್ಣಿಸಿದ್ದೇನೆ. ಅಂದಿನಿಂದ ನನಗೆ ಕೊಡೇಕಲ್ಲಿನ ಶ್ರೀ ಬಸವೇಶ್ವರರ ಬಗೆಗೂ ಇದೇ ಪ್ರಕಾರವಾಗಿ ಅನಿಸತೊಡಗಿದ್ದರಿಂದ ಆ ಬಗೆಗೆ ಗೊತ್ತಿದ್ದವರಿಗೆ ಆ ವಿಷಯವಾಗಿ ಕೇಳತೊಡಗಿದೆನು. ಇದೀಗ ಆ ಬಗ್ಗೆ ನನಗೆ ಕೆಲವೊಂದು ಉಚಿತ ಸಂಗತಿಗಳು ಗೊತ್ತಾದ್ದರಿಂದ ಆ ಬಗೆಗೆ ಎರಡು ಮಾತುಗಳನ್ನು ನಾನು ಇಲ್ಲಿ ಬರೆಯುತ್ತೇನೆ.

ಕೊಡೇಕಲ್ಲು, (ಮೊಗಲಾಯಿ ಜಿಲ್ಲಾ ಗುಲಬುರ್ಗಾ, ತಾ|| ಸುರಪುರ) ಡೋಣೀ ನದಿ ಹಾಗೂ ಕೃಷ್ಣಾ ನದಿಗಳು ಕೂಡುವ ಸ್ಥಾನದಿಂದ ಉತ್ತರಕ್ಕೆ ೯-೧೦ ಮೈಲುಗಳ ಅಂತರದ ಮೇಲೆ ಇವೆಯಂತೆ. ಕಪ್ಪಡೀ ಸಂಗಮದಿಂದ ಈ ಡೋಣೀ ಕೃಷ್ಣಾ ಸಂಗಮದ ವರೆಗೆ ಅನೇಕ ಕ್ಷೇತ್ರಗಳು ಇಂದಿಗೂ ಇವೆಯಂತೆ. ಅವುಗಳಲ್ಲಿ ಛಾಯಾಭಗವತಿ ಎಂಬ ಪ್ರಸಿದ್ಧ ಕ್ಷೇತ್ರದ ಹೆಸರನ್ನಂತೂ ಅನೇಕರು ಕೇಳಿದ್ದಾರೆ. ಆದರೆ ಅದರ ಸಮೀಪದಲ್ಲಿಯೇ ಅನಿಮಿಷ ಕ್ಷೇತ್ರವೂ ಶ್ರೀ ಅಲ್ಲಮಪ್ರಭುಗಳ ಗುಡಿಯೂ (ನಡುಗಡ್ಡೆಯಲ್ಲಿ) ಬೇರೆ ಬೇರೆ ಎರಡು ಕ್ಷೇತ್ರಗಳಾಗಿ ಇವೆಯಂತೆ. ಇವೆಲ್ಲವುಗಳ ಸಮೀಪದಲ್ಲಿಯೇ ಕೊಡೇಕಲ್ಲು ಇದೆಯಂತೆ.

ಹಿಂದಿನ ಕಾಲದಲ್ಲಿ ಹುಬ್ಬಳ್ಳಿಯ ನಾಡಿನಲ್ಲಿ ವಡನೂರೆಂಬ ಊರಲ್ಲಿ ಮಲ್ಲಸೆಟ್ಟಿ, ಲಿಂಗಮ್ಮ ಎಂಬ ದಂಪತಿಗಳ ಉದರದಲ್ಲಿ ಬಸವಸೆಟ್ಟಿ ಎಂಬ ವ್ಯಾಪಾರಿಗಳು ಜನಿಸಿ ಬೀಡಿಕೆಯ ಎತ್ತುಗಳ ಮೇಲೆ ಮಲೆನಾಡಿನ ಕೂಡ ವ್ಯಾಪಾರ ಮಾಡುತ್ತಿದ್ದರಂತೆ. ಇವರೇ ನಮ್ಮ ಚರಿತ್ರನಾಯಕರಾದ ಕೊಡೇಕಲ್ಲಿನ ಶ್ರೀ ಬಸವೇಶ್ವರರು. ಆ ಕಾಲದಲ್ಲಿ ಕೊಡೇಕಲ್ಲಿನಲ್ಲಿ ಹನುಮಪ್ಪನೆಂಬ ನಾಯಕನು ಇರುತ್ತಿದ್ದು ಶ್ರೀಬಸವೇಶ್ವರರು ತಮ್ಮ ಸಂಚಾರ ಕ್ರಮದಲ್ಲಿ ಅಲ್ಲಿಗೆ ಬಂದಾಗ ಆ ನಾಯಕನ ಭಕ್ತಿಗೆ ಮೆಚ್ಚಿ ಅಲ್ಲಿಯೇ ನೆಲಿಸಿದರಂತೆ.

ಇವರು ಅನೇಕ ವಚನಗಳನ್ನು ಬರೆದಿದ್ದಾರಂತೆ. ಇವರ ಚರಿತ್ರ ಬಗೆಗೆ ಪುರಾಣಗಳೂ ಹುಟ್ಟಿದಂತೆ ಕಾಣುತ್ತದೆ. "ನಂದಿ ಆಗಮ" (ಶ್ರೀ ಬಸ

ವೇಶ್ವರರ ಬರುವಿಕೆ) ಎಂಬ ಗ್ರಂಥವು ಇತ್ತೀಚೆಗೆ ಪ್ರಕಟವಾಗಿದ್ದು ಅದು ಇವರ ಚರಿತ್ರವಾಗಿರಬಹುದಾಗಿ ತೋರುತ್ತದೆ. "ಗುರುಶಿಷ್ಯ ಬೋಧೆ" ಎಂಬ ಇನ್ನೊಂದು ಚಿಕ್ಕ ಗ್ರಂಥವು ಪ್ರಕಟವಾಗಿದೆಯೆಂದೂ ಬಹುಶಃ ಅದು ಇವರ ಉಪದೇಶಗಳಿಂದ ಕೂಡಿವೆಯೆಂದೂ ಕೇಳಿದ್ದೇನೆ. ಇವಾವನ್ನೂ ನಾನು ಇನ್ನೂ ಕಣ್ಣಾರೆ ಕಂಡಿಲ್ಲ.

ಕೊಡೇಕಲ್ಲಿನಲ್ಲಿ ಇವರ ಪರಂಪರೆಯು ವಿಶಿಷ್ಟ ಜಂಗಮರಿದ್ದಾರೆಂತಲೂ ಅವರಿಗೆ ಲಿಂಗಧಾರಣವಿರುವದಿಲ್ಲವೆಂತಲೂ ಇವರೇ ಅಲ್ಲಿಯ ದೇವಾಲಯದ ಅರ್ಚಕರಾಗಿದ್ದಾರೆಂತಲೂ ಇವರಿಗೆ "ಬೋಳಕ ಜಂಗಮ"ರೆಂದು ಕರೆಯುವರೆಂತಲೂ ಹೇಳುತ್ತಾರೆ.

ಕೊಡೇಕಲ್ಲಿನ ಬಸವೇಶ್ವರರ ಗುಡಿಯು ಗುಮಟದ ಆಕಾರದ್ದಾಗಿದೆಯೆಂತಲೂ ಅದರೊಳಗಿರುವ ಶ್ರೀ ಬಸವೇಶ್ವರರ ಸಮಾಧಿಯು ಮುಸಲ್ಮಾನರ ಮದಾರದ ಆಕಾರದ್ದಾಗಿದೆಯೆಂದೂ ಹೇಳುತ್ತಾರೆ. ಸುತ್ತುಮುತ್ತಲಿನ ಪ್ರದೇಶದಲ್ಲಿರುವ ಊರುಗಳ ಜನರು ಹಿಂದೂ ಮುಸಲ್ಮಾನ ಎಂಬ ಭೇದವಿಲ್ಲದೆ ಈ ದೇವರಿಗೆ ನಡೆದುಕೊಳ್ಳುತ್ತಾರೆಂದು ಹೇಳುತ್ತಾರೆ. ಇಷ್ಟೇ ಅಲ್ಲ ಈ ದೇವರಿಗೆ ಹಿಂದುಗಳು ಶ್ರೀ ಬಸವೇಶ್ವರ ಮಹಾರಾಜರಿಗೆ ಜಯ ಜಯಕಾರ ಎಂದೂ, ಮುಸಲ್ಮಾನರು "ಮಹಮ್ಮದ ಸರವರ" ರಿಗೆ ಜಯ ಜಯಕಾರವೆಂದೂ ಉಗ್ಗಡಿಸುವರಂತೆ. ಶಿವನಿಗೆ ಬಸವಣ್ಣನು ಹೇಗೋ ಹಾಗೆ ಅಲ್ಲಾನಿಗೆ ಮಹಮ್ಮದ ಪೈಗಂಬರರು. ಆದ್ದರಿಂದ ಶ್ರೀ ಬಸವೇಶ್ವರರು ಎಂಬ ಅರ್ಥದಲ್ಲಿಯೇ ಈ ಹಜರತ ಮಹಮ್ಮದ ಪೀರರು ಎಂಬ ಹೆಸರು ಕೊಡಲಾಗಿರಬಹುದು. ಅಥವಾ ಸ್ವಯಂ ಆ ಮಹಾತ್ಮರು ತಾವೇ ಈ ನಾಮವನ್ನು ಧರಿಸಿರಬಹುದು. ಸರವರ ಎಂಬುದು ಸೌದಾಗರ (= ವ್ಯಾಪಾರಿ, ಸೆಟ್ಟಿ) ಎಂಬುದರ ರೂಪಾಂತರವಾಗಿರಬಹುದೋ ಏನೋ ತಿಳಿಯದು.

ದೀಪಾವಳಿ ಹಾಗೂ ಶಿವರಾತ್ರಿಯ ದಿವಸ ದೊಡ್ಡ ಉತ್ಸವದೊಂದಿಗೆ ಕೊಡೇಕಲ್ಲ ಶ್ರೀಬಸವೇಶ್ವರರ ವಚನಗಳ ಪುಸ್ತಕವನ್ನು ಅಲ್ಲಿಯ ಮುಖ್ಯ ಸ್ವಾಮಿಗಳು ಸರ್ವಜನ ಸಂದಣಿಯಲ್ಲಿ ಬೆಳ್ಳಿಯ ಬೆತ್ತದಿಂದ ತೆರೆಯುವರಂತೆ. ಆ ಪುಟದಲ್ಲಿ ಯಾವ ವಚನವಿರುವದೋ ಅದು ಆ ವರುಷದ ಭವಿಷ್ಯ (ಕಾಲಜ್ಞಾನ) ವನ್ನು ಸೂಚಿಸುವದೆಂದು ತಿಳಿದುಕೊಳ್ಳುತ್ತಾರಂತೆ.

ಯುಗಾದಿಯ ಅಮಾವಾಸ್ಯೆಯ ದಿವಸ ಊರೊಳಗಿನ ಸರ್ವಜಾತಿಯ ಸಣ್ಣದೊಡ್ಡವರೂ, ಹೆಣ್ಣುಮಕ್ಕಳೂ ಗಂಡುಮಕ್ಕಳೂ, ಜಾತಿಭೇದವಿಲ್ಲದೆ ಸಾವಿರಾರು ಜನರು ಮೂರು ಹರದಾರಿಯ ಮೇಲಿರುವ ಕೃಷ್ಣಾ ಡೋಣೀ ಸಂಗಮಕ್ಕೆ ಹೋಗಿ ಕಾವಡಿಯ ಮೇಲೆ ಎರಡೆರಡು ಬಿಂದಿಗೆ ನೀರನ್ನು (ಸರ್ವರೂ) ಹೆಗಲಮೇಲೆ ಹೊತ್ತುಕೊಂಡು ತಂದು ಕೊಡೇಕಲ್ಲಿನ ಗುಡಿಯಲ್ಲಿ ಹಲವು• ಬಿಂದಿಗೆ ಹೂಗಿಡಗಳಿಗೆ ನೀರೆರೆದು, ಕೆಲವು ಬಿಂದಿಗೆ ರಂಜಣಿಗೆಗಳಲ್ಲಿ ಸಂಗ್ರಹಿಸಿ ಇಡುವರಂತೆ. ಆ ನೀರಿನಿಂದ ಬಹಳಷ್ಟು ಗಂಧವನ್ನು ತೆಯ್ದು ಅದೇ ನೀರಿನಿಂಧ ಆ ಸ್ವಾಮಿಗಳಿಗೆ ಸ್ನಾನ ಮಾಡಿಸಿ ಗುಡಿಯೊಳಗಿರುವ ಮುಖ್ಯ ಗದ್ದಿಗೆಗೂ, ಸ್ವಾಮಿಗಳ ದೇಹಕ್ಕೂ ಆ ಗಂಧವನ್ನು ಯುಗಾದಿಯ ದಿವಸ ಲೇಪಿಸುವರಂತೆ. ಗದ್ದಿಗೆಗೆ ಮುಖ್ಯವಾಗಿ ಆ ಸ್ವಾಮಿಗಳೇ ಲೇಪಿಸುವರಂತೆ. ಇದಕ್ಕೆ "ಗಂಧ ಏರಿಸುವದು" ಎಂದು ಅನ್ನುತ್ತಾರಂತೆ.

ಇನ್ನು ವರುಷದಲ್ಲಿ ಎರಡು ಸಲ ಅಂದರೆ ದವನದ ಹುಣ್ಣಿವೆ ಹಾಗೂ ಗೌರೀಹುಣ್ಣಿವೆಗೆ ಊರೊಳಗಿನ ಗುಡಿಯಿಂದ ಊರಹೊರಗಿರುವ ಗುಡಿಗೆ ವೈಭವದೊಂದಿಗೆ ಪಲ್ಲಕ್ಕಿಯನ್ನು ತೆಗೆದುಕೊಂಡುಹೋಗಿ ಅಲ್ಲಿಯ ಪಲ್ಲಕ್ಕಿಯೊಂದಿಗೆ ಊರೊಳಗಿನ ಗುಡಿಗೆ ಬರುವರಂತೆ. ಈ ಉತ್ಸವ ಎರಡು ಮೂರು ದಿವಸ ನಡೆದು ಕೊನೆಯ ದಿವಸ ಹೊರಗಿನ ಗುಡಿಯ ಪಲ್ಲಕ್ಕಿಯನ್ನು ಹೊರಗಿನ ಗುಡಿಗೆ ಅದೇ ವೈಭವದಿಂದ ಕಳಿಸಿಬರುತ್ತಾರಂತೆ. ಪಲ್ಲಕ್ಕಿಯ ಮುಂದೆ ಜಂಗಮರು ಮಹಾತ್ಮರ ವಚನಗಳನ್ನು ಒಂದೇ ಸವನೆ ಹೇಳುತ್ತಿರುತ್ತಾರಂತೆ.

ಪ್ರತಿದಿವಸ ಹಗಲಿರುಳು ಕೂಡಿ ಊರೊಳಗಿನ ಗುಡಿಯಲ್ಲಿ ಏಳು ಸಾರೆ, ಹಾಗೂ ಹೊರಗಿನ ಗುಡಿಯಲ್ಲಿ ಮೂರುಸಾರೆ ಮಹಾ ವೈಭವದ ವಾದ್ಯಗಳೊಂದಿಗೆ ಪೂಜೆಯಾಗುವದಂತೆ. ಈ ಪೂಜಾಕಾಲದ ವಾದ್ಯಘೋಷವು ಸುತ್ತುಮುತ್ತು ಹರದಾರಿ ಎರಡು ಹರದಾರಿಗಳ ತನಕ ಕೇಳಿಸುವದಂತೆ.

ಇನ್ನೂ ಸಾಲೋಟಗಿಯ ಶ್ರೀ ಶಿವಯೋಗೀಶ್ವರರ ದೇವಾಲಯದ ಉತ್ಸವಾದಿಗಳಿಗೂ, ಕೊಡೇಕಲ್ಲಿನ ಶ್ರೀಬಸವೇಶ್ವರರ ಉತ್ಸವಾದಿಗಳಿಗೂ ಹೋಲಿಕೆಯಿದೆ. ಅದೇನೆಂದರೆ—

(೧) ಸಾಲೋಟಗಿಯಲ್ಲಿ ಯುಗಾದಿಯ ಅನಂತರ ವದ್ಯ ಪಂಚ ಮಿಯ ದಿವಸ ರಾತ್ರಿ ಊರೊಳಗಿನ ಹೆಣ್ಣುಗಂಡು ಸಣ್ಣದೊಡ್ಡವರೆಲ್ಲ ಶ್ರೀಶಿವಯೋಗೀಶ್ವರರ ಬಿಂದಿಗೆಗೆ ಕೊಡಕೊಡಗಳಿಂದ ಒಂದೇ ಸವನೆ ಅನೇಕ ತಾಸು (ರಾತ್ರಿ) ನೀರೆರೆಯುವರು. ಇದಕ್ಕೆ "ನೀರಾಟ" ವೆಂಬ ಹೆಸರು. ಬಿಂದಿಗೆಯ ಬಾಯಿಗೆ ಬಿಗಿಯಾಗಿ ಬೇವಿನೆಲೆಗಳನ್ನು ಕೂಡಿಸಿ ದ್ದರೂ ಅವರೊಳಗೆ ನೀರು ಹೊಕ್ಕು, ಬಿಂದಿಗೆ ಎಷ್ಟು ತುಂಬಿದೆಯೆಂಬು ದರ ಮೇಲಿಂದ ಆ ವರ್ಷದ ಭವಿಷ್ಯವನ್ನು ನಿರ್ಧರಿಸುವರು. ಆಗ ಗುಡಿ ಯಲ್ಲಿ ಒಂಬತ್ತು ದಿವಸ ಯೋಗಪೂಜೆ (ಶಿವಪೂಜೆ) ಯಾಗುವದು.

(೨) ಕೊಡೇಕಲ್ಲಿನಲ್ಲಿ ವರ್ಷದೊಳಗೆ ಅನೇಕಸಲ ಉತ್ಸವಗಳು ನಡೆಯುವಂತೆ ಸಾಲೋಟಗಿಯಲ್ಲಿ ವರ್ಷದಲ್ಲಿ ನಾಲ್ಕು ಸಲ (ಮೂರು ಮೂರು ತಿಂಗಳಿಗೊಮ್ಮೆ) ಪರ್ವಗಳಾಗುತ್ತವೆ. ಆ ಪರ್ವಕಾಲದಲ್ಲಿ ಊರೊಳಗಿನ ಜನರೆಲ್ಲ ಜೋಳದ ಬೋನವನ್ನು ಅಟ್ಟು ಗುಡಿಗೆ ಒಯ್ದುಕೊಡುವರು. ಅಲ್ಲಿಯ ಸ್ವಾಮಿಗಳು ಅದನ್ನೆಲ್ಲ ಒಂದೆಡೆಗೆ ಒಟ್ಟುಗೂಡಿಸಿ ರಾತ್ರಿಯಲ್ಲಿ ಸರ್ವಜನರಿಗೆ ಪ್ರಸಾದರೂಪದಿಂದ ಹಂಚುವರು. ಜಾತಿಭೇದವಿಲ್ಲದೆ ಸರ್ವರೂ ಆ ಪ್ರಸಾದವನ್ನು ಭಕ್ತಿಭಾವದಿಂದ ಸ್ವೀಕರಿಸುವರು.

(೩) ಕೊಡೇಕಲ್ಲಿನ ಶರಣರು ವಚನಗಳನ್ನು ಬರೆದಿರುವಂತೆ ಸಾಲೋ ಟಗಿಯ ಶರಣರು "ಡಂಗುರ ಪದ"ಗಳನ್ನು ಬರೆದಿದ್ದಾರೆ. ಎರಡೂ ಊರಲ್ಲಿ ಆಯಾ ವಚನ ಹಾಗೂ ಪದಗಳನ್ನು ಬಹು ಪವಿತ್ರವಾಗಿ ಎಣಿಸುತ್ತಾರೆ. ಸಾಲೋಟಗಿಯ ಡಂಗುರದ ಪದಗಳಲ್ಲಿಯೂ, ೧ ಕಾಲಜ್ಞಾನ, ೨ ಖಂಡ ಜ್ಞಾನ, ೩ ನೀತಿಜ್ಞಾನ, ೪ ಬೋಧಜ್ಞಾನ ಎಂದು ಸ್ಥಲಕಟ್ಟಿನ ಪದ ಗಳಿವೆಯಂತೆ.

(೪) ಸಾಲೋಟಗಿಯಲ್ಲಿಯೂ ಒಂದು ಪ್ರಕಾರದ ವಿಶಿಷ್ಟ ಜಂಗಮ ರಿದ್ದಾರೆ. ಇವರಿಗೆ "ಬುಡಪಟ್ಟ" ದವರೆಂಬ ಹೆಸರುಂಟು. ಪಟ್ಟದ ಸ್ವಾಮಿಗಳು ವಿವಾಹಿತರಾಗಿರುತ್ತಾರೆ. ಅವರ ಹಿರೇಮಗನು ಮುಂದೆ ಪಟ್ಟಕ್ಕೆ ಬರುತ್ತಾನೆ. ಆತನಿಗೂ ಲಗ್ನವಾಗುತ್ತದೆ. ಈ ಹಿರೇ ಸ್ವಾಮಿ ಗಳೇ ಮುಖ್ಯ ಅರ್ಚಕರು.

(೫) ಸಾಲೋಟಗಿಯ ಗುಡಿಯೂ ಕೊಡೇಕಲ್ಲಿನ ಗುಡಿಯಂತೆ ಗುಮಟದ ಆಕಾರದ್ದಿದ್ದು, ಅಲ್ಲಿಯಂತೆ ಇಲ್ಲಿಯೂ ಗುಡಿಯೊಳಗಿನ ಗದ್ದು ಗೆಯು ಮುಸಲ್ಮಾನರ ಮಜಾರದಂತೆ ಇರುತ್ತದೆ.

(೬) ಕೊಡೇಕಲ್ಲಿನ ಶರಣರನ್ನು ಶ್ರೀಬಸವೇಶ್ವರರ ಅವತಾರವೆಂದು ತಿಳಿದುಕೊಳ್ಳುವಂತೆ ಸಾಲೋಟಗಿಯ ಶರಣರನ್ನು ಶ್ರೀಚೆನ್ನಬಸವೇಶ್ವರ ರೆಂದು ತಿಳಿದುಕೊಳ್ಳುವಂತೆ ತೋರುತ್ತದೆ. ಏಕೆಂದರೆ ಸಾಲೋಟಗಿಯಲ್ಲಿ ಡಂಗುರ ಪದಗಳನ್ನು ಹೇಳುವಾಗ ಮೇಲಿಂದ ಮೇಲೆ "ಚೆನ್ನಬಸವಾ, ಚೆನ್ನಬಸವಾ" ಎಂದು ಹಾಡಿನಲ್ಲಿ ಬರುತ್ತದೆ.

(೭) ಸಾಲೋಟಗಿಯಲ್ಲಿಯೂ ಕೊಡೇಕಲ್ಲಿನಂತೆ ಗಂಧ ಏರಿಸು ವುದು ಹಾಗೂ ಮುಸಲ್ಮಾನೀ ಜಯಜಯಕಾರಗಳುಂಟು. ಇನ್ನೊಂದು ವಿಷಯವೆಂದರೆ, ಕೊಡೇಕಲ್ಲಿನಲ್ಲಿ ಇಂಥ ಸಮಾಧಿಗಳು (ಮದಾರದಂತೆ) ಅನೇಕವಾಗಿದ್ದು ಒಮ್ಮೆ ಅಂಥ ಒಂದು ಸಮಾಧಿಯನ್ನು ನೋಡುವ ಪ್ರಸಂಗ ಬಂದಾಗ, ಅದರೊಳಗೆ ಯೋಗದಂಡ, ವಿಭೂತಿ, ರುದ್ರಾಕ್ಷಿ ಮೊದಲಾದ ಯೋಗಿಗಳಿಗುಪಯುಕ್ತವಾದ ದಿವ್ಯ ವಸ್ತುಗಳು ಕಂಡು ಬಂದವಂತೆ.

ಇನ್ನೇನು ? ಇದರಂತೆಯೇ ಅತ್ಯಂತ ಮಹತ್ವದ ಇನ್ನೊಂದು ವಿಷಯವನ್ನು ಸೂಚಿಸಿ ಈ ಲೇಖವನ್ನು ಮುಗಿಸುವೆನು. ಅದೇನೆಂದರೆ:— ತೇರದಾಳದಲ್ಲಿರುವ ಶ್ರೀ ಅಲ್ಲಮಪ್ರಭುದೇವರ ಗುಡಿಯೂ ಈ ವರ್ಗದೊ ಳಗಿನದೇ ಹೇಗೆ ? ಎಂಬ ಊಹೆ ಬರುತ್ತದೆ. ಅಲ್ಲಿಯೂ ಮೇಲೆ ಹೇಳಿದ ಎರಡು ಸ್ಥಳಗಳಂತೆ ಪದಗಳ ಸಂಗ್ರಹವಿದೆ. ಅಂಥ ೬-೭ ಪುಸ್ತಕಗಳನ್ನು ಶ್ರೀ. ಬುದ್ದಯ್ಯಾ ಪುರಾಣಿಕ ಮಹಾಶಯರು ಪ್ರಕಟಗೊಳಿಸಿದ್ದಾರೆ. ಅಲ್ಲಿಯ ದೇವರ ಚಿಹ್ನವು ಮುಗಿಯೆಂದು ತೋರುತ್ತದೆ. ಆ ದೇವರ ಭಕ್ತರ ಮನೆಗಳಲ್ಲೆಲ್ಲ ಮುಗಿಯ ಪೂಜೆ ನಡೆಯುವಂತೆ ಕಾಣುತ್ತದೆ. ತೇರದಾಳದ ಶ್ರೀ ಅಲ್ಲಮಪ್ರಭುದೇವರು ಕೊಡೇಕಲ್ಲಿನ ಶ್ರೀಬಸವೇಶ್ವರ ರಂತೆಯೂ ಸಾಲೋಟಗಿಯ ಶ್ರೀಶಿವಯೋಗಿಶ್ವರ (ಶ್ರೀಚೆನ್ನಬಸವೇಶ್ವರ) ರಂತೆಯೂ ಇತ್ತೀಚಿನ ಕಾಲದಲ್ಲಿ ಆಗಿಹೋದ ಪುನರವತಾರೀ (ಪುನಃ ಅವತಾರಿಗಳೆಂದು ಪ್ರಸಿದ್ಧರಾದ) ಮಹಾಯೋಗಿಗಳಾಗಿರಬಹುದೇ ? ಅಲ್ಲಿಂದ ಪ್ರಸಿದ್ಧವಾದ ಹಾಡುಗಳಲ್ಲಿ "ಮುಗಿಯ ಪ್ರಭು" ಎಂಬವರು ರಚಿಸಿದ ಎಷ್ಟೋ ಹಾಡುಗಳುಂಟು. ಈ ಹಾಡುಗಳನ್ನು ಬರೆದವರು ಮೂಲ ಸ್ವಾಮಿಗಳ ಶಿಷ್ಯ ಪರಂಪರೆಯೊಳಗಿನ ಯಾರೋ ಒಬ್ಬ ಪ್ರಭು (ನಾಡೊ ಡೆಯರು) ಗಳಾಗಿದ್ದರೂ ಇವರಿಗೆ ಮೂಲ ಸ್ವಾಮಿಗಳದೇ ಹೆಸರು (ಭಕ್ತಿ ಯಿಂದ ತಾಯಿತಂದೆಗಳಿಂದ) ಇಡಲ್ಪಟ್ಟಿರಬಹುದೇ ?

ಇಷ್ಟೆಲ್ಲ ಹೇಳುವುದಕ್ಕೆ ಕಾರಣವೇನೆಂದರೆ ಶ್ರೀಮಾನ್ ಬುದ್ದಯ್ಯ ಪುರಾಣಿಕ ಮಹಾಶಯರು ಬರೆದ "ಶ್ರೀ ಅಲ್ಲಮಪ್ರಭುಗಳ ಚರಿತ್ರೆ"ಕ್ಕೆ ಸಂಬಂಧಿಸಿದ ಗ್ರಂಥದಲ್ಲಿ ಮೂಲ ಪ್ರಭುದೇವರೇ ತಮ್ಮ ಸಂಚಾರ ಕಾಲ ದಲ್ಲಿ ತೇರದಾಳಕ್ಕೂ ಒಮ್ಮೆ ಬಂದಿರಬಹುದೆಂದು ಸಾಧಿಸಿದ್ದಾರೆ. ಹಾಗೆ ಇದ್ದರೂ ಇರಬಹುದು. ಆದರೆ ಮೇಲೆ ಹೇಳಿದ ಎರಡು ಊರುಗಳಲ್ಲಿ ಪುರಾತನ ಶರಣರ ಹೆಸರಿನಿಂದಲೇ ಪುನಃ ಮಹಾಪುರುಷರು ಬಂದಂತೆ ತೇರದಾಳದಲ್ಲಿಯೂ ಆಗಿರಬಹುದೇ ? ಎಂಬ ಶಂಕೆಗೆ ಅವಕಾಶವಿದೆ. ಅಲ್ಲಿಯವರು ಈ ಬಗ್ಗೆ ಹೆಚ್ಚು ಸಂಶೋಧನೆ ನಡಿಸಿ ಜನತೆಯ ಮುಂದಿಟ್ಟರೆ ಹೆಚ್ಚು ಉಪಯೋಗವಾಗುವದೆಂದು ನನ್ನ ನಂಬುಗೆ.

ಶ್ರೀಬಸವೇಶ್ವರರ ಹಾಗೂ ಶ್ರೀಚೆನ್ನಬಸವೇಶ್ವರರ ಪುನರವತಾರಗಳ ಪುರಾಣಗಳೂ ಲೀಲೆಗಳೂ ಪ್ರಕಟವಾಗಿರುವಾಗ ಶ್ರೀ ಅಲ್ಲಮಪ್ರಭುದೇವರ ಪುನರವತಾರದ ಪುರಾಣವೂ ಲೀಲೆಯೂ ಆ ಕಾಲಕ್ಕೆ ಆಗಿರಲಾರದೇ ? ಹಾಗಿದ್ದುದಾದರೆ ತೇರದಾಳದ ಶ್ರೀ ಪ್ರಭುದೇವರ ವಿಷಯವು ಈ ಮೂರನೆಯ (ನಿಜವಾಗಿ ನೋಡಿದರೆ ಮೊದಲನೆಯ) ಕಥೆಯಾಗಿರಬಹುದೇ ? ಎಂದು ನನಗೆ ಅನಿಸುತ್ತದೆ. ಅಹುದೋ ಅಲ್ಲವೋ ಎಂಬುದರ ಬಗೆಗೆ ಬಲ್ಲವರು ಹೆಚ್ಚಿಗೆ ವಿಚಾರ ಮಾಡಬಹುದು.

ಅಥವಾ ನಾಡಿನಲ್ಲಿ ಇನ್ನೂ ಅನೇಕ ಕಡೆಗೆ ಇಂಥ ಲೀಲೆಗಳು ನಡೆದಿರಬಹುದು. ಪುರಾತನ ಕಾಲದ ಶರಣರ ಹೆಸರಿನಿಂದ ಅನೇಕ ಕಡೆಗೆ ನೂತನ ಶರಣರು ಉದಯಿಸಿರಬಹುದು. ಈ ದೃಷ್ಟಿಯಿಂದ ವಿಚಾರ ಮಾಡಿದರೆ ಪುರಾತನ ಶಿವಶರಣರ ಕಾಲದ ಇತಿಹಾಸವನ್ನೂ ಮಧ್ಯ ಕಾಲದ ಸತ್ಪುರುಷರ ಇತಿಹಾಸವನ್ನೂ ವಿಂಗಡಿಸಲಿಕ್ಕೆ ಸುಲಭವಾಗುತ್ತದೆ.

---

# ಯೋಗದ--ಪ್ರಭಾವವು.

(ಲೇಖಕ:— ಶ್ರೀ ಬಂಥನಾಳ ಶಿವಯೋಗಿಗಳು- ಬಂಥನಾಳ.)



ಸದ್ಯದ ಕಾಲದಲ್ಲಿಯು ಜನರು ಯೋಗದ ಹೆಸರನ್ನು ಕೇಳಿದ ಕೂಡಲೆ ಬಹು ಗಾಬರಿಯಾಗುತ್ತಲಿದ್ದಾರೆ. ಬಹು ಜನರು ಯೋಗಾಭ್ಯಾಸವು ಬಹು ಕಠಿಣವಾದ ಕಾರ್ಯವೆಂದೂ ಸಂಸಾರದಲ್ಲಿರುವವರಿಗೆ ಮಾಡಲು ಶಕ್ಯವಿಲ್ಲವೆಂದೂ ತಿಳಿದುಕೊಂಡಿದ್ದಾರೆ. ನಿಜವಾಗಿ ವಿಚಾರ ಮಾಡಿದರೆ ಯೋಗವು ಜನರು ತಿಳಿದುಕೊಂಡಷ್ಟು ಕಠಿಣವಾಗಿರುವದಿಲ್ಲ. ಈ ಯೋಗಸಾಧನೆ ಮಾಡಲಿಕ್ಕೆ ದ್ರವ್ಯದ ಅವಶ್ಯಕತೆಯೂ ಇರುವದಿಲ್ಲ. ಬೇಕಾದ ಪದಾರ್ಥಗಳ ಸಂಗ್ರಹದ ಅಗತ್ಯವೂ ಇರುವದಿಲ್ಲ. ಇದರ ಸರ್ವಸಾಮುಗ್ರಿಯು ತನ್ನ ದೇಹದಲ್ಲಿಯೇ ಇರುವದು. ಇದರ ಸಂಬಂಧವು ಹೊರಗಿನ ಯಾವ ಪ್ರಪಂಚದಲ್ಲಿಯೂ ಇರುವದಿಲ್ಲ. ಇದಕ್ಕಾಗಿ ಹೆಚ್ಚು ತಿಳಿದುಕೊಳ್ಳುವ ಆತುರತೆಯೂ ಬೇಡ. ಇದಕ್ಕೆ ಬೇಕಾಗುವ ಎಲ್ಲ ವಸ್ತುಗಳು ಪ್ರತಿಯೊಬ್ಬ ಮನುಷ್ಯನ ಹತ್ತರ ಯಾವಾಗಲೂ ಸಿದ್ಧವಾಗಿಯೇ ಇರುತ್ತವೆ.

ಈ ಯೋಗಾಭ್ಯಾಸವನ್ನು ಮಾಡುವದಕ್ಕೆ ತಾನು ಶ್ರೀಮಂತನೋ ಅಥವಾ ದರಿದ್ರನೋ ರೋಗಿಯೋ ನಿರೋಗಿಯೋ ಬಲವಂತನೋ ದುರ್ಬಲನೋ ಗಂಡಸನೋ ಹೆಂಗಸಳೋ ಮುಪ್ಪಿನವನೋ ಯುವಕನೋ ಇದು ಯಾವದೂ ನೋಡಬೇಕಾದುದಿಲ್ಲ. ಯಾವ ಪರಿಸ್ಥಿತಿಯಲ್ಲಿಯೇ ಇರಲಿ, ಯಾವ ಅವಸ್ಥೆಯಲ್ಲಿಯೇ ಇರಲಿ, ಯಾವಾಗ್ಗೆ ತಾನು ಯೋಗಾಭ್ಯಾಸವನ್ನು ಮಾಡಲಿಕ್ಕೆ ಇಚ್ಛಿಸುತ್ತಾನೋ, ಹಾಗೂ ಮನಃಪೂರ್ವಕವಾಗಿ ಪ್ರಯತ್ನಿಸಲು ಸಿದ್ಧನಾಗುತ್ತಾನೋ, ಆವಾಗ್ಗೆ ಯೋಗಾನುಭವವು ಕೈಗೂಡಲು ಅನುಕೂಲವಿರುತ್ತದೆ. ಯಾವ ಮನುಷ್ಯನು ಯೋಗಶಾಸ್ತ್ರದ ವಿಷಯದಲ್ಲಿ ನಂಬುಗೆ ಹಾಗೂ ವಿಶ್ವಾಸವಿಟ್ಟು ಪ್ರಯತ್ನಿಸಲು ಅಪೇಕ್ಷಿಸುತ್ತಾನೆಯೋ ಆತನೇ ಯೋಗಾಭ್ಯಾಸದ ನಿಜವಾದ ಅಧಿಕಾರಿಯಾಗಿದ್ದಾನೆ.

ಯೋಗಾಭ್ಯಾಸದ ಸಲುವಾಗಿ ಉಚ್ಚ ಜಾತಿ ಹಾಗೂ ಕನಿಷ್ಟಜಾತಿಗಳ ತಾರತಮ್ಯವಿಲ್ಲ. ಬಹಳ ವಿದ್ಯಾವಂತನಾಗಬೇಕಾಗಿರುವದೂ ಅವಶ್ಯವಿಲ್ಲ. ವಿದ್ಯಾವಂತನಿದ್ದರೆ ಮಾತ್ರ ಈ ವಿದ್ಯೆಯನ್ನು ಬಹು ಜನರಿಗೆ ತಿಳಿಸಿ ಕೊಡಲು ಅನುಕೂಲವಾಗುವದಷ್ಟೇಸರಿ. ಆದರೆ ಈ ವಿಷಯದಲ್ಲಿ ಸಂಪೂರ್ಣ

ಲಾಲಸೆಯೂ ವಿಶ್ವಾಸವೂ ಪ್ರಯತ್ನಿಸುವ ದೃಢತೆಯೂ ಮಾತ್ರ ಅವಶ್ಯ ವಾಗಿರಬೇಕು. ಯಾವ ಕಾಲಕ್ಕೆ ನೀವು ಯೋಗವನ್ನು ಮಾಡಲು ನಿರ್ಧ ರಿಸುವಿರೋ ಆವಾಗ್ಗೆ ಅದು ಸಾಧಿಸಲು ಬಹು ಸುಲಭವಾಗಿರುತ್ತದೆ. ಚಿತ್ತ ಅಥವಾ ಮನಸ್ಸನ್ನು ಏಕಾಗ್ರ ಮಾಡುವದು ಅಂದರೆ ಮನಸ್ಸು ಹಾಗೂ ಶರೀರಗಳು ಆತ್ಮನ ವಶವಾಗಿ ಮಿತ್ರನಂತೆ ಆತನ ಅನುಕೂಲವಾಗಿ ವರ್ತಿ ಸುವದೇ ಯೋಗಾಭ್ಯಾಸದ ಗುರಿಯಾಗಿದೆ.

ಈ ಸಾಧನೆಯನ್ನು ವಿದ್ಯಾರ್ಥಿಗಳು ಕೂಡ ಮಾಡಲು ಅನುಕೂಲ ವಿರುತ್ತದೆ. ಯೋಗಾಭ್ಯಾಸಕ್ಕೆ ಮನೆ, ಮಠ, ಸ್ಕೂಲ, ಹೈಸ್ಕೂಲ, ಕಾಲೇ ಜುಗಳನ್ನು ಬಿಡುವ ಅವಶ್ಯವಿಲ್ಲ. ಯೋಗಸಾಧನೆ ಮಾಡುವುದರಿಂದ ವಿದ್ಯಾ ಭ್ಯಾಸಕ್ಕೆ ಯಾವ ರೀತಿಯ ಹಾನಿ ಹಾಗೂ ತೊಂದರೆ ಇರುವದಿಲ್ಲ. ಇಷ್ಟೇ ಅಲ್ಲ ಪ್ರತಿಯಾಗಿ ಲಾಭವೇ ಅಧಿಕವಾಗಿರುತ್ತದೆ. ಯೋಗಾಭ್ಯಾಸದಿಂದ ವಿದ್ಯಾರ್ಥಿಯು ಮೇಧಾವಿ ಹಾಗೂ ಬುದ್ಧಿಶಾಲಿ ದೃಢಕಾಯದವನಾಗುತ್ತಾನೆ. ಸಾಧನೆ ಮಾಡತಕ್ಕಂಥ ವಿದ್ಯಾರ್ಥಿಯು ತನ್ನ ಗಣಿತ ಮೊದಲಾದ ಕಠಿಣ ವಿಷಯಗಳನ್ನು ಎಷ್ಟು ಶೀಘ್ರವಾಗಿ ಸುಲಭವಾಗಿ ಗ್ರಹಿಸುತ್ತಾನೋ ಅಷ್ಟು ಸಾಧನೆ ಮಾಡದಿರುವ ಎರಡನೇ ವಿದ್ಯಾರ್ಥಿಯು ಗ್ರಹಿಸಲು ಶಕ್ಯವಿಲ್ಲ. ಭಾರತದ ಪ್ರಾಚೀನ ಕಾಲದಲ್ಲಿ ಎಲ್ಲ ವಿದ್ಯಾರ್ಥಿಗಳು ಅಧ್ಯಾಪಕರೂ ಪ್ರತಿ ದಿನದ ತಮ್ಮ ಪ್ರಾತಃಕಾಲದ ಪಠನ ಪಾಠನಗಳ ಪೂರ್ವದಲ್ಲಿ ಯೋಗಾ ಭ್ಯಾಸವನ್ನು ಮಾಡುತ್ತಿದ್ದರೆಂಬುದು ಆರ್ಷೇಯ ಗ್ರಂಥಗಳಿಂದ ಸ್ಪಷ್ಟವಾಗಿ ತಿಳಿಯುತ್ತದೆ.

ಇದಕ್ಕಾಗಿ ವಿದ್ಯಾರ್ಥಿಗಳಾಗಲಿ ಅಧ್ಯಾಪಕರಿಗಾಗಲಿ ಆಫೀಸರಿಗಾ ಗಲಿ ವಿಶೇಷ ಕಾಲವೇನೂ ಹಿಡಿಯುವದಿಲ್ಲ. ೧ ಗಂಟೆ ೧ ವರೆ ಗಂಟೆ ಯಾದರೆ ಸಾಕಾಗುವದು. ಇದರಲ್ಲಿ ಹೆಚ್ಚು ಮಾಡುವದಾದರೂ ಏನಿದೆ? ಶುದ್ಧ ವಾತಾವರಣದಲ್ಲಿ ಹೊಟ್ಟೆಯು ಬರಿದಾದಾಗ್ಗೆ ತನಗನುಕೂಲವಾದ ಒಂದು ಆಸನದಲ್ಲಿ ಕುಳಿತು ಮನಸ್ಸನ್ನು ಒಂದೇ ಕಡೆಗೆ ನಿಲ್ಲಿಸುವದು ಅಂದರೆ ತನ್ನ ಶ್ವಾಸ ಪ್ರಶ್ವಾಸಗಳ ಮೇಲೆ ಕೇಂದ್ರೀಕರಿಸುವದು ಸಂಕ್ಷಿ ಪ್ತವಾಗಿ ಹೇಳುವದಾದರೆ ಇದುವೇ ಯೋಗವಾಗಿರುತ್ತದೆ.

"ಯೋಗಶ್ಚಿತ್ತ ವೃತ್ತಿ ನಿರೋಧಃ" ಎಂಬ ಸೂತ್ರದಿಂದ ಮಹರ್ಷಿ ಪತಂಜಲಿಗಳು ಸ್ಪಷ್ಟಪಡಿಸಿದಂತೆ ಚಂಚಲವಾದ ಮನಸ್ಸನ್ನು ಯಾವ ರೀತಿ ಯಿಂದಲೇ ಆಗಲಿ ಒಂದೇ ಕಡೆಗೆ ಬಂಧನಮಾಡುವುದೇ ಯೋಗವಾಗಿದೆ.

ಶರೀರ ನಿಶ್ಚಲವಾದರೆ ಮನವೂ ಪ್ರಾಣವೂ ಸಹಜರೀತಿಯಿಂದ ನಿಶ್ಚಲ ವಾಗುವವು. ಪ್ರಯುಕ್ತ ಶರೀರ ನಿಶ್ಚಲವಾಗಲಿಕ್ಕೆ ಆಸನದ ಅಭ್ಯಾಸವನ್ನು ಮೊದಲು ಮಾಡಬೇಕಾಗುತ್ತದೆ. ಒಂದೇ ರೀತಿಯಿಂದ ಮೂರು ತಾಸು ಗಳ ತನಕ ಆಯಾಸವಿಲ್ಲದೆ ಕೂಡ್ರಲು ಬಂದರೆ ಶರೀರ ನಿಶ್ಚಲವಾಗುವ ದೆಂದು ಕೆಲವು ಯೋಗಿಗಳು ಹೇಳುವರು. ೧॥ ಘಂಟೆಯ ವರೆಗೆ ಒಂದೇ ರೀತಿಯಾಗಿ ಆಯಾಸವಾಗದೆ ಕುಳಿತುಕೊಳ್ಳಲು ಬಂದರೂ ಆಸನ ಜಯ ವಾದಂತೆಯೇ ಸರಿ ಎಂದು ಕೆಲವರೂ ಹೇಳುತ್ತಾರೆ.

ಯೋಗಾಭ್ಯಾಸವು ಈ ಪ್ರಪಂಚದಲ್ಲಿರುವ ಪ್ರತಿಯೊಂದು ವ್ಯಕ್ತಿಗೂ ಬಹು ಸಹಾಯಕವಾದ ವಿಷಯವಾಗಿದೆ. ಪ್ರತಿದಿನ ೧ ತಾಸು ೧॥ ತಾಸು ಕಾಲವನ್ನು ಇದಕ್ಕಾಗಿ ವೆಚ್ಚ ಮಾಡಿದ್ದಾದರೆ, ತನು ಮನ ಆತ್ಮಸುಧಾ ರಣೆಗೆ ಅತ್ಯಂತ ಪರಿಣಾಮಕಾರಕ ಕಾರ್ಯ ಮಾಡಿದಂತಾಗುತ್ತದೆ. ಇದು ಅಲ್ಪ ಕಷ್ಟದಿಂದ ಅಧಿಕ ಲಾಭ ಪಡೆದಂತೆ ಇರುವದು. ಒಂದೇ ಆಸನ ದಲ್ಲಿ ಸುಖವಾಗಿ ಕುಳಿತು ಅನೇಕ ಕಡೆಗೆ ಓಡಾಡುವ ಮನವನ್ನು ದೇವ ರಲ್ಲಿ (ಆತ್ಮನಲ್ಲಿ) ಮೊದಲು ಪ್ರಾಣ ವಾಯುವಿನಲ್ಲಿಡುವದರಿಂದ ತಾಮ್ರ ಹಿತ್ತಾಳಿಗಳು ಹುಳಿಯಿಂದ ಸ್ವಚ್ಛವಾಗುವಂತೆ ಕಂಚು, ಬೆಳ್ಳಿಗಳು ಭಸ್ಮದಿಂದ ನಿರ್ಮಲವಾಗುವಂತೆ ಮನ-ಬುದ್ಧಿಗಳು ನಿರ್ಮಲತೆಯನ್ನು ಹೊಂದುತ್ತವೆ. ಮುಶಿಯಲ್ಲಿ ಕರಗಿಸಿದ ಬಂಗಾರವು ಹೇಗೆ ಥಳಥಳಿಸುವದೋ ಸಾಣೆ ಹಿಡಿದ ಚಾಕು ಹತ್ಯಾರಗಳು ಹೇಗೆ ಚಮಕಿಸುವವೋ ಹಾಗೆಯೇ ಯೋಗಾಭ್ಯಾಸ ಮಾಡುವವರ ಬುದ್ಧಿಮನಗಳು ತೇಜಸ್ಸುಳ್ಳವುಗಳಾಗಿ ತೀಕ್ಷ್ಣತೆಯನ್ನು ಪಡೆಯುತ್ತಿವೆ. ರಾತ್ರಿ ಚನ್ನಾಗಿ ನಿದ್ರೆ ಮಾಡಿದ ಮನುಷ್ಯನು ಮುಂಜಾನೆ ಹೇಗೆ ಹೊಸ ಮನುಷ್ಯನಾಗುತ್ತಾನೋ ಹಾಗೆಯೇ ಸಾಧನೆಯಿಂದ ಬುದ್ಧಿ ಮನಗಳು ಪ್ರಾವಿಣ್ಯತೆಯನ್ನು ಹೊಂದುತ್ತಿವೆ: ಸರ್ವಕಾಲವೂ ಸಂಸಾರದ ಜೊಂಜಾಟದಲ್ಲಿ ಸಿಲುಕಿದ ಮಾನವರ ಮನಸ್ಸು ಅನೇಕ ಚಿಂತೆಗಳಲ್ಲಿ ಮುಳುಗಿ ಯಾವಾಗಲೂ ಬಾಡಿಗೆಹೊಡೆಯುವವನ ಕುದುರೆಯಂತೆ ಅಶಕ್ತ ದುರ್ಬಲ ಹಾಗೂ ಕಠಿಣ ಕೆಲಸ ಮಾಡಲು ನಿರುಪಯೋಗವಾಗಿರುವಂತೆ ಆಗಿರುತ್ತದೆ. ಆ ಕುದುರೆಗೆ ವಿಶ್ರಾಂತಿಕೊಟ್ಟು ಚನ್ನಾಗಿ ಸಲುಹಿದ ಮೇಲೆ ಹೇಗೆ ಅದು ಒಳ್ಳೇ ತೀಕ್ಷ್ಣತೆಯಿಂದಲೂ ಉತ್ಸಾಹದಿಂದಲೂ ತೀವ್ರತೆ ಯಿಂದಲೂ ಓಡುವದೋ ಅದರಂತೆ ಯೋಗಸಾಧನೆಯಿಂದ ವಿಶ್ರಾಂತಿ ಹೊಂದಿದ ತನು ಮನ ಬುದ್ಧಿಗಳು ಅತಿ ಕಠಿಣತರವಾದ ಕಾರ್ಯ ಹಾಗೂ

ವಿಚಾರಗಳನ್ನು ಬಹು ಸುಲಭ ರೀತಿಯಲ್ಲಿ ಮಾಡಲು ಸಮರ್ಥವಾಗುತ್ತವೆ. ಪ್ರಯುಕ್ತ ಪ್ರತಿಯೊಬ್ಬರೂ ಬಹಳವಿಲ್ಲ ಸ್ವಲ್ಪಕಾಲವನ್ನಾದರೂ ಯೋಗ ಸಾಧನೆಯಲ್ಲಿ ಕಳೆಯಬೇಕು. ಈ ಯೋಗಾಭ್ಯಾಸಕ್ಕೆ ಕಳೆವ ಕಾಲವು ಎಂದಿಗೂ ವ್ಯರ್ಥವಾಗಿ ಹೋಗದು. ಅನುಭವಜ್ಞರ ಹೇಳಿಕೆಯ ಪ್ರಕಾರ ದೇಹಮನಗಳ ಆರೋಗ್ಯತೆಗೆ ಈ ಜಗತ್ತಿನಲ್ಲಿಯೇ ಎಲ್ಲ ಸಾಧನೆ ಹಾಗೂ ವ್ಯಾಯಾಮಗಳಿಗಿಂತ ಸರ್ವೋತ್ತಮ ಸಾಧನೆಯೆಂದರೆ ಯೋಗಾಭ್ಯಾಸ ವೆಂದೇ ನಿಸ್ಸಂದೇಹವಾಗಿ ಹೇಳಬಹುದು. ಆದ್ದರಿಂದ ಎಂಥ ಮಹತ್ತರ ವಾದ ಅವಕಾಶವಿಲ್ಲದ ಉದ್ಯೋಗದಲ್ಲಿರುವವನಿದ್ದರೂ ತನಗನುಕೂಲವಾದ ಒಂದು ಕಾಲದಲ್ಲಿಯಾದರೂ ಈ ಸಾಧನೆಯನ್ನು ಮಾಡಲೇಬೇಕು. ಹಿಂದೂ ಧರ್ಮದ ಪುರಸ್ಕರ್ತರು ಮುಂಜಿ, ದೀಕ್ಷೆ, ಯಜ್ಞ, ಹೋಮ, ಹವನ, ಪೂಜಾದಿ ನಿತ್ಯ ನೈಮಿತ್ತಿಕಾದಿ ಧರ್ಮವಿಧಿಗಳ ಪ್ರಾರಂಭದಲ್ಲಿ ಈ ಯೋಗ ವಿಧಿಯನ್ನು ಸೇರಿಸಿಯೇ ಬಿಟ್ಟಿದ್ದಾರೆ. ಆದರೆ ಅದು ಈಗ ಕವಾಯಿತದಂತೆ ಮೂಗು ಮುಟ್ಟಿಬಿಡುವದರಲ್ಲಿಯೇ ಮುಕ್ತಾಯವಾಗುತ್ತಿದೆ.

ಪದ್ಮಾಸನ, ಸಿದ್ಧಾಸನ, ಸ್ವಸ್ತಿಕಾಸನ, ವೀರಾಸನ ರೋಗಿ ಇದ್ದರೆ ಸುಖಾಸನ (ಶವಾಸನ)ಗಳಲ್ಲಿ ಪೈಕಿ. ತನಗನುಕೂಲವಾದ ಯಾವುದಾದ ರೊಂದು ಆಸನದಲ್ಲಿ ತನಗಾಯಾಸವಿಲ್ಲದಂತೆ ತಲೆ ಕತ್ತು ಎದೆ ಈ ಮೂರು ಸರಳರೇಖೆಯಲ್ಲಿ ಬರುವಂತೆ ೧।। ತಾಸುಗಳ ತನಕ ಮೊದಲು ಕುಳಿತು ಕೊಳ್ಳಲು ಕಲಿಯಬೇಕು ಇದರಿಂದ ಸ್ಥೂಲದೇಹವು ನಿಶ್ಚಲತೆಯನ್ನು ಹೊಂದಲು ಅನುಕೂಲವಾಗುತ್ತದೆ. ಇದಕ್ಕೆ ಆಸನಸಿದ್ಧಿಯೆಂದು ಯೋಗಿ ಗಳು ಹೇಳುತ್ತಾರೆ.

ಆನಂತರ ಮನಸ್ಸನ್ನು ತನ್ನ ಶ್ವಾಸ ಪ್ರಶ್ವಾಸಗಳ ಮೇಲೆ ಇಟ್ಟು ಅತಿ ಸಾವಕಾಶವಾಗಿ ಶ್ವಾಸವನ್ನು (ಪೂರಕವನ್ನೂ) ಎಳೆಯಬೇಕು. ಹಾಗೆಯೇ ಪ್ರಶ್ವಾಸವನ್ನು (ರೇಚಕವನ್ನು) ಅದಕ್ಕು ಸಾವಕಾಶವಾಗಿ ಬಿಡಬೇಕು. ಯಾವಾಗಲೂ ಶ್ವಾಸತಕ್ಕೊಳ್ಳುವಾಗಿನಕ್ಕಿಂತಲೂ ಬಿಡುವಾ ಗಿನ ಗತಿ ಸಾವಕಾಶವಾಗಿರಬೇಕು. ಈ ಕಾಲದಲ್ಲಿ ಮನಸ್ಸನ್ನು ಸಂಪೂ ರ್ಣವಾಗಿ ಈ ಪ್ರಾಣವಾಯುವಿನ ಗತಿಯಲ್ಲಿಯೇ ಇಟ್ಟಿರಬೇಕು. ಸಾಧನೆ ಮಾಡುವಾಗ್ಗೆ ಶರೀರವನ್ನು ಕ್ವಚಿತ್ ಮಾತ್ರವಾದರೂ ಅಲುಗಾಡಿಸಬಾ ರದು. ಹೊಯಿದಾಡಿಸಬಾರದು. ಇದುವೇ ಪ್ರಾಚೀನ ಪ್ರಾಣಾಯಾಮವು.

ಯೋಗಶಾಸ್ತ್ರದ ಕರ್ತೃಗಳಾದ ಪಾತಂಜಲಿಮಹರ್ಷಿಗಳು "ಪ್ರಚ್ಛರ್ದನ ವಿಧಾರಣಾಭ್ಯಾಂ ವಾ ಪ್ರಾಣಸ್ಯ" ಎಂದು ಹೇಳಿದ್ದು ಪ್ರಾಣಾಯಾಮದ ಪ್ರಾಥಮಿಕ ಅಂತಸ್ತು.

ಒಳ್ಳೇದು. ಇದರಿಂದ ಏನಾಗುವದು ಎಂದು ಯಾರಾದರೂ ಕೇಳಿದರೆ ಇದರಿಂದ ಜೀವನಾಧಾರವಾದ ಪ್ರಾಣಶಕ್ತಿಯ ಸಂಗ್ರಹವಾಗುತ್ತದೆ. ಪ್ರಾಣಶಕ್ತಿಯ ಬೆಳವಣಿಗೆಯಿಂದ ತನು, ಮನ, ಜೀವವು ಪ್ರಗತಿಯನ್ನು ಹೊಂದುತ್ತವೆ.

ಕೂಲಿಯವನು ಗುದ್ದಲಿ ತೆಗೆದುಕೊಂಡು ಅಡವಿಗೆ ಹೋಗಿ ಜಟ್ಟಿಯಗಿಂತ ಅಧಿಕ ಪರಿಶ್ರಮ ಮಾಡುತ್ತಾನೆ. ಆದರೆ ಜಟ್ಟಿಯಂತೆ ಪುಷ್ಟ ಹಾಗೂ ಬಲಶಾಲಿಯಾಗಿರುವದಿಲ್ಲ. ಯಾಕೆ? ಇದರ ಕಾರಣವಿಷ್ಟೇ ಇದೆ. ಜಟ್ಟಿಯು ಪರಿಶ್ರಮವನ್ನು ಇಚ್ಛಾಪೂರ್ವಕವಾಗಿಯೂ ಉತ್ಸಾಹಪೂರ್ವಕವಾಗಿಯೂ ಮನಸ್ಸುಗೊಟ್ಟು ಮಾಡುತ್ತಾನೆ. ಆದರೆ ಕೂಲಿಯವನು ನಿರ್ವಾಹವಿಲ್ಲದೆ ಅನಿಚ್ಛೆಯಿಂದ ಮನಸ್ಸಿಲ್ಲದೆ ಪರಿಶ್ರಮಮಾಡುತ್ತಾನೆ. ಈ ಕಾರಣದಿಂದ ಕೂಲಿಯವನು ಜಟ್ಟಿಯಗಿಂತ ಹೆಚ್ಚು ಪರಿಶ್ರಮ ಮಾಡಿದರೂ ಅವನಿಗಿಂತ ಪುಷ್ಟಿ-ತುಷ್ಟಿ ಬಲಗಳಲ್ಲಿ ಹಿಂದುಳಿದವನಾಗಿರುತ್ತಾನೆ. ಇದರಂತೆ ಇಷ್ಟುದಿನಗಳತನಕ ನಾವು ಅನಿಚ್ಛೆಯಿಂದ ಶ್ವಾಸ ಪ್ರಶ್ವಾಸಗಳನ್ನು ಮಾಡುತ್ತ ಬಂದಿದ್ದರಿಂದ ಆ ಪ್ರಾಣಶಕ್ತಿಯ ಸಂಗ್ರಹ ಆಗಿಲ್ಲ. ಈಗ ಇಚ್ಛಾಶಕ್ತಿಯೊಡನೆ ಕ್ರಮಕ್ಕನುಸರಿಸಿ ಶ್ವಾಸ-ಪ್ರಶ್ವಾಸ ಮಾಡಿದರೆ ಅಂದರೆ ಯೋಗಸಾಧನೆ ಮಾಡಿದರೆ ಪ್ರಾಣಶಕ್ತಿಯ ಸಂಗ್ರಹವಾಗಿ ತನು, ಮನ ಜೀವಗಳು ನಿಶ್ಚಯವಾಗಿ ಸುಧಾರಣೆಯಾಗುತ್ತವೆ.

ದಿನದ ೨೪ ಗಂಟೆಗಳಲ್ಲಿ ಈ ಶ್ವಾಸ ಪ್ರಶ್ವಾಸಗಳು ೨೧೬೦೦ ಆಗುತ್ತವೆ ಎಂದು ಜ್ಞಾನಿಗಳು ಅನುಭವದಿಂದ ಹೇಳುತ್ತಾರೆ. ಪರೀಕ್ಷೆ ಮಾಡಿ ನೋಡಿದರೆ ಇದು ಎಲ್ಲರ ಅನುಭವಕ್ಕೂ ಬರುತ್ತದೆ. ಹಾಗೂ ಈ ಶ್ವಾಸ-ಪ್ರಶ್ವಾಸಗಳ ಗತಿಗಳ ಮೇಲಿಂದಲೇ (ಶತಾಯುರ್ಪುರುಷ:) ಅಂದರೆ ಮಾನವನ ಆಯುಷ್ಯವು ನೂರು ವರುಷವೆಂದು ಶಾಸ್ತ್ರಜ್ಞರ ಸಿದ್ಧಾಂತವು. ಈ ಮಾನದಿಂದ ನೋಡಿದರೆ ಒಂದು ಮಿನಿಟಿಗೆ ೧೫ ಶ್ವಾಸ-ಪ್ರಶ್ವಾಸಗಳಾಗುವವು. ಆದರೆ ಮೇಲೆ ಹೇಳಿದಂತೆ ಸಾಧನೆ ಮಾಡಿದರೆ ಒಂದು ಮಿನಿಟಿಗೆ ४-५ ಶ್ವಾಸ ಪ್ರಶ್ವಾಸಗಳಿಗಿಂತ ಹೆಚ್ಚು ಆಗುವದಿಲ್ಲ. ಹೀಗೆ ಶ್ವಾಸ

ಗತಿಗಳು ಕಡಿಮೆ ಆಗುತ್ತಹೋದಂತೆ ಜೀವನಾಧಾರವಾದ ಪ್ರಾಣಶಕ್ತಿಯು. ಅಧಿಕ ಸಂಗ್ರಹವಾಗಿ ಆಯುರ್ಮರ್ಯಾದೆಯು ಬೆಳೆಯುತ್ತದೆ. ಶರೀರವು ನಿರೋಗಿ ಹಾಗು ಸುಂದರವಾಗುತ್ತದೆ. ಸಾಧನೆಯು ಮುಂದುವರಿಯುತ್ತ ಹೋದಂತೆ ಪೂರಕ ರೇಚಕಗಳು (ಶ್ವಾಸ-ಪ್ರಶ್ವಾಸಗಳು) ಸಾಧಕನಿಗೂ ಕೂಡ ಗೊತ್ತಾಗದಷ್ಟು ಸೂಕ್ಷ್ಮಗತಿಯಿಂದ ಸಾಗುತ್ತವೆ. ಈ ಸ್ಥಿತಿಯಲ್ಲಿ ಸಾಧಕನಿಗೆ ಈ ವೊದಲು ಎಂದೂ ಅನುಭವಿಸದ ಆನಂದ ಸುಖಶಾಂತಿ ಗಳು ಲಭಿಸುತ್ತವೆ. ಜೀವನ್ಮುಕ್ತನಾಗುತ್ತಾನೆ. ಪ್ರಾಣಶಕ್ತಿ ಹಾಗೂ ಮಾನ ಸಿಕ ಶಕ್ತಿಗಳಿಗೆ ಅನಾದಿಕಾಲದಿಂದಲೂ ಘನಿಷ್ಟಸಂಬಂಧವಿರುವದರಿಂದ ಆಗಲಿದ ಪ್ರೇಮದ ಎರಡು ವ್ಯಕ್ತಿಗಳು ಕೂಡೋಣದರಿಂದ ಎಷ್ಟು ಸುಖ ಶಾಂತಿಗಳು ಮನ ಪ್ರಾಣಗಳ ಮಿಲನದಿಂದ ಆಗುತ್ತವೆ. ಕಡೆಗೆ ಸಾಧ ಕನಿಗೆ ಶ್ವಾಸ ಪ್ರಶ್ವಾಸಗಳ ಗತಿಗಳೇ ಲಯವಾಗಿ ಇವುಗಳ ಇರುವಿಕೆಯೂ ಕೂಡ ಗೊತ್ತಾಗದಷ್ಟು ಸ್ಥಿತಿಗೆ ಬರುವದು. ಅದು ಕೇವಲ ಕುಂಭಕವೆನಿ ಸುವದು ಮತ್ತು ಅದುವೇ ಸವಿಕಲ್ಪಸಮಾಧಿಸ್ಥಿತಿ ಎಂದು ಕರೆಯಲ್ಪಡು ವದು. ಈ ಸಮಾಧಿಸ್ಥಿತಿಗೆ ಮುಟ್ಟಿದ ಸಾಧಕನಿಗೆ ಸ್ಥೂಲಶರೀರ ಸೂಕ್ಷ್ಮ ಶರೀರಗಳೆರಡೂ ಸುಧಾರಿಸುವವಲ್ಲದೆ ಜೀವನೂ ಕೂಡ ಪರಿಶುದ್ಧತೆಯನ್ನು ಹೊಂದುತ್ತಾನೆ. ಹೀಗೆ ಇಹಪರಗಳೆರಡೂ ಸುಖಗಳಿಗೆ ಕಾರಣವಾಗಿರುವ ಯೋಗದ ಪ್ರಭಾವವನ್ನು ಎಷ್ಟು ಹೇಳಿದರೂ ಕಡಿಮೆಯೇ ಸರಿ.

ಸೂಚನೆ:—

ಮೇಲಿನ ಬರವಣಿಗೆಯಲ್ಲಿ ಹೇಳಿದ ರೀತಿಯಲ್ಲಿ ಸ್ವತಂತ್ರವಾಗಿ ಸಾಧನೆ ಮಾಡುವ ಸಾಧಕನಿಗೆ ಹಾನಿಯಂತೂ ತಿಲಮಾತ್ರವಾಗಿಲ್ಲ. ಎಷ್ಟೇದೊರೆ ಯಲಿ ಲಾಭವೇ ದೊರೆಯುತ್ತದೆ. ಆದರೆ ಕೆಲವು ಯೋಗಗ್ರಂಥಗಳಲ್ಲಿ ಹೇಳಿದಂತೆ ಪೂರಕದ ನಾಲ್ಕುಪಟ್ಟು ಕುಂಭಕ ಪೂರಕದ ಇಮ್ಮಡಿ ರೇಚಕ ಮಾಡಿ ಪ್ರಾಣವಾಯುವನ್ನು (ಶ್ವಾಸವನ್ನು) ದೇಹದೊಳಗೆ ಇಟ್ಟುಕೊಳ್ಳು ವದನ್ನು ಅನುಭವಿಯಾದ ಗುರುವು ಹತ್ತರವಿಲ್ಲದೆ ಸ್ವತಂತ್ರವಾಗಿ ಮಾಡಿ ಬಹುಸಾಧಕರು ದೇಹವನ್ನೇ ಕೆಡಿಸಿಕೊಂಡ ಉದಾಹರಣೆಗಳು ಹೇರಳವಾಗಿ ವುಂಟು. ಆದರೆ ಈ ಲೇಖದಲ್ಲಿ ಬರೆದಂತೆ ಸ್ವತಂತ್ರವಾಗಿ ಸಾಧನೆ ಮಾಡಿ ದರೆ ಅಪಾಯವಂತೂ ಇಲ್ಲವೇ ಇಲ್ಲ. ಸಾಧಕನ ಮನಸ್ಸಿನ ಸ್ಥಿರತೆಗೆ ಅನುಸರಿಸಿ ಉಪಾಯವೇ ಉಂಟಾಗುವದೆಂದು ಪುನಃ ಮತ್ತೊಮ್ಮೆ ಹೇಳಿ ಲೇಖನವನ್ನು ಮುಗಿಸುವೆನು.

---

# ನೂರೊಂದರ ನುರಿತ.

ಲೇಖಕ:— ಶ್ರೀ. ಸಿ. ನಾ. ಮಹಾಂತಣ್ಣವರ, ನಿವೃತ್ತ ಅಸಿ||
ಡೆ|| ಎಜ್ಯು|| ಇನಸ್ಪೆಕ್ಟರ, ಹೂನೂರು.

ಸದ್ವಾಸನೆಯಾಂತ ದೇಹಿಯು ಜಗತ್ತಿನ ಅಂಡಜ, ಪಿಂಡಜ, ಉದ್ಭಿಜ, ಜರಾಯುಜಗಳನ್ನು ನಿರೀಕ್ಷಿಸಿದರೆ, ಚೈತನ್ಯ ತತ್ವವು ಘಟದೊಳಗೆ ತೋರುವ ಸೂರ್ಯನ ಕಿರಣದಂತೆ, ಜಗದಂತರ್ಯಾಮಿಯಾಗಿ, ಜಗನ್ಮಯವಾಗಿ ತೋರುವದಷ್ಟೇ; ದೇಹದಲ್ಲಿದ್ದ ಆತ್ಮನೇ ಸಕಲನೆನಿಸಿಕೊಂಬನು. ದೇಹವಿಲ್ಲದಾತ್ಮನು ನಿಷ್ಕಲನೆನಿಸಿಕೊಂಬನು. ದೇಹವಾಯಿತ್ತಾದರೆ ಮಲಸಂಬಂಧವಾಗಿ ಪಿಂಡವೆನಿಸುವದು. ಇದುವೇ ನೂರೊಂದರಲ್ಲಿ ಮೊದಲನೆಯದಾದ ಪಿಂಡಸ್ಥಲವು.

ಪಿಂಡಸ್ಥಂ ಸಕಲಂ ಜ್ಞೇಯಂ ನಿಷ್ಕಲಂ ದೇಹವರ್ಜಿತಮ್ |
ದೇಹಸ್ಯ ವತ್ಕಲೋಪೇತಂ ಧಾತುಪಿಂಡಮಿತಿಸ್ಮೃತಂ ||

ಎರಡನೆಯದಾದ ಪಿಂಡಜ್ಞಾನ ಸ್ಥಲದಲ್ಲಿ ಶ್ರೀಬಸವಣ್ಣನವರು, ಅಯ್ಯಾ ನೀನು ನಿರಾಕಾರವಾಗಿದ್ದಲ್ಲಿ ನಾನು ಜ್ಞಾನವೆಂಬ ವಾಹನವಾಗಿದ್ದೆ ಕಾಣಾ; ಅಯ್ಯಾ ನೀನು ನಾಟ್ಯಕ್ಕೆ ನಿಂದಲ್ಲಿ ನಾನು ಚೈತನ್ಯವೆಂಬ ವಾಹನವಾಗಿದ್ದೆ ಕಾಣಾ; ಅಯ್ಯಾ ನೀನು ಸಾಕಾರವಾಗಿ ನಿಂದಲ್ಲಿ ನಾನು ವೃಷಭನೆಂಬ ವಾಹನವಾಗಿದ್ದೆ ಕಾಣಾ; ಅಯ್ಯಾ ನೀನು ಎನ್ನ ಭವವ ಕೊಂದಿಹೆನೆಂದು ಜಂಗಮವಾಗಿ ನಿಂದಲ್ಲಿ ನಾನು ಭಕ್ತನೆಂಬ ವಾಹನವಾಗಿದ್ದೆ ಕಾಣಾ ಕೂಡಲ ಸಂಗಮದೇವಾ.

ಸುಜ್ಞಾನಿಗಳು ಪಿಂಡಸ್ಥಲ, ಪಿಂಡಜ್ಞಾನ ಸ್ಥಲಗಳನ್ನು ಮುಮುಕ್ಷುವಿಗೆ ಅನೇಕ ರೀತಿಗಳಿಂದ ಬೋಧಿಸುವ ಪರಿಯನೇನೆಂದು ಪೇಳಲಿ.

ಪೃಥಿವೀ, ಅಪ್ಪು, ತೇಜ, ವಾಯು, ಆಕಾಶವೆಂಬಿವು ಪಂಚಮಹಾಭೂತಂಗಳು ಪ್ರಾಣ, ಅಪಾನ, ವ್ಯಾನ, ಉದಾನ, ಸಮಾನವೆಂಬಿವು ಪಂಚಪ್ರಾಣ ವಾಯುಗಳು. ವಾಕ್ಕು, ಪಾಣಿ, ಪಾದ, ಪಾಯು, ಗುಹ್ಯವೆಂಬಿವು ಪಂಚಕರ್ಮೇಂದ್ರಿಯಗಳು. ಶ್ರೋತ್ರ, ತ್ವಕ್ಕು, ನೇತ್ರ, ಜಿಹ್ವೆ,

ಘ್ರಾಣವೆಂಬಿವು ಪಂಚಜ್ಞಾನೇಂದ್ರಿಯಗಳು. ಮನ, ಬುದ್ಧಿ, ಚಿತ್ತ, ಅಹಂಕಾರವೆಂಬಿವು ಅಂತಃಕರಣ ಚತುಷ್ಟಯಗಳು. ಇಂತು ೨೪ ತತ್ವಗಳು ಕೂಡಿ ದೇಹವಾಯಿತ್ತು. ಅಂದೆಂತೆಂದೊಡೆ—

ಭೂತೈಶ್ಚ ಪಂಚಭಿಃ ಪ್ರಾಣೈಶ್ಚತುರ್ದಶಭಿರಿಂದ್ರಿಯಯ್ಯೈಃ |
ಚತುರ್ವಿಂಶತಿ ದೇಹಾನಿ ಸಾಂಖ್ಯಶಾಸ್ತ್ರವಿದೋವಿದುಃ ||

ಎಂದುದಾಗಿ ಇಂತೀ ೨೪ ತತ್ವಗಳು ಕೂಡಿ ಚೇಷ್ಟಿಸುವಾತನೇ ಜೀವಾತ್ಮನು. ಇಂತು ಪಂಚವಿಂಶತಿ ತತ್ವಗಳ ಉತ್ಪತ್ತಿಯು, ನಿಮ್ಮ ನೆನಹು ಮಾತ್ರದಿಂದಾದವಾಗಿ ಅವರ ಗುಣಧರ್ಮಕರ್ಮಗಳು ನಿಮಗಿಲ್ಲ ನೋಡಾ ಸಿಮ್ಮಲಿಗೆಯ ಚನ್ನರಾಮಾ.

ಪರಶಿವನ ಚಿತ್ಕಲೆ ಜಗತ್ತಿನ ಶಿರೋಮಧ್ಯಕ್ಕೆ ಬಿಂಬಿಸಿ, ಅದಕ್ಕೆ ಚೈತನ್ಯಗೊಳಿಸಿದಲ್ಲಿ ಅದೇ ಪರಮಾತ್ಮನಾಯಿತ್ತು. ಆ ಪರಮಾತ್ಮನೇ ಜಗತ್ತಿನ ಭ್ರೂಮಧ್ಯಕ್ಕೆ ಬಿಂಬಿಸಿದಲ್ಲಿ ಅದೇ ಅಂತರಾತ್ಮನಾಯಿತ್ತು. ಆ ಅಂತರಾತ್ಮನೇ ಜಗತ್ತಿನ ಹೃದಯಕ್ಕೆ ಬಿಂಬಿಸಿದಲ್ಲಿ, ಅದೇ ಜೀವಾತ್ಮನಾಯಿತ್ತು. ಆ ಜೀವಾತ್ಮನೇ ಘಟ, ಅಂತರಾತ್ಮನೇ ಪ್ರಾಣ, ಪರಮಾತ್ಮನೇ ಸರ್ವಸಾಕ್ಷಿಕ, ಆ ಸಾಕ್ಷಿಕನೇ ವಸ್ತು, ಆ ಪರವಸ್ತು ಈ ಜೀವಾಂತರಾದಿಗಳೆಂಬ ಅಂಗಪ್ರಾಣಕ್ಕೆ ಪಂಚವಿಂಶತಿ ತತ್ವಗಳೆಂಬ ಪಾಶವಂ ತೊಡಿಸಿ, ಅಂತದನೇ ಪಶುವೆನಿಸಿ, ತಾನದಕ್ಕೆ ಪತಿಯಾಗಿ ಅಲ್ಲಿ ನಾನಾ ವಿನೋದಂಗಳಂ ವಿನೋದಿಸಿತ್ತು. ಅದೆಂತೆಂದೊಡೆ—

ವಿದ್ಯುದ್ರೂಪಮಿವಾಕಾಶೇ ಪ್ರತ್ಯಕ್ಷಂ ಸರ್ವತೋ ಮುಖೈಃ |
ಶಿವತತ್ವಮಿದಂ ಪ್ರೋಕ್ತಂ ಸರ್ವ ತತ್ವಾಲಯಂ ವಿದುಃ ||
ಜೀವಾಂತರ ಪರಾತ್ಮೇತಿ ತ್ರಿಭಿರ್ನಾಮಭಿರುಚ್ಯತೇ |
ಆತ್ಮಸ್ವಜೀವ ಸಂಬಂಧಶ್ಚಾಂತರಃ ಪ್ರಾಣ ಸಂಯುತಃ ||
ಪರಮಾತ್ಮಾ ತತ್ವಸಂಯುಕ್ತಃ ಆತ್ಮತ್ರಯಮಿದಂ ಶೃಣು |

ಎಂದುದಾಗಿ ಬಸವಪ್ರಿಯ ಕೂಡಲಸಂಗಯ್ಯನಿಂತೀ ಪರಿಯಲ್ಲಿ ಅಡಗಿರ್ದ ಸರ್ವ ಜಗತ್ತನ್ನು.

ಪರಮಾತ್ಮನ ಪ್ರತಿಲಹರಿಯಿಂದ ಅಂತರಾತ್ಮನ ಉತ್ಪತ್ತಿಯು. ಅಂತರಾತ್ಮನ ಪ್ರತಿಲಹರಿಯಿಂದ ಜೀವಾತ್ಮನ ಉತ್ಪತ್ತಿಯು. ಇಂತೀ

ಜೀವಾಂತರಾದಿಗಳು ಅಂಗಪ್ರಾಣದಲ್ಲಿ ಒಂದೇಯೆನಿಸಿದರೂ ಆ ಒಂದೆಂಬ ತಾಮಸಜೀವನು ಅಂಗನೆಯ ಸಂಗ ಮೊದಲಾದ ನಾನಾ ದುಃಖಗಳಲ್ಲಿ ನೋವುತ್ತ ನಾನಾ ಯೋನಿಗಳಲ್ಲಿ ಜನಿಸುತ್ತ, ರೌರವ ನರಕದಲ್ಲೇಳುತ್ತ ಮುಳುಗುತ್ತಲಿಹನು. ಆ ಪರಮಾತ್ಮನು ಜೀವಾತ್ಮನ ಶಿಖಾಮಧ್ಯದಲ್ಲಿದ್ದು, ನಾಹಂ ಎನ್ನದೆ ಸೋಹಂ ಎನ್ನುತ್ತ ನಮ್ಮ ಸಿಮ್ಮಲಿಗೆಯ ಚನ್ನರಾಮ ನೆಂಬ ಅಖಂಡಲಿಂಗದೊಳಗೆ ನಿತ್ಯತ್ವನೈದುತ್ತ, ಎಡೆದೆರಹಿಲ್ಲದೆ ಪರಮ ಸಂತೋಷದೊಳಗಿದ್ದಿತ್ತು.

ನೂರೊಂದರ ಗುರಿಯು ಲಿಂಗಾಂಗ ಸಾಮರಸ್ಯವು. ಈ ಸಾಮ ರಸ್ಯ ಜ್ಞಾನಕ್ಕೆ ಅಂಗಾನುಭವವೂ ಲಿಂಗಾನುಭವವೂ ಅತ್ಯವಶ್ಯವು. ಅಂಗಾನುಭವದಲ್ಲಿ ಪಂಚವಿಂಶತಿ ತತ್ವಜ್ಞಾನವೂ ಆತ್ಮಜ್ಞಾನವೂ ಅಡಕ ವಾಗಿವೆ. ಅಂಗಾನುಭವವಿಗೆ ಲಿಂಗಾನುಭವಿಯಾಗುವ ನಿಲುಕಡೆಯು ದರ್ಪಣದ್ವಾರಾ ತನ್ನ ತಾನರಿವಂತೆ ಸಂಸಿದ್ಧವು. ಕಾರಣ ಪಂಚೀಕರಣದ ಉತ್ಪತ್ತಿಗೂ ಷಟ್‌ಸ್ಥಲಗಳ ಉತ್ಪತ್ತಿಗೂ ನಿಕಟ ಸಂಬಂಧವು. ಆದ್ದ ರಿಂದ ನೂರೊಂದರ ಮಹಾದ್ವಾರದ ಪ್ರವೇಶಕ್ಕೆ ಪಂಚೀಕರಣವೂ ಸಾಧನ ವೆಂದು ಹೇಳಲಡ್ಡಿಯಿಲ್ಲ.

ಆಕಾಶ ತತ್ವದ ಅರ್ಧ ಭಾಗವು ಜ್ಞಾತೃವದಾಗಿತ್ತು. ಉಳಿದ ಅರ್ಧದ ೪ ಭಾಗಗಳು ವಾಯು, ತೇಜ, ಆಪ್, ಪೃಥಿವಿ ತತ್ವಗಳಲ್ಲಿ ಕ್ರಮದಿಂದ ಕೂಡಲು ಮನ, ಬುದ್ಧಿ, ಚಿತ್ತ, ಅಹಂಕಾರಗಳಾದವು. ಇದರಂತೆ ವಾಯು ತತ್ವದ ಅರ್ಧ ಭಾಗವು ಪ್ರಾಣವದಾಯಿತು. ಅದರ ಉಳಿದ ಅರ್ಧಭಾಗದ ೪ ಭಾಗಗಳು ಆಕಾಶ, ತೇಜ, ಆಪ್, ಪೃಥಿವಿ ತತ್ವಗಳಲ್ಲಿ ಕ್ರಮವಾಗಿ ಕೂಡಿ, ಉದಾನ, ಸಮಾನ, ವ್ಯಾನ, ಅಪಾನ ಗಳಾದವು. ತೇಜ ತತ್ವದ ಅರ್ಧಭಾಗವು ನೇತ್ರವದಾಯಿತು. ಉಳಿದ ಅರ್ಧಭಾಗದ ೪ ಭಾಗಗಳು ಆಕಾಶ, ವಾಯು, ಆಪ್ ಪೃಥಿವಿ ತತ್ವ ಗಳಲ್ಲಿ ಕ್ರಮದಿಂದ ಕೂಡಿ ಕರ್ಣ, ತ್ವಕ್ಕು, ರಸನೆ, ನಾಸಿಕೇಂದ್ರಿಯ ಗಳುಂಟಾದವು. ಅಪ್ಪುವಿನ ಅರ್ಧಭಾಗವು ರಸವಾಯಿತು. ಉಳಿದ ಅರ್ಧ ಭಾಗದ ೪ ಭಾಗವು ಆಕಾಶ, ವಾಯು, ತೇಜ, ಪೃಥಿವಿ ತತ್ವಗಳೊಳು ಕ್ರಮದಿಂದ ಕೂಡಿ ಶಬ್ದ, ಸ್ಪರ್ಶ, ರೂಪು, ಗಂಧಗಳಾದವು. ಪೃಥ ವಿಯ ಅರ್ಧಭಾಗವು ಗುದವಾಯಿತು. ಉಳಿದ ಅರ್ಧಭಾಗದ ೪ ಭಾಗ

ಗಳು ಆಕಾಶ, ವಾಯು, ತೇಜ, ಅಪ್‌ಗಳೊಡನೆ ಕ್ರಮದಿಂದ ಕೂಡಿ ವಾಕ್, ಪಾಣಿ, ಪಾದ, ಗುಹ್ಯಗಳಾದವು.

ಇದೇ ಪ್ರಕಾರ ಅಂಗಸ್ಥಲಗಳಾದ ತ್ಯಾಗಾಂಗ, ಭೋಗಾಂಗ, ಯೋಗಾಂಗಗಳಲ್ಲಿ ಒಂದೊಂದರೊಳು ಎರಡು ಭಾಗವಾಗಿ ಭಕ್ತ, ಮಾಹೇಶ, ಪ್ರಸಾದಿ, ಪ್ರಾಣಲಿಂಗಿ, ಶರಣ, ಐಕ್ಯಗಳೆಂಬ ಷಟ್‌ಸ್ಥಲಗಳಾಗುವವು. ಬಳಿಕ ಈ ಪ್ರತಿಯೊಂದು ಸ್ಥಲದಲ್ಲಿ ಭಕ್ತತ್ರಯ, ಮಾಹೇಶತ್ರಯ, ಪ್ರಸಾದಿ ತ್ರಯ, ಪ್ರಾಣಲಿಂಗಿತ್ರಯ, ಶರಣತ್ರಯ, ಐಕ್ಯತ್ರಯಗಳೆಂಬ ೧೮ ಅಂಗ ಸ್ಥಲಗಳಾದವು. ಈ ಅಂಗಸ್ಥಲಗಳಂತೆಯೇ ೧೮ ಲಿಂಗಸ್ಥಳಗಳಾಗಿವೆ. ಈ ೧೮, ೧೮ ಅಂಗಲಿಂಗಗಳ ಸಾಮರಸ್ಯವೇ ನೂರೊಂದರ ಧ್ಯೇಯವು. ಈ ವಿವರವನ್ನು ಏಕೋತ್ತರ ಸ್ಥಲಗ್ರಂಥದ ಆರಂಭದ ಪುಟದಲ್ಲಿ ನೋಡ ಬಹುದು.

ಭ್ರಮರ, ಮತ್ಸ್ಯ, ಪತಂಗ, ಗಜ, ಎರಳೆಗಳು ಕ್ರಮದಿಂದ ಸೌರಭ, ರುಚಿ, ರೂಪು' ಸ್ಪರ್ಶ, ಶಬ್ದಗಳ ಮೋಹಕ್ಕೆ ಬಿದ್ದು ಕೆಡು ವಂತೆ, ಈ ಜೀವನು ಸೌರಭಚಕ್ರ, ರುಚಿಚಕ್ರ, ರೂಪುಚಕ್ರ, ಸ್ಪರ್ಶ ಚಕ್ರ, ಶಬ್ದಚಕ್ರಗಳೊಳು ಸಿಲುಕಿ, ಗಾಸಿಯಾಗುತ್ತಲಿರುವನು. ಇವು ಗಳೇ ೨೧೬ ಸಕೀಲುಗಳ ನವಚಕ್ರಗಳಲ್ಲಿ ಸಮಾವೇಶವಾಗಿವೆ. ಇವುಗಳ ತೋರಿಕೆಯ ಸ್ಥಾನಗಳೇ ಗುದ, ಗುಹ್ಯ, ನಾಭಿ, ಹೃದಯ, ಕಂಠ, ಭ್ರೂಮಧ್ಯ, ಬ್ರಹ್ಮ, ಶಿಖಾ, ಪಶ್ಚಿಮಗಳಾಗಿವೆ. ಈ ನವಚಕ್ರದ ಸ್ಥಲ ಗಳೇ ಅಂಗನ ೯ ಸ್ಥಾನಗಳು. ಅಂದಬಳಿಕ, ಕರ್ಮೇಂದ್ರಿಯಗಳೂ ಧರ್ಮೇಂದ್ರಿಯಗಳೂ ಪ್ರಾಣಪಂಚಕಗಳೂ ಕರಣಚತುಷ್ಟಯಗಳೂ ವಹಿ ಸಿರುವ ತಮ್ಮ ಅಂಗಗುಣಗಳನ್ನು ಬದಲಿಸಿ ಲಿಂಗಗುಣಗಳನ್ನಾಗಿ ಮಾಡುವ ಸಾಧನವೇ ಷಟ್‌ಸ್ಥಲಗಳ ಹೆಗ್ಗುರಿಯೆಂದು ತಿಳಿಯದೆ ಇರದು. ಏಕೀ ಕರಣ ಪದ್ಧತಿಗನುಸರಿಸಿ ಎಲ್ಲ ತತ್ವಗಳಿಗೆ ಪೃಥ್ವಿ ತತ್ವವು ಆಧಾರವು ಹೇಗೋ, ಹಾಗೆ ಎಲ್ಲ ಸ್ಥಳಗಳಿಗೂ ಭಕ್ತಸ್ಥಲವು ಆಧಾರವಾಗಿದೆ. ಪೃಥ್ವಿ ತತ್ವವು ಉಳಿದ ತತ್ವಗಳೊಡನೆ ಬೆರೆತು ಅಹಂಕಾರ ಅಪಾನ ಗಂಧ ಗುದೇಂದ್ರಿಯಗಳಾದಂತೆ ಭಕ್ತನ ಐಕ್ಯ, ಭಕ್ತನ ಶರಣ, ಭಕ್ತನ ಪ್ರಾಣಲಿಂಗಿ, ಭಕ್ತನ ಪ್ರಸಾದಿ, ಭಕ್ತನ ಮಹೇಶ, ಭಕ್ತನ ಭಕ್ತಸ್ಥಲ ಗಳಾಗಿವೆ. ಹೀಗೆ ಒಂದರೊಳಗೊಂದು ಮಿಶ್ರವಾಗಿ ೩೬ ಅಂಗಸ್ಥಲಗಳೂ

೩೬ ಲಿಂಗಸ್ಥಲಗಳೂ ಉಂಟಾಗಿವೆ. ಒಟ್ಟಿನಲ್ಲಿ ೧ ಕ್ಕೆ ೩, ೩ ಕ್ಕೆ ೬, ೬ ಕ್ಕೆ ೩೬, ೩೬ ಕ್ಕೆ ೨೧೬ ಸಕೀಲಗಳುಂಟಾಗಿವೆ. ಇವುಗಳ ವಿವರವನ್ನು ಶಿವಾನುಭವ ಶಬ್ದಕೋಶದಲ್ಲಿ ನೋಡಬಹುದು. ಕಾರಣ ಸರ್ವಕ್ಕೂ ಆಧಾರವಾದ ಭಕ್ತನಿಗೆ ಕಲೆ-ಸಾದಾಖ್ಯಗಳೂ ಸ್ಥಲ-ಚಕ್ರಗಳೂ ಅಂಗಲಿಂಗ ಗಳೂ ಶಕ್ತಿ-ಭಕ್ತಿಗಳೂ ಅಧಿದೇವತೆ-ಪೂಜಾರಿಗಳೂ ತನು-ಲಕ್ಷಣಗಳೂ ಆತ್ಮ-ಸಂಜ್ಞೆಗಳೂ ಪ್ರಣವು-ದಿಕ್ಕುಗಳೂ ವೇದ-ನಾದಗಳೂ ವರ್ಣ-ಆಕೃತಿಗಳೂ ಹಸ್ತ-ಮುಖಗಳ ಪದಾರ್ಥ-ಪ್ರಸಾದಗಳೂ ಗೊತ್ತಾಗಿ ಸ್ವತ್ತಾಗಿ ನೆತ್ತಿಯೊಳು ಒತ್ತರಿಸುತ್ತಿರಬೇಕು. ಮತ್ತೂ ತಾನು ಅವುಗಳ ಪರಸ್ಪರ ಸಂಬಂಧಗಳನ್ನೂ ಅರಿತಿರಬೇಕು.

ಸಚ್ಚಿದಾನಂದ ನಿತ್ಯಪರಿಪೂರ್ಣನೂ, ಅತ್ಯತಿಷ್ಠದ್ದಶಾಂಗುಲನೂ, ಅದ್ವಿತೀಯನೂ, ಪರಬ್ರಹ್ಮನೂ, ನಿರ್ಮಲನೂ, ಮಹದಾದಿ ತತ್ವಗಳಿಗೆ ನೆಲೆಯೂ, ಪ್ರಕೃತಿ ಪುರುಷಾತ್ಮಕನೂ, ವಿಶ್ವಕ್ಕೆಲ್ಲ ಲಯ ಜನ್ಮಭೂಮಿಯೂ ಆದ ಪರಶಿವನ ನಿಲುವಿಗೆ ಶಿವಶರಣರ ಪರಿಭಾಷೆಯಲ್ಲಿ ಸ್ಥಲವೆಂದು ಹೇಳಲಾಗಿದೆ.

ಮಣಿಗಳ ಸೂತ್ರದಂತೆ ತ್ರಿಣಯನ ನೀನಿಪ್ಪೆಯ್ಯಾ. ತನು ಭಿನ್ನ, ಆತ್ಮನೊಬ್ಬನೇ. ಅಣುರೇಣು ಮಧ್ಯದೊಳು ಗುಣಭರಿತ ನೀನೆಂದು, ಮಣಿಯುತಿಪ್ಪೆನಯ್ಯ ರಾಮನಾಥಾ.

ಈ ಜಗತ್ತು ನಾಮ ರೂಪು ಕ್ರಿಯಾದಿಗಳಿಂದ ಕೂಡಿದೆ. ಜಗತ್ತಿನಲ್ಲಿದ್ದು ನಿವೃತ್ತಿ ಮಾರ್ಗವನ್ನನುಸರಿಸಿದ ಮುಮುಕ್ಷುವು ತನ್ನ ಮುಂದೆ ನಿಂದ ಚರಾಚರಾತ್ಮಕಗಳ ನಾಮ ರೂಪು ಕ್ರಿಯೆಗಳನ್ನು ಮನೋಭಾವ ಗಳಿಂದ ಕಿತ್ತೊಗೆದು, ಸಕಲವೂ ಆತ್ಮನೆಂಬ ಭಾವವನ್ನು ಬಲಿಸುತ್ತ ಹೋಗಬೇಕು. ಈ ಆತ್ಮಭಾವವು ಬಲಿಯುತ್ತ ಹೋದಂತೆ, ಪರಮಾತ್ಮ ಭಾವವು ಸಹಜವೇ ಉಂಟಾಗುವದು. ಈ ಪ್ರಕಾರ ದುಡಿಮೆಯಿಂದ ಶಿವಮಯ ಜಗತ್ತೆಂಬ ಭಾವವು ದೃಢಗೊಳ್ಳುವದು. ಇದನ್ನರಿತು ಸದ್ಗುರುವು ಶಿಷ್ಯನ ತನುವಿನಲ್ಲಿ ಲಿಂಗಸಾಹಿತ್ಯವನ್ನು ಮಾಡುತ್ತ ಅಷ್ಟಾವರಣಗಳನ್ನು ಅಷ್ಟಾಂಗದಲ್ಲಿ ನೆಲೆಗೊಳಿಸಿ, ಸರ್ವಾಂಗ ಲಿಂಗಮಯ ವಾಗುವ ದೀಕ್ಷಾತ್ರಯಗಳನ್ನುಂಟು ಮಾಡುವನು. ಲೋಹಚುಂಬಕದಿಂದ ಸೂಜಿಯು ಆಕರ್ಷಿಸಲ್ಪಡುವಂತೆ, ಹಾವಿನ ಕಡಿತದಿಂದ ಶರೀರವು ವಿಷ

ಮಯವಾಗುವಂತೆ, ಇಂಜೆಕ್ಶನ್ನದಿಂದ ಔಷಧವು ಶರೀರವನ್ನೆಲ್ಲ ವ್ಯಾಪಿಸಿ, ರೋಗಜಂತುಗಳನ್ನು ನಾಶಪಡಿಸುವಂತೆ, ಶಿಷ್ಯನ ತನುಮನ ಭಾವಗಳಲ್ಲಿ ಸ್ಥಿತ್ಯಂತರವಾಗುವದು ಅರಿದಲ್ಲ.

ನೆನಹಿನಿಂದೀ ವಿಶ್ವಕಾರಣ । ಮೆನಿಪ ವಿಶ್ವಾತೀತವಾಗಿಹ ॥
ಮನು ಮುನೀಶ್ವರರಿಂಗೆ ನಿಲುಕದೆ ಗುರುವು ತೋರಿದೊಡೆ ॥
ತನುಮನೋಭಾವದಲಿ ತುಂಬಿಹ । ಘನನುಹಾಚಿಜ್ಯೋತಿಯದು ತಾ
ನನಘ ಭಕ್ತನ ಹಸ್ತನಳಿನದೊಳೆಸೆವ ಸೈಪೆನಿತೋ ॥ ೧ ॥

ವೈದ್ಯನು ತನ್ನ ಔಷಧೋಪಚಾರದಿಂದ ರೋಗಿಯ ಬೇನೆಯನ್ನು ಕಳಿದರೂ ಸಜ್ಜೀವನಿಗೆ ಆ ನಿರೋಗತ್ವವನ್ನು ಉಳಿಸಿಕೊಳ್ಳುವದಕ್ಕೆ ತಕ್ಕ ಆಹಾರ-ವಿಹಾರಗಳೂ ವ್ಯಾಯಾಮವೂ ಆಯುಷ್ಯವಿರುವ ಮಟ್ಟಿಗೆ ಬೇಕೇ ಬೇಕು. ಮತ್ತು ತನ್ನ ಸತ್ಕಾಯಕಗಳಾದ ಷಟ್ಕರ್ಮಗಳಲ್ಲಿ ನೈತಿಕ ಬೌದ್ಧಿಕ ಶಕ್ತಿಗಳು ಬಲಪಡುವಂತೆ ಆಚರಿಸಬೇಕು. ಈ ಪ್ರಕಾರ ತನ್ನ ಕರ್ತವ್ಯಕರ್ಮಗಳ ಅನುಭವದಿಂದ ತನ್ನ ಜೀವನ ಕ್ರಮದ ಜ್ಞಾನವು ಬಲಗೊಳ್ಳುತ್ತ ಹೋಗುವದು. ಇದರಂತೆ ಪಾರಮಾರ್ಥಿಕ ಪ್ರಪಂಚದಲ್ಲಿ ಆಚಾರವೂ ಅನುಭಾವವೂ ಭಕ್ತಿಯೂ ನೆಲೆಗೊಳ್ಳುತ್ತ ಹೋದಂತೆ, ಲಿಂಗಾಂಗ ಸಾಮರಸ್ಯ ಜ್ಞಾನವು ಬಲಪಡುತ್ತ ಹೋಗುವದು. ಅಷ್ಟಾಂಗ ಕರ್ಮಯೋಗಿಗಳು ಸಂಸಾರ ತ್ಯಜಿಸಿ ಗುಹೆ ಗಂಹ್ವರಗಳಲ್ಲಿ ಏಕಾಂಗಿ ಯಾಗಿರುವಂತೆ ಶಿವಯೋಗಕ್ಕೆ (ಪರಮ ಯೋಗಕ್ಕೆ) ಇರಬೇಕಿಲ್ಲ. ಸಂಸಾರದಲ್ಲಿದ್ದು ಇಹಪರಗಳನ್ನು ಸಾಧಿಸಲು ಈ ವಿಶಿಷ್ಟಾದ್ವೈತ ಷಟ್ ಸ್ಥಲ ಮಾರ್ಗವು ಸುಲಭ ಸಾಧ್ಯವಿದೆ. ಅಂತೆಯೇ ಪ್ರಾಚೀನ ಪುರಾ ತನರೂ ನೂತನ ಪುರಾತನರೂ, ಸತ್ಕಾಯಕ ಸದ್ಭಕ್ತಿ ಸತ್ಕ್ರಿಯೆ ಸದಾ ಚಾರ ಸಮ್ಯಜ್ಞಾನಗಳಿಂದ ನಿರ್ದೇಹಿಗಳಾಗಿ ನಿತ್ಯ ನಿರ್ಮಲರಾಗಿ, ನಿಜಾ ನಂದ ಪದವಿಯ ಪಡೆದು ತಮ್ಮ ನಡೆ-ನುಡಿಗಳನ್ನೂ ಅನುಭವಾಮೃತ ವನ್ನೂ ಸುಲಭವಹ ಕನ್ನಡ ವಚನ ವಾಙ್ಮಯ ಭಾಂಡಾರದಲ್ಲಿ ಆಚಂದ್ರಾರ್ಕ ವಾಗಿ ಇರಿಸಿದ್ದಾರೆ. ಕಾರಣ ದೀಕ್ಷಾತ್ರಯಗಳನ್ನು ಹೊಂದಿದ ಭಕ್ತನು ಅಷ್ಟಾವರಣವೇ ಅಂಗವಾಗಿ ಪಂಚಾಚಾರವೇ ಪ್ರಾಣವಾಗಿ ಏಕಲಿಂಗ ನೈಷ್ಠಿಕನಾಗಲು ಗುರುಸೇವೆ, ಲಿಂಗಪೂಜೆ, ಜಂಗಮದಾಸೋಹ, ಪಾದೋ ದಕ ಪ್ರಸಾದ ಸೇವನೆ, ಸದ್ಭಕ್ತರ ಸಂಗ, ಸ್ವಾನುಭಾವಗಳು ಅವಶ್ಯ.

ತನು ಕೊರಗಿ ಸತ್ಕಾಯಕವನ್ನೂ ಮನವೆಚ್ಚಿ ಮಂತ್ರಮೂರ್ತಿಯನ್ನೂ ಭಾವಬಿಚ್ಚದೆ ಜ್ಞಾನಜಂಗಮಾರ್ಚನೆಯನ್ನೂ ಬಹಿರಷ್ಟಾವರಣ ಸ್ಥೂಲಾಷ್ಟಾವರಣಗಳಂ ಗುರುಲಿಂಗಜಂಗಮರ ಮಾರ್ಗ ಕ್ರಿಯೆಗಳಂ ಸಾಗಿಸುವದು ಸದ್ಭಕ್ತನ ಆದ್ಯ ಕರ್ತವ್ಯವು. ಇದರಲ್ಲಿ ಜಂಗಮದಾಸೋಹವು ಮುಖ್ಯವಾದದ್ದೆಂದು ಶಿವಶರಣರು ತಮ್ಮ ನುಡಿಯಿಂದ ಸಿದ್ಧಗೊಳಿಸಿದ್ದಾರೆ.

ಸದ್ಭಕ್ತನು ಶ್ರೀಗುರುಲಿಂಗಜಂಗಮಕ್ಕೆ ತನುಮನಧನ ಪ್ರಾಣಾದಿಗಳನ್ನರ್ಪಿಸಿ ಸಕಲ ಸಾಕಾರ ದ್ರವ್ಯಾದಿಗಳೆಲ್ಲವೂ ಶಿವನ ಸೊಮ್ಮಾಗಿ. ಅದೆಂತೆಂದೊಡೆ—

ಋಗ್ವೇದದಲ್ಲಿ

ಶಿವೋ ದಾತಾ ಶಿವೋ ಭೋಕ್ತಾ ಶಿವಃ ಸರ್ವಮಿದಂ ಜಗತ್ ।
ಶಿವೋ ಯಜತಿ ಸರ್ವಸ್ವಂ ಯಃ ಶಿವಃ ಸೋಽಹಮೇವಚ ॥

ಎಂದುದಾಗಿ ಇದನರಿತು ದಾತೃಭೋಕ್ತಾ ಶಿವನೆಂದು ಅಹಂ ಮಮತೆಗಳಡಗೆ ಸ್ವಾನುಭವವಳಪಟ್ಟು ಬಾಗಿಲಗಾಹಿಯಾಗಿ ದಾಸೋಹ ಮಾಡುವದು ಇದು ಉತ್ತಮ ಕ್ರಿಯೆಯು.

ಇದು ಲಿಂಗದೊಡನೆ ಹುಟ್ಟಿ, ಲಿಂಗದೊಡನೆ ಬೆಳೆದು, ಲಿಂಗದೊಡನೆ ಲೀಯವಹ ಮಹಾಲಿಂಗಾಂಗಿಗಲ್ಲದೆ ಸಾಧ್ಯವಾಗದು. ಇದು ಅಳವಡದಿರ್ದಡೆ ಸದ್ಭಕ್ತನು ಶ್ರೀಗುರುಲಿಂಗಜಂಗಮಕ್ಕೆ ತನುಮನಧನ ಪ್ರಾಣಮುಂತಾಗಿ, ಹೊನ್ನು ಹೆಣ್ಣು ಮಣ್ಣಿನಲ್ಲಿ ವಂಚನೆಯಿಲ್ಲದೆ ಸದ್ಭಕ್ತಿಯಿಂ ದಾಸೋಹ ಮಾಡುವದು. ಇದು ಮಧ್ಯಮ ಕ್ರಿಯೆಯು. ಇದು ಸಾಮಾನ್ಯರಿಗಳವಡದು. ಇದು ಅಸಾಧ್ಯವು.

ಇದು ಅಳವಡದಿರ್ದಡೆ ಸದ್ಭಕ್ತನು ತನ್ನ ತನುಮನಧನ ಪ್ರಾಣಂಗಳು ಬಳಲಿ, ತನ್ನ ಪ್ರಿಯವಾದ ಪುತ್ರ ಮಿತ್ರ ಕಳತ್ರಾದಿಗಳಿಗೆ ಹೇಗೆ ಸತ್ಕೃದ್ರವ್ಯಂಗಳಂ ಕೊಡುವನೋ, ಹಾಗಾದರೂ ಶ್ರೀಗುರುಲಿಂಗಜಂಗಮಕ್ಕೆ ಸ್ನೇಹದಿಂ ದಾಸೋಹವ ಮಾಡುವದು, ಇದು ಕನಿಷ್ಟ ಕ್ರಿಯೆಯು. ಇದು ತಾನು ಮಹಾಜ್ಞಾನ ಪುರುಷರಿಗಲ್ಲದಳವಡದು.

ಇದು ಅಳವಡದಿರ್ದಡೆ, ಶ್ರೀಗುರುಲಿಂಗಜಂಗಮಕ್ಕೆ ಶಕ್ತ್ಯಾನುಸಾರದಿಂ ಮಾಡುವದು, ಇದು ನಿಕೃಷ್ಟ ಕ್ರಿಯೆಯು.

ಶ್ರಯತಾಂ ಧರ್ಮ ಸರ್ವತ್ರ ಶ್ರುತ್ವಾಚೈವಾವಧಾರ್ಯತಾಂ ।
ಆತ್ಮನಃ ಪ್ರತಿಕೂಲಂಚ ಪರೀಕ್ಷ್ಯಾನಂದ ಮಾಚರೇತ್ ॥

ಎಂದುದಾಗಿ ಇದನರಿತು ತನ್ನಂದೆ ಭಾವಿಸಿದಡೆಯಾದರೆಯೂ, ದಾಸೋಹವ ಮಾಡಿ ಪ್ರಸನ್ನತೆಯ ಪಡೆವುದೇ ಸದ್ಭಕ್ತಂಗೆ ಪಥವು ನೋಡಾ. ಇಂತಪ್ಪ ಉತ್ತಮ, ಮಧ್ಯಮ, ಕನಿಷ್ಟ, ನಿಕೃಷ್ಟವೆಂಬ ಈ ನಾಲ್ಕು ಪರ್ಯಾಯದಲ್ಲಾದಡೆಯೂ ಒಂದು ಪರ್ಯಾಯದಲ್ಲಿ ಭಾವಿಸಿಕೊಂಡು, ತನುಮನಧನವನಿತ್ತು, ಸ್ನೇಹದಿಂದ ದಾಸೋಹವ ಮಾಡಿ ಪ್ರಸಾದವ ಪಡೆದು ಭೋಗಿಸಿ ಭಕ್ತರಾಗಬೇಕು. ಈ ಪ್ರಕಾರದಿಂದಲ್ಲದೆ ಮುಕ್ತಿಯಿಲ್ಲ. ಈ ಚತುರ್ವಿಧ ಕ್ರಿಯೆಗಳೊಳಗೆ ಆವುದನೂ ಮಾಡದೆ ದುಷ್ಕ್ರಿಯೆಯಲ್ಲಿ ವರ್ತಿಸುತ್ತ, ದುರ್ಭಾವದಿಂದ ಗುರುಲಿಂಗಜಂಗಮನ-ವಿಶ್ವಾಸಮಂ ಮಾಡಿ ದಾಸೋಹವಿಲ್ಲದೆ ತನ್ನ ಒಡಲನೆ ಹೊರೆದಡೆ ಅವನು ಸದ್ಭಕ್ತರೊಳು ಸಲ್ಲ. ಅವನಿಗೆ ಪ್ರಸಾದವಿಲ್ಲ. ಪ್ರಸಾದವಿಲ್ಲದಾಗಿ ಮುಕ್ತಿಯಿಲ್ಲ. ಅವನು ಉಭಯ ಭ್ರಷ್ಟ. ಇದನರಿತು ತನ್ನಂತೆ ಭಾವಿಸಿ ಶ್ರೀಗುರುಲಿಂಗಜಂಗಮಕ್ಕೆ ವಿಶ್ವಾಸದಿಂ ದಾಸೋಹವ ಮಾಡಲು ಇಹಸಿದ್ಧಿ, ಪರಸಿದ್ಧಿ, ಸರ್ವಸಿದ್ಧಿಯಯ್ಯಾ ಉರಿಲಿಂಗಪೆದ್ದಿಪ್ರಿಯ ವಿಶ್ವೇಶ್ವರಾ.

ಸದಾಚಾರದಲ್ಲಿ ನಡೆವುದು, ಶಿವನಲ್ಲಿ ಭಕ್ತಿಯುತನಾಗಿರುವದು, ಲಿಂಗ ಲಿಂಗಜಂಗಮುವನೊಂದೇಯಾಗಿ ಕಾಂಬುದು, ಶಿವಲಾಂಛನಕ್ಕೆ ವಂದಿಸುವುದು. ಇದು ಭಕ್ತಸ್ಥಲ.

ಪರಸ್ತ್ರೀ, ಪರಧನ ಬಿಟ್ಟು ಶುದ್ಧನಾಗಿ ಲಿಂಗನಿಷ್ಠೆಯುಳ್ಳವನಾಗಿರುವದು ಮಹೇಶಸ್ಥಲ. ಲಿಂಗಕ್ಕೆ ಸಮರ್ಪಿಸಿದ ಪ್ರಸಾದವ ಸ್ವಾದಿಸಿ ಭುಂಜಿಸುವದು ಮತ್ತು ಲಿಂಗದ ನೆನಹಿನಿಂದಲೇ ಭುಂಜಿಸುವದು ಪ್ರಸಾದಿಸ್ಥಲವು.

ಪ್ರಾಣದ ಗುಣವಳಿದು ಲಿಂಗದಲ್ಲಿ ನೆನಹು ಸಂಬಂಧಿಸಿ, ಸುಖದುಃಖ ಭಯವಿಲ್ಲದಿಹುದೇ ಪ್ರಾಣಲಿಂಗಿಸ್ಥಲವು.

ಲಿಂಗವೇ ಪತಿ, ತಾನೇ ಸತಿಯೆಂಬ ಭಾವದಲ್ಲಿ ಆಚರಿಸುವದು ಪಂಚೇಂದ್ರಿಯ ಗುಣಗಳನ್ನು ತಾನು ಬಯಸದಿಹುದೇ ಶರಣಸ್ಥಲವು.

ಕ್ಷುತ್, ಪಿಪಾಸೆ, ಶೋಕ, ಮೋಹ, ಜರಾಮರಣಗಳೆಂಬ ಷಡೂರ್ಮಿಗಳಿಲ್ಲದಿಹ, ಅಷ್ಟವಿಧಾರ್ಚನೆಯಿಲ್ಲದಿಹ ಭಾವರಹಿತನಾಗಿರುವದೀಗ ಐಕ್ಯಸ್ಥಲವು.

ಭಕ್ತನಾದರೆ ತನುಮನಧನದಾಶೆ ಅಳಿದಿರಬೇಕು. ಮಹೇಶನಾದರೆ ಪರಧನ ಪರಚಿಂತೆ, ಪರಾಂಗನೆಯರೆಡೆಯಳಿದುಳಿದಿರಬೇಕು. ಪ್ರಸಾದಿಯಾದರೆ ಸುಖರುಚಿಯ ಅವಗ್ರಹಮಂ ಮರೆದು ಪ್ರಸಾದ ಘಟವಳಿಯದೆ ಉಳಿದಿರಬೇಕು. ಪ್ರಾಣಲಿಂಗಿಯಾದರೆ ಘಟದಾಸೆಯಂ ತೊರೆದು ಲಿಂಗದೊಳು ಬೆರೆಸಿ ಬೇರಿಲ್ಲದಿರಬೇಕು. ಶರಣನಾದರೆ ಸತಿರತಿಯ ಸಂಗವಳಿದು ತಾನು ಲಿಂಗಕ್ಕೆ ಸತಿಯಾಗಿರಬೇಕು. ಲಿಂಗೈಕ್ಯನಾದರೆ ಅಪ್ಯಾಯನದೆಡೆಯಡಗಿ ಸುಖದುಃಖಮಂ ತಾಳದೆ ನಿಭ್ರಾಂತನಾಗಿರಬೇಕು. ಮಾತಿನ ಮಾಲೆಯಲ್ಲಿ ಸಿಕ್ಕುವದೇ ಶಿವಾಚಾರ? ಇಂತೀ ಷಟ್‌ಸ್ಥಲವಾರಿಗೂ ಅಳವಡದು. ಸೊಡ್ಡಳದೇವನು ಷಟ್‌ಸ್ಥಲ ಭಕ್ತಿಯನು ಬಸವಣ್ಣಂಗೆ ಮೂರ್ತಿಯಾಗಿ ಮಾಡಿದನು.

ಕಿಂಕುರ್ವಾಣತೆಯಿಂದ ಜಂಗಮವೇ ಲಿಂಗವೆಂದರಿತು ಮಾಡುವಲ್ಲಿ ಭಕ್ತ. ನಿಟ್ಟೆನಿಬ್ಬೆರಿಸಿ, ಗಟ್ಟಿಗೊಂಡು ಅಭಿಲಾಷೆ ಸಮನಿಸದ ಪರಿಚ್ಛೇದ ಬುದ್ಧಿಯುಳ್ಳಲ್ಲಿ ಮಾಹೇಶ್ವರ. ಅನರ್ಪಿತವ ಸಮನಿಸದೆ, ಬಂದುದು ಕಾಯದ ಕರಣದ ಕೈಯಲ್ಲಿ ಕೊಟ್ಟು ಲಿಂಗಸಹಿತ ಭೋಗಿಸುವಲ್ಲಿ ಪ್ರಸಾದಿ. ಪ್ರಾಣಕ್ಕೆ ಪ್ರಾಣವಾಗಿರ್ದುದನು ಕಾಲಸ್ಥಿತಿಯರಿದು ಎಚ್ಚರಿಕೆ ಗುಂದದಿಪ್ಪಲ್ಲಿ ಪ್ರಾಣಲಿಂಗಿ. ತನಗೆ ಲಿಂಗವಾಗಿ, ಲಿಂಗಕ್ಕೆ ತಾನಾಗಿ ಬೆಚ್ಚು ಬೇರಿಲ್ಲದಿರ್ದೊಡೆ ಶರಣ. ಸದಾಚಾರದೊಳು ಬಂದನುಭಾವವನು ಮೀರಿ ಹೆಸರಡಗಿದ ಸುಖವಡುವವ ಲಿಂಗೈಕ್ಯ. ಇದುಕಾರಣ ಕೂಡಲಚನ್ನಸಂಗಯ್ಯನಲ್ಲಿ ಬಸವಣ್ಣಂಗಲ್ಲದೆ ಷಟ್‌ಸ್ಥಲ ಅಪೂರ್ವ.

ಹೊಸ ಮದುವೆಯ ಹಸಿಯಡಗದ ಮುನ್ನ ಹೂಸಿದ ಅರಿಶಿನ ಬಿಸಿಲಿಂಗೆ ಹರಿಯದ ಮುನ್ನ ತನು ಸಂಚಲವಡಗಿ, ಮನವು ಗುರುಕಾರುಣ್ಯವ ಪಡೆದು ಹುಸಿ ಇಲ್ಲದಿರ್ದಡೆ ಭಕ್ತನೆಂಬೆ. ಹಿಡಿಯಲಿಲ್ಲದಿರ್ದಡೆ ಮಾಹೇಶನೆಂಬೆ. ತನುವಿಲ್ಲದಿರ್ದಡೆ ಪ್ರಸಾದಿಯೆಂಬೆ. ಜೀವವಿಲ್ಲದಿರ್ದಡೆ ಪ್ರಾಣಲಿಂಗಿಯೆಂಬೆ. ಆಶೆಯಿಲ್ಲದಿರ್ದಡೆ ಶರಣನೆಂಬೆ. ಐದರ ಸಂಪರ್ಕ ವಿಯೋಗವಾದಡೆ ಐಕ್ಯನೆಂಬೆ. ಐಕ್ಯದ ಸಂತೋಷ ಹಿಂಗಿದೊಡೆ ಜ್ಯೋತಿರ್ಮ

ಯನೆಂಬೆ. ಇಂತಾಗಬೇಕೆಂಬ ಈ ಮನದ ದೇಹವನಿರಿದೊಡೆ ಅರಿಯದು. ತರಿದೊಡರಿಯದು. ಬೈದಡೆಯರಿಯದು. ನಿಂದಿಸಿದೊಡರಿಯದು. ಸ್ತುತಿಸಿದೊಡರಿಯದು. ಸುಖವನರಿಯದು. ದುಃಖವನರಿಯದು. ಈ ಚತುರ್ವಿಧದ ತಾಗು ನಿರೋಧವನರಿಯದಿರ್ದಡೆ ಆತನೇ ಮಹಾಲಿಂಗಗಜೇಶ್ವರನೆಂಬೆ.

ಭಕ್ತಸ್ಥಲದೊಳು ದಾಸೋಹ (ತ್ರಿವಿಧಮಾಟ) ಸ್ಥಲವು ಮಹತ್ವವಿದ್ದಂತೆ ಮಾಹೇಶಸ್ಥಲದಲ್ಲಿ ಭಕ್ತದೇಹಿಕ ಲಿಂಗಸ್ಥಲವೂ ಪ್ರಸಾದಿ ಸ್ಥಲದಲ್ಲಿ ಪ್ರಸಾದ ಮಹಾತ್ಮ್ಯಸ್ಥಲವೂ ಪ್ರಾಣಲಿಂಗಿಸ್ಥಲದಲ್ಲಿ ಅಂಗಲಿಂಗಸ್ಥಲವೂ ಶರಣಸ್ಥಲದಲ್ಲಿ ಶೀಲಸಂಪಾದನೆಯ ಸ್ಥಲವೂ ಐಕ್ಯಸ್ಥಲದಲ್ಲಿ ಸರ್ವಾಚಾರ ಸಂಪತ್ತಿನ ಸ್ಥಲವೂ ಮಹತ್ವದವೆಂದು ಹೇಳಬಹುದು. ಇವುಗಳಲ್ಲಿ ಕೆಲವನ್ನು ವಾಚಕರ ದಿಗ್ದರ್ಶನಕ್ಕಾಗಿ ಬರೆಯುದಿರೆನು.

ಇಷ್ಟಲಿಂಗಕ್ಕೆ ಅಂಗವನರ್ಪಿತವ ಮಾಡಬೇಕು. ಪ್ರಾಣಲಿಂಗಕ್ಕೆ ಮನವನರ್ಪಿತವ ಮಾಡಬೇಕು. ಭಾವಲಿಂಗಕ್ಕೆ ತೃಪ್ತಿಯನರ್ಪಿತವ ಮಾಡಬೇಕು. ಈ ಮರ್ಮವನರಿದು ಮಾಡಬಲ್ಲಡೆ ಪ್ರಸಾದಿ. ಅದೆಂತೆಂದಡೆ—

ಇಷ್ಟಲಿಂಗಾರ್ಪಿತಂ ತ್ವಂಗಂ ಪ್ರಾಣಲಿಂಗಾರ್ಪಿತಂ ಮನಃ ।
ಭಾವಲಿಂಗಾರ್ಪಿತಂ ತೃಪ್ತಿರಿತಿಭೇದಂ ವರಾನನೇ ॥

ಎಂದುದಾಗಿ ಲಿಂಗಕ್ಕೆಯೂ ತನಗೆಯೂ ಎಡೆದೆರಹಿಲ್ಲದೆ ಲಿಂಗಸಹಿತವಾಗಿ ಕೇಳುವ ಲಿಂಗಸಹಿತವಾಗಿ ಘ್ರಾಣಿಸುವ ಲಿಂಗಸಹಿತವಾಗಿಯೇ ಸಂಗವ ಮಾಡುವ ಲಿಂಗಸಹಿತವಾಗಿಯೇ ತೊಳಗುವ ಇಂತಪ್ಪ ಮಹಾಮಹಿಮ ಸದ್ಭಕ್ತನ ಅಂಗವೆಲ್ಲವೂ ಲಿಂಗ, ಸಂಗಮವೆಲ್ಲವೂ ಲಿಂಗ, ಅಂಗಸಂಗಮವೆಲ್ಲವೂ ಲಿಂಗಸಂಗಮವಾದ ಕಾರಣ, ಅಂಗಕ್ರಿಯೆಗಳೆಲ್ಲವೂ ಲಿಂಗಕ್ರಿಯೆಗಳಾದ ಕಾರಣ, ಇಂತಪ್ಪ ಮಹಾಮಹಿಮ ಸದ್ಭಕ್ತನ ಶ್ರೀ ಚರಣಕ್ಕೆ ಎನ್ನ ಶಿರವನಿರಿಸಿ ಪೂಜಿಸುವೆ ಕಾಣಾ; ಶುದ್ಧ ಸಿದ್ಧ ಪ್ರಸಿದ್ಧ ಪ್ರಸನ್ನ ಪ್ರಭುವೇ ಶಾಂತಮಲ್ಲಿಕಾರ್ಜುನಯ್ಯ, ನಿಮ್ಮ ಸದ್ಭಕ್ತನ ಪರಿಯ ನೀವೇ ಬಲ್ಲಿರಲ್ಲದೆ ನಾನೆತ್ತ ಬಲ್ಲೆನಯ್ಯ; ನಿಮ್ಮ ಧರ್ಮ; ನಿಮ್ಮ ಧರ್ಮ; ನಿಮ್ಮ ಧರ್ಮ;

ಅಭಾವದಲ್ಲಿ ಭಾವಮಂ ಮಾಡಿ ಸ್ಥಲವಿಲ್ಲದಲ್ಲಿ ಸ್ಥಲವನಾಚರಿಸುವದು. ಈ ಎರಡರ ಭೇದವ ಬಲ್ಲಾತನು ಸಾವಧಾನ ಪ್ರಸಾದಿ.

ಅಭಾವೇ ಭಾವಮಾಸಾಧ್ಯೇಹ್ಯಸ್ಥಾನೇ ಸ್ಥಾನಮಾಚರೇತ್ |
ಏತದ್ವಯ ಪರಿಜ್ಞಾನೀ ಪ್ರಸಾದೀ ಸಾವಧಾನಿಕಃ ||

ಅವನೊಬ್ಬನು ಸಂಯೋಗ ವಿಯೋಗಂಗಳಲ್ಲಿ ಅಣುಬಿಂದು ಸುಖವನು ಇಷ್ಟಲಿಂಗಕ್ಕರ್ಪಿಸುವನೋ ಆತನು ಸಾವಧಾನೀ ಪ್ರಸಾದಿಯೆನಿಸುವನು.

ಸಂಯೋಗೇಚ ವಿಯೋಗೇಚ ಅಣುಬಿಂದು ಸುಖಾರ್ಪಣಂ |
ಯಃ ಕುರ್ಯಾದಿಷ್ಟಲಿಂಗೇತು ಸಾವಧಾನೀ ನಿರಂತರಂ ||

ಪ್ರಾಣನ ಗುಣವಳಿದು ಪ್ರಾಣಲಿಂಗಿಯಹ ದೇಹವು ಆವಾಗಲೂ ಲಿಂಗ ಸಹಿತವಾಗಿ ಭೋಗಿಸುವದು ಪ್ರಾಣಲಿಂಗದ ಲಕ್ಷಣವು. ಹೇಗೆಂದಡೆ ಈಶ್ವರನ ಪಂಚಮುಖಕ್ಕೆ ಪಂಚೇಂದ್ರಿಯ ಮುಖಂಗಳಲ್ಲಿ ಸಮರ್ಪಿಸುವದು ನಡೆವ ನುಡಿವ ಚೈತನ್ಯವುಳ್ಳನ್ನಕ್ಕರ ಒಡಲ ಗುಣಂಗಳು ಆರಿಗೆಯೂ ಬಿಡವು. ಕೇಳಿರಣ್ಣಾ ! ನೋಡುವ ನಯನ, ಕೇಳುವ ಶ್ರೋತ್ರ, ವಾಸಿಸುವ ಘ್ರಾಣ, ಮುಟ್ಟುವ ತ್ವಕ್ಕು, ರುಚಿಸುವ ಜಿಹ್ವೆ, ನೋಡುತ್ತ, ಕೇಳುತ್ತ, ವಾಸಿಸುತ್ತ, ಮುಟ್ಟುತ್ತ, ರುಚಿಸುತ್ತ, ಲಿಂಗಾರ್ಪಿತವ ಮಾಡಿ ಲಿಂಗಿಭೋಗೋಪಭೋಗಿಯಾದ ಪ್ರಸಾದಿಗೆ ಸರ್ವಾಂಗ ಶುದ್ಧಿಯೆಂದಿತ್ತಯ್ಯ ಕಾಯತ್ರಯಂಗಳು ಜೀವತ್ರಯಂಗಳು ಭಾವತ್ರಯಗಳನೊಂದು ಮಾಡಿ, ಸುಖದುಃಖ, ಗುಣನಿರ್ಗುಣ, ಇಂತೀ ಉಭಯವ ಅಂಗದಲ್ಲಿ ಏಕಮಾಡಿ ಅಹುದು, ಅಲ್ಲ, ಬೇಕು, ಬೇಡೆಂಬ ಸಂಶಯ ಕಳೆದು ಕೂಡಲಚನ್ನ ಸಂಗಯ್ಯನಲ್ಲಿ ಆದಿಪುರಾತನರು ಕೂಡಿದ ಪಥವಿದು.

ಭಾಗ್ಯದೊಳು ಭೋಗಿಸುವ ಅಂತರ್ಯದೊಳು ಅನುಭವಿಸುವ ಕಾಯದೊಳು ಕಾಣ್ಬರುವ ಮಾಯಯೊಳು ನೋಯದಿರುವ ಸಮಾಜದೊಳು ಸಮನಿಸುವ ಇಹಪರದೊಳು ಸುಖಿಸುವ ಪಂಚಾಚಾರಗಳ ಪರಿಣಾಮವಿದು.

ಪಂಚವಿಂಶತಿ ತತ್ವಗಳನ್ನು ಅರಿತು ಪಂಚಾಕ್ಷರಿಯ ಕಳೆಗಳನೊಟ್ಟು ಗೂಡಿಸಿ ಪಂಚವಿಂಶತಿ ತತ್ವಗಳ ವಂಚನೆಯನತಿಗಳೆದು ಮನತ್ರಯಗಳ ಸಂಚಲ ಗುಣವ ನಿಲ್ಲಿಸಿ ಪರಮಪದದೊಳು ಬೆರೆಯುವ ಯೋಗವಿದು.

ಸಾಕಾರ ೧೦೮ ಸ್ಥಲಗಳನು ಅಂಗದೊಳು ಆಚರಿಸುತ್ತ ನಿರಾಕಾರ ೧೦೮ ಸ್ಥಲಗಳನ್ನು ಆತ್ಮನೊಳು ಆಚರಿಸುತ್ತ ಇಂತೀ ಉಭಯ ಸ್ಥಲವೊಂದಾಗಿನಿಂದ ನಿಜದ ಲಿಂಗೈಕ್ಯನಿಲವಿದು.

ಸೂರ್ಯಪ್ರಕಾಶ ಕಿರಣಗಳು ಪೃಥ್ವಿಯ ಪಸರಿಸಿ, ತಮ್ಮ ಕಿರಣ ಶಕ್ತಿಯಿಂದ ಪೃಥ್ವಿಯನೇ ಪಾವನಗೈದು ಪುನಃ ಬಂದ ಪಥದೊಳು ಸಾಗಿ ನೀಗುವ ನೂರೊಂದರೊಳು ನುರಿತ ಫರಿಯಿದು.

---

## ಬಸವ ಸಂದೇಶ ಸಾರುವ ಅಯ್ಯಗಳಾಗಿರಿ! ತರುಣರಲ್ಲಿ ಕಳಕಳಿಯ ಕರೆ.

(ಬರೆದವರುಃ— ಶ್ರೀ. ಅನ್ನದಾನೀಶ್ವರ ವಿರಕ್ತಮಠ.)

---

ಕಾಲಜ್ಞಾನವನ್ನು ಅಯ್ಯನವರು ತಮ್ಮ ರೀತಿಯಲ್ಲಿ ಸಾರುತ್ತಾರೆ. ಬಸವ ಸಂದೇಶವನ್ನು ಪ್ರತಿಯೊಬ್ಬ ಸಾಹಿತಿಯು, ಕವಿಯು, ವಾಗ್ಮಿಯು, ನಾಟಕಕಾರನು, ಸಿನೇಮಾ ವ್ಯವಸ್ಥಾಪಕನು, ಗಮಕಿಯು, ಕಲಾಭಿಜ್ಞನು, ತತ್ವಜ್ಞಾನಿಯು, ರಾಜಕಾರಣಿಯು, ಶಿಕ್ಷಕನು, ವೈಜ್ಞಾನಿಕನು, ಶಾಸ್ತ್ರಿಯು, ಸ್ವಾಮಿಯು, ವಿದ್ಯಾರ್ಥಿಯು, ಸ್ತ್ರೀಯಳು— ಹೀಗೆ ಎಲ್ಲರೂ ತಮ್ಮ ತಮ್ಮ ರೀತಿಗಳಲ್ಲಿ ಸಾರಲಿಕ್ಕೆ ಟೊಂಕಕಟ್ಟಬೇಕು. ವರ್ತಮಾನಪತ್ರಕಾರರು, ಗವಾಯಿಗಳು, ರೇಡಿಯೋ ಭಾಷಣಕಾರರು, ಮುಂತಾದವರೆಲ್ಲರೂ ಬಸವ ಸಂದೇಶವನ್ನು ಯೋಗ್ಯ ರೀತಿಯಲ್ಲಿ ಸಾರಲೇಬೇಕು. ಏಕೆಂದರೆ ಬಸವನ ಪ್ರಭಾವ ಮುದ್ರೆಯು ಜೀವನದ ಎಲ್ಲ ಕ್ಷೇತ್ರಗಳಲ್ಲಿಯೂ ಹರಡಿರುವದು.

ಪ್ರಾಮುಖ್ಯವಾಗಿ ತರುಣರು ವಿಶೇಷತಃ ಲಿಂಗವಂತ ತರುಣರು ಬಸವ ಸಂದೇಶವನ್ನು ಸಾರುವ ಅಯ್ಯನವರಾಗದೇ ಗತ್ಯಂತರವೇ ಇಲ್ಲ. ವೈದಿಕ ಧರ್ಮಾಭಿಮಾನಿಗಳೂ ಆರ್ಯಸಂಸ್ಕೃತಿಯ ಕಟ್ಟಾಳುಗಳೂ, ಇತಿಹಾಸ ಸಂಶೋಧಕರೆಂದೆನಿಸಿಕೊಳ್ಳುವವರೂ ಕನ್ನಾಡಿನ ಆತ್ಮನಿರೀಕ್ಷಕರೆಂದು ಹೇಳಿಸಿ ಕೊಳ್ಳುವವರೂ ಆಗಿರುವ ಜನರು ವರ್ತಮಾನಪತ್ರಗಳಲ್ಲಿ ಲೇಖನಗಳ ಮೂಲಕವಾಗಿಯೂ, ಭಾಷಣಗಳ ಮೂಲಕವಾಗಿಯೂ ಬಸವನನ್ನು ಹಿಂದೆ ಸರಿಸಲಿಕ್ಕೆ ಕಪಟೋಪಾಯಗಳಿಂದ ಯತ್ನಿಸುತ್ತಿರುವರು. ಇದೊಂದು

ನೂತನ ಗಂಡಾಂತರವೇ ಸರಿ. ಈ ಗಂಡಾಂತರವನ್ನು ವೀರಾವೇಶದಿಂದಲೂ ಧೀರೋತ್ಸಾಹದಿಂದಲೂ ಹೊಡೆದುಹಾಕಲಿಕ್ಕೆಬೇಕು. ತರುಣರಲ್ಲದೇ ಬೇರೆ ಯಾರು ಈ ಕ್ರಾಂತಿಕಹಳೆಯನ್ನು ಊದಬೇಕು? ಕಾರಣ ಕಹಳೆಯ ಧ್ವನಿಯನ್ನು !

## ಕ್ರಾಂತಿ ಕಹಳೆ.

ಬಸವನು ಲಿಂಗವಂತ ಸಮಾಜದ ತದ್ವಾರಾ ಆದರ್ಶ ಸಮಾಜದ ಪಂಚಪ್ರಾಣನು. ಲಿಂಗವಂತನಾಗುವದೆಂದರೆ ಬಸವನಂತಾಗುವದು. ಬರೀ ಲಿಂಗ ಕಟ್ಟಿಕೊಳ್ಳುವದಲ್ಲ. ಚಿತ್ಕಲಾಚೈತನ್ಯವೇ ಲಿಂಗವು. ಅದೇ ಇಷ್ಟವಾದದ್ದು. ಅದಕ್ಕೇನೇ ಇಷ್ಟಲಿಂಗವೆಂಬ ಹೆಸರು. ದೇಹದ ಮೇಲಿನ ಇಷ್ಟಲಿಂಗವು ಆ ತತ್ವದ ರೂಪಕವು. ಅರುಹಿನ ಕುರುಹು ಇಷ್ಟಲಿಂಗವು. ಜ್ಞಾನದಿಂದ, ಕಳೆಯಿಂದ, ಚೈತನ್ಯದಿಂದ, ಆನಂದದಿಂದ ಕಾರ್ಯಮಾಡಲು ಬಂದರೆ, ಮಾತಾಡಲು ಬಂದರೆ, ವಿಚಾರ ಮಾಡಲು ಬಂದರೆ, ಹೊಸ ಜೀವನದ ಸಂಚಾರವಾಗಿ ಹೊಸ ಮನುಷ್ಯನಾಗಿ ಬಾಳಲು ಬರುವದು. ಅಂಗವು ಲಿಂಗವಾಗುವದೆಂದರೆ ಇದೇ ಅರ್ಥ. ಈ ದೃಷ್ಟಿಯಿಂದ ಬಸವನು ಲಿಂಗನು. ಲಿಂಗದ ಸ್ವಯಂಪ್ರಜ್ಞೆ, ಲಿಂಗಾನುಭವದಿಂದ, ಜಿಜ್ಞಾಸ ದೃಷ್ಟಿಯಿಂದ, ವೈಜ್ಞಾನಿಕದೃಷ್ಟಿಯಿಂದ, ಸಾಗುವದರಿಂದ ಈ ವಿಶ್ವವೇ ಲಿಂಗಮಯವಾಗುವದು. ಅರ್ಥಾತ್ ಪ್ರಪಂಚವು ಪರಮಾರ್ಥಮಯವಾಗುವದು. ಇದನ್ನೇ ಲಿಂಗಾಂಗ ಸಾಮರಸ್ಯ ಸಂಸ್ಕೃತಿಯು ಬೋಧಿಸುವದು. ಬಸವನ್ನು ಲಿಂಗಾಂಗ ಸಾಮರಸ್ಯ ಸಂಸ್ಕೃತಿಯ ಮೂರ್ತಿಮಂತ ಪ್ರತಿನಿಧಿಯು.

ಅಂತಃಕರಣ, ದಯೆ, ಸಹಾನುಭೂತಿ, ಪ್ರೇಮಗಳ ಪ್ರತಿಬಿಂಬವೇ ಬಸವನು. ಅವನ ವಚನಗಳು, ಅವನ ಕಾರ್ಯಗಳು ಜನಜೀವನದಲ್ಲಿ ಎಂಥ ಕ್ರಾಂತಿಯನ್ನು ಮಾಡಿದವೆಂಬದನ್ನು ನೆನೆಯಿರಿ. ಇದುವರೆಗೆ ಆಗಿರುವ ತತ್ವಜ್ಞಾನಿಗಳೂ ವಿಚಾರಿಗಳೂ ಅನುಭಾವಿಗಳೂ ಬಸವನಕ್ಕಿಂತ ಹೆಚ್ಚಿನ ತತ್ವ ವಿಚಾರ ಅನುಭಾವಗಳನ್ನು ಜಗದ ಮುಂದೆ ಇಟ್ಟಿಲ್ಲ. ಬಸವನ ಶೀಲಬಲಕ್ಕಿಂತ ಹೆಚ್ಚಿನ ಶೀಲಬಲವಿನ್ನೂ ಜಗದಲ್ಲಿ ತೋರಿಲ್ಲ. ಬುದ್ಧ, ಬಸವ—ಈ ಎರಡು ಸಾಮಾಜಿಕ ನಭೋಮಂಡಲದಲ್ಲಿ ಜಾಜ್ವಲ್ಯಮಾನವಾದ ನಕ್ಷತ್ರಗಳು. ಅವರಿಬ್ಬರ ಹೊರತು ಸಾಮಾಜಿಕ ಕ್ರಾಂತಿಯನ್ನು ಈವರೆಗೆ ಯಾರೂ ಮಾಡಿಲ್ಲ.

ಆಧ್ಯಾತ್ಮಿಕ ನಭೋಮಂಡಲದಲ್ಲಿಯೂ ಬಸವನು ಅದ್ವಿತೀಯ ತೇಜೋಶಾಲಿಯಾದ ನಕ್ಷತ್ರವು. ಬಸವನು ಆದರ್ಶ ಜಗದ್ಗುರುವು. ಬಸವನ ಅರಿವಿಲ್ಲದಿಹುದೇ ನರಕ, ಬೇರೆ ನರಕವಿಲ್ಲ. ವಿನಯ ಮತ್ತು ಧೈರ್ಯ, ಸ್ವಾತಂತ್ರ್ಯ ಮತ್ತು ಮನೋನಿಗ್ರಹ, ಸಭ್ಯತೆ ಮತ್ತು ದಿಟ್ಟತನ, ಪ್ರೇಮ ಮತ್ತು ಜ್ಞಾನ, ಛಲ ಮತ್ತು ತಾಳ್ಮೆ, ಸುಖ ಮತ್ತು ಶಾಂತಿ ಅರ್ಥಾತ್ ಅಂಗ ಮತ್ತು ಲಿಂಗ ಇವುಗಳ ಸಾಮರಸ್ಯವೇ—ಸುಂದರ ಸಾಮರಸ್ಯವೇ ಬಸವನು. ಇದೇ ಲಿಂಗಾಂಗ ಸಾಮರಸ್ಯ. ಈ ಸಂಸ್ಕೃತಿಯೇ ಜಗತ್ತಿಗೆ ಬೇಕು.

ವಚನ ಸಾಹಿತ್ಯದ ಹೃದಯುವೇ ಬಸವನು. ವಚನ ಸಾಹಿತ್ಯದ ಅಭ್ಯಾಸಿಗಳು, ಓದುಗರು ಬಸವನನ್ನು ದೊದಲು ತಿಳಿದುಕೊಳ್ಳಬೇಕು. ಅಂದರೆ ವಚನಸಾಹಿತ್ಯದ ಅರ್ಥವು ಸುಲಭ ಸಾಧ್ಯವಾಗುವದು. ಸುಲಭ ವೇದ್ಯವಾಗುವದು. ಬಸವನ ಲಿಂಗಾಂಗ ಸಾಮರಸ್ಯ ಸಂಸ್ಕೃತಿಯನ್ನು ತಿಳಿದುಕೊಳ್ಳದೇ, ಆ ಸಂಸ್ಕೃತಿಯ ಅಭಿಮಾನ ತಾಳದೇ ವಚನ ಸಾಹಿತ್ಯದ ಬಗ್ಗೆ ಬರೆಯುವುದೆಂದರೆ ಮಾತನಾಡುವದೆಂದರೆ ಪ್ರಾಣವಿಲ್ಲದ ದೇಹದಂತೆ ಚೈತನ್ಯವಿಲ್ಲದ ಶ್ರಮದ, ತಿಣುಕಾಟದ ಕಾರ್ಯವೇ ಸರಿ. ಲಿಂಗಾಂಗ ಸಂಸ್ಕೃತಿಯು ವಚನ ಸಾಹಿತ್ಯದ ಜೀವ ಜೀವಾಳವು. ರಹಸ್ಯವು. ಅದನ್ನು ಕಡೆಗೆಣಿಸಿ ಬರೆಯುವದೆಂದರೆ ಡಾಂಭಿಕತನವೇ ಸರಿ.

ಜಗದಲ್ಲಿ ಹೊಸ ಸಮಾಜ ಸ್ಥಾಪಿಸಬೇಕೆನ್ನುವ ನವರಚನಾವಾದಿಗಳಿಗೆ ಇಂದು ಬಸವನ ಸ್ಫೂರ್ತಿ ಬೇಕು. ಪ್ರೇರಕ ಶಕ್ತಿ ಬೇಕು. ಸಮಾಜ ಸೇವಕರೂ, ರಾಜಕೀಯ ಮುಖಂಡರೂ, ವೈಜ್ಞಾನಿಕರೂ, ತತ್ವಜ್ಞಾನಿಗಳೂ ಬಸವನಂತೆ ಹೃದಯ ಪಲ್ಲಟ ಮಾಡಿಕೊಳ್ಳದೇ ಈಗಿನಂತೆ ಸಾಗಿದರೆ ಕುಂಟುತ್ತ ತಡವರಿಸುತ್ತ ಹೋಗಬೇಕಾಗುವದು.

ಸಾತಂತ್ರ್ಯ ದೊರೆತ ಈ ಕಾಲವಲ್ಲಿ ಬಸವನಂತೆ ಮಂತ್ರಿ ಕೆಲಸ ಮಾಡುವ ಸೇವಾ ಧುರಂಧರರು ಬೇಕಾಗಿದ್ದಾರೆ. ಕೇವಲ ಅಧಿಕಾರ, ಧನ, ಕೀರ್ತಿ, ಪ್ರತಿಷ್ಠೆಗಳಿಗಾಗಿ ಮಂತ್ರಿಗಳಾಗಿರುವವರು ನಮಗೆ ಬೇಡ. ಸಾಮಾನ್ಯ ಜನರ ತಲೆಯಲ್ಲಿ ತನ್ನ ತಲೆಯನ್ನಿಟ್ಟು, ಸಾಮಾನ್ಯ ಜನತೆಯ ಹೃದಯದಲ್ಲಿ ತನ್ನ ಹೃದಯವನ್ನಿಟ್ಟು, ಪತಿತರ, ಹಿಂದುಳಿದವರ, ಸುಖ-ದುಃಖಗಳನ್ನು ಅನುಭವಿಸಿ, ವಿಚಾರಿಸಿ ಜನಜೀವನದೊಡನೆ ಬೆರೆತು

ಜೀವನದಲ್ಲಿ ಕಲ್ಯಾಣ ಕ್ರಾಂತಿಗಳನ್ನು ಮಾಡುವ ಬಸವನಂಥ ಮಂತ್ರಿಗಳಿಂದಲೇ ದೇಶೋದ್ಧಾರ! ಸ್ವರಾಜ್ಯ ಸ್ಥಾಪನೆ! ಸ್ವಾತಂತ್ರ್ಯದ ಭದ್ರತೆ!

ಜಾಗತಿಕ, ಭಾರತೀಯ, ಕರ್ನಾಟಕದ ಇತಿಹಾಸಗಳಲ್ಲಿ ಬಸವನನ್ನು ಅಲಕ್ಷಿಸುವದೆಂದರೆ ತಳಹದಿಯನ್ನೇ ಸಡಲಿಸಿದಂತೆ. ಬಸವನನ್ನು ಬಿಡುವದೆಂದರೆ ದೈವೀ ಶಕ್ತಿಯನ್ನು ಬಿಟ್ಟು ಪಾಶವೀ ಶಕ್ತಿಯನ್ನು ಸ್ವಾಗತಿಸಿದಂತೆ. ಬಸವನಿಲ್ಲದೇ ವಿಜ್ಞಾನವು ಲಿಂಗರಹಿತವಾಗಿ ಅಥವಾ ಆತ್ಮರಹಿತವಾಗಿ ಅಪೂರ್ಣ, ನಿಸ್ತೇಜ, ಪ್ರಗತಿಯನ್ನು ಹೊಂದಿದಂತೆಯೇ ಸರಿ. ಬಸವನ ಜಗತ್ತಿಗೆ ಜೀವನವು! ಬಸವನ ಮರವೆಯಿಂದ ಜಗತ್ತಿಗೆ ಮರಣವು!! ಎಚ್ಚರಿಕೆ! ಎಚ್ಚರಿಕೆ!! ಎಚ್ಚರಿಕೆ!!!

---

# ಕೂಡಲ ಸಂಗಮವನ್ನು ಕಂಡಾಗ

೧

ಕಂನಾಡ ಕುಲಪೀಠ ಗದ್ದುಗೆಯನೇರಿರುವ
ಬಸವನಲಿ ಜೀವಕಳೆ ಚುಂಬನದಿ ತುಂಬಿಸಿಹ
ಅಸಮನೇತ್ರನ ಬೀಡು. ಸಂಗಮದ ನೆಲವೀಡು.
ಮುಸುಕಾಗಿ ಮೂಡಿತ್ತು. ಕಣ್ಣಿನಲಿ ಹೊಳೆದಿತ್ತು.

೨

ಆ ದಂಡೆ ಈ ದಂಡೆ ಹಿರಿಕಿರಿಯ ನದಿದಂಡೆ,
ಏರಿ ನಿಂತಿಹ ಬಂಡೆ ಶರಣರೊಲಿದುದ ಕಂಡೆ.
ಸಂಗಮದ ನೆಲಗಲ್ಲು ಜಂಗಮರ ಒರೆಗಲ್ಲು.
ಅಂಗಾಂಗದಲಿ ಬಂದ ವೀರ ತ್ಯಾಗದ ಸೊಲ್ಲು.

೩

ನೆಲೆನಿಂತು ಮೊಳಗುತಿದೆ. ಬಿಸಿಭಾವ ಹೊಮ್ಮುತಿದೆ.
ಸಲೆಸೇವೆ ಗೈಯುತಿದೆ. ಸಂತರಲಿ ಚಿಮ್ಮುತಿದೆ.

ಆ ಬೆಳಕು ಪುಟಪುಟಿದು ಪಾವನತೆ ಜಿನುಗುತಿದೆ.
ಹಾಳಾದ ಬೀಳಾದ ಪಾಳುಗುಡಿಯೊಳಗಿಂದ.

೪

ಎಂಟು ಶತಮಾನಗಳ ಮುಂಚಿರುವ ನಾಡಿನಲಿ
ಕಂಪಕಳೆ ಹೊಳೆಹರಿದು ವಚನಸೇಸೆಯ ತೊರೆದು
ಇಂಪುಗಾನದಿ ಮೊರೆದು ನಾಡಕೊಳೆ ನೆರೆತೊರೆದು
ತಂಪೆಲರ ಹೊರತಂದು ಮೊಳಗಿಸಿಹ ತೊರೆಬೀಡು.

೫

ಕನ್ನಡದ ನುಡಿ ಜೇನು ತಾನಾಗಿ ಉಕ್ಕಿತ್ತು.
ಬನ್ನಗೆಟ್ಟಿಹ ಜನಕೆ ಬೆಂಬಲವ ನೀಡಿತ್ತು.
ಆ ಭೂಮಿ ಹಾ! ಸ್ವಾಮಿ ಬಸವನಾ ವರ ಭೂಮಿ;
ಸಂಗಮದ ಎರೆಸೀಮೆ ಕನ್ನಡಕೆ ಸಿರಿಭೂಮಿ.

೬

ಜಾತಿ ಸಂಕರ ತೊಳೆದು ಐಕ್ಯತೆಯ ಸುರಿಸಿತ್ತು.
ಅದಕಾಗಿ ಹೆಣಗಿತ್ತು ಜನಕಾಗಿ ಸೊರಗಿತ್ತು.
ಹಾಲ್ಜೇನ ಕೊಟ್ಟಿತ್ತು. ಮಧುರಸವ ಉಣಿಸಿತ್ತು.
ಆ ಗೆಲುವ ತಂದಂಥ ಆ ನೆಲವು ಜಲವು.

೭

ಎದೆಮೆಟ್ಟಿ ನಿಂತಿತ್ತು. ಆತ್ಮವನೆ ಬಲಿಸಿತ್ತು.
ತನ್ನೊಳಗೆ ಹುದುಗಿದ್ದ ಶಾಂತಿಯನು ಕೊಟ್ಟಿತ್ತು.
ಶರಣ ಶಿಶುಗಳಿಗೆಲ್ಲ ಎದೆಹಾಲ ಕುಡಿಸಿತ್ತು.
ಆ ಗೆಲುವ ತಂದಂಥ ಆ ನೆಲವು ಜಲವು.

೮

ಕನ್ನಡದ ತಿರುಳನ್ನೆ, ಕನ್ನಡದ ತಿಳಿವನ್ನೆ
ತಾನಾಗಿ ತಂದಿತ್ತು. ಹುಲುಸಾಗಿ ಬೆಳಸಿತ್ತು.
ಶರಣರಾ ಸೊಳ್ನುಡಿಯ ಸಿಹಿಕೆನೆಯ ಕೊಟ್ಟಿತ್ತು.
ಆ ಗೆಲುವ ತಂದಂಥ ಆ ನೆಲವು ಜಲವು.

— ಕರಿಬಸವ ಕುಮಾರ.

# ವಿಷಯುಗಳು.




ಪುಟ

೧ ಶಿವಯೋಗ ಸಮಾಧಿ ೩೧೩

—ಶ್ರೀ ಬಸವಪ್ಪ ಚನ್ನಪ್ಪ ಪಟ್ಟೇದ, ವಂಟಮುರಿ

೨ ಸಾಮಾಜಿಕ ಶಿಕ್ಷಣ

—ಶ್ರೀ ಕಲ್ಯಾಣಪ್ಪ ಬ್ಯಾಳಿ, ಹೆಡ್‌ಮಾಸ್ತರ್, ಶ್ರೀಸಿದ್ಧೇಶ್ವರ ಹಾಯುಸ್ಕೂಲ, ವಿಜಾಪುರ ೩೨೮

೩ ಬಸವಣ್ಣನವರ ಭಕ್ತಿ ಸಾಧನೆಯು ಅತಿ ಮಾನುಷತ್ವವೂ ಅಮೋಘವೂ ಆದುದು. ೩೩೪

—ಕೆ. ಜಿ. ರುದ್ರಸ್ವಾಮಿ ಶಾಂತಿನಿವಾಸ ಕಿರುಗಾವಲು

೪ ವಚನಶಾಸ್ತ್ರಸಾರ ಭಾಗ ೩ ೭೭-೯೨

ಉತ್ತರಾರ್ಧ

ರಾ॥ ಬ॥ ಫ. ಗು. ಹಳಕಟ್ಟಿ




# ಶಿವಾನುಭವ

ವರ್ಷ ೨೨ | ಅಗಸ್ಟ ೧೯೪೮ | ಸಂಚಿಕೆ ೧೧

## ಶಿವಯೋಗ ಸಮಾಧಿ

ಲೇಖಕ:— ಶ್ರೀ. ಬಸವಪ್ಪ ಚನ್ನಪ್ಪ ಪಟ್ಟೇದ, ವಂಟಮುರಿ.

### ಲಿಂಗಸ್ಥಲಗಳು [೩೬]

ನೂರೊಂದು ಸ್ಥಲಗಳ ವಿಷಯವಾಗಿ ಹೊಸಹೊಂದಿಕೆಯ ವಿವೇಚನೆಯನ್ನು "ಶಿವಾನುಭವ" ದ 'ಮೇ' ತಿಂಗಳ ಸಂಚಿಕೆಯಲ್ಲಿ ಪ್ರಸಿದ್ಧಿಸಿದುದು ವಾಚಕ ಮಹಾಶಯರಿಗೆ ಗೊತ್ತುಂಟಷ್ಟೇ! ಅದರಲ್ಲಿ "ಈ ವಿಷಯವನ್ನು ಓದುವಾಗ ನೂರೊಂದು ಸ್ಥಲಗಳ ಸಂಕ್ಷೇಪ ವಿವರಣವುಳ್ಳ ಪಟ್ಟಿಯು ಮುಂದಿರುವದು ಅವಶ್ಯವು" ಎಂದು ಸೂಚಿಸಿದ್ದೆನು. ಈ ನೂರೊಂದು ಸ್ಥಲಗಳಲ್ಲಿ (೪೪) ಅಂಗಸ್ಥಲಗಳ ಬಗೆಗೆ ಸಿದ್ಧಾಂತ ಶಿಖಾಮಣಿಯಲ್ಲಿ ಸವಿಸ್ತರವಾದ ವಿವರವುಂಟು. ಅದು ಯಥಾ ಯೋಗ್ಯವಾಗಿದೆ. ಆದರೆ ಲಿಂಗಸ್ಥಲಗಳ ಸಂಬಂಧವಾಗಿ ಮಾತ್ರ ಅವರ ದೃಷ್ಟಿಕೋನದಲ್ಲಿಯೂ ನನ್ನ ದೃಷ್ಟಿಕೋನದಲ್ಲಿಯೂ ಅಂತರವಾದುದರಿಂದ ಇಲ್ಲಿ ನನ್ನ ಧೋರಣೆಗೆ ಸರಿಹೋಗುವಂತೆ ಆ ಲಿಂಗಸ್ಥಲಗಳ ತಾತ್ಪೂರ್ತಿಕ ವಿವರಣೆಯನ್ನು ಕೊಡಲಾಗಿದೆ.

### ಆಚಾರಲಿಂಗ ಸ್ಥಲಗಳು [೯]

೧. ದೀಕ್ಷಾಗುರು ಸ್ಥಲಃ— ವೀರಶೈವ ಮತದ ದೀಕ್ಷೆಯನ್ನು ಕೊಡುವ ಮಹಿಮನೇ ದೀಕ್ಷಾಗುರುವೆನಿಸುವನು.

ಲಿಂಗ (ಸುಜ್ಞಾನ) ಸಂಬಂಧವನ್ನು ಕೊಟ್ಟು ಮಲತ್ರಯವನ್ನು ನಾಶಗೊಳಿಸುವ ಸಂಸ್ಕಾರವೇ ದೀಕ್ಷೆ ಎನಿಸುವದು. ತಾನು ಗುಣಾತೀತನೂ ರೂಪಾತೀತನೂ ಆಗಿ ಶಿಷ್ಯನಿಗೆ ಗುಣಾತೀತ ರೂಪಾತೀತ ಅವಸ್ಥೆಗಳನ್ನು ಒದಗಿಸಿಕೊಡುವ ಮಹಾತ್ಮನೇ ಗುರುವೆನಿಸುವನು. ಇದಕ್ಕೆ ಮತ ಸಂಬಂಧೀಯ ಶಿಕ್ಷಣವು ಅವಶ್ಯವಾದುದು.

೨. **ಶಿಕ್ಷಾಗುರು ಸ್ಥಲ:—** ಷಟ್ಸ್ಥಲ ಹಾಗೂ ನೂರೊಂದು ಸ್ಥಲಗಳ ಜ್ಞಾನ ಕುಶಲನಾಗಿ ಅದಾವ ಗುರುವರ್ಯನು ತನ್ನ ಶಿಷ್ಯನಿಗೆ ಮಾರ್ಗಕ್ರಿಯೆ-ಮೀರಿದ ಕ್ರಿಯೆಗಳನ್ನೆಲ್ಲ ಸರಿಯಾಗಿಯೂ ನಿಃಸಂದಿಗ್ಧವಾಗಿಯೂ ಬೋಧಿಸುವನೋ ಆತನೇ ಶಿಕ್ಷಾಗುರುವೆನಿಸುವನು. ಶಿಕ್ಷಣದ ಸತ್‌ಫಲವೇ ಜ್ಞಾನವಾಗಿರುವದು.

೩, **ಜ್ಞಾನ ಗುರು ಸ್ಥಲ:—** ತಾತ್ವಿಕ ಜಗತ್ತು-ಜೀವ-ಶಿವ ಈ ಮೂರರ ಸಂಬಂಧೀಯ ನಿಜ ಸ್ವರೂಪ ಜ್ಞಾನವನ್ನು ಶಿಷ್ಯನ ಮನಸ್ಸಿಗೆ ಅಚ್ಚೊತ್ತುವಂತೆ ಮೂಡಿಸಿ ಅವನನ್ನು ಮಹಾನುಭಾವನನ್ನಾಗಿ ಮಾಡುವ ಜಂಗಮ ಪುಂಗವನೇ ಜ್ಞಾನ ಗುರುವು.

೪. **ಕ್ರಿಯಾ ಲಿಂಗ ಸ್ಥಲ:—** ಮನುಷ್ಯನು ಲೋಕದಲ್ಲಿ ಜೀವಿಸುವಾಗ ಜನರೊಡನೆ ಸಮಾಜದೊಡನೆ ಅನೇಕ ಕಾರ್ಯಗಳನ್ನು ನಡೆಸುವದು ಅನಿವಾರ್ಯವಾಗಿ ಒದಗುತ್ತದಷ್ಟೇ! ಅವನ್ನೆಲ್ಲ ಪರಿಶುದ್ಧವಾಗಿ ಜರುಗಿಸುವ ಸುಜ್ಞಾನವೇ ಕ್ರಿಯಾಲಿಂಗವೆಂದೂ, ಇಷ್ಟಲಿಂಗವೆಂದೂ ಹೇಳಿಕೊಳ್ಳುವದು. ಬಾಹ್ಯದಲ್ಲಿ ನಿರ್ಮಲವಾದ ಕ್ರಿಯೆ ಜರಗುವದಕ್ಕೆ ಒಳಗಿನ ಮನವು ನಿರ್ಮಲವಾಗಿರುವದು ಅವಶ್ಯವು.

೫. **ಭಾವ ಲಿಂಗ ಸ್ಥಲ:—** ಸದ್ಗುರುವಿನ ಶಿಕ್ಷಣ ಲಾಭವನ್ನು ಪಡೆದು, ಅದನ್ನು ಒಳಿತಾಗಿ ಮನನ ಮಾಡಿಕೊಂಡರೆ ಅವನ ಮನಸ್ಸು ಸುಸಂಸ್ಕೃತವಾಗಿ ಇಷ್ಟಾನಿಷ್ಟಗಳನ್ನು ನಿರ್ಣಯಿಸುವ ಜ್ಞಾನವನ್ನು ಪಡೆಯುತ್ತದೆ. ಈ ಸಾರಾಸಾರ ವಿವೇಕಯುಕ್ತ ಮನವೇ ಭಾವಲಿಂಗವು. ಇದನ್ನು ಪ್ರಾಣಲಿಂಗವೆಂದೂ ಕರೆಯುವದುಂಟು. ಮನದ ವಿವೇಕತೆಗೆ ಜ್ಞಾನವೇ ಆಧಾರವು.

೬. ಜ್ಞಾನ ಲಿಂಗ ಸ್ಥಲ:— ಭೋಗ (ಲೌಕಿಕ ಅಶಾಶ್ವತ ಸುಖ) ಮೋಕ್ಷ (ಪಾರಮಾರ್ಥಿಕ ನಿತ್ಯಸುಖ) ಗಳೆರಡೂ ಲಭಿಸು ವಂತೆ ಅದಾವ ಕುಶಲತೆಯಿಂದ ಜಗತ್ತಿನಲ್ಲಿ ವ್ಯವಹರಿಸಬೇಕಾಗು ವದೋ ಆ ಕುಶಲತೆಯನ್ನೊದಗಿಸುವ ದಿವ್ಯ ಶಕ್ತಿಯೇ ಜ್ಞಾನವು. ಈ ಮಹಾಜ್ಞಾನವೇ ಜ್ಞಾನಲಿಂಗವು. ಇದೇ ತೃಪ್ತಿಲಿಂಗವು, ಪರಾ ತ್ಪರ ಲಿಂಗವು. ಸದ್ಭಾವ ಹಸ್ತದಿಂದ ಈ ಲಿಂಗವನ್ನು ಪೂಜಿಸುವದ ರಿಂದ ಇದು ಭಾವಲಿಂಗವೆಂತಲೂ ಕರೆಯಲ್ಪಡುವದು.

೭. ಸ್ವಯ ಜಂಗಮ ಸ್ಥಲ:— ವಿಶ್ವರೂಪ ತಾಳಿ ಪ್ರಕಾಶಿ ಸುತ್ತಿರುವ ಶಿವನನ್ನು ತನ್ನ ಸ್ವರೂಪದ ಮೇಲಿಂದ ಅದಾವನು ಷಟ್ ಸ್ಥಲ—ಏಕೋತ್ತರ ಶತಸ್ಥಲಗಳ ಮೂಲಕ ಅರಿತು, ತನ್ನ ನಿತ್ಯಕೆ ತಾನೇ ಆನಂದಿಸುವನೋ ಅವನೇ ಸ್ವಯ ಜಂಗಮನು.

೮. ಚರ ಜಂಗಮ ಸ್ಥಲ:— ಸ್ವಯ ಜಂಗಮನು, ಎಲ್ಲೆ ಲ್ಲಿಯೂ ಭಕ್ತೋದ್ಧಾರಾರ್ಥವಾಗಿ ಚರಿಸಹತ್ತಿದರೆ ಅವನನ್ನು ಚರ ಜಂಗಮನೆನ್ನುವರು.

೯. ಪರ ಜಂಗಮ ಸ್ಥಲ:— ಜ್ಞಾನಕ್ಕೆ ಸರಿಯಾದ ಇಲ್ಲವೆ ಮಿಗಿಲಾದ ಈ ಜಗತ್ತಿನಲ್ಲಿ ಮತ್ತೊಂದಿಲ್ಲದಿರುವರಿಂದ ಅದೇ ಅತ್ಯಂತ ಶ್ರೇಷ್ಠವೂ ಪವಿತ್ರವೂ ಆಗಿರುವದು. "ನಹಿ ಜ್ಞಾನಾಯ ಸದೃಶಂ ಪವಿತ್ರಮಿಹ ವಿದ್ಯತೆ" ಇಂತಹ ಪರಮಾತ್ಮ ಸ್ವರೂಪನೇ ತಾನಾಗಿ ಅದರಲ್ಲಿ ಬೆರೆದು, ತದಾಕಾರವನ್ನೈದಿದ ಚರಜಂಗಮನೇ ಪರಜಂಗಮನು.

## ಗುರುಲಿಂಗ ಸ್ಥಲ [೯]

೧. ಕ್ರಿಯಾಗಮ (ಕ್ರಿಯಾ + ಆಗಮ) ಸ್ಥಲ:— ಅನಿಷ್ಟ ಕ್ರಿಯೆಗಳನ್ನು ಸಹಸಾ ಬಿಟ್ಟು ಇಷ್ಟ ಕಾರ್ಯಗಳನ್ನು ಮಾತ್ರ ಮಾಡುವ ಒಳ್ಳೆಯ ಒಲವನ್ನು ಕರ್ಮೇಂದ್ರಿಯಗಳಿಗೆ ಹಚ್ಚಿಕೊಳ್ಳುವದೇ ಕ್ರಿಯಾ ಗಮ ಸ್ಥಲವು. ಇದರ ಪ್ರಾಪ್ತಿಗೆ ಮನದ ಬೆಂಬಲವು ಅವಶ್ಯವಾಗಿ ಬೇಕು.

೨. ಭಾವಾಗಮ (ಭಾವ + ಆಗಮ) ಸ್ಥಲ:— ಕುವಿಚಾರ ದುರಾಲೋಚನೆಗಳನ್ನು ತೊರೆದು, ಸುವಿಚಾರ ಸದಾಲೋಚನೆಗಳಲ್ಲಿದ್ದು

ಯಾವಾಗಲೂ ಒಳಿತಾದುದನ್ನೇ ನೆನೆಯುತ್ತಿರುವ ಚಟವನ್ನು ಮನಸ್ಸಿಗೆ ಒಳಿತಾಗಿ ಸಂಬಂಧಿಸಿಕೊಂಡಿರುವದೇ ಭಾವಾಗಮ ಸ್ಥಲವು. ಇದಕ್ಕೆ ಜ್ಞಾನದ ಬೆಂಬಲವಿಲ್ಲದೆ ಸಿದ್ಧಿಯು ದುರ್ಲಭವು.

೩. **ಜ್ಞಾನಾಗಮ ( ಜ್ಞಾನ + ಆಗಮ ) ಸ್ಥಲ**ಃ— ಪ್ರಮಥರು ವಿರಚಿಸಿದ ವಚನ ಗ್ರಂಥೋಕ್ತವಾದ ಸುಜ್ಞಾನವನ್ನು ಮನಃಪೂರ್ವಕವಾಗಿ ಸಂಗ್ರಹಿಸಿಕೊಳ್ಳುವದೇ ಜ್ಞಾನಾಗಮ ಸ್ಥಲವು.

೪. **ಸಕಾಯ ಸ್ಥಲ**ಃ— ಕಾಯ ( ದೇಹ ) ಸಹಿತವಾಗಿದ್ದುಕೊಂಡು ಅದರ ಮೂಲಕವಾಗಿ ಜಗತ್ತಿನಲ್ಲಿ ವ್ಯವಹರಿಸುವದು ಸಕಾಯ ಸ್ಥಲವೆನಿಸುವದು. ಕಾಯ ( ದೇಹ ) ದಿಂದ ಸಹಿತವಾಗಿರುವದೇ ಸಕಾಯವು. ಈ ಕಾಯ ಮೂಲಕವಾಗಿಯೇ ಜಗತ್ತಿನ ಎಲ್ಲ ಬಾಹ್ಯ ಕಾರ್ಯಗಳನ್ನು ನಡೆಸುವದರಿಂದ ಇದು ಸಕಾಯ ಸ್ಥಲವು ಎನಿಸುವದು.

೫. **ಅಕಾಯ ಸ್ಥಲ**:— ಹೊರಗೆ ಯಾವ ರೀತಿಯಿಂದಲೂ ತೋರದೆ ಅಂತಃಕರಣವೆನಿಸುವ ಮನಸ್ಸೇ ಅಕಾಯವು. ಸಕಾಯದಿಂದ ಜರುಗಿಸಲ್ಪಡುವ ಕಾರ್ಯಗಳೆಲ್ಲ ಡಾಂಭಿಕತನದವಿರದೆ ಕೇವಲ ಮನಃಪೂರ್ವಕವಾಗಿ ಸಾಗುವದು ಅವಶ್ಯವಾದುದು. ಹೀಗೆ ಮನದ ಬೆಂಬಲವಿರುವದೇ ಅಕಾಯ ಸ್ಥಲವು.

೬. **ಪರಕಾಯ ಸ್ಥಲ**:— ಜಗತ್ತಿನೊಳಗಿನ ವಸ್ತುಗಳಲ್ಲಿ ಅತ್ಯಂತ ಶ್ರೇಷ್ಠವೂ ಪವಿತ್ರವೂ ಆದುದು ಜ್ಞಾನವಷ್ಟೇ! ಆದುದರಿಂದ ಅದೇ ಪರವಾದುದು. ಈ ಜ್ಞಾನ ರೂಪ ಕ್ರಿಯೆದ ಬೆಂಬಲದಿಂದಲೇ ಎಲ್ಲ ಕಾರ್ಯಗಳು ಸಾಗುವದೇ ಪರಕಾಯ ಸ್ಥಲವೆನಿಸುವದು.

೭. **ಧರ್ಮಾಚಾರ ಸ್ಥಲ** ತನಗೂ ಇತರರಿಗೂ ಕೂಡಿಯೇ ಸುಖವಾಗುವಂತೆ ವರ್ತಿಸುವದೇ ಧರ್ಮವೆನಿಸುವದು. ಇದೇ ಮನುಷ್ಯ ಜಾತಿಯ ಸಾಮಾನ್ಯ ಧರ್ಮವು. ಇದಕ್ಕೆ ಬಾಧೆ ಬರದಂತೆ ಆಚರಿಸುವದೇ ಧರ್ಮಾಚಾರ ಸ್ಥಲವು.

೮. **ಭಾವಾಚಾರ ಸ್ಥಲ—** ಎಲ್ಲ ಲಿಂಗಧಾರಿಗಳಲ್ಲಿ ಸಮತಾ ಭಾವವಿಡಿದು ಆಚರಿಸುವದೇ ಭಾವಾಚಾರ ಸ್ಥಲವು. ಇಲ್ಲಿ ಕಾಯಕ ಮೊದಲಾದವುಗಳನ್ನು ನೋಡಕೂಡದು.

೯ **ಜ್ಞಾನಾಚಾರ ಸ್ಥಲ—** ಪ್ರಮಥರು ತಾವು ಆಚರಿಸಿ ಸಯುಕ್ತಿಕವೆಂದು ತೋರಿದುದನ್ನೇ ತಮ್ಮ ವಚನ ಗ್ರಂಥಗಳಲ್ಲಿ ಷಟ್ಸ್ಥಲ ಜ್ಞಾನರೂಪದಿಂದ ಸಕಲರಿಗೂ ಮಾರ್ಗದರ್ಶನಾರ್ಥವಾಗಿ ಬಿತ್ತರಿಸಿದ್ದಾರೆ. ಈ ಶುದ್ಧ ಜ್ಞಾನವನ್ನನುಸರಿಸಿ ಆಚರಿಸುವದೇ ಜ್ಞಾನಾಚಾರ ಸ್ಥಲವೆನಿಸುವದು.

## ಶಿವಲಿಂಗ ಸ್ಥಳಗಳು. [೯]

೧. **ಕಾಯಾನುಗ್ರಹ ಸ್ಥಳಃ—** ಶರೀರವನ್ನು ತನ್ನ ಆಚರಣೆಗೆ ಅನುಕೂಲಪಡಿಸಿಕೊಳ್ಳುವದೇ ಕಾಯಾನುಗ್ರಹವು. ಇಲ್ಲಿ ಮೊದಲು "ಕಾಯುವೇ ನಾನು" ಎಂದು ಬಡಿದಿರುವ ಭೂತವನ್ನು ಹೊಡೆದಿಕ್ಕಬೇಕು. ಒಳಗಿರುವ ಶಿವರೂಪ ಬೀಜದಿಂದಲೇ ಈ ದೇಹ ವೃಕ್ಷವು ಹುಟ್ಟಿರುವದರಿಂದ ಈ ಕಾಯುವು ಶಿವನದು ನನ್ನದಲ್ಲ "भक्तकायो ममकायः" ಎಂದು ಹೇಳಿರುವದಾದರೂ ಇದೇ ಕಾರಣದಿಂದ!

೨. **ಇಂದ್ರಿಯಾನುಗ್ರಹ ಸ್ಥಳಃ—** ಪಂಚ ಜ್ಞಾನೇಂದ್ರಿಯುಗಳನ್ನೂ ಪಂಚ ಕರ್ಮೇಂದ್ರಿಯುಗಳನ್ನೂ ತನ್ನ ಆಚರಣೆಗೆ ಪ್ರತಿಬಂಧಕವಾಗದಂತೆ ಮಾಡಿಕೊಳ್ಳುವದೇ ಇಂದ್ರಿಯಾನುಗ್ರಹವೆನಿಸುವದು. ವಿಷಯುಗಳನ್ನು ಕಂಡೊಡನೆ ಯೋಗ್ಯಾಯೋಗ್ಯ, ನ್ಯಾಯಾನ್ಯಾಯುವಾವುದನ್ನೂ ಯೋಚಿಸದೆ ಅದನ್ನು ಪಡೆದು ಭೋಗಿಸಲು, ಅವು ಹವಣಿಸದಂತೆ ಅವನ್ನು ತನ್ನ ಸುಜ್ಞಾನಕ್ಕೆ (ಲಿಂಗಕ್ಕೆ) ಆಧೀನ ಪಡಿಸಿಕೊಳ್ಳಬೇಕು. ಇದನ್ನೇ ಲಿಂಗಾರ್ಪಿತ ಮಾಡಿ ಪ್ರಸಾದ ರೂಪಕ್ಕೆ ತರದೇ ಏನೂ ಗ್ರಹಿಸಬಾರದೆಂದು ಹೇಳಿರುವರು.

೩. **ಪ್ರಾಣಾನುಗ್ರಹ ಸ್ಥಳಃ—** ಪ್ರಾಣವೆಂದರೆ, ಜೀವ. ಅದು ನಿಜವಾಗಿ ಪರಮಾತ್ಮನ ಸ್ವರೂಪವು. ಅಂತೇ ನಿತ್ಯವೂ ಸ್ವತಂತ್ರವೂ ತೇಜೋಮಯುವೂ ಆಮುದು. ಆದರೂ ಅದು ದೇಹ ಸಂಗದಿಂದ ತನ್ನ ನಿಜ ಸ್ವರೂಪವನ್ನು ಮರೆತು, ದೇಹವೇ ತನಗೆ ಆಧಾರ, ಅದರ

ಹಾನಿ ವೃದ್ಧಿಗಳೇ ತನ್ನ ಹಾನಿ ವೃದ್ಧಿಗಳು ಎಂದು ಭ್ರಮಿಸಿರುವದು. ಅದರ ಈ ಭ್ರಮೆಯನ್ನು ಬಿಡಿಸಿ ನಿಜವಾದ ಪೂರ್ವ ರೂಪವನ್ನು ಅದು ತಾಳುವಂತೆ ಮಾಡುವದೇ ಪ್ರಾಣಾನುಗ್ರಹ ಸ್ಥಳವು.

೪. **ಕಾಯಾರ್ಪಿತ ಸ್ಥಳಃ**— ದೇಹವು ನಿಜವಾಗಿ ಶಿವನ ದಾದ ಮೇಲೆ ಅದು ತನ್ನದೆಂದು ಭಕ್ತನು ಭಾವಿಸದೆ ಅದನ್ನು ನಿಜ ವಾಗಿ ಶಿವನಿಗೆ (ಶಿವಲಿಂಗಕ್ಕೆ) ಅರ್ಪಿಸಿ ಬಿಡುವದು ನ್ಯಾಯವೂ ವಿಹಿ ತವೂ ಆದುದು. ಇದೇ ಕಾಯಾರ್ಪಿತ ಸ್ಥಳವು.

೫. **ಕರಣಾರ್ಪಿತ ಸ್ಥಳಃ**— ಕಾಯವು ಶಿವನದಾದ ಮೇಲೆ ಆ ಕಾಯದ ಹೊರಗೊಳಗಿರುವ ಇಂದ್ರಿಯ ಕರಣಂಗಳೆಲ್ಲವೂ ಶಿವನವೆಂ ಬುದು ತಾನೇ ಹೊಳೆಯುವದು. ಆದುದರಿಂದ ಅವುಗಳಿಗಾದರೂ ತನ್ನವು ಎನ್ನದೆ ಅವನ್ನು ಸಹ ಶಿವನಿಗೆ ಅರ್ಪಿಸುವದು ಉಚಿತವಾ ದುದು. ಇದೇ ಕರಣಾರ್ಪಿತ ಸ್ಥಳವು.

೬. **ಭಾವಾರ್ಪಿತ ಸ್ಥಳಃ**— ಕರಣಾರ್ಪಿತ ಮಾಡಿದೊಡನೆಯೇ ಅವುಗಳಲ್ಲಿರುವ ಮನವಾದರೂ ಶಿವನಿಗೆ ಸಹಜವಾಗಿಯೇ ಅರ್ಪಿತವಾ ಗುವದಷ್ಟೇ! ಈ ಮನಕ್ಕೆ ಭಾವವೆಂತಲೂ ಹೆಸರು. ಸದ್ಭಾವನೆ ದುರ್ಭಾವನೆಗಳಿಗೆ ಅದೇ ಮೂಲವು. ಜೀವಾತ್ಮನು ದೇಹದೊಡನಾಡಿ ಯಾಗಿ ತಾನು ದೇಹದಂತೆ ಅಸ್ಥಿರನೂ ಅಜ್ಞಾನಿಯೂ ಇರುವೆನೆಂದು ಪಡೆದ ಅಸದ್ಭಾವನೆಯನ್ನು ಲಿಂಗಕ್ಕೆ (ಜ್ಞಾನಕ್ಕೆ) ಸಮರ್ಪಣೆ ಮಾಡಿ (ತಾತ್ವಿಕ ಜ್ಞಾನ ದೃಷ್ಟಿಯಿಂದ ನೋಡಿ) ಪರಿಶುದ್ಧನಾಗುವನು. ಇದೇ ಭಾವಾರ್ಪಿತ ಸ್ಥಳವು.

೭. **ಶಿಷ್ಯ ಸ್ಥಳಃ** ಕಾಯ-ಕರಣ-ಭಾವಗಳೆಲ್ಲ ಶಿವಾರ್ಪಿತವಾದ ಮೇಲೆ, ದೇಹದೊಳಗೆ ಪರಿಶುದ್ಧವಾದ ಜೀವ (ಪಿಂಡ) ನೊಬ್ಬನೇ ಉಳಿದನು. ಅವನೇ ಶಿವಲಿಂಗದ ಶಿಷ್ಯ (ಮರಿ) ನಾಗಿ ಮುಂದೆ ವರ್ತಿಸುವನು. ಇದೇ ಶಿಷ್ಯ ಸ್ಥಲವು.

೮. **ಶುಶ್ರೂಷ ಸ್ಥಲಃ**-- ಶುಶ್ರೂಷೆ ಎಂದರೆ ಸೇವೆ. ಸೇವೆಯು ಸಲ್ಲಿ, ಸಾರ್ಥಕವಾಗಬೇಕಾದರೆ ಅದಕ್ಕೆ ಅಂತಃಕರಣಗಳು ಮುಖ್ಯವಾಗಿ ಭಕ್ತಿಯುಕ್ತ ಮನಸ್ಸು ಅನುಕೂಲವಿರಲೇ ಬೇಕು. ಹೀಗೆ ಅಂತಃಕರ

ಣದಿಂದ ಶಿವಲಿಂಗದ ಸೇವೆ ಮಾಡಿ ಅದನ್ನು "ಯದ್ಯತ್ ಕರ್ಮ ಕರೋಮಿ ತತ್ತದಾಖಿಲಮ್, ಶಂಭೋತವಾರಾಧನ್" ಎಂದು ಶಿವನ ಪ್ರತಿನಿಧಿಯಾಗಿ ಭೇದ ಭಾವವಿಲ್ಲದೆ ಜರುಗಿಸಹತ್ತಿದರೆ ಅದೇ ಶುಶ್ರೂಷಾ ಸ್ಥಳವು. ಲೋಕ ಸೇವೆಯೇ ಶಿವನ ಶುಶ್ರೂಷೆಯಲ್ಲದೆ ಬೇರೊಂದಲ್ಲ.

೯. **ಸೇವ್ಯ ಸ್ಥಳಃ**— ಹೀಗೆ ಭಕ್ತನು ತನ್ನದೆಂದಿದ್ದುದನ್ನೆಲ್ಲ ಅರ್ಪಿಸಿ ಶಿವನ ಆಳಾಗಿ ನಿಃಸ್ವಾರ್ಥದಿಂದ ಆಚರಿಸುವದನ್ನು ಜನರು ನೋಡಿ ಧನ್ಯರಾಗಿ ಅವನ ಅನುಕರಣ ಮಾಡಲು ಯತ್ನಿಸುವರು. ಅವನನ್ನು ಶಿವನಂತೆ ವಂದ್ಯನೆಂದು ಭಾವಿಸಿ ಪೂಜ್ಯತೆಯಿಂದ ನಡ ಕೊಳ್ಳುವರು. ಇದೇ ಸೇವ್ಯ ಸ್ಥಳವು.

## ಜಂಗಮಲಿಂಗ ಸ್ಥಲಗಳು. [೯]

೧. **ಜೀವಾತ್ಮ ಸ್ಥಳಃ**— ಜೀವಾತ್ಮನೆಂದರೆ ಜೀವರೂಪ ಹೊಂದಿದ ಆತ್ಮನು. ಇಡೀ ಜಗದ ಚೈತನ್ಯಸ್ವರೂಪನಾಗಿ ಬೆಳಗುವ ಪರಮಾತ್ಮನೇ ಭಕ್ತ ಕಾಯದಲ್ಲಿ ಸೇರಿ ಜೀವನೆನಿಸುವನು. ಇದೇ ಜೀವಾತ್ಮ ಸ್ಥಳವು.

೨. **ಅಂತರಾತ್ಮ ಸ್ಥಳಃ**— ಜೀವಾತ್ಮನು ತನಗೆ ದೇಹದ ಸಹವಾಸದಿಂದ ತಟ್ಟಿದ ಕಲಂಕವನ್ನು ಕಳಕೊಂಡು "ನಿತ್ಯನೂ ಪರಮಾವಧಿ ತೇಜೋರೂಪನೂ ಅತ್ಯಂತ ಪವಿತ್ರನೂ ಸ್ವತಂತ್ರನೂ ಇತ್ಯಾದಿ ದಿವ್ಯ ರೂಪ" ನು ತಾನಿರುವೆನೆಂದು ತಿಳಿದುಕೊಂಡು ನಿಜತ್ವವನ್ನು ಪಡೆದೊಡನೆಯೇ ಅವನು ಪರಿಶುದ್ಧನಾಗಿ ಬೆಳಗಹತ್ತುವನು. ಇದೇ ಅವನ ಜೀವತ್ವ ಹೋಗಿ ಅಂತರಾತ್ಮ ಸ್ಥಳವನ್ನೈದುವಿಕೆ.

೩. **ಪರಮಾತ್ಮ ಸ್ಥಳಃ**— ಮೇಲೆ ಹೇಳಿದಂತೆ ಅಂತರಾತ್ಮನು ತೇಜೋಮಯನಾಗಲು, ಅವನು ತಾನು ಜಗನ್ಮಯನಾದ ಪರಮಾತ್ಮನೇ ಹೊರತು, ಅನ್ಯನೇನೂ ಅಲ್ಲ, ಎಂಬುದನ್ನು ದೃಢವಾಗಿ ನಂಬಿದರೆ ಅದೇ ಪರಮಾತ್ಮ ಸ್ಥಳವೆನಿಸುವದು.

೪. **ನಿರ್ದೇಹಾಗಮ ಸ್ಥಳ**— ಕಾಯಾರ್ಪಿತವನಕ ಆಗಿಯೇ ಹೋಗಿದೆ. ಆದರೂ ನಡುನಡುವೆ ಮರವೆಯಾಗಿ ದೇಹವನ್ನು ತನ್ನ

ದೆಂದು, ಅದನ್ನು ಸ್ವಾರ್ಥದ ಕಾರ್ಯಕ್ಕೆ ಉಪಯೋಗಿಸುವ ಮೋಹ ವಾಗುವ ಸಂಭವವಿರುತ್ತದೆ ಹಾಗೆ ಸಹಸಾ ಮಾಡಕೂಡದು. ಅದ ರಿಂದ ಮತ್ತೆ ಮೊದಲಿನ ಹಾಡೇ ಬರುವದು. ಅದನ್ನು ತೀರ ಮರೆತು ಬಿಡುವದೇ ನಿರ್ದೇಹಾಗಮ ಸ್ಥಳವು.

೫. **ನಿರ್ಭಾವಾಗಮ ಸ್ಥಳ:—** ಕಾಯವನ್ನು ಸಂಪೂರ್ಣ ವಾಗಿ ಮರೆತಂತೆ, ಭಾವವಾದರೂ ಪರಮಾತ್ಮನದೇ ಎಂದು ಅದನ್ನು ಸಹ ಎಂದೆಂದೂ ಸಹ ಸ್ವಾರ್ಥಕ್ಕೋಸುಗ ಬಳಿಸಕೂಡದು. ಇಂಥಹ ಚಟವನ್ನು ಹಚ್ಚಿಕೊಳ್ಳುವದೇ ನಿರ್ಭಾವಾಗಮವು.

೬. **ನಷ್ಟಾಗಮ ಸ್ಥಳ:—** ಕಾಯ ಕರಣೇಂದ್ರಿಯ ಭಾವ ಇವೆಲ್ಲ ತನಗೆ ಮೊದಲೇ ಇಲ್ಲವಾಗಿರುವವು. ಜೀವವೊಂದು ಉಳಿ ದಿತ್ತು. ಅದು ಸಹ ಪರಮಾತ್ಮ ಸ್ವರೂಪವೇ ಆದಮೇಲೆ ಮುಂದೆ ನಾನು ಎನ್ನಲಿಕ್ಕೇನೂ ಉಳಿಯಲಿಲ್ಲ. ಹೀಗೆ ನಾನು ಎಂಬುದು ಸಂಪೂರ್ಣ ನಷ್ಟವಾಗುವದೇ ನಷ್ಟಾಗಮ ಸ್ಥಳವು.

೭. **ಆದಿಪ್ರಸಾದಿ ಸ್ಥಳ—** ಭಕ್ತನು ಹೀಗೆ ಕಾಯ-ಕರಣ-ಭಾವ-ಪ್ರಾಣಗಳನ್ನೆಲ್ಲ ಲಿಂಗಕ್ಕೆ ಅರ್ಪಿಸಿದ ಮೇಲೆ ಅಂದರ ಬೆರೆಸಿ ಒಂದುಗೂಡಿಸಿದ ಮೇಲೆ ಅಲ್ಲಿ ಜಗತ್ತಿನ ಉತ್ಪತ್ತಿಗೆ ಕಾರಣವಾದ ಪರಮಾತ್ಮ ಸ್ವರೂಪವೇ ಉಳಿಯಿತು. ಹೀಗೆ ( ಆದಿ ) ಪರಮಾತ್ಮ ಸ್ವರೂಪಿಯಾಗುವದೇ ಆದಿಪ್ರಸಾದಿ ಸ್ಥಳವು.

೮ **ಅಂತ್ಯಪ್ರಸಾದಿ ಸ್ಥಳ—** ಜಗತ್ತೆಲ್ಲವೂ ಪ್ರಳಯ ಕಾಲದಲ್ಲಿ ನಾಶವಾದಾಗ ಅದು ಯಾವ ವಸ್ತುವಿನಲ್ಲಿ ಅಡಗುವದೋ ಅದು ಅಂತ್ಯಪ್ರಸಾದವು. ಆದಿಪ್ರಸಾದವೇ ಅಂತ್ಯಪ್ರಸಾದವಲ್ಲದೇ ಬೇರೊಂ ದಲ್ಲ. ಯಾಕಂದರೆ "ಲೀಯತೆ ಗಮ್ಯತೆಯತ್ರ ಜದೇತಚ್ಚರಾಚರಂ। ತದೇವಂ ಲಿಂಗಂ" ಎಂದು ಹೇಳಿದುದರಿಂದ ಆ ಲಿಂಗವೇ ಆದಿಪ್ರಸಾ ದವೂ ಅಹುದು! ಅಂತ್ಯಪ್ರಸಾದವೂ ಅಹುದು!

೯. **ಸೇವ್ಯ ಪ್ರಸಾದಿ ಸ್ಥಲ—** ಹೀಗೆ ಆದಿ ಅಂತ್ಯಗಳಿಗೆ ಆಧಾರ ವಾದ ಲಿಂಗವೇ ( ಪರಮಾತ್ಮನೇ ) ಜಗತ್ರಯಕ್ಕೆ ಸೇವ್ಯನಾದನು. ಆದುದರಿಂದ ಆದಿ ಅಂತ್ಯ ಪ್ರಸಾದವೆನಿಸಿದ ಲಿಂಗ ( ಪರವಸ್ತು ) ವೇ ಸೇವ್ಯ ಪ್ರಸಾದವೆನಿಸುವದು.

## ಪ್ರಸಾದಲಿಂಗ ಸ್ಥಲಗಳು [೧೨]

೧. **ದೀಕ್ಷಾ ಪಾದೋದಕಃ**— ದೀಕ್ಷಾ ಗುರುವಾದ ಪಾದದಿಂದ ಸ್ರವಿಸುವ ಉದಕವೇ ದೀಕ್ಷಾ ಪಾದೋದಕವು. ಇದರಿಂದ ಪಾದೋದಕವೆಂದರೆ ಅನುಗ್ರಹ ಅಥವಾ ಕೃಪೆ ಎಂದರ್ಥವಾಗುವದು. ದೀಕ್ಷೆ ಎಂದರೆ ಲಿಂಗ ಸಂಬಂಧವನ್ನು ಕೊಟ್ಟು ಮಲತ್ರಯ ( ಮೂರು ವಿಧದ ಅಜ್ಞಾನ ) ವನ್ನು ನಷ್ಟಗೊಳಿಸುವ ಸಂಸ್ಕಾರವು ಆ ಸಂಸ್ಕಾರದ ಕೃಪೆಯಾಗುವದೆಂದರೆ ಸುಜ್ಞಾನವು ನೆಲೆಗೊಂಡು ಅಜ್ಞಾನಕ್ಕೆ ಎಡೆ ಇಲ್ಲದಂತಾದುದು ಅಡಿಗಡಿಗೆ ಕಂಡುಬರಲಿಕ್ಕೆಬೇಕು. ಈ ಪ್ರಕಾರದ ಸ್ಥಿತಿಯು ಪ್ರಾಪ್ತವಾಗುವದೇ ದೀಕ್ಷಾ ಪಾದೋದಕ ಸ್ಥಳವು.

೨. **ಶಿಕ್ಷಾ ಪಾದೋದಕ ಸ್ಥಲಃ**—ಶಿಕ್ಷೆ ಎಂದರೆ ಮತ ಸಂಬಂಧೀಯ ಎಲ್ಲ ಸಂಗತಿಗಳನ್ನು ಕಲಿತುಕೊಳ್ಳೋಣವು. ಈ ಶಿಕ್ಷಣದ ಅನುಗ್ರಹವೆಂದರೆ ಆ ಕಲಿತುದೆಲ್ಲವೂ ನಿಃಸಂದಿಗ್ಧ ಮನನವಾಗಿ ಆಚಿಟ್ಟೊತ್ತಿದಂತೆ ಸ್ಥಿರವಾಗಿ ಉಳಿಯುವದು. ಹೀಗೆ ಉಳಿದರೆ ಅದೇ ಶಿಕ್ಷಾ ಪಾದೋದಕ ಸ್ಥಳವು ಎನಿಸುವದು.

೩. **ಜ್ಞಾನ ಪಾದೋದಕ ಸ್ಥಲಃ**— ತಾತ್ವಿಕ ಜ್ಞಾನವೇ ಜ್ಞಾನವು. ತತ್ + ತ್ವ + ಇಕ = ತಾತ್ವಿಕ ಎಂದಾಗಿರುವದು. ತತ್ ಎಂಬುದೇ ಸತ್. ಓಂ ತತ್ ಸತ್ ಎಂಬುದೇ ಆಧಾರ. ಈ ಸದ್ವಸ್ತುವೇ ಮೇಲೆ ಹೇಳಿದ ಆದಿ ಅಂತ್ಯ ಸೇವ್ಯ ಪ್ರಸಾದ. ಇಂತಹ ಈ ಪ್ರಸಾದತ್ವದ ಅನುಗ್ರಹವೇ ಜ್ಞಾನ ಪಾದೋದಕ ಸ್ಥಲವು.

೪. **ಕ್ರಿಯಾ ನಿಷ್ಪತ್ತಿ ಸ್ಥಲಃ**— ತ್ರಿವಿಧ ಪಾದೋದಕ ಪಡೆದವನು ಮುಂದೆ ಜಗತ್ತಿನಲ್ಲಿದ್ದರೂ ಅವನು ನಿಃಸ್ವಾರ್ಥನೆನಿಸುವನು. ಅವನಿಗೆ ಸ್ವಾರ್ಥ ಅಂದರೆ ನಾನು ನನ್ನದು ಎಂಬುದು ಸಂಪೂರ್ಣ ಅಳಿದೇ ಹೋಗಿರುವದು. ಆದುದರಿಂದ ಅವನಿಂದಾಗುವ ಕ್ರಿಯೆಗಳೆಲ್ಲ ಕೇವಲ ಸಾಹಜಿಕ ರೀತಿಯಿಂದ ಉದ್ಭವಿಸುವವು. ಅವು ಕೇವಲ ಜಗದೋದ್ಧಾರಾರ್ಥವಾಗಿಯೇ ನಡೆಯುವವು. ಅವು ಆದರೂ ಸರಿಯೇ ಬಿಟ್ಟರೂ ಸರಿಯೇ. ಆ ಅಂಗನಿಗೇನೂ ಅವುಗಳ ಪರವೆಯೇ ಇರುವದಿಲ್ಲ. ಈ ರೀತಿ ಕ್ರಿಯೆಗಳು ಜರಗುವದೇ ಕ್ರಿಯಾ ನಿಷ್ಪತ್ತಿ ಸ್ಥಲವು. ನಿಷ್ಪತ್ತಿ ಎಂದರೆ ಇದ್ದೂ ಇಲ್ಲದಂತೆ ಇರೋಣ.

೫. **ಭಾವ ನಿಷ್ಪತ್ತಿ ಸ್ಥಲ**:– ಕ್ರಿಯೆಗಳು ಹೇಗೆ ಸಹಜವಾಗಿ ನಡೆಯುವವೋ ಅದರಂತೆಯೇ ಶರಣನಲ್ಲಿ ಯಾವಾಗಲೂ ಸದ್ಭಾವನೆಗಳೇ ಉದಯಿಸುವವು. ಸ್ವಾರ್ಥವಿದ್ದರೇನೇ ಕುಭಾವನೆಗಳಿಗೆ ಪ್ರವೇಶ! ಅದೇ ಇಲ್ಲದ ಮೇಲೆ ಆ ಭಾವನೆಗಳೆಲ್ಲ ಸಹಜವಾಗಿಯೇ ಹೊರ ಹೊಮ್ಮುವವು ಹೀಗೆ ಭಾವವಾಗುವದೇ ಭಾವ ನಿಷ್ಪತ್ತಿ ಸ್ಥಲವು.

೬. **ಜ್ಞಾನ ನಿಷ್ಪತ್ತಿ ಸ್ಥಲ**:– ಇಂತಹ ಭಾವವುಳ್ಳವನ ಜ್ಞಾನವಾದರೂ ಸಹಜವಾಗಿಯೇ ಉದ್ಭವಿಸುವದು. ಅದು ಯಾವಾಗಲೂ ಜಗದುದ್ಧಾರಕ್ಕೇನೇ ಸಂಬಂಧಿಸಿದ್ದಾಗುವದು. ಇದೇ ಜ್ಞಾನ ನಿಷ್ಪತ್ತಿ ಸ್ಥಲವು.

೭. **ಪಿಂಡಾಕಾಶ ಸ್ಥಲ**:— ಆಕಾಶದ ವಿಸ್ತಾರವು ಅನಂತವಾಗಿದ್ದು ಮಹಾಕಾಶವೆನಿಸಿ ಅದು ತನ್ನಲ್ಲಿ ಎಲ್ಲ ಪದಾರ್ಥಗಳಿಗೆ ಆಶ್ರಯು (ಸ್ಥಾನ) ಕೊಟ್ಟಿರುವದು. ಅದರಂತೆ ಅದು ಪಿಂಡಕ್ಕೂ ಕೂಡ ಇರಲು ಆಶ್ರಯು ಸ್ಥಾನವಾಗಿದೆ. ಈ ಪಿಂಡವನ್ನು ವ್ಯಾಪಿಸಿರುವ ಆಕಾಶದ ಅಂಶವೇ ಪಿಂಡಾಕಾಶವು.

೮. **ಬಿಂದ್ವಾಕಾಶ ಸ್ಥಲ**: ಈ ಪಿಂಡವು ಹಿಡಕೊಂಡ ಆಕಾಶದ ಅಂಶವನ್ನು ಮಹಾಕಾಶದೊಡನೆ ಹೋಲಿಸಿದರೆ ಅದು ತೀರ ಸ್ವಲ್ಪ ಅಂದರೆ ಬಿಂದುಪ್ರಾಯುವಾಗುವದು. ಆದುದರಿಂದ ಅದನ್ನು ಬಿಂದ್ವಾಕಾಶವೆಂದು ಹೇಳುವರು. ಈ ಪಿಂಡಾಕಾಶ ಬಿಂದ್ವಾಕಾಶಗಳು ಮಹಾಕಾಶವನ್ನೇ ಒಡಗೊಂಡಿರುವವು. ಘನಾಕಾಶ ಮಹಾಕಾಶಗಳಂತೆಯೇ ಮಹಾಕಾಶದೊಡನೆ ಅಭಿನ್ನವಾಗಿರುವವು. ಬಿಂದ್ವಾಕಾಶವೇ ಮತ್ತೆ ಹೃದಯಾಕಾಶ, ಹರಾಕಾಶವೆಂದೂ ಹೇಳಲ್ಪಡುವದು. ಅದೇ ಪ್ರಾಣಲಿಂಗನಿರುವ ಸ್ಥಲವು.

೯ **ಮಹಾಕಾಶ ಸ್ಥಲ**:– ಪಿಂಡಾಕಾಶ, ಬಿಂದ್ವಾಕಾಶಗಳೆರಡಕ್ಕೂ ಆಧಾರವಾಗಿ ಹಬ್ಬಿರುವ ಆಕಾಶವೇ ಮಹಾಕಾಶ ಸ್ಥಲವು. ಈ ಆಕಾಶದಂತೆಯೇ ಪರಮಾತ್ಮನಾದರೂ ದೇಹದಲ್ಲಿ ಅಂತರಾತ್ಮನಾಗಿಯೂ ಜೀವಾತ್ಮನಾಗಿಯೂ ಇರುವನೆಂಬುದಕ್ಕೆ ಈ ಸ್ಥಲಗಳು ದೃಷ್ಟಾಂತವಾಗಿವೆ.

೧೦. **ಕ್ರಿಯಾ ಪ್ರಕಾಶ ಸ್ಥಲ:**— ನಿಷ್ಪತ್ತಿಯನಾಂತ ಶರಣನ ಅಂಗದಲ್ಲಿ ಪರಮಾತ್ಮನೇ ಜೀವಾತ್ಮ ಅಂತರಾತ್ಮ ರೂಪದಿಂದ ವಾಸವಾಗಿದ್ದುಕೊಂಡು, ಮಹಾಕಾಶವು ಹೇಗೆ ಪಿಂಡಾಕಾಶ ಬಿಂದ್ವಾಕಾಶಗಳ ರೂಪದಿಂದ ತೋಳಗಿ ಬೆಳಗುತ್ತಿರುವಂತೆ, ತಾನೇ ಆತನ ದ್ವಾರವಾಗಿ ಅನೇಕ ಕ್ರಿಯೆಗಳನ್ನು ಮಾಡುತ್ತಿರುವನು. ಎಂಬುದೇ ಕ್ರಿಯಾ ಪ್ರಕಾಶ ಸ್ಥಲವು ಈ ಕ್ರಿಯೆಗಳ ಸಂಬಂಧವು ಶರಣನಿಗೆ ಅದಾವ ರೀತಿಯಿಂದಲೂ ಇರುವದಿಲ್ಲ. ಯಾಕಂದರೆ ಅವನಲ್ಲಿ ಅವನ ಅಸ್ತಿತ್ವವೇ ಉಳಿದಿರುವದಿಲ್ಲ

೧೧ **ಭಾವ ಪ್ರಕಾಶ ಸ್ಥಲಃ**— ಕ್ರಿಯೆಗಳು ಹೇಗೆ ಪರಮಾತ್ಮನಿಂದಲೇ ಬೆಳಕಿಗೆ ಬರುವವೋ ಅದೇ ಪ್ರಕಾರ ಶರಣನ ಭಾವಗಳಾದರೂ ಅವನಿಗೆ ಸಂಬಂಧಿಸಿರದೆ ಆ ಪರಮಾತ್ಮನಿಂದಲೇ ಹೊರಹೊಮ್ಮಿ ಜೈಲ್ಗರಿಯುತ್ತಿರುವದರಿಂದ ಆತನು ಭಾವ ಪ್ರಕಾಶ ಸ್ಥಳದಲ್ಲಿರುವನು.

೧೨. **ಜ್ಞಾನ ಪ್ರಕಾಶ ಸ್ಥಲಃ**—ಕ್ರಿಯಾ ಪ್ರಕಾಶ ಭಾವ ಪ್ರಕಾಶಗಳು ಹೇಗೆ ಶರಣನಲ್ಲಿ ನೆಲೆಸಿದ ಪರಮಾತ್ಮನಿಂದ ( ಪ್ರಸಾದಲಿಂಗದಿಂದ ) ತಾವಾಗಿಯೇ ಜಗದುದ್ಧಾರಕ್ಕಾಗಿ ಹೊರಸೂಸಿ ಹೊಳೆಯುತ್ತಿರುವವೋ ಅದರಂತೆಯೇ ಶರಣನ ಜ್ಞಾನವಾದರೂ ಆ ಪರಮಾತ್ಮನಿಂದಲೇ ಉದ್ಧರಿಸಿ ತೇಜೋಮಯವಾಗುತ್ತಿರುವದು. ಇದೇ ಜ್ಞಾನ ಪ್ರಕಾಶ ಸ್ಥಲವು.

## ಮಹಾಲಿಂಗ ಸ್ಥಲಗಳು [೯]

೧. **ಸ್ವೀಕೃತ ಪ್ರಸಾದಿಃ**— ಸ್ವೀಕೃತ ಪ್ರಸಾದಿ ಎಂದರೆ ತನ್ನವೆಂದು ಬಗೆದ ಪದಾರ್ಥಗಳನ್ನು ಮಾತ್ರ ಪ್ರಸಾದ ಸ್ವರೂಪಕ್ಕೆ ಅಳವಡಿಸಿಕೊಂಡವನು. ಅಂಥ ವಸ್ತುಗಳೆಂದರೆ— ಕಾಯ, ಕರಣ, ಇಂದ್ರಿಯ, ಭಾವ, ಜೀವಗಳು. ಕಾಯ ಕರಣೇಂದ್ರಿಯ ಭಾವಗಳನ್ನು ಪ್ರಸಾದಿ ಸ್ಥಳದಲ್ಲಿಯೂ, ಜೀವವನ್ನು ಪ್ರಾಣಲಿಂಗಿಯ ಸ್ಥಳದಲ್ಲಿಯೂ ಶಿವಲಿಂಗ ಜಂಗಮಲಿಂಗಕ್ಕೆ ನೀಡಿ ಆತನು ನಿರ್ದೇಹಾಗಮ, ನಿರ್ಭಾವಾಗಮ, ನಷ್ಟಾಗಮ ಹೊಂದಿ, ಆದಿ, ಅಂತ್ಯ, ಸೇವ್ಯ ಪ್ರಸಾದಿಯಾಗಿರುವನಷ್ಟೇ! ಮುಂದೆ ಆತನೇ ನಿಷ್ಪತ್ತಿಯನ್ನು ಹೊಂದಿ ಸಹಜ

ಕ್ರಿಯಾ ಭಾವ ಜ್ಞಾನಗಳನ್ನು ಪ್ರಕಾಶಿಸ ಹತ್ತಿದನು. ಇದಕ್ಕಿಂತ ಹೆಚ್ಚಿನದೇನೂ ಕಂಡುಬಂದಿಲ್ಲ

**೩ ಶಿಷ್ಟೋದನ ಪ್ರಸಾದಿ ಸ್ಥಲ:**--- ಸ್ವೀಕೃತವು ಮಾತ್ರ ಪ್ರಸಾದವಾಗಿ ಉಳಿದುದೇನು ಇನ್ನೂ ಪ್ರಸಾದ ಸ್ವರೂಪಕ್ಕೆ ಬರಲೇ ಇಲ್ಲ. ಅದು ಹಾಗೆಯೇ ಓದನ (ಅನ್ನ) ರೂಪದಲ್ಲಿಯೇ ಇರುವದು. ಅದಾವುದೆಂದರೆ ಶರಣನ ಮುಂದಿರುವ ಜಗತ್ತು (ವಿಶ್ವ) ಈ ಜಗತ್ತು ನಿಜವಲ್ಲ. ಮಾಯೆಯ ಯೋಗದಿಂದ ನಾನಾತ್ವ ಉಳ್ಳದಾಗಿ ಅನೇಕ ಗುಣಧರ್ಮಾದಿಗಳಿಂದ ವೈಚಿತ್ರ್ಯವನ್ನು ತಾಳಿ, ಭಿನ್ನ ಭಿನ್ನ ಸ್ವರೂಪ ದಲ್ಲಿ ಕಂಗೊಳಿಸುತ್ತಿರುವದು. ಇದನ್ನಾದರೂ ಪ್ರಸಾದ ರೂಪಕ್ಕೆ ತಾರದೇ ಹೋದರೆ ಅವನಿಗೆ ಪರಿಪೂರ್ಣತ್ವ ಉಂಟಾಗದು. ತನ್ನ ದನ್ನು ಅದಾವ ಶಿವಜ್ಞಾನ ಅನುಭವಾದಿಗಳಿಂದ ಪ್ರಸಾದಂಗೈದನೋ ಅದೇ ರೀತಿಯಲ್ಲಿ ಈ ವಿಶ್ವವನ್ನಾದರೂ ಪ್ರಸಾದ ಸ್ವರೂಪಕ್ಕೆ ತಂದು ಕೊಳ್ಳಬೇಕು. ಅಂದರೆ ಶಿಷ್ಟೋದನವು ಸಹ ಪ್ರಸಾದವಾಗುವದು. ಇದೇ ಶಿಷ್ಟೋದನ ಪ್ರಸಾದಿ ಸ್ಥಲವು

**೨ ಚರಾಚರ ಲಯ ಸ್ಥಲಃ**— ತಾನು ಜಗತ್ತು ಎಲ್ಲವೂ ಪ್ರಸಾದ ಸ್ವರೂಪವಾದ ಮೇಲೆ, ಬೇರೆ ಹೆಸರಿನಿಂದ ಕರೆಯಲು ಅಲ್ಲಿ ಏನೂ ಉಳಿಯಲಿಲ್ಲ. ಇದು ವರೆಗೆ ಕರೆಯುತ್ತಿದ್ದ ಚರ (ಪ್ರಾಣಿ) ಅಚರ (ಅಪ್ರಾಣಿ) ಎಂಬುದೇನೂ ದೃಷ್ಟಿಗೆ ಬೀಳದೇ ಹೋಯಿತು. ಇದೇ ಚರಾಚರ ಲಯ ಸ್ಥಲವು.

**೪ ಭಾಂಡ ಸ್ಥಲ** ಭಾಂಡವೆಂದರೆ ಹೊರಗೆ ಆಕಾರ ಹೊಂದಿ ತೋರುವದೆಲ್ಲ. ಭಾಂಡೆಯೊಳಗೆ ಪದಾರ್ಥಗಳನ್ನು ಹಾಕಿ ಹೇಗೆ ಮುಚ್ಚಿಡುವ ರೀತಿಯುಂಟೋ ಹಾಗೆ ಈ ಶರೀರ ಭಾಂಡವಾದರೂ ಒಂದು ವಸ್ತುವನ್ನು ತನ್ನಲ್ಲಿ ಮುಚ್ಚಿಟ್ಟುಕೊಂಡಿರುವದು. ಹೀಗೆ ಒಳಗೆ ಒಂದನ್ನಿಟ್ಟುಕೊಂಡು ತಾನು ಹೊರಗೆ ಬೇರೊಂದು ಬಗೆಯಿಂದ ತೋರುವದೇ ಭಾಂಡ ಸ್ಥಲವು. ಉದಾ – ಕಬ್ಬು, ಹೂ, ಕಾಯಿ, ತಿಲ ಮುಂತಾದ ಧಾನ್ಯಗಳು ಇತ್ಯಾದಿ.

**೫ ಭಾಜನ ಸ್ಥಲ** ಭಾಂಡವೇ ಹೊರವೈ, ಒಳಗಿರುವ ವಸ್ತುವೇ ಭಾಜನವು. ಅದೇ ಚೈತನ್ಯವು (ಜೀವ). ಬೇಕಾದ

ವಸ್ತು ತಕ್ಕೊಂಡರೆ ಅದರಲ್ಲಿ ಭಾಂಡ ಭಾಜನಗಳು ಇದ್ದೇ ಇರುತ್ತವೆ. ಹೀಗೆ ಒಳಗೆ ವಸ್ತು ತೋರದಂತಿರುವದೇ ಭಾಜನ ಸ್ಥಳವು. ಭಾಂಡ ಭಾಜನಗಳೇ ಅಂಗಲಿಂಗಗಳು.

೬. **ಅಂಗಾಲೇಪನ ಸ್ಥಲ**— ಅಂಗ + ಆಲೇಪನ = ಅಂಗಾ ಲೇಪನ; ಅಂಗವೆಂಬುದೇ ಭಾಂಡವು. ಅದು ಭಾಜನದಿಂದ ಭಿನ್ನ ವಾಗಿ ಅದಕ್ಕೆ ಲೇಪನವಾಗಿ ಹೊರಗಿಂದೆ ಆ ಭಾಜನಲ್ಲಿ ಕೂಡಿ ಏಕ ವಾಗಿ ಆ ಲೇಪನದಂತಿರುವದೇ ಅಂಗಾ ಲೇಪನವು. ಅಂದರೆ ಎರಡೂ ಒಂದುಗೂಡುವವೆಂಬರ್ಥ.

೭. **ಸ್ವ ಪರಾಜ್ಞಾ ಸ್ಥಳ**:— ಸ್ವೀಕೃತ ಶಿಷ್ಟೋದನಗಳೆರಡೂ ಪ್ರಸಾದವಾದ ಮೇಲೆ ಹೇಗೆ ಚರಾಚರಗಳು ಉಳಿಯುಲಿಲ್ಲವೋ ಅದೇ ಮೇರೆಗೆ ಸ್ವ, ಪರ ಎಂಬೆರಡೂ ತಿಳಿಯುದಂತಾಗಿ ಅವು ನಾಶವಾದವು. ಇದೇ ಸ್ವ ಪರಾಜ್ಞಾ ಸ್ಥಳವು

೮. **ಭಾವಾಭಾವ ನಷ್ಟ ಸ್ಥಳ**:— ಭಾವ ಅಂದರೆ ಇರುವದು. ಅಭಾವ ಅಂದರೆ ಇಲ್ಲದೆ ಇರುವದು. ಜಗತ್ತಿನ ನಾನಾರೂಪಗಳೆಲ್ಲ ಒಂದೇ ಶಿವರೂಪ ಭಾಜನದಲ್ಲಿ ಬೆರೆದು ಹೋದ ಮೇಲೆ ಶಿವಾಭಿನ್ನ ವಾಗಿ ಏನೇನೂ ಉಳಿಯುಲಿಲ್ಲ. ಇದೇ ಭಾವಾಭಾವ ನಷ್ಟ ಸ್ಥಳವು.

**ಜ್ಞಾನ ಶೂನ್ಯ ಸ್ಥಲ**:— ಜ್ಞಾನವೆಂದರೆ ತಿಳಿವು ಅಥವಾ ಅರಿವು. ಅರಿಯ ಲಿಕ್ಕೆ ಬೇರೊಂದು ವಸ್ತುವೇ ಉಳಿಯುಲಿಲ್ಲವಾದ ಕಾರಣ ಅದರ ಪ್ರಯೋಜನವೇ ಉಳಿಯುಲಿಲ್ಲ. ಆದಕಾರಣ ಜ್ಞಾನವು ಮೂಲೆ ಗುಂಪಾಗಿ ಅದಾದರೂ ಇದ್ದಲ್ಲಿಯೇ ಶೂನ್ಯವನ್ನೈದುವದು. ಇದೇ ಜ್ಞಾನ ಶೂನ್ಯ ಸ್ಥಲವು.

**ಸಾರಾಂಶ**

ತನ್ನ ಅಂಗ ಗುಣಗಳನ್ನು ಪಡೆದ ದೀಕ್ಷಾಯುಕ್ತನು, ಶ್ರದ್ಧೆಯನ್ನು ವಹಿಸಿ ತನ್ನಲ್ಲಿ ಶಿವ ಭಕ್ತಿ ಸಮತೆ ಕರುಣೆಗಳನ್ನು ಉದಯಿಸಿಕೊಂಡು, ನಿತ್ಯಾರ್ಚನೆ, ಪ್ರಮಥರ ನಡೆ, ಸತ್ಪಾತ್ರ ದಾನಗಳ ಅನುಗುಣ ಹೊಂದಿ ತನ್ನಲ್ಲಿ ಇಷ್ಟಜ್ಞಾನ, ಸದಾಚಾರ, ದಯಾಲತ್ವಗಳು ನಿದರ್ಶನಕ್ಕೆ

ಬರುವಂತೆ ಪ್ರಗತಿ ಪಡೆದರೆ, ಅವನು ತನ್ನ ಆರಂಭದ ಬಹಿರಾಚಾರ ಲಿಂಗದಲ್ಲಿ ಬೆರೆದಂತಾಗುವದು. ಮುಂದೆ ಅವನೇ ಮಹೇಶ್ವರನಾಗುವನು.

ತನ್ನ ಅಂಗ ಗುಣಗಳನ್ನು ಪಡೆದ ಮಹೇಶ್ವರನು ಲಿಂಗ ನಿಷ್ಠಾಯುಕ್ತನಾಗಿ ಕ್ರಿಯಾ-ಭಾವ-ಜ್ಞಾನಗಳ ಆಗಮವನ್ನು ಪಡೆದು, ಸಕಾಯ-ಅಕಾಯ-ಪರಕಾಯಗಳಿಂದ ಅವನ್ನು ಬಳಕೆಗೆ ತಂದು ನಡೆದು, ಧರ್ಮಾಚಾರ-ಭಾವಾಚಾರ-ಜ್ಞಾನಾಚಾರಗಳನ್ನು ಚನ್ನಾಗಿ ಗಳಿಸಿಕೊಂಡರೆ ಅವನು ತನ್ನ ಗುರುಲಿಂಗ ( ಇಡೀ ಬಹಿರಾಚಾರ ಲಿಂಗ ) ದಲ್ಲಿ ಸರಿಯಾಗಿ ಬೆರೆತಂತಾಗುವದು. ಮುಂದೆ ಅವನೇ ಪ್ರಸಾದಿಯಾಗುವನು.

ತನ್ನಂಗ ಗುಣಗಳನ್ನು ಪಡೆದ ಪ್ರಸಾದಿಯು, ಸಾವಧಾನವಾಗಿ ವರ್ತಿಸುತ್ತ ಕಾಯ-ಇಂದ್ರಿಯ-ಪ್ರಾಣಗಳ ಅನುಗ್ರಹ ಪಡೆದು, ಕಾಯ-ಕರಣ-ಭಾವಗಳನ್ನು ತನ್ನಲ್ಲಿರುವ ಶಿವಲಿಂಗಕ್ಕೆ ಅರ್ಪಿಸಿ ತಾನು ಆ ಲಿಂಗದ ಶಿಷ್ಯನೂ, ಶುಶ್ರೂಷಕನೂ ಆಗಿ, ಭಕ್ತ ಸಮಾಜಕ್ಕೆಲ್ಲ ಸೇವ್ಯನಾದರೆ, ಅವನು ತನ್ನ ಶಿವಲಿಂಗದಲ್ಲಿ ಬೆರೆದನೆಂದರಿಯಬೇಕು. ಅವನೇ ಮುಂದೆ ಪ್ರಾಣಲಿಂಗಿ ಎನಿಸುವನು.

ತನ್ನಂಗ ಗುಣ ಪಡೆದ ಪ್ರಾಣಲಿಂಗಿಯು ತನ್ನನುಭವದಿಂದ ಮುಂದುವರಿಯುತ್ತ ಜಗದ್ವ್ಯಾಪಿಯಾದ ಪರಮಾತ್ಮನೇ ತನ್ನೊಳಗೆ ಸೇರಿ, ಅಂತರಾತ್ಮನೆನಿಸಿ ದೇಹಾನುಷಂಗದಿಂದ ಜೀವಾತ್ಮನೆಂದು ಕರೆಸಿಕೊಳ್ಳುತ್ತಿರುವನೆಂಬುದನ್ನು ಅರಿತು, ನಿರ್ದೇಹ-ನಿರ್ಭಾವ-ನಷ್ಟಾಗಮಗಳನ್ನು ಹೊಂದಿ, ಆದಿ ಅಂತ್ಯ ಸೇವ್ಯ ಪ್ರಸಾದತ್ವ ಸಂಪಾದಿಸಿದರೆ ಅವನು ತನ್ನ ಜಂಗಮಲಿಂಗದಲ್ಲಿ ಕೂಡಿ ಒಂದಾದಂತಾಯಿತು. ಅವನೇ ಮುಂದೆ ಶರಣನೆನಿಸಿಕೊಳ್ಳುವನು.

ತನ್ನ ಅಂಗ ಗುಣಗಳನ್ನು ಪಡೆದ ಶರಣನು ಮುಂದೆ ದೀಕ್ಷಾ ಶಿಕ್ಷಾ ಜ್ಞಾನ ಪಾದೋದಕಗಳ ಅನುಗ್ರಹದಿಂದಲೂ ಪ್ರಭಾವದಿಂದಲೂ ಕ್ರಿಯಾ ಭಾವ ಜ್ಞಾನಗಳ ನಿಷ್ಪತ್ತಿ ಹೊಂದಿ ಪಿಂಡ ಬಿಂದು ಮಹಾಕಾಶಗಳೋಪಾದಿಯಲ್ಲಿ ಕ್ರಿಯಾ ಭಾವ ಜ್ಞಾನಗಳನ್ನು ಸಹಜವಾಗಿ ಪ್ರಕಾಶಿಸಹತ್ತಿದರೆ ಅವನು ತನ್ನ ಪ್ರಸಾದ ಲಿಂಗದಲ್ಲಿ ಪೂರ್ಣವಾಗಿ ಕಲೆತೇಕರೂಪನಾದಂತಾಯಿತು. ಅವನೇ ಮುಂದೆ ಐಕ್ಯನೆನಿಸುವನು.

ತನ್ನ ಅಂಗ ಗುಣಗಳನ್ನು ಪಡೆದ ಐಕ್ಯನು ಮುಂದೆ ಕ್ರಮವಾಗಿ ಮಹಾಲಿಂಗ ಪಥದಲ್ಲಿ ಸಾಗುತ್ತ ಸ್ವೀಕೃತ ಪ್ರಸಾದಿ, ಶಿಷ್ಟೋದನ ಪ್ರಸಾದಿ, ಚರಾಚರ ಲಯ-ಗಳನ್ನು ಸಾಧಿಸಿಕೊಂಡು, ಬಳಿಕ ಭಾಂಡ, ಭಾಜನ, ಅಂಗಾಲೇಪನಗಳ ನಿಜಸ್ಥಿತಿಯಲ್ಲಿ ಬೆರೆದು, ಸ್ವ ಪರಾಜ್ಯ, ಭಾವಾಭಾವ ನಷ್ಟಗಳನ್ನು ಅಳವಡಿಸಿಕೊಂಡು ಕಡೆಗೆ ಜ್ಞಾನಶೂನ್ಯನಾದರೆ ಅವನು ತನ್ನ ಮಹಾಲಿಂಗದಲ್ಲಿ ಪರಿಪೂರ್ಣವಾಗಿ ಬೆರೆದು ಉರಿಯುಂಡ ಕರ್ಪೂರದಂತಾಗುವನು.

ಇದೇ ನಮ್ಮ ಶಿವಯೋಗ ಸಮಾಧಿಯ ರಾಜಮಾರ್ಗ ಕ್ರಮವು. ಲಿಂಗಧಾರಿಗಳೆಲ್ಲ ಇದೇ ಮೇರೆಗೆ ಶಿವಯೋಗವನ್ನು ಹೊಂದಬೇಕು. ಪತಂಜಲಿಯ ಅಷ್ಟಾಂಗ ಯೋಗ ಸಾಧನವು ಬಹು ದುಷ್ಕರವೂ ದುಃಸಾಧ್ಯವೂ ಆದುದರಿಂದ ಅದನ್ನು ನಮ್ಮ ಪ್ರಮಥರು ಧಿಕ್ಕರಿಸಿರುವರು. ಆದುದರಿಂದ ಅನೇಕರು ನಿರಾಶ ಹೊಂದಿ ಸುಮ್ಮನಿರಬೇಕಾಗುವದು.

ಈ ನೂರೊಂದು ಸ್ಥಲಗಳ ಧೋರಣವನ್ನು ನೋಡಿದರೆ ಶ್ರೀ ಬಸವಾದಿ ಪ್ರಮಥ ಪುಂಗವರು ಜಗತ್ತಿಕ್ಕೆಲ್ಲ "ಭಕ್ತತ್ವವೇ ನಿಜವಾದ ಜಾತಿ, ಜ್ಞಾನಾಚಾರವೇ ಸತ್ಯಧರ್ಮ, ಜಂಗಮತ್ವವೇ (ಶಿವತ್ವ) ಜನ್ಮದ ಅತ್ಯುಚ್ಚ ಧ್ಯೇಯ" ಎಂದು ಘಂಟಾಘೋಷವಾಗಿ ಸಾರಿಸಾರಿ ಹೇಳಿದುದು ಸುಸ್ಪಷ್ಟವಾಗಿ ಕಂಡುಬರುತ್ತದೆ. ನರನನ್ನು ಹರಪದವಿಗೈಯ್ದಿಸುವದೇ ಅವರ ಮುಖ್ಯ ಉದ್ದಿಷ್ಟವಾಗಿತ್ತು.

---

# ಸಾಮಾಜಿಕ ಶಿಕ್ಷಣ.

ಲೇಖಕಃ ಶ್ರೀ. ಕಲ್ಯಾಣಪ್ಪ ಬ್ಯಾಳಿ,
ಹೆಡ್‌ಮಾಸ್ಟರ್, ಶ್ರೀಸಿದ್ಧೇಶ್ವರ ಹಾಯಸ್ಕೂಲ, ವಿಜಾಪುರ.

ಹಿಂದುಸ್ಥಾನಕ್ಕೆ ಸ್ವಾತಂತ್ರ್ಯವು ಲಭಿಸಿದ ಬಳಿಕ ಸಾಮಾಜಿಕ ಶಿಕ್ಷಣಕ್ಕೆ ಉನ್ನತ ಸ್ಥಾನವು ದೊರೆಯುಹತ್ತಿದೆ. ಅಧಿಕಾರ ಪ್ರಾಪ್ತಿಯಾದ ಬಳಿಕ ಎಲ್ಲೆಲ್ಲಿಯೂ ಸ್ವೈರ ಚಾರಗಳೂ ಅನಿಯಂತ್ರಿತ ರೀತಿ ನಡೆಗಳೂ ತಲೆದೋರಹತ್ತಿವೆ. ಸಮಾಜದ ಕಟ್ಟುಗಳು ಶಿಥಿಲವಾಗ ಹತ್ತಿವೆ. ಇದರ ದುಷ್ಪರಿಣಾಮುಗಳು ದೇಶದ ಮೇಲೆ ಉಂಟಾಗುವ ಚಿನ್ಹಗಳು ಹೆಚ್ಚೆಚ್ಚಾಗಿ ಈಚೆಗೆ ತೋರಹತ್ತಿವೆ. ಈ ಸ್ಥಿತಿಯನ್ನು ದೂರ ಮಾಡಲು, ಯೋಗ್ಯವಾದ ಸಾಮಾಜಿಕ ಶಿಕ್ಷಣ ಪ್ರಸಾರವೇ ಅವಶ್ಯವೆಂದು ತೋರಹತ್ತಿರುವದರಿಂದ, ಕೇಂದ್ರ ಸರಕಾರದ ವಿದ್ಯಾ ಖಾತೆಯ ಮಂತ್ರಿಗಳಾದ ಮೌಲಾನಾ ಅಬ್ದುಲ್ ಕಲಂ ಅಝಾದ ಇವರು ಈ ಬಗೆಗೆ ಒಂದು ಯೋಜನೆಯನ್ನು ಮಾಡಿ ಅದನ್ನು ಪ್ರಚಾರದಲ್ಲಿ ತರಲು ಯತ್ನಿಸಹತ್ತಿದ್ದಾರೆ. ಇದು ಬಹು ಮಹತ್ವದ ಪ್ರಯತ್ನವಾಗಿದೆ. ಆದುದರಿಂದ ಇಂಥ ಶಿಕ್ಷಣದ ಸಾಮಾನ್ಯ ರೂಪ-ರೇಷೆಗಳನ್ನು ನಾನು ಕೆಳಗೆ ಕಾಣಿಸಿದ್ದೇನೆ. ಆದರೆ ಇದನ್ನು ನಾನು ಈಗಿರುವ ಶಿಕ್ಷಣ ಸಂಸ್ಥೆಗಳಿಗೆ ಮಾತ್ರ ಸಂಬಂಧಿಸಿ ಕೆಲವು ಸೂಚನೆಗಳನ್ನು ಇಲ್ಲಿ ಮಾಡಿದ್ದೇನೆ.

ಶಾಲೆ ಕಾಲೇಜುಗಳಲ್ಲಿ ಕೊಡುವ ಶಿಕ್ಷಣವಷ್ಟೇ ಶಿಕ್ಷಣವಲ್ಲ. ಶಾಲೆ ಕಾಲೇಜಗಳ ಹೊರಗೂ ಶಿಕ್ಷಣವು ನಡೆಯುವದು. ಉದಾಹರಣಾರ್ಥವಾಗಿ (೧) ಮನೆ (೨) ಸಮಾಜ (೩) ಸರಕಾರ. ಈ ಸಂಸ್ಥೆಗಳು ಸಹ ಜನತೆಗೆ ಶಿಕ್ಷಣ ಕೊಡುವ ಕೇಂದ್ರಗಳಾಗಿವೆ. ಮಗುವು ಚಿಕ್ಕಂದಿನಲ್ಲಿ ತಾಯಿ, ತಂದೆ, ಅಕ್ಕ, ಅಣ್ಣ, ಬಂಧು-ಬಳಗದವರ ವಾತಾವರಣದಲ್ಲಿ ಬೆಳೆದು, ಅವರ ನಡೆ-ನುಡಿ, ಪದ್ಧತಿ, ಶಿಸ್ತು ಮುಂತಾದ್ದನ್ನು ನೋಡಿಕೊಂಡು ಅನುಕರಣ ಮಾಡಹತ್ತುತ್ತದೆ. ಇದೇ ಗೃಹ ಶಿಕ್ಷಣವು. ಮುಂದೆ ಬಾಲಕನು ಶಾಲೆ ಕಾಲೇಜುಗಳಿಗೆ ಹೋಗಿ ಭಿನ್ನ ಜಾತಿ ಸಂಸ್ಕಾರಗಳುಳ್ಳ ಮಕ್ಕಳುಗಳ ಸಹವಾಸದಲ್ಲಿಯೂ

ಭಿನ್ನ ಭಿನ್ನ ಸ್ವಭಾವ, ಬುದ್ಧಿಗಳುಳ್ಳ ಶಿಕ್ಷಕರ ಅಂಕಿತದಲ್ಲಿಯೂ ಬೆಳೆದು ತನ್ನ ಉನ್ನತಿಯನ್ನು ಮಾಡಿಕೊಳ್ಳುತ್ತಾನೆ. ಇದು ಶಾಲಾ ಶಿಕ್ಷಣವು. ಮುಂದೆ ಶಾಲಾ ಶಿಕ್ಷಣವು ಪೂರೈಸಿದ ನಂತರ ವ್ಯವಹಾರ, ನೌಕರಿ, ಉದ್ಯೋಗ, ಕಲಾಕೌಶಲ್ಯ ಮುಂತಾದ ಒಂದಿಲ್ಲೊಂದು ಕಾಯಕ ವನ್ನು ಕೈಕೊಂಡು ಸಮಾಜದೊಡನೆ ಬಳಿಕೆಯನ್ನು ಹೆಚ್ಚಿಸಿಕೊಂಡು ಸಮಾಜದಲ್ಲಿ ನಡೆಯುತ್ತಿರುವ ಅನೇಕ ಚಟುವಟಿಕೆಗಳಲ್ಲಿ ಪ್ರತ್ಯಕ್ಷವಾ ಗಲಿ ಅಪ್ರತ್ಯಕ್ಷವಾಗಲಿ ಪಾಲುಗಾರನಾಗಿ ಅದರ ಪರಿಣಾಮದಿಂದ ತನ್ನ ಬೆಳವಣಿಗೆಯನ್ನು ಮಾಡಿಕೊಳ್ಳುತ್ತಾನೆ. ಇದೇ ಸಮಾಜ ಶಿಕ್ಷ ಣವು. ಸಮಾಜದಲ್ಲಿ ಕೆಲಸ ಮಾಡುವಾಗ ಸರಕಾರದ ಕೆಲವು ಕಾ ಯಿದೆ ಕಾನೂನುಗಳಿಗೊಳಪಟ್ಟು ತನ್ನ ವ್ಯವಹಾರ ಆಚರಣೆಗಳನ್ನಿಟ್ಟು ಕೊಂಡು ನಡೆಯುತ್ತಾನೆ. ಸರಕಾರವು ಸಮಾಜದಲ್ಲಿ ಶಾಂತತೆ, ನ್ಯಾಯ, ಸುವ್ಯವಸ್ಥೆಗಳು ನೆಲೆಗೊಳ್ಳಲೆಂದು ಪೋಲೀಸ, ನ್ಯಾಯಕೋರ್ಟ ದಿವಾಣಿ ಮುಂತಾದವುಗಳನ್ನು ಸ್ಥಾಪಿಸಿ ಶಾಸನ ಮುಂತಾದವುಗಳಿಂದ ಜನತೆಯನ್ನು ರಕ್ಷಿಸುತ್ತದೆ. ಇದು ಸರಕಾರದ ಶಿಕ್ಷಣವು. ಆದರೆ ಶಾಲೆ, ಮನೆ ಸರಕಾರಗಳ ಶಿಕ್ಷಣಕ್ಕಿಂತಲೂ ಸಮಾಜ ಶಿಕ್ಷಣವು ಹೆಚ್ಚು ಫಲಕಾರಿಯಾಗಿದೆ.

ಮನುಷ್ಯನು ಸಮಾಜ ಪ್ರಾಣಿಯು. ಆತನು ಸಮಾಜದಲ್ಲಿಯೇ ಹುಟ್ಟಿ ಸಮಾಜದಲ್ಲಿಯೇ ಬೆಳೆದು ಸಮಾಜದಲ್ಲಿಯೇ ಕೊನೆಗಾಣು ತ್ತಾನೆ. ಸಮಾಜದ ಆಚಾರ ವಿಚಾರ, ಕಟ್ಟು ಪಾಡುಗಳಿಗೆ ಅವನು ಅಧೀನನಾಗಿರುತ್ತಾನೆ. ಸಮಾಜ ಸಂಸ್ಕೃತಿಯೇ ಅವನ ಸಂಸ್ಕೃತಿ. ಮನೆಯಲ್ಲಿ ತಾಯ್ತಂದೆಗಳು ಕೊಡುವ ಶಿಕ್ಷಣವು ಸಮಾಜದಲ್ಲಿ ತಮ್ಮ ಮಗನು ಹೊಂದಿನಿಸಿಕೊಳ್ಳಬೇಕೆಂದೇ ಇರುತ್ತದೆ. ಶಾಲೆಯಲ್ಲಿ ಪಡೆಯುವ ಶಿಕ್ಷಣದ ಉದ್ದೇಶವು ಸಮಾಜದಲ್ಲಿ ಬಾಲಕನನ್ನು ಒಳ್ಳೆ ನಾಗರಿಕನನ್ನು ಮಾಡಬೇಕೆಂದೇ ಇರುತ್ತದೆ. ಸರಕಾರದ ಕಾನೂನು ಶಾಸನಗಳ ನಿಯಂತ್ರಣದಲ್ಲಿ ಪಡೆಯುವ ಶಿಕ್ಷಣದ ಉದ್ದೇಶವಾದರೂ ಸಮಾಜದಲ್ಲಿ ಜನತೆಗೆ ನ್ಯಾಯ, ಸುಖ, ಶಾಂತಿಗಳುಂಟಾಗಲೆಂದೇ ಇರುತ್ತದೆ. ಸಮಾಜ ಹಿತಕ್ಕಾಗಿಯೇ ಈ ಎಲ್ಲ ತರದ ಶಿಕ್ಷಣಗಳ ಏರ್ಪಾಟಾಗಿರುವ ದರಿಂದ ಸಮಾಜ ಶಿಕ್ಷಣವು ಹೆಚ್ಚಿನದೆಂದೇ ಹೇಳಬೇಕಾಗಿದೆ.

ಇನ್ನು ಸಾಮಾಜಿಕ ಶಿಕ್ಷಣವೆಂದರೇನೆಂಬದನ್ನು ಸ್ವಲ್ಪ ವಿವೇಚಿಸೋಣ. ಸಮಾಜದ ಜನಗಳ ಸಾಹಿತ್ಯ ಸಂಸ್ಕೃತಿಗಳನ್ನು ಕಾಪಾಡಿ ಕೊಳ್ಳುವದು ಮತ್ತು ಅದನ್ನು ಬೆಳಿಸುವದು ಪರ ಸಮಾಜದ ಸಾಹಿತ್ಯ ಸಂಸ್ಕೃತಿಗಳಲ್ಲಿರುವ ಉಚ್ಚ ಆಚಾರ ವಿಚಾರಗಳನ್ನು ಅಂಗೀಕರಿಸಿ ಅವುಗಳನ್ನು ನಮ್ಮಲ್ಲಿಯೇ ಅರಗಿಸಿಕೊಳ್ಳುವದು. ನಮ್ಮ ಸಮಾಜದಲ್ಲಿ ಬಹು ದಿವಸಗಳಿಂದ ನೆಲೆಗೊಂಡ ದುಷ್ಟ ಆಚಾರ ಪದ್ಧತಿಗಳನ್ನು ಕಿತ್ತೊಗೆಯಲು ಪ್ರಯತ್ನಿಸುವದು. ಇವೆಲ್ಲ ಸಾಮಾಜಿಕ ಶಿಕ್ಷಣದೊಳಗೆ ಬರುತ್ತವೆ.

ನಮ್ಮದು ಹಿಂದು ಸಮಾಜವಾಗಿದ್ದರೂ ಹಿಂದೀ ಭಾಷೆಯು ರಾಷ್ಟ್ರಭಾಷಾ ದೃಷ್ಟಿಯಿಂದ ನಮಗೆ ಉಪಯುಕ್ತವಾಗಿದ್ದರೂ ಕನ್ನಡವು ನಮ್ಮ ಮಾತೃಭಾಷೆಯಾಗಿದ್ದರಿಂದಲೂ ಕನ್ನಡ ಸಾಹಿತ್ಯ ಸಂಸ್ಕೃತಿಯೇ ನಮ್ಮ ಜೀವಾಳವಾಗಿರುವದರಿಂದಲೂ ನಾವು ಮೊದಲು ಕನ್ನಡ ನಾಡಿನ ಸಾಹಿತ್ಯ ಸಂಸ್ಕೃತಿಗಳನ್ನು ಮನ್ನಿಸಬೇಕಾಗುತ್ತದೆ. ಹಾಗೆ ಮಾಡುವದು ಸ್ವಾಭಾವಿಕವಾಗಿದೆ. ತಾಯಿಯ ಮೊಲೆಹಾಲನುಂಡ ಮೇಲೆಯೇ ಆಕಳ ಹಾಲು ಬೇಕಲ್ಲವೇ? ಆ ಬಳಿಕ ನಮ್ಮ ದೇಶಭಾಷೆ ಸಂಸ್ಕೃತಿಗಳನ್ನು ನಾವು ಬಿಡತಕ್ಕದ್ದಲ್ಲ. ಬಿಡಲಿಕ್ಕೆ ಬರುವದೂ ಇಲ್ಲ. ಇಂಗ್ಲೀಷು ಅಂತರ ರಾಷ್ಟ್ರೀಯ ಭಾಷೆಯಾಗಿರುವದರಿಂದ ಪರದೇಶದ ರಾಜಕೀಯ ದೃಷ್ಟಿಯಿಂದಲೂ ವ್ಯಾಪಾರಿ ದೃಷ್ಟಿಯಿಂದಲೂ ಕೆಲವು ವಿಶಿಷ್ಟ ವ್ಯಕ್ತಿಗಳಿಗೆ ಅದು ಬೇಕೇಬೇಕು. ಆದರೆ ಎಲ್ಲರಿಗೂ ಬೇಡ. ಕನ್ನಡ ಹಿಂದೀ ಭಾಷೆಗಳು ಮಾತ್ರ ಎಲ್ಲರಿಗೂ ಬೇಕು.

ಪರದೇಶದವರಲ್ಲಿ ಶಿಸ್ತು, ನಿಯಮಿತತನ, ಅಚ್ಚುಕಟ್ಟುತನ, ಆಡಳಿತೆಯ ವ್ಯವಸ್ಥೆ, ಸಹಕಾರ, ಜಾತಿ ನಿರಾಕರಣೆ, ಸ್ವದೇಶಾಭಿಮಾನ, ಸಾಕ್ಷರತೆ ಮುಂತಾದ ಸದ್ಗುಣಗಳು ವಿಶೇಷವಾಗಿ ಕಂಡುಬರುತ್ತವೆ. ನಮ್ಮ ಸಮಾಜದಲ್ಲಿ ಇಂಥ ಗುಣಗಳು ವಿರಳ. ನಮ್ಮ ಸಮಾಜದಲ್ಲಿ ಅಂಥ ಗುಣಗಳು ಸೇರ್ಪಡೆ ಹೊಂದುವಂತೆ ಮಾಡುವದೇ ಸಮಾಜ ಶಿಕ್ಷಣ. ನಮ್ಮ ಸಮಾಜದಲ್ಲಿ ದೇವಭಕ್ತಿ, ಸಾಧು ಸಜ್ಜನರಲ್ಲಿ ಭಕ್ತಿ, ಮಾತಾ ಪಿತೃ ಭಕ್ತಿ, ಪತಿವ್ರತಾಧರ್ಮ, ಅತಿಥಿ ಸತ್ಕಾರ, ದಾನಗುಣ ಮುಂತಾದ ಸದ್ಗುಣಗಳಿರುವವು. ಇವುಗಳ ಜೊತೆಗೆ ಮೇಲ್ಕಂಡ

ಸದ್ಗುಣಗಳೂ ಕೂಡಿಕೊಂಡರೆ ಸುವರ್ಣಕ್ಕೆ ಸುಗಂಧವುಂಟಾದಂತಾಗುವದು. ನಮ್ಮ ದೇಶವು ಜಗತ್ತಿನಲ್ಲಿ ಶಿರೋಮಣಿಯಾಗಿ ಮೆರೆಯುವದು. ಇದ್ದ ಸದ್ಗುಣಗಳನ್ನು ಸರಿಯಾದ ರೀತಿಯಲ್ಲಿ ಹೆಚ್ಚಿಸಿ ಪರರ ಕೀಯರ ಸದ್ಗುಣಗಳನ್ನು ನಮ್ಮಲ್ಲಿ ಅಳವಡಿಸಿಕೊಳ್ಳುವದು ಸಮಾಜ ಶಿಕ್ಷಣದಲ್ಲಿ ಸಮಾವೇಶವಾಗುತ್ತದೆ.

ಊರಿದ್ದಲ್ಲಿ ಹೊಲಗೇರಿಯೆಂಬಂತೆ ಸಮಾಜವಿದ್ದಲ್ಲಿ ಕೆಲವು ದುಷ್ಟ ಸಾಂಪ್ರದಾಯಗಳು ಬಹು ಕಾಲದಿಂದ ಬೇರೂರಿವೆ. ಉದಾಹರಣಾರ್ಥವಾಗಿ ಜಾತ್ಯಾಂಧತೆಯು ನಮ್ಮ ಸಮಾಜದಲ್ಲಿ ಮೊಟ್ಟಮೊದಲನೆಯ ದೊಡ್ಡದೊಂದು ಕುಂದುಕೊರತೆ. ನಮ್ಮ ದೇಶವನ್ನು ಹಾಳುಮಾಡಿ ಗುಲಾಮರನ್ನು ಮಾಡಿದ್ದು ಜಾತ್ಯಂಧತೆಯು. ಭರತ ಖಂಡವನ್ನು ಹಿಂದುಸ್ತಾನ ಪಾಕಿಸ್ತಾನಗಳನ್ನಾಗಿ ದ್ವಿಭಾಗಿಸಿ ಕೊಲೆ ಸುಲಿಗೆ ರಕ್ತಪಾತಗಳನ್ನು ಮಾಡಹಚ್ಚಿರುವದು ಜಾತ್ಯಂಧತೆಯು. ಈ ಜಾತ್ಯಂಧತೆಯು ಗುಡಿ ಗುಂಡಾರ, ತೀರ್ಥ, ಕ್ಷೇತ್ರ, ಲಗ್ನಊಟ, ಮಠ ಪೀಠಗಳಲ್ಲಷ್ಟೇ ಅಲ್ಲ, ಮುನಿಸಿಪಾಲಿಟಿ, ಲೋಕಲ್‌ಬೋರ್ಡು, ಅಸೆಂಬ್ಲಿ ಆಯ್ಕೆ, ಸರಕಾರಿ ನೌಕರಿ, ಶಿಕ್ಷಣ ಸಂಸ್ಥೆಗಳು, ರಾಜಕೀಯ ಪಕ್ಷಗಳು ಮುಂತಾದವುಗಳಲ್ಲಿ ಸಮಾವೇಶವಾಗಿ ದೇಶದಲ್ಲಿ ಒಕ್ಕಟ್ಟನ್ನು ತರುವದರ ಬದಲು ಬಿಕ್ಕಟ್ಟನ್ನುಂಟುಮಾಡಿರುವದು. ಅಸ್ಪೃಶ್ಯರನ್ನು ಸಮಾಜದಿಂದ ದೂರವಾಗಿರಿಸಿದ್ದು ಜಾತ್ಯಂಧತೆಯು. ಅಸ್ಪೃಶ್ಯರಿಗೆ ದೇವಾಲಯ ಪ್ರವೇಶಕ್ಕೆ ಆತಂಕ ಮಾಡಿದ್ದು ಜಾತ್ಯಂಧತೆಯು. ಯಾವ ಧರ್ಮ ಪಂಥಗಳ ಬಗ್ಗೆಯೂ ನಮಗೆ ಅಸಹನೆ ಬೇಡ. ಪರಸ್ಪರರಲ್ಲಿ ಸಹನಶೀಲತೆಯನ್ನಿಟ್ಟು ಒಂದೆ ತಾಯಿಯ ಮಕ್ಕಳಂತೆ ನಡೆದುಕೊಳ್ಳಬೇಕು. ಇಂಥ ವಿಚಾರಗಳನ್ನು ಜನತೆಯಲ್ಲಿ ಪ್ರಸಾರ ಮಾಡಲು ಎಲ್ಲ ಧರ್ಮದ ಗುರುಗಳು ಕಂಕಣಬದ್ಧರಾಗಿ ಕೆಲಸ ಮಾಡಬೇಕು. ಇದೇ ಸಾಮಾಜಿಕ ಶಿಕ್ಷಣ. ನಮ್ಮ ಧರ್ಮವೇ ಹೆಚ್ಚೆಂಬ ಸಂಕುಚಿತ ಭಾವನೆಯನ್ನಿಟ್ಟುಕೊಂಡು ನಡೆಯುವವರಿಗೆ ಅಧೋಗತಿಯು ಕಟ್ಟಿಟ್ಟದ್ದೇ.

ನಮ್ಮ ಸಮಾಜದಲ್ಲಿ ರೂಢವಾಗಿರುವ ಇನ್ನೊಂದು ಕುಂದು ಕೊರತೆಯೆಂದರೆ ಸ್ವಾರ್ಥಪರಾಯಣತೆ. ಜಾತ್ಯಂಧತೆಗಿಂತ ಹೆಚ್ಚು

ತೀಕ್ಷ್ಣವಾದ ವಿಷವಿದು. ಜಾತ್ಯಂಧತೆಯೆಂಬ ಸರ್ಪವು ಪರಧರ್ಮಿಗ
ಳನ್ನು ಕಚ್ಚಿ ಹಿಂಸಿಸುತ್ತದೆ. ಆದರೆ ಸ್ವಾರ್ಥವೆಂಬ ವಿಷವು ಸ್ವಜಾತಿ
ಪರಜಾತಿಗಳಲ್ಲಾವುದನ್ನೂ ನೋಡುವದಿಲ್ಲ. ಎರಡನ್ನೂ ನಾಶಪಡಿಸು
ತ್ತದೆ. ದುಡ್ಡು ಸಿಕ್ಕರೆ ಸಾಕು. ತನ್ನವರೇನು, ಎರಡನೆಯವರೇನು?
ಎಂಬ ದುಷ್ಟ ಭಾವನೆಯು ಸ್ವಾರ್ಥಿಗಳಲ್ಲಿ ಬೇರೂರಿದೆ. ಸರಕಾರಿ
ನೌಕರರಲ್ಲಿ ಲಂಚಗೂಳಿತನ, ವ್ಯಾಪಾರಸ್ಥರಲ್ಲಿ ಕಳ್ಳಪೇಟೆ, ಶ್ರೀಮಂತ
ರಲ್ಲಿ ಬಡ್ಡಿ ವ್ಯವಹಾರ ಇವು ಮೂರು ಸ್ವಾರ್ಥದ ದೊಡ್ಡ ಬೇರುಗಳು.
ಇವು ದುಡ್ಡಿನಾಶೆಗಾಗಿ ಏನು ಮಾಡಿಯಾವು, ಏನು ಮಾಡಲಿಕ್ಕಿಲ್ಲ
ಇದರ ನೇಮವಿಲ್ಲ. ಆದ್ದರಿಂದ ಸಮಾಜಕ್ಕೆ ಕಾಲರಾ ಪ್ರಾಯವಾದ
ಈ ಮೂರು ದೊಡ್ಡ ದೋಷಗಳನ್ನು ಪ್ರಬಲವಾದ ಕಾಯಿದೆ ಶಿಕ್ಷೆಗ
ಳಿಂದ ನಿರ್ಮೂಲಗೊಳಿಸಬೇಕು. ಇದೇ ಸಾಮಾಜಿಕ ಶಿಕ್ಷಣ.

ಇದಲ್ಲದೆ ಸಮಾಜದಲ್ಲಿ ನೆಲೆಗೊಂಡಿರುವ ೩ ನೆಯ ದೊಡ್ಡ
ದೋಷವೆಂದರೆ ನಿರಕ್ಷರತೆ. ಇದಕ್ಕೆ ಸಮಾಜವೂ ಹೊಣೆ. ಸರಕಾ
ರವೂ ಹೊಣೆ. ಸರಕಾರವು ಸಾಕಷ್ಟು ಶಾಲೆಗಳನ್ನು ಸ್ಥಾಪಿಸಿಲ್ಲ.
ಶಾಲೆಗಳಿದ್ದ ಸ್ಥಳಗಳಲ್ಲಿಯೂ ಕೂಡ ೧೦೦ ಕ್ಕೆ ೨೦ ಕ್ಕಿಂತ ಹೆಚ್ಚು
ಹುಡುಗರಿಗೆ ಶಿಕ್ಷಣ ಸಿಗುವದಿಲ್ಲ. ಇದಕ್ಕೂ ತಾಯ್ತಂದೆಗಳೂ ಪಾಲ
ಕರೂ ಕಾರಣ. ಕಲಿತು ಏನು ಮಾಡುವದದೆ? ಮನೆಗೆಲಸ ಮಾಡ
ಲಿಕ್ಕೆ ಬೇಕಾದಷ್ಟಿದೆ. ಮನೆಯ ಹೋರೆಯನ್ನು ಮಾಡಲಿಕ್ಕೆ ಕಲಿತರೆ
ತೀರಿತೆಂದು ಮಕ್ಕಳನ್ನೇ ಸಾಲೆಗೆ ಕಳಿಸದಿರುವ ತಾಯ್ತಂದೆಗಳು
ಇನ್ನೂ ಅನೇಕರುಂಟು. ಇದಲ್ಲದೆ ಮಕ್ಕಳು ಸ್ವಲ್ಪ ವಯಸ್ಸಿಗೆ ಬಂದ
ಕೂಡಲೆ ಸಾಲೆಗೆ ಹಾಕಿದ್ದರೂ ಬಿಡಿಸಿ ಬಿಡುವರು. ಹೀಗಾಗಿ ಸಾಕ್ಷ
ರತೆಯು ಪ್ರಸಾರವಾಗದೆ ನಿರಕ್ಷರತೆಯು ಹೆಚ್ಚಾಗಿದೆ. ಇದಕ್ಕೆ ಉಪಾ
ಯವೆಂದರೆ ಸರಕಾರವು ರೈತರ ಹಾಗೂ ಕೂಲಿಕಾರರ ಸಾಂಪತ್ತಿಕ
ಸ್ಥಿತಿಯನ್ನು ಹೆಚ್ಚಿಸಬೇಕು. ಪ್ರಾಥಮಿಕ ಶಿಕ್ಷಣವನ್ನು ಸಾರ್ವತ್ರಿಕ
ವಾಗಿ ಉಚಿತ ಹಾಗೂ ಒತ್ತಾಯವಾಗಿ ಮಾಡಬೇಕು. ಯೋಗ್ಯ
ಪಠ್ಯ ಪುಸ್ತಕ, ಶಿಕ್ಷಣಾಧಿಕಾರಿಗಳ ಏರ್ಪಾಟು, ಮನೋರಂಜನೆಯ
ಉಪಕರಣ ಮುಂತಾದ ಯೋಜನೆಗಳನ್ನು ಮಾಡಬೇಕು. ಪ್ರೌಢ
ಶಿಕ್ಷಣವನ್ನು ಸಹ ಊರೂರಲ್ಲಿ ಪ್ರತ್ಯೇಕ ಪಗಾರ ಕೊಟ್ಟು ಕೆಲವು

ಶಿಕ್ಷಕರನ್ನು ನೇಮಿಸಿ ಪ್ರಚುರಗೊಳಿಸಬೇಕು. ಪ್ರತಿಯೊಂದು ತಾಲೂಕು ವಿದ್ಯಾಖಾತೆಯ ಕೇಂದ್ರವಾಗಬೇಕು.

ಸಮಾಜದ ಇನ್ನೊಂದು ದೊಡ್ಡ ದೋಷವೆಂದರೆ, ನೈತಿಕ ದೌರ್ಬಲ್ಯ. ಬಾಲಕರು ಬ್ರಹ್ಮಚಾರಿಗಳಿಲ್ಲ. ಗೃಹಸ್ಥರು ಏಕಪತ್ನೀವ್ರತಸ್ಥರಾಗಿಲ್ಲ. ಚಹಾ ಶೆರೆ ಅಂಗಡಿಗಳು, ಬೀಡಿ ಶಿಗಾರೇಟಗಳು, ಮನೋರಂಜಕ ಕಥೆ ಕಾದಂಬರಿಗಳು, ಶೃಂಗಾರ ರಸಪ್ರಧಾನವಾದ ವಾಕ್ಪಟಗಳು ಬಾಲ ಬಾಲಿಕೆಯರ ಶೀಲವನ್ನು ಕೆಡಿಸಿ ಬಿಟ್ಟವೆ. ಹಿಂದಿನವರ ಬಂಧುರವಾದ ವ್ರತ ನೇಮಗಳೂ ಕಟ್ಟು ಪಾಡುಗಳೂ ಈಗ ಬಹು ಶಿಥಿಲವಾಗಿ ಹೋಗಿವೆ. ಜನರಲ್ಲಿ ಚಟುವಟಿಕೆಯು ನಷ್ಟವಾಗಿ ವ್ಯೈಗಳ್ಯತನವು ಮನೆಮಾಡಿಕೊಂಡಿದೆ. ಮನಸ್ಸಿಗೆ ಶಾಂತಿ ಸಮಾಧಾನಗಳನ್ನುಂಟುಮಾಡುತ್ತಿರುವ ಹಾಲು ಹೈನಗಳ ಅಭಾವವು ಗೋವುಗಳ ಅಭಾವದಿಂದ ಹೆಚ್ಚಾಗ ಹತ್ತಿದೆ. ಗಿರಣಿ ಕಾರಖಾನೆಗಳೆಲ್ಲ ಅನೀತಿಯ ತವರ್ಮನೆಗಳಾಗಿವೆ. ಅನೀತಿಕರವಾದ ಈ ದೋಷಗಳನ್ನು ಸರಕಾರವು ನೀಗಿಬಿಡಬೇಕು. ಚಹಾ ಶೆರೆಯ ಅಂಗಡಿಗಳು, ತಂಬಾಕ, ಶೃಂಗಾರದ ಸಿನೇಮಾ, ವೇಶ್ಯಾ ವ್ಯವಹಾರ, ಗೋವಧೆ ಮುಂತಾದವುಗಳನ್ನು ಕಾಯಿದೆಯಿಂದ ಸರಕಾರವು ನಿಲ್ಲಿಸಿಬಿಡಬೇಕು. ಇದು ಸಮಾಜಕ್ಕೆ ಬೇಕಾದ ದೊಡ್ಡ ಶಿಕ್ಷಣವು.

ಇದಲ್ಲದೆ ಸಮಾಜಕ್ಕೆ ಅಕ್ಷರ ಶಿಕ್ಷಣವೊಂದೇ ಸಾಲದು. ಜನತೆಯ ಶಾರೀರಿಕ, ಆರ್ಥಿಕ, ನೈತಿಕ, ಧಾರ್ಮಿಕ, ಆಧ್ಯಾತ್ಮಿಕ ಬೆಳವಣಿಗೆಗಳಿಗಾಗಿ ಆಯಾಯ ಸಮಾಜಗಳ ಸ್ವಾಮಿಗಳು, ಪಂಡಿತರು, ವ್ಯಾಖ್ಯಾತರು, ಪುರಾಣಿಕರು, ಕೀರ್ತನಕಾರರು, ಬಾನುಲಿಗಳು, ಗ್ರಂಥ ಪ್ರಕಟನೆಗಳು, ವೃತ್ತಪತ್ರಗಳು ಸೇರಿ ಈ ದಿಶೆಯಲ್ಲಿ ಕೆಲಸಮಾಡಬೇಕಾಗುತ್ತದೆ. ಸರಕಾರವೂ ಸಮಾಜವೂ ಸಹಕರಿಸಿ ದುಡಿಯಬೇಕಾಗುತ್ತದೆ.

ಹೆಣ್ಣುಮಕ್ಕಳ ಜೀವನ ವಿಕಾಸಕ್ಕಾಗಿ ಮಾಡತಕ್ಕ ಕೆಲಸಗಳನ್ನು ನಾವು ದುರ್ಲಕ್ಷಿಸಬಾರದು. "ತೊಟ್ಟಿಲ ತೂಗುವ ಕೈಯ್ಯು ಜಗತ್ತನ್ನಾಳಬಲ್ಲದು" ಎಂಬ ಗಾದೆಯಂತೆ ತಾಯಿಯ ಗುಣದೋಷಗಳೆಲ್ಲ ಹುಟ್ಟಿದ ಶಿಶುವಿಗೆ ಅಂಟಕೊಳ್ಳುವವು. ಆದ್ದರಿಂದ ಹೆಣ್ಣುಮಕ್ಕಳಿಗೆ

ಪ್ರತ್ಯೇಕವಾಗಿ ಯೋಗ್ಯ ಶಿಕ್ಷಣ, ಅವರ ಶೀಲದ ಕಡೆಗೆ ಹೆಚ್ಚು ಗಮನ, ಸಮಾಜದಲ್ಲಿ ಅವರಿಗೆ ಯೋಗ್ಯ ಮನ್ನಣೆ ಕೊಟ್ಟು ಸ್ತ್ರೀ ಸಮಾಜವನ್ನು ಸುಧಾರಿಸಲು ಸಮಾಜವೂ ಸರಕಾರವೂ ಟೊಂಕಕಟ್ಟಬೇಕು. ಒಟ್ಟಿನಮೇಲೆ ಸಾಮಾಜಿಕ ಶಿಕ್ಷಣವೆಂದರೆ ಸಮಾಜವನ್ನು ಒಳ್ಳೆ ಆದರ್ಶಪ್ರಾಯವಾಗುವಂತೆ ಮಾಡಬೇಕಾದ ಯೋಜನೆಗಳು ಎಂಬರ್ಥ. ಹಾಗೆ ಮಾಡಿದ್ದಾದರೆ ಸಮಾಜದ ನಿಜವಾದ ಪ್ರಗತಿಯಾಗುವದು.

---

## ಬಸವಣ್ಣನವರ ಭಕ್ತಿ ಸಾಧನೆಯು ಅತಿಮಾನುಷತ್ವವೂ ಅಮೋಘವೂ ಆದುದು.

(ಲೇಖಕರು: ಶ್ರೀ ಕೆ. ಜಿ. ರುದ್ರಸ್ವಾಮಿ ಶಾಂತಿನಿವಾಸ ಕಿರುಗಾವಲು)

ಬಸವಣ್ಣನು ಭಕ್ತಿಸಾಮ್ರಾಜ್ಯದ ಕುಲಪತಿ. ಕರ್ನಾಟಕದಲ್ಲಿ ಸಾಹಿತ್ಯ ಸತ್ವದ ಸಹಜತೆಯು ಸೀದು ಹೋಗುತ್ತಿರುವ ಸಮಯದಲ್ಲಿ ಭಕ್ತಿಯು ಬರಡಾಗುತ್ತಿರುವ ಕಾಲದಲ್ಲಿ ಉದಯವಾದ ಉಡುಪತಿಯೇ ಬಸವಣ್ಣನು. ಕನ್ನಡಿಗರ ಕುಲಗುರುವಾಗಿ ಸಾಹಿತ್ಯ ಸತ್ವನಾಯಕನಾಗಿ, ಷಟ್‌ಸ್ಥಲ ಧರ್ಮ ನಿರ್ಮಾಪಕನಾಗಿ, ತ್ಯಾಗಿ ಯೋಗಿ ಭೋಗಿಯಾಗಿ, ಸಮಾಜ ಸುಧಾರಕನಾಗಿ, ಮಹಿಳಾ ಪ್ರಗತಿ ಕಾಂಕ್ಷಿಯಾಗಿ. ಶಾಂತಿ ಪ್ರೀತಿ ದೂತನಾಗಿ ಜನತೆಯ ಕಣ್ಣಿಗೆ ಕಂಡು ಕ್ರೀಡೆಯಾಡಿದ ಕ್ರಿಯಾ ಶೂರನು ಬಸವಣ್ಣನು. ಕಾರಣಿಕ ಪುರುಷನಾದ ಬಸವಣ್ಣನು ಇವೆಲ್ಲಕ್ಕಿಂತಲೂ ಮಿಗಿಲಾದ ಸ್ಥಾನವನ್ನು ಭಕ್ತಿಗೆ ನೀಡಿ, ಅರಿತಂತೆ ಆಚರಿಸಿ ಭಕ್ತ ಭಾಗವತನಾಗಿ ಭಕ್ತಿ ಭಾಂಡಾರಿಯಾಗಿ ಮೆರೆದನು. ಹಠಾತ್ತಾಗಿ ಬಸವಣ್ಣನ ನೆನಹು ಜನತೆಯ ಚಿತ್ತ ಭಿತ್ತಿಗೆ ಅಂಟಬೇಕಾದರೆ ಆತನ ಭಕ್ತಿ ಭಂಡಾರದ ಪ್ರಭಾವವೇ ಎಂದು ಹೇಳಿದರೆ

ತಪ್ಪೇನಾಗಲಾರದು. ಭಕ್ತಿಯನ್ನೇ ತನ್ನ ಜೀವನದ ಬಂಡವನ್ನಾಗಿಟ್ಟು ಕೊಂಡು ಜೀವಿಸಿದ ಮಹಾ ವಿಭೂತಿಯು ಬಸವಣ್ಣನು. ಈತನ ಭಕ್ತಿಯ ಭರವು ಬಹು ತೂಕದ್ದೇ ಸರಿಯು.

ಬಸವಣ್ಣನ ಭಕ್ತಿಯ ಹಿನ್ನೆಲೆಯನ್ನು ಕೆದಕಿ ಬೆದಕಿ ನೋಡೋಣ. ಬಾಲ್ಯದಲ್ಲಿಯೇ ಕಾರಣಾಂತರದಿಂದ ಸಂಗಮ ಕ್ಷೇತ್ರಕ್ಕೆ ಬಂದನು. ಈ ಕ್ಷೇತ್ರದ ಸನ್ನಿವೇಶವೂ ವಾತಾವರಣವೂ ಬಹು ಸೌಮ್ಯವಾಗಿ ಹೆಚ್ಚು ಶಾಂತಿಯಿಂದ ಕೂಡಿದ್ದಿತು. ಮಲಪ್ರಹರಣಿ ಮತ್ತು ಕೃಷ್ಣವೇಣಿಯ ಸಂಗಮ ಸ್ಥಳವು. ಇದರ ಸುತ್ತಲೂ ನಿಬಿಡಾದ ವೃಕ್ಷಗಳ ಸಾಲು. ನದಿಯ ಎರಡ ಕಡೆ ದಡಗಳಲ್ಲಿ ತಂಪು ಸೊಂಪಾದ ಹಸರು ಪೈರು ಪಚ್ಚೆಯು. ಈ ಮನೋಹರ ಸನ್ನಿವೇಶದಲ್ಲಿ ಅಡಗಿರುವ ಕೂಡಲ ಸಂಗಮ ದೇವರ ದೇಗುಲವು ರಾರಾಜಿಸುತ್ತಿರುವುದು. ಕೂಡಲ ಸಂಗಮನು ಬಸವಣ್ಣನ ಇಷ್ಟದೈವ, ಇಷ್ಟಲಿಂಗದ ಮೂರ್ತಿ, ಮನಃಪ್ರೇರಕ, ಕ್ರಿಯಾ ಕಲಾಪಗಳ ಸೂತ್ರಧಾರಿಯು ಇರುವುದು. ಈ ಸಂಗಮ ಕ್ಷೇತ್ರದಲ್ಲಿ ನಿರಾತಂಕವಾಗಿ ಪರಮಾತ್ಮನ ಸೇವೆಯನ್ನು ಸಲ್ಲಿಸುತ್ತಿದ್ದರು. ಅಲ್ಲಿ ಅವರಿಗೆ ಯಾವ ಸಂಸಾರದ ಗೊಂದಲ ಗೋಜಾಗಲೀ, ಸಮಾಜದ ಜಂಜಾಟ ಜೋಲಾಟವಾಗಲೀ, ರಾಜಕೀಯ ಕ್ರಿಯಾ ಕರ್ಮಗಳಾಗಲೀ ಎದಿರಾಳುಗಳ ಅಪಹಾಸ್ಯ ಚೇಷ್ಟೆಗಳಾಗಲೀ ಇರಲಿಲ್ಲ. ಈ ಬಗೆಯ ಸುಪ್ರಶಾಂತ ಸನ್ನಿವೇಶದಲ್ಲಿ ಜೀವಿಸಿದ ಜೀವಿ ಬಸವಣ್ಣನು ಅರುಣೋದಯಕ್ಕೆ ಮುಂಚೆಯೇ ಎದ್ದು ದಿನಚರಿಯ ಕರ್ತವ್ಯಗಳನ್ನು ಮುಗಿಸಿಕೊಂಡು ಸ್ನಾನಾದಿಗಳನ್ನು ತೀರಿಸಿ ನಿರ್ಮಲರಾಗಿ, ಅಗ್ಗವಣಿ ಪುಷ್ಪ ಪತ್ರಿಗಳನ್ನು ತಂದು ಸಂಗಮ ದೇವರ ಮುಂದೆ ಕುಳಿತು, ನಿತ್ಯ ನಿರ್ಮಳನೆ, ನಿಃಕಳನೆ, ಕೂಡಲಸಂಗ ನಿತ್ಯ ನಿರ್ಭಯನೆ, ನಿರುಪಮನೆ, ಕೂಡಲಸಂಗ ಎನ್ನುತ್ತಿರುವಲ್ಲಿ ಯಾರಿಗೆ ತಾನೇ ತಾನೂ ಅರ್ಚನೆ ಆರಾಧನೆ ಮಾಡಬೇಕೆಂದು ಮನಸ್ಸು ಬಾರದು? ದೇವರನ್ನು ಪೂಜಿಸಿ ಭಕ್ತಿಯ ಕಂಬನಿಯನ್ನು ಸುರಿಸಿ ಭಾವಾವೇಶದಿಂದ ಮೈ ಮರೆತು ಪುನಃ ಪುನಃ ಎಚ್ಚರವಾಗಿ ಪುನಃ ಪೂಜಿಸುತ್ತ "ಶಿವ ಪೂಜೆಯೊಳಗೆ ಪುಟ್ಟಿದ ಸುಧಾಕರನಂತೆ, ಭವಪೂಜೆ ಬಲಿದು ಪುರುಷಾಕಾರವಾದಂತೆ" ಇರುವ ಬಸವಣ್ಣನ ಭಕ್ತಿಯ ಹೊಸ ಹಾದಿಯೇ ಹೆಚ್ಚಳಯುತವಾದದ್ದು.

ಬಸವಣ್ಣನವರ ಭಕ್ತಿ ಶೀಲವು ಅತೀತವು. ಈತನ ಭಕ್ತಿ ಪ್ರಭೆಯು ಜಗದೀಶ್ವರನಲ್ಲಿಗೆ ಹೋಗಿ ಸೇರಿತೇನೋ? ಪರಮಾತ್ಮನಿಗೆ ಈ ಪ್ರಭೆಯು ಅರಿವಾಯಿತು. ಇನ್ನು ಈತನನ್ನು ಇಲ್ಲಿ ನಿಲ್ಲಿಸುವದು ಉಚಿತವಲ್ಲವೆಂದು ತಿಳಿದು, ಕಲ್ಯಾಣ ಪಟ್ಟಣಕ್ಕೆ ಕಳುಹಿಸುವುದು ಯೋಗ್ಯವೆಂದು ಅರಿತನು. ದೇವನ ಸಂಕಲ್ಪವು ಈ ಪರಿಯಲ್ಲಿರುವಾಗ ಬಸವಣ್ಣನ ಗೋಳನ್ನು ಕೇಳುವವರಾರು?

ಅತ್ತಲಿತ್ತ ಹೋಗದಂತೆ ಹೆಳವನ ಮಾಡಯ್ಯಾ ತಂದೆ
ಸುತ್ತಿ ಸುಳಿದು ನೋಡದಂತೆ ಅಂಧಕನ ಮಾಡಯ್ಯಾ ತಂದೆ
ಮತ್ತೊಂದ ಕೇಳದಂತೆ ಕಿವುಡನ ಮಾಡಯ್ಯಾ ತಂದೆ
ನಿಮ್ಮ ಶರಣರ ಪಾದವಲ್ಲದೆ ಅನ್ಯ ವಿಷಯಕ್ಕೆಳಸದಂತೆ
ಇರಿಸು ಕೂಡಲಸಂಗಮದೇವ."

ಎಂಬ ಗೋಗರಿತವು ಬಸವಣ್ಣನವರಿಗೆ ವಿಪರೀತವಾಗಿತ್ತು ಆದರೂ ದೈವ ಸಂಕಲ್ಪ. ಇವರ ಸಂಕಲ್ಪಕ್ಕೆ ಸಹಾಯ ಮಾಡಲಿಲ್ಲ.

ದೇವ ದೇವ ಸಂಗ ಕಂಡ್ಯೆ ಕೆಟ್ಟೆ ಕೆಟ್ಟೆಂ, ಕೊಟ್ಟ ನಿಂತು ಕಣ್ ನೋಡದೆ, ಹುಣ್ಣು ನೋಡದೆ ಹೋಗೆಂಬರೆ? ಗಗನದಿಂದ ಇಳಿವಂಗಾಧಾರ ಮಾಗುತ್ತೆ ತಪ್ಪುವರೆ? ಎಂಬ ಸಂಕಟ ನುಡಿಯು ಭವನಿಗೆ ತಟ್ಟಲಿಲ್ಲವೇನೋ? ಬಸವಣ್ಣನವರಿಗೆ ದುಃಖದ ನುಡಿಯು ನಿಷ್ಫಲವಾಯಿತು. "ನಡೆಯಯ್ಯ ನಡೆ ಮಗನೆ ನಡೆ ಕಂದ ಬಸವಣ್ಣ. ಪೊಡವಿಗಧಿಪತಿಯಾಗಿ ಬಾಳೆನ್ನ ಬಸವಣ್ಣ" ಪರಮಾತ್ಮನ ವಾಣಿಯು ಬಸವಣ್ಣನವರನ್ನು ಇಲ್ಲಿರಿಸದೆ ಕಲ್ಯಾಣಕ್ಕೆ ಕಳುಹಿಸಿತು.

ಕಲ್ಯಾಣಕ್ಕೆ ಬಂದ ಬಸವಣ್ಣನವರು ಸಂಸಾರವನ್ನು ಕಟ್ಟಿಕೊಂಡರು. ಸಂಸಾರದಲ್ಲೇ ಇದ್ದು ಅದನ್ನು ಜಯಿಸುವ ಕಟುತರವಾದ ಸಾಧನೆಗೆ ಬಸವಣ್ಣನವರು ಸಿಲುಕಿದರು. ಅವರ ಮನೋವೇದನೆಯನ್ನು ನಾವು ಅನುಭವಿಸಬೇಕು. ಆಗ ಸಂಸಾರದ ಕಾವು ನೋವುಗಳು ನಮಗೂ ಸೋಂಕುವುದು. ಸಂಸಾರವೆಂಬುದೊಂದು ಮಾಯೆ ಅದನ್ನು ಗೆಲ್ಲಬಹುದು, ಇಲ್ಲವೆ ಸೋಲಬಹುದು. ವಿಷಯವೆಂಬ

ಹಸರನೆನ್ನ ಮುಂದೆ ತಂದು ಪಸರಿಸದಿರಯ್ಯ. ಪಶುವೇನ ಬಲ್ಲುದು ಹಸುರೆಂದೆಳಸುವುದಲ್ಲದೆ? ವಿಷಯ ರಹಿತನ ಮಾಡಿ ಭಕ್ತಿರಸವ ದಣಿಯ ಮೇಯಿಸಿ ಸುಬುದ್ಧಿಯೆಂಬ ಉದಕವನೆರೆದು ನೋಡಿ ಸಲಹಯ್ಯ ಕೂಡಲ ಸಂಗಮದೇವ." ಎಂಬ ಹಂಬಲಿಕೆಯನ್ನು ನೋಡಿದರೆ ಬಸವಣ್ಣನವರು ತಮ್ಮ ಒಳತೋಟಿಯನ್ನು ಬಚ್ಚಿಟ್ಟುಕೊಳ್ಳದೆ ಹೊರಗೆಡಹಿರುವುದು ಇವರ ಶೀಲ ಮರ್ಯಾದೆಯನ್ನು ಗುರುತು ಹೆಚ್ಚಿಸಿಕೊಡುತ್ತದೆ. ಮಹಾತ್ಮ ಗಾಂಧಿಯವರ ಜೀವನ ಚರಿತ್ರೆಯನ್ನು ಓದಿದರೆ ಮಹಾತ್ಮರೂ ಸಹ ಈ ಪರಿಯಲ್ಲಿಯೇ ನಡೆದಿರುವುದು ಗೋಚರವಾಗದೆ ಇರದು. "ಸಂಸಾರವೆಂಬುದೊಂದು ಗಾಳಿಯ ಸೊಡರು. ಸಿರಿಯೆಂಬುದೊಂದು ಸಂತೆಯ ಮಂದಿ ಕಂಡಯ್ಯ." ನುಡಿತವನ್ನು ನೋಡಿದರೆ ಸಂಸಾರವು ಬೇಡೆನಿಸುವುದು. ಆತ್ಮವಿಮರ್ಶೆಗೆ ನಿಂತವನು ಮಾತ್ರ ಈ ನುಡಿಗೆ ಬೇಸರಪಡುವುದಿಲ್ಲ. ಬಸವಣ್ಣನವರು ಆತ್ಮವಿಮರ್ಶೆ ಮಾಡಿ ಈ ಅಲ್ಪ ಭೋಗಕ್ಕೆ ಆತ್ಮವನ್ನು ಬಲಿಗೊಡದೆ ಉದ್ಧಾರ ಮಾರ್ಗಕ್ಕೆ ಹಾಯಲು ನಿಂತ ವ್ಯಕ್ತಿಶೂರನು. "ಯಾವ ಪರಮಾತ್ಮನು ತೊಡಕಿನ ಬಲೆಗೆ ಸಿಲುಕಿಸಿದನೋ ಆತನೇ ಅದರಿಂದ ಬಿಡುಗಡೆ ಮಾಡಬೇಕಲ್ಲವೇ" ಎಂಬ ತತ್ವವು ಬಸವಣ್ಣನವರಲ್ಲಿ ನೆಲೆಮಾಡಿದೆ. "ಲೇಸಕಂಡು ಮನ ಬಯಸಿ ಆಸೆ ಮಾಡಿದಡಿಲ್ಲ ಕಂಡಯ್ಯ. ತಾಳೆಮರಕ್ಕೆ ಕೈನೀಡಿ ಮೇಲೆ ನೋಡಿ ಗೋಣು ನೊಂದುದಯ್ಯ. ಕೂಡಲ ಸಂಗಮ ದೇವ ಕೇಳಯ್ಯ. ನೀನೀವ ಕಾಲಕ್ಕಲ್ಲದೆ ಇಲ್ಲ ಕಂಡಯ್ಯ." ವಚನವನ್ನು ಕೇಳಿದರೆ ತಕ್ಷಣವೇ ಬಸವಣ್ಣನವರ ಅಚಲ ನಂಬಿಕೆಯು ಪರಮಾತ್ಮನಲ್ಲಿ ಎಂತಿತ್ತು ಎಂಬುದು ತಿಳಿಯದೆ ಇಲ್ಲ.

ಸಕಲ ಸಂಪತ್ತು ಇವರಿಗಿದ್ದಿತು. ಆದರೆ ಮನಃಶಾಂತಿಯು ಮಾತ್ರ ಲಭಿಸಿರಲಿಲ್ಲ. ಗೃಹಕಾರ್ಯ, ರಾಜಕೀಯ ಕೆಲಸಗಳ ಗೊಂದಲವು ಕೂಡಿಕೊಂಡಿದ್ದಿತು. "ಸ್ವಾರ್ಜಿತ ಶುದ್ಧವೆಂದು ತಿಳಿದು ಕಾಯಕದಿಂದ ತನುವನ್ನು ಲಿಂಗಮಯವನ್ನಾಗಿ ಮಾಡಲು ಉದ್ದೇಶಿಸಿದರು. ಅದಕ್ಕಾಗಿ ಕರಣಿಕರಾಗಿ ಸೇರಿ "ಕಾಯಕವೇ ಕೈಲಾಸ"ವೆಂದರಿತು ಶ್ರದ್ಧೆ, ಸ್ವಾಮಿನಿಷ್ಠೆಯಿಂದ ಕಾರ್ಯಪ್ರವರ್ತಕರಾಗಿದ್ದ ಇವರು ಕೊನೆಗೆ ಬಿಜ್ಜಳನ ರಾಜ್ಯಕ್ಕೆ ಮಂತ್ರಿಯಾದರು. ಹೀಗಿದ್ದರೂ "ಕಾಂಚ

ನವೆಂಬ ನಾಯು ನೆಚ್ಚಿ ನಿಮ್ಮ ಮರೆದನಯ್ಯಾ. ಕಾಂಚನಕ್ಕೆ ವೇಳೆ ಯಿಲ್ಲದೆ ಲಿಂಗಕ್ಕೆ ವೇಳೆಯಿಲ್ಲ. ಹಡಕಿಗೆ ಮೆಚ್ಚಿದ ಸೊಣಗನು ಅಮೃತದ ರುಚಿಯು ಬಲ್ಲುದೆ ಕೂಡಲ ಸಂಗಮ ದೇವಾ." ಎಂಬ ಮೊರೆಯನ್ನು ಬಸವಣ್ಣನವರಿಂದ ಕೇಳಿದರೆ ಇವರ ಅಸಮಾಧಾನವು ಅರಿವಾಗುವುದು. ಹಲವಾರು ಕಾರ್ಯ ಕೋಟಲೆಗಳಿಂದ ಇವರಿಗೆ ಚಿತ್ತೈಕಾಗ್ರತೆಯು ಲಭಿಸಿರಲಿಲ್ಲ. ಮನಸ್ಸನ್ನು ಒಂದೇ ಕಡೆಯಲ್ಲಿ ನಿಲ್ಲಿಸಿಕೊಂಡು ಸಂಗಮನಾಥನನ್ನು ಧ್ಯಾನಿಸಲಾಗಲಿಲ್ಲವೆನ್ನಲು "ಮರನೇರಿದ ಮರ್ಕಟನಂತೆ ಹಲವು ಕೊಂಬೆಗೆ ಹಾರುತಲಿದ್ದೇನೆ. ಬೆಂದ ಮನವ ನಾನೆಂತು ನಂಬುವೆನಯ್ಯಾ! ಎಂತು ನೆಚ್ಚುವೆನಯ್ಯಾ! ಎನ್ನ ತಂದೆ ಕೂಡಲ ಸಂಗಮ ದೇವನಲ್ಲಿಗೆ ಹೋಗಲೀಯದಯ್ಯಾ." ವಚನವೇ ಸಾಕಷ್ಟು ನಿದರ್ಶನವಾಗಿದೆ. ನಿಷ್ಕಾಪಟ್ಯ ಹೃದಯವುಳ್ಳ ಇವರಿಗೆ ಬಹಿರಂಗ ವಚನಗಳೂ, ಪ್ರಶಸ್ತಿಗಳೂ ಬೇಕಾಗಿರಲಿಲ್ಲ. ಎನ್ನ ಚಿತ್ತವು ಅತ್ತಿಯ ಹಣ್ಣು ನೋಡಯ್ಯಾ! ವಿಚಾರಿಸಿದರೆ ಏನೂ ಹುರುಳಿಲ್ಲವಯ್ಯಾ! ಪ್ರಪಂಚದ ಡಂಭಿನಲ್ಲಿ ಎನ್ನನೊಂದು ರೂಹವ ಮಾಡಿ ನೀವಿರಿಸಿದಿರಯ್ಯಾ ಕೂಡಲ ಸಂಗಮ ದೇವ" ಎಂದು ಹೇಳುವ ಬಸವಣ್ಣನವರಿಗೆ ಆಗಾಗ್ಗೆ ಮನಸ್ಸಿಗೆ ಬಹು ದುಃಖವಾಗುವುದು. ತಾನು ಭಕ್ತನೆಂಬ ಭಾವವನ್ನು ಮರೆತು ತಾನು ಈ ಲೋಕದಲ್ಲಿರುವ ಪರಿವೆಯೇ ತೊಲಗಿ ಹೋಗಿ, ಬ್ರಹ್ಮಾನಂದ ತುಲ್ಯನಾಗಿ, ಪರಮೇಶ್ವರನ ಚಿತ್ಕಳಾ ದರ್ಶನವು ಅಂತರಂಗದಲ್ಲಾಗಲಿಲ್ಲವೆಂಬುದು ಬಸವಣ್ಣನವರಿಗೆ ಚೆನ್ನಾಗಿ ತಿಳಿದಿದ್ದಿತು.

ಗಾಂಧೀಜಿಯವರು ಹೇಗೆ ಮಾನವನ ನೈಜ ದೋಷಗಳನ್ನು ಜನತೆಯ ಮುಂದಿಟ್ಟರೋ ಹಾಗೆಯೇ ಬಸವಣ್ಣನವರು ಸಹಜ ದೋಷಗಳನ್ನು ಹೊರಗೆಡಹಿರುವನು "ಅಕಟಕಟ! ಶಿವ ನಿನಗಿನಿತು ಕರುಣವಿಲ್ಲ. ಅಕಟಕಟ ಶಿವ ನಿನಗಿನಿತು ಕೃಪೆಯಿಲ್ಲ. ಏಕೆ ಹುಟ್ಟಿಸಿದೆ ಇಹಲೋಕ ದುಃಖಿಯ. ಪರಲೋಕ ದೂರನ? ಏಕೆ ಹುಟ್ಟಿಸಿದೆ? ಎನಗಾಗಿ ತರುಲತೆ ಮರಾದಿಗಳಿಲ್ಲವೇ? ಎಂದು ದುಃಖಿಸುವ ಬಸವಣ್ಣನವರನ್ನು ನೋಡಿದರೆ ಇವರು ದೇವರ ದಯೆಗಾಗಿ ದುಡಿಯುವುದು ಗೊತ್ತಾಗದೆ ಇರದು. ಸಂಶಯಗ್ರಸ್ತನಿಗೆ ದೇವನು ಕಟಕ್ಕನೆ ಒಲಿಯಲಾರನು. ಸಂಶಯದಿಂದ ಅಲಕ್ಷ್ಯಭಾವವು ಜನಿಸುವುದು. ಒಂದು

ಚಣ ಅಲಕ್ಷ್ಯದಿಂದ ಇದ್ದರೆ ಸಾಕು. ಮಾಡಿದ ಭಕ್ತಿಯೆಲ್ಲವೂ ನಿರ್ನಾಮವಾದಂತೆಯೇ. ಅತಿ ದಾರುಣವಾದ ಭಕ್ತಿಮಾರ್ಗವು ಸುಲಭ ಸಾಧ್ಯವಲ್ಲವೆಂದು ತಮ್ಮ ಅನುಭವದಿಂದ ಸಾರಿದರು. ಚಿತ್ತ ಪಾರಿ ಶುದ್ಧವಿಲ್ಲದಾತನಿಗೆ ಭಗವಂತನ ದಯೆಯು ಸಿಗದು. ಅಲ್ಲಮಪ್ರಭು ಚನ್ನಬಸವಣ್ಣನವರಿಂದ ಬುದ್ಧಿ ಕಲಿತು ತನ್ನ ಭಕ್ತಿಯನ್ನು ಭಾರಿ ಯಾಗಿ ಮಾಡಿಕೊಂಡನು. ಅಲ್ಲಮರ ಉಪದೇಶ ಬಲವು ಇವರ ಭಕ್ತಿಸಾಧನೆಯನ್ನು ಜಯಶೀಲವಾಗುವಂತೆ ಮಾಡಿತು. ಗುರುಸಾಕ್ಷಾ ತ್ಕಾರದಿಂದ ಮನಸ್ಸು ಪರಿಪಕ್ವವಾದ ಬಸವಣ್ಣನವರು "ಮಾಡುವಾತ ನಾನಲ್ಲಯ್ಯ! ನೀಡುವಾತ ನಾನಲ್ಲಯ್ಯ! ಬೇಡುವಾತ ನಾನಲ್ಲಯ್ಯ! ನಿಮ್ಮ ಕಾರುಣ್ಯವಲ್ಲದೆ. ಎಲೆ ದೇವಾ! ಮನೆಯ ತೊತ್ತಲಿಸಿದರೆ ಒಡತಿ ಮಾಡಿಕೊಂಬಂತೆ, ನಿನಗೆ ನೀ ಮಾಡಿಕೋ" ಎಂದು ಕೂ ಡಲ ಸಂಗಮ ದೇವರಿಗೆ ಶರಣಾಗತರಾದರು. ಮಧ್ಯೆ ಮಧ್ಯೆ ಎಷ್ಟು ಬಂಧನಗಳು ಬಂದರೂ ಬಿಡದೆ, ಅವುಗಳಿಗೆ ಅಂಜಿ ಅಳುಕದೆ, ಕಾ ರ್ಯವನ್ನು ಸಾಧಿಸಿದ ಭಕ್ತಿಶಿಖಾಮಣಿಯು ಬಸವಣ್ಣನವರು. ಇವರ ಮನೋವ್ಯಾಪಾರವೆಲ್ಲವೂ ಸ್ಫಟಿಕ ಪಾತ್ರೆಯ ನೀರಿನಲ್ಲಿ ಕಾಣಬರುವ ಮತ್ಸ್ಯದ ಚಲನದಂತೆ ಬಹಿರಂಗಕ್ಕೆ ಸರ್ವರಿಗೂ ಕಾಣುತ್ತದೆ. ಇವರ ಸತ್ಯಾನ್ವೇಷಣ ಸತ್ಯಕ್ಕಾಗಿ ಹೋರಾಟವು ಆತ್ಮೋನ್ನತಿಯು ಪ್ರದರ್ಶಕ ಗಳಾಗಿವೆ.

"ಕರಗಿಸಿ ಎನ್ನ ಮನದ ಕಾಳಿಕೆಯ ಕಳೆಯಯ್ಯ! ಒರೆಗೆ ಬಣ್ಣಕ್ಕೆ ತಂದೆನ್ನ ಪುಟವಿಕ್ಕಿ ನೋಡಯ್ಯ! ಕಡಿಹಕ್ಕೆ ಬಡಿಹಕ್ಕೆ ತಂದೆನ್ನ ಕಡಿಯಾಣಿಯ ಮಾಡಿ ನಿಮ್ಮ ಶರಣರ ಪಾದಕ್ಕೆ ತೊಡಿಗೆಯ ಮಾಡಿ ಸಲಹು ಕೂಡಲ ಸಂಗಮ ದೇವಾ." ನುಡಿಯು ಬಸವಣ್ಣನವರ ಸಾಧನೆಯನ್ನು ಎತ್ತಿ ತೋರಿಸುತ್ತದೆ. ಇವರ ಮನೋವೃತ್ತಿಯು ಬರೀ ಭಕ್ತಿಯುತವಾಗಿ ಪರಿಣಮಿಸಿದ ಮಹತ್ತರ ಸಾಧನೆಯೊಂದಾಗಿದೆ. ಕಾರಣ ಪುರುಷರಾದ ಕತದಿಂದ ಇವರ ಸಾಧನೆಯು ಜಾಗ್ರತೆಯಾಗಿ ಫಲಕಾರಿಯಾಯಿತು. ಇವರು ದ್ವೈತ ಭಾವನೆಯಲ್ಲಿದ್ದು ಯಜಮಾನ ಸೇವಕ ಸಂಬಂಧದಿಂದ ಮೊದ ಮೊದಲು ಉಪಾಸನೆ ಮಾಡಿದವರಾ ದರೂ ಶರಣ ಸತಿ ಲಿಂಗ ಪತಿಯ ಮಧುರಭಾವದಿಂದಲೂ ಪರಮಾತ್ಮನ ವಿಚಾರದಲ್ಲಿ ನಡೆದುಕೊಂಡಿದ್ದಾರೆ. ಬರು ಬರುತ್ತ ಹೊರಗಿನ ಆರಾ

ಧನೆಯು ಆಡಂಬರಗಳನ್ನೂ ಸಾಕಾರ ನಿಷ್ಠೆಯನ್ನೂ ಹಾಯ್ದು ಹೋಗಿ ಐಕ್ಯ ಸ್ಥಲದ ಅದ್ವೈತಾನಂದಮಯರಾಗಿ ವ್ಯೆಮರೆತಿರುವುದು." ದಶ ದಿಕ್ಕು ಧರೆ ಗಗನವೆಂಬುದ ನಾನರಿಯೆನಯ್ಯಾ! 'ಲಿಂಗ ಮಧ್ಯೇ ಜಗತ್ಸರ್ವಂ' ಎಂಬುದನರಿಯೆನಯ್ಯಾ! ಲಿಂಗ ಸೋಂಕಿನ ಸುಖದೊಳಗೆ ಕೂಡಲ ಸಂಗಮ ದೇವಯ್ಯಾ, ಅಂಬುಧಿಯೊಳಗೆ ಬಿದ್ದ ವಾರಿಕಲ್ಲಿ ನಂತೆ ಭಿನ್ನ ಭಾವವನರಿಯದೆ 'ಶಿವ, ಶಿವಾ' ಎನ್ನುತ್ತಿದ್ದೆ ನಾನು" ಎಂಬುದು ತೋರಿಬರುವುದು.

ಭಕ್ತಿಗೆ ಪ್ರಾಶಸ್ತ್ಯವನ್ನು ಕೊಟ್ಟು, ಅದಕ್ಕಾಗಿ ತ್ರಿಕರಣಪೂರ್ವಕ ವಾಗಿ ದುಡಿದು, ಅಡಿಯ ಮುಂದಿಟ್ಟವರು ಬಸವಣ್ಣನವರು. 'ನಾದ ಪ್ರಿಯನೆಂಬರು ಶಿವನ, ನಾದಪ್ರಿಯ ಶಿವನಲ್ಲಯ್ಯಾ. ವೇದಪ್ರಿಯ ನೆಂಬರು ಶಿವನ, ವೇದಪ್ರಿಯ ಶಿವನಲ್ಲಯ್ಯಾ. ನಾದವ ಮಾಡಿದ ರಾವಣಂಗೆ ಅರೆಯಾಯುಷ್ಯವಾಯಿತ್ತು. ವೇದವನೋದಿದ ಬ್ರಹ್ಮಂಗೆ ಶಿರ ಹೋಯಿತ್ತು. ನಾದಪ್ರಿಯನು ಅಲ್ಲ. ವೇದಪ್ರಿಯನು ಅಲ್ಲ. ಭಕ್ತಿಪ್ರಿಯನು ಕೂಡಲ ಸಂಗಮ ದೇವ.' ನುಡಿಯನ್ನು ನೋಡಿದರೆ ಭಕ್ತಿಯು ಓಂಕಾರ ಪ್ರಣವ ಮತ್ತು ವೇದಕ್ಕಿಂತಲೂ ಹಿರಿದೆಂಬುದು ಗೋಚರವಾಗುವುದು. ಘನತರ ಕ್ಷೋಭೆಯಿಂದ ಅಲುಗಾಡುತ್ತಿದ್ದ ಇವರ ಚಿತ್ತವು ಶಾಂತವಾಯಿತು. ಬೆಳಗಿನಲ್ಲಿ ಬೆಳಗು ಕೂಡಿದಂತೆ ನಿರ್ವಿಕಲ್ಪ ಸಮಾಧಿ ಸಿದ್ಧ ಪುರುಷರಾಗಿ ಪರಮಾನಂದ ಹೃದಯಿಗಳಾ ದರು. ಬಹಿರ್ಮುಖರಾದ ಸಮಯದಲ್ಲಿ ಜೀವನ್ಮುಕ್ತರಾದ ಈ ವಿಭೂತಿಗಳು ತಾವು ನೋಡಿದ ಸತ್ಯವನ್ನು ಜನತೆಯಲ್ಲಿ ಪ್ರಸರಿಸಲು ದೀಕ್ಷಾಬದ್ಧರಾದರು. ಅರವಿಂದರ ಆಚರಣೆಯನ್ನು ನೆನಪಿಗೆ ತಂದರೆ ಇದು ಸತ್ಯವೆಂದು ಯಾರು ತಾನೇ ಹೇಳದಿರುವರು? ಸಂಶಯಿ ಗಳೂ, ನಿರೀಶ್ವರವಾದಿಗಳೂ ಒಂದಾನೊಂದು ಕಾಲದಲ್ಲಿ ಕಾಣಬರುವ ಚಿತ್ಕಲಾ ಪ್ರಭಾವದಿಂದ ಉಜ್ವಲ ಭಕ್ತರಾಗುವುದು ನವೀನ ಕಾಲದಲ್ಲಿ ಅಪೂರ್ವವೇನೂ ಅಲ್ಲ. ಭಾರತದ ವೇದಾಂತ ಕೇಸರಿಯಾದ ವಿವೇ ಕಾನಂದರ ನಿದರ್ಶನವೊಂದನ್ನು ತೆಗೆದು ನೋಡಿದರೆ ಇದು ದಿಟ ವೆಂದು ಒಪ್ಪಲೇ ಬೇಕಾಗುತ್ತದೆ. 'ಸರ್ವಂ ಶಿವಮಯಂ ಜಗತ್', ಎಂದು ಸಾರಿದ ಬಸವಣ್ಣನವರ ಭಕ್ತಿ ಸಾಧನೆಯು ಅತಿ ಮಾನುಷತ್ವ ದ್ದೆಂದು ಹೇಳಿದರೆ ತಪ್ಪಾಗಲಾರದು.

---

# ಹಿಂದೂ ದೇವಾಲಯುಗಳಲ್ಲಿ ಕೊಳೆಯುನ್ನು ತೊಳೆವ ಬಗೆ.

(ಬರೆದವರುಃ— ಶ್ರೀ. ಅನ್ನದಾನೀಶ್ವರ ವಿರಕ್ತಮಠ)

ಹಿಂದುಸ್ಥಾನದ ಎಲ್ಲ ಪ್ರಸಿದ್ಧ ಮತ್ತು ದೊಡ್ಡ ದೇವಸ್ಥಾನಗಳಲ್ಲಿ ಹೀನ ಪಾಪಕೃತ್ಯಗಳು ತುಂಬಿಕೊಂಡಿವೆಯೆಂದು ಮಹಾತ್ಮಾ ಗಾಂಧಿಯವರು ಹೇಳಿದ್ದಾರೆ. ಈ ಹೇಯಕೃತಿಗಳನ್ನು ಯಾರು ಮಾಡುತ್ತಾರೆ? ಯಾಂತ್ರಿಕ ರೀತಿಯಿಂದ ಗಿಳಿಗಳಂತೆ ಸಂಸ್ಕೃತ ಮಂತ್ರಗಳನ್ನು ಹೇಳುತ್ತ ಪೂಜೆ ಮಾಡುವ ಆಚಾರ್ಯರೂ, ಪೂಜಾರಿಗಳೂ, ದೇವದಾಸಿಯರೂ, ಸನ್ಯಾಸಿಗಳೂ, ಬೈರಾಗಿಗಳೂ ಮೇಲೆ ಹೇಳಿದಂತೆ ಪಾಪಕೃತಿಗಳನ್ನು ಮಾಡುತ್ತಾರೆ. ಅನೇಕ ಭಿಕ್ಷುಕರೂ ಸಹ ಪಾಪಮಾಡುತ್ತಾರೆ. ಆಚಾರ್ಯರು ಯಥೇಚ್ಛವಾಗಿ ಭೋಜನ ಮಾಡಿ ಅತ್ಯಂತ ಅಲಸಿಗರಾಗಿ ಕಾಲ ಕಳೆಯುತ್ತಾರೆ. ಮೈತುಂಬಾ ಕೆಲಸವಿಲ್ಲದೆ ಆಲಸ್ಯತನದಿಂದ ಇರುವ ಆಚಾರ್ಯರಿಗೆ ದೇವಸ್ಥಾನದ ಭೂಮಿ ಸೀಮೆಗಳು ಇರುತ್ತವೆ. ಹೊಟ್ಟೆಯ ಚಿಂತೆಯಂತೂ ಇಲ್ಲವೇ ಇಲ್ಲ. ಜ್ಞಾನ ಪ್ರಾಪ್ತಿಯನ್ನಂತೂ ಇವರು ಮಾಡುವದೇ ಇಲ್ಲ. ಆಧ್ಯಾತ್ಮಿಕ ಸಾಧನೆಯೂ ಇಲ್ಲ. ಹೀಗೆ ಇದ್ದರೂ ಇವರಿಗೆ ಗರ್ವ ಬಹಳ. ದೇವರನ್ನು ತೋರಿಸುವ ಮಧ್ಯವರ್ತಿಗಳೇ ಇವರಾಗಿರುವದರಿಂದ ತಲೆಪಟ್ಟಿಯನ್ನು ಸಹ ವಸೂಲ ಮಾಡುತ್ತಾರೆ. ದೇವರು ವರ ಕೊಟ್ಟರೂ ಪೂಜಾರಿ ಕೊಡನೆಂಬಂತೆ ಇವರ ಸ್ಥಿತಿಯಿರುವದು.

ವ್ಯಭಿಚಾರ ಕೃತ್ಯಗಳನ್ನೇ ತಮ್ಮ ಉದ್ಯೋಗವನ್ನಾಗಿ ಮಾಡಿಕೊಂಡಿರುವ ದೇವದಾಸಿಯರು ನರ್ತನ-ಗಾಯನ ಮಾಡಲಿಕ್ಕೆ ಉತ್ಸವ ಸಮಾರಂಭಗಳಲ್ಲಿ ಗುಡಿಗಳಿಗೆ ಬರುವರು. ಇವರ ಮೋಹಕ್ಕೆ ಬಲಿಬೀಳುವದರಿಂದ ತರುಣರೂ ಭಕ್ತರೂ ಆಚಾರ್ಯರೂ ವ್ಯಭಿಚಾರಿಗಳಾಗಿ ಹೋಗುವರು. ಕೊನೆಗೆ ದೇವದಾಸಿಯರ ಸ್ಥಿತಿಯಂತೂ ವರ್ಣಿಸಲಸಾಧ್ಯವಾದ ದು:ಸ್ಥಿತಿಯಲ್ಲಿ ಕೊನೆಗೊಳ್ಳುವದು.

ಸನ್ಯಾಸಿಗಳೂ ಬೈರಾಗಿಗಳೂ ಆಲಸ್ಯತನದ ಮೂರ್ತಿಮಂತ ಪ್ರತಿನಿಧಿಗಳು. ಮೈತುಂಬಾ ಬೂದಿ ಬಡಕೊಂಡು ಜಟಾಧಾರಿಗಳಾಗಿ ರುದ್ರಾ

ಕ್ಷಿಪರಗಳನ್ನು ಪರಗಟ್ಟಲೆ ಹಾಕಿಕೊಂಡು ಪವಿತ್ರತನದ ಸೋಗು ಹಾಕಿ ಕೊಂಡು ಅಜ್ಞಾನದಿಂದ ತಿರುಗುವರು. ಗಾಂಜಾ, ಅಫು, ತಂಬಾಕ ಸೇವಿಸುತ್ತ ಅಸಭ್ಯತನದಿಂದ ಮಾತಾಡುತ್ತ ಅಶ್ಲೀಲ ಸ್ವಭಾವದಿಂದ ಕೂ ಡಿದವರಾಗಿರುವರು. ಈ ಪ್ರಕಾರ ಅನೀತಿವಂತರೂ ವ್ಯಭಿಚಾರಿಗಳೂ ಆಗಿರುವ ಸನ್ಯಾಸಿಗಳನ್ನು ಯಾತ್ರಿಕರು ಪೂಜಿಸಿ, ವಂದಿಸಿ, ದಕ್ಷಿಣೆಯನ್ನು ಅರ್ಪಿಸುತ್ತಾರೆ. ಸನ್ಯಾಸಿಗಳಿಗೆ ಒಂದು ಸಮಾಜದಲ್ಲಿ ಮನುವು ಅತೀವ ಮಹತ್ವ ಕೊಟ್ಟದ್ದರಿಂದ ಈ ದುಃಸ್ಥಿತಿಯು ಪ್ರಾಪ್ತವಾಗಲಿಕ್ಕೆ ಒಳ್ಳೇ ಅವ ಕಾಶ ಸಿಕ್ಕಿದೆ.

ಭಿಕ್ಷುಕರಂತೂ ಪೋಲಿಗಳಾಗಿ ಮೋಸ, ಸುಳ್ಳು, ಕಳವು, ಹಾದರ, ಮಾಟ, ತಂತ್ರಗಳೇ ಮೊದಲಾದವುಗಳಲ್ಲಿ ಕಾಲಕಳೆಯುತ್ತ ಆಚಾರ್ಯರೂ ಸನ್ಯಾಸಿಗಳಂತೆ ಇವರೂ ಅಲಸಿಗರೂ ಅನೈತಿಕರೂ ಆಗಿ ಅಧಃಪತನದ ವಾಯುಮಂಡಲವನ್ನು ಗುಡಿಗಳಲ್ಲಿ ತಯಾರಿಸಲಿಕ್ಕೆ ಸಹಾಯಕರೇ ಆಗಿರು ವರು. ಸೆರೆ ಕುಡಿದು, ಅಶ್ಲೀಲ ಪದಗಳನ್ನು ಹಾಡುತ್ತ, ಸೂಳೆಯರ ಪಾಶ ದಲ್ಲಿ ಸಿಕ್ಕವರೂ ಸಹ ಸನ್ಯಾಸಿಗಳಾಗಿದ್ದರೆ ಮೂಢ ಯಾತ್ರಿಕರಿಂದ ಪೂಜಿಸಲ್ಪಡುತ್ತಾರೆ. ಇದಕ್ಕಿಂದ ವಿಚಾರದ ದಿವಾಳಿಯ ಉದಾಹರಣೆ ಮತ್ತಿನ್ನೇನು ಬೇಕು ?

ಮೇಲೆ ಹೇಳಿದ ಹಿಂದೂ ದೇವಾಲಯಗಳಲ್ಲಿಯ ಈ ಕೊಳೆಯನ್ನು ತೊಳೆಯುವ ಉಪಾಯವನ್ನು ಹುಡುಕುವದು ಸುಲಭವಾಗುವದು. ಆರ್ಯರ ಸ್ವರ್ಗದ ಕಲ್ಪನೆ, ಇಂದ್ರಾದಿ ದೇವತೆಗಳ ಕಲ್ಪನೆ, ವಿಷಮ ವರ್ಣಾಶ್ರಮದ ಕಲ್ಪನೆ, ಕೃಷ್ಣಪಂಥೀಯರ ಕೃಷ್ಣನ ಅನೈತಿಕ ಕಥೆಗಳ ಕಲ್ಪನೆ, ವೈರಾ ಗ್ಯವೇ ಶ್ರೇಷ್ಠವೆಂಬ ತಪ್ಪು ಧಾರ್ಮಿಕ ಕಲ್ಪನೆ, ಇಹಲೋಕ ತಿರಸ್ಕಾರದ ಅವೈಜ್ಞಾನಿಕ ಕಲ್ಪನೆ—ಇವೇ ಮುಂತಾದ ತಪ್ಪು ಕಲ್ಪನೆಗಳಿಂದ ದೇವಾ ಲಯಗಳಲ್ಲಿಯ ಕೊಳೆಯು ಉಗಮ ಹೊಂದಿದೆಯೆಂದೂ ಅದಕ್ಕೆ ಸ್ವೇಚ್ಛೆ ವಾದ ಅವಕಾಶ ಸಂದರ್ಭಗಳು ಸಿಕ್ಕಿವೆಯೆಂದೂ ಸೂಕ್ಷ್ಮವಿಚಾರ ಮಾಡಿ ದರೆ ತಿಳಿಯುವದು.

ಪುರಾಣಗಳಲ್ಲಿ ವರ್ಣಿಸಲ್ಪಟ್ಟ ದೇವಲೋಕದ ದೇವಾನುದೇವತೆಗಳು ಮನುಷ್ಯರಂತೆ ಅನೈತಿಕರಾಗಿದ್ದರೂ ಪೂಜಿಸಲ್ಪಡುವರು. ಅವರಲ್ಲಿ ನ್ಯಾಯಾ

ನ್ಯಾಯ ಧರ್ಮಾಧರ್ಮಗಳ ಕಲ್ಪನೆಯಿರುವದಿಲ್ಲ. ರಾಮಾಯಣದಲ್ಲಿ ಇಂದ್ರನು ಅಹಲ್ಯೆಯನ್ನು ಭ್ರಷ್ಟಗೊಳಿಸಿದನೆಂದು ಓದುತ್ತೇವೆ. ದೇವಲೋಕದ ಅಪ್ಸರೆಯಾದ ಮೇನಕೆಯಿಂದ ವಿಶ್ವಾಮಿತ್ರ ಋಷಿಯ ತಪಶ್ಚರ್ಯ ಭಂಗವಾಗಿ ಅವರೀರ್ವರ ಸಂಗದಿಂದ ಶಕುಂತಲೆ ಹುಟ್ಟಿದಳೆಂದು ಓದುತ್ತೇವೆ. ಗಂಧರ್ವರ ಗಾಯನ, ಅಪ್ಸರೆಯರ ನೃತ್ಯ, ದೇವೇಂದ್ರನ ವೈಭವ, ಇತ್ಯಾದಿ ಇತ್ಯಾದಿಯಾಗಿ ಓದುತ್ತೇವೆ. ಹಿಂದೂ ದೇವಾಲಯವೆಂದರೆ ಪೃಥ್ವಿಯ ಮೇಲಿನ ಸಣ್ಣ ಸ್ವರ್ಗದಂತೆ ಕಟ್ಟಲ್ಪಟ್ಟಿರುವದು. ದೇವಲೋಕದಲ್ಲಿದ್ದದ್ದು ಇಲ್ಲಿ ಇರಲೇಬೇಕಲ್ಲವೇ ? ಮೂರ್ತಿಗಳು, ವಾಹನಗಳು, ಆಚಾರ್ಯರು, ನರ್ತಕಿಯರು, ಗಾಯಕರು, ಸನ್ಯಾಸಿಗಳು ಇವರೆಲ್ಲರೂ ಇಲ್ಲಿ ಇರಲೇಬೇಕಲ್ಲವೇ? ನನ್ನನ್ನು ಕುರಿತು ಮಾಡಿದ ಪಾಪವೂ ಪುಣ್ಯವಾಗುವದೆಂದು ಸಾಕ್ಷಾತ್ ವಿಷ್ಣುವೇ ಒಂದು ಕಡೆಗೆ ಹೇಳಿಲ್ಲವೇ ?

ಎಂದಮೇಲೆ ಈ ಗೊಡ್ಡು ಪುರಾಣಗಳ ಕಲ್ಪನೆಯನ್ನೂ ಆರ್ಯರ ದೇವೇಂದ್ರನ ಕಲ್ಪನೆಯನ್ನೂ ಸ್ವರ್ಗದ ಕಲ್ಪನೆಯನ್ನೂ ಮನುವಿನ ವರ್ಣಾಶ್ರಮದ ಕಲ್ಪನೆಯನ್ನೂ ಮೊದಲು ತೆಗೆದು ಹಾಕಬೇಕು. ಈ ಮಹಾಕಾರ್ಯವನ್ನು ೧೨ ನೇ ಶತಮಾನದಲ್ಲಿ ಯುಗಪ್ರವರ್ತಕ ಬಸವಂಣನವರು ತಮ್ಮ ಆಧ್ಯಾತ್ಮಿಕ ಸಾಮಾಜಿಕ ಕ್ರಾಂತಿಗಳಿಂದ ಲೀಲಾಜಾಲವಾಗಿ ಎಸಗಿದರು. "ಸ್ವರ್ಗ-ನರಕ ಬೇರಿಲ್ಲ. ಸತ್ಯಸದಾಚಾರವೇ ಸ್ವರ್ಗ. ಅನಾಚಾರವೇ ನರಕ." ಎಂದು ಬಸವಂಣನವರು ಸ್ವರ್ಗದ ಕಲ್ಪನೆಯನ್ನು ದೂರೀಕರಿಸಿದರು. "ದೇವನೊಬ್ಬ. ಮರ್ತ್ಯಲೋಕ ಕರ್ತಾರನ ಕಮ್ಮಟ, ಇಹಲೋಕದಲ್ಲಿಯೇ ಅನಂತ ಲೋಕ. ದೇಹವೇ ದೇವಾಲಯ. ವರ್ಣಾನಾಂ ಕಿಂ ಪ್ರಯೋಜನಂ ? ಇಂದ್ರಿಯನಿಗ್ರಹವ ಮಾಡಿದರೆ ಹೊಂದುವವು ಅನಂತ ದೋಷಂಗಳು. ಲಾಂಛನಕ್ಕೆ ತಕ್ಕ ಆಚಾರ ಬೇಕು. ಸತ್ಯ ಶುದ್ಧ ಕಾಯಕದಿಂದ ಮುಕ್ತಿ. ಸ್ಥಾವರಕ್ಕಳಿವುಂಟು. ಜಂಗಮಕ್ಕಳಿವಿಲ್ಲ. ಆಕಾಶದಲ್ಲಿ ಹಾರಾಡುವ ಪಟಕ್ಕಾದರೂ ಮೂಲಸೂತ್ರ ಬೇಕು." ಇತ್ಯಾದಿ ಅನೇಕ ಅಮರ ವಚನಗಳಿಂದ ಹಿಂದೂ ಧರ್ಮ ಸಮಾಜಗಳಲ್ಲಿಯ ಕೊಳೆಯನ್ನೂ ಕಳೆದನು. ಅದೇ ಮಾರ್ಗ ಇಂದು ನಮಗೆ ಬೇಕು.

---

# ಶಿವಾನುಭವ ಪತ್ರಿಕೆಗೆ ಕಾಣಿಕೆಗಳು.

—:●:—

ಕೆಳಗೆ ಕಾಣಿಸಿದ ಮಹನೀಯರು ಶಿವಾನುಭವ ಪತ್ರಿಕೆಗೆ ಕೆಳಗೆ ಕಾಣಿಸಿದಂತೆ ಕಾಣಿಕೆಗಳನ್ನು ಕಳಿಸಿಕೊಟ್ಟಿದ್ದಾರೆ. ಅವರಿಗೆ ನಾವು ಅತ್ಯಂತ ಕೃತಜ್ಞರಾಗಿದ್ದೇವೆ.

| | | ರೂ॥ |
|---|---|---|
| (೧) | ವೇ. ಮೂ. ಸಿದ್ಧಲಿಂಗಯ್ಯ ಸಾವಳಿಗಿಮಠ ಗೋಕಾಕಫಾಲ್ಸ ಆನಂದಕವಿ ಕುರುಗುಂದ ಇವರ ಮೂಲಕ ಬಂದದ್ದು. | ೧೦ |
| (೨) | ರಾ. ರಾ. ಎನ್. ಮುರುಡಪ್ಪ ಮು. ಕೊಳ್ಳೆಗಾಲ | ೫ |
| (೩) | ರಾ॥ ರಾ॥ ಮುರುಗಪ್ಪ ಗಿರಮಲ್ಲಪ್ಪ ಸಾಲಂಕಿ ಮು. ಸೊಲ್ಲಾಪುರ ಇವರು ತಮ್ಮ ಚಿರಂಜೀವಿ ಶಿವಕಾಂತಾಬಾಯಿ ಇವರ ಲಗ್ನ ಕಾರ್ಯದಲ್ಲಿ | ೨ |
| (೪) | ಶ್ರೀಯುತ ಎನ್. ರಾಚೋಟಿಯ್ಯ ಮು. ಕಾನಕಾನಹಳ್ಳಿ ಜಿ॥ ಬೆಂಗಳೂರ ಇವರ ಮುಖಾಂತರ ಬಂದದ್ದು. | |
| (೫) | ಶ್ರೀ ಪಂಡಿತ ಬಸಪ್ಪನವರು, ತಮ್ಮ ಕುಮಾರಿ ಶಿವಮ್ಮನ ವಿವಾಹ ಮಹೋತ್ಸವದಲ್ಲಿ | ೧ |
| (೬) | ಶ್ರೀ ಚರಂತಿ ರುದ್ರಪ್ಪನವರು ತಮ್ಮ ಸಹೋದರ ರಾ॥ ರಾ॥ ರಾಚಣ್ಣನವರ ವಿವಾಹ ಕಾಲದಲ್ಲಿ | ೨ |
| (೭) | ಶ್ರೀ ಕಟ್ಟಿಳೆ ತಿಪ್ಪಣ್ಣನವರ ಮಕ್ಕಳು ರಾಚಪ್ಪನವರು | ೨ |
| (೮) | ಶ್ರೀ ಶಿವರುದ್ರಪ್ಪನವರು ತಮ್ಮ ಕುಮಾರಿಯ ವಿವಾಹ ಮಹೋತ್ಸವದಲ್ಲಿ | ೧ |
| (೯) | ಶ್ರೀ ಬಸಯ್ಯನವರು ಚನ್ನಯ್ಯನವರು | ೧೦ |

---

೭. ಸದ್ಭಕ್ತಂಗೆಯೂ ಜಂಗಮಕ್ಕೆಯೂ ಭಾಜನ ಬೇರೆಂಬರು ನೀವು ಕೇಳಿರೋ. ಭಕ್ತದೇಹಿಕ ದೇವನೆಂದು ಶ್ರುತಿ ಸಾರುತ್ತಿವೆ. ಅರಿದು ಮರೆಯ ದಿರು. ಮರವೆಯಿಂದ ಬ್ರಹ್ಮ ಶಿರವ ಹೋಗಾಡಿಕೊಂಡ. ಮರವೆಯಿಂದ ದಕ್ಷ ತಲೆಯ ನೀಗಿಕೊಂಡು, ಕುರಿದಲೆಯಾಯಿತ್ತು. ಅರಿವ ಮರೆಯದೆ ವಿಚಾರಿಸಿ ನೋಡಿ, ಭಕ್ತಂಗೂ ಲಿಂಗಕ್ಕೂ ಭಿನ್ನವಿಲ್ಲ. ಇನ್ನು ಆ ಭಕ್ತಂಗೂ ಆ ಜಂಗಮಕ್ಕೂ ಭೇದವಿಲ್ಲ. ಬೇರ್ಪಡಿಸಿ ನುಡಿಯಲುಂಟೇ? ಇನ್ನು ಆ ಗುರುಲಿಂಗೆಯೂ ಆ ಭಕ್ತಂಗೆಯೂ ಸಂಕಲ್ಪವಿಲ್ಲ. ಅದೆಂತೆಂದೊಡೆಃ— 'ಅರ್ಥ ಪ್ರಾಣಾಭಿಮಾನಂ ಚ ಗುರುಲಿಂಗಂ ತು ಜಂಗಮಂ | ತಲ್ಲಿಂಗ ಜಂಗಮ ಪ್ರಾಪ್ತಂ ಭಕ್ತಸ್ಥಲ ಸುಭೂಧಿಷಃ || ಎಂದುದಾಗಿ ಇದನರಿತು ಅರ್ಥ ಪ್ರಾಣಾಭಿಮಾನವನು ಗುರುಲಿಂಗ ಜಂಗಮಕ್ಕೆ ಸಮರ್ಪಿಸಿ ಆ ಗುರುಲಿಂಗ ಜಂಗಮಕ್ಕೆ ಪ್ರಾಣವಾಗಿಪ್ಪ ಸದ್ಭಕ್ತಂಗೆಯೂ ಗುರುಲಿಂಗಜಂಗಮಕ್ಕೆಯೂ ಏಕ ಭಾಜನವಲ್ಲದೆ ಭಿನ್ನಭಾಜನ ಭೋಜನಗಳುಂಟೇ? ಇಲ್ಲವಾಗಿ ಅದೇನು ಕಾರಣವೆಂದಡೆ, ಆ ಸದ್ಭಕ್ತನ ಅಂಗವೆಂಬ ಹೃದಯದಲ್ಲಿ ಜಂಗಮವಿಪ್ಪ ನಾಗಿ, ಇದು ನಿಮಿತ್ಯ ಬೇರೆ ಮಾಡಿ ನುಡಿಯಲಾಗದು. ಚನ್ನಯ್ಯ ನೊಡನುಂಬುದು ಆವ ಶಾಸ್ತ್ರ? ಕಣ್ಣಪ್ಪ ಸವಿದುದು ಆವ ಶಾಸ್ತ್ರ? ಭಕ್ತ ದೇಹಿಕ ದೇವನಾದ ಕಾರಣ. ಅದೆಂತೆಂದೊಡೆ, ಭಕ್ತ ಜಿಹ್ವಾಗ್ರತೆ ಲಿಂಗಂ ಲಿಂಗ ಜಿಹ್ವಾಗ್ರತೆ ರುಚಿಃ | ರುಚಿ ಜಿಹ್ವಾ ಪ್ರಸಾದಂಚ | ಪ್ರಸಾದಂ ಪರಮಂ ಪದಂ || ಇಂತೆಂದುದಾಗಿ, ವಾಕ್ಯವನರಿದು ಸದ್ಭಕ್ತನು ಗುರು ಲಿಂಗ ಜಂಗಮವು ಈ ನಾಲ್ವರು ಒಂದೇ ಭಾಜನದಲ್ಲಿ ಸಹಭೋಜನ ಮಾಡುವವರಿಗೆ ಇನ್ನೆಲ್ಲಿಯ ಸಂಕಲ್ಪವೋ, ಇನ್ನೆಲ್ಲಿಯ ಸೂತಕವೋ, ಇನ್ನೆಲ್ಲಿಯ ಪಾತಕವೋ ಕೂಡಲಸಂಗಮದೇವಾ?

೮. ಲಿಂಗಕ್ಕೆ ಸಹ ಭೋಜನವಾದಲ್ಲಿ ಕೂರ್ಮನ ಶಿಶುವಿನ ಸ್ನೇಹ ದಂತಿರಬೇಕು. ಅಯಃಕಾಂತದ ಶಿಲೆಯ ಲೋಹದಂತಿರಬೇಕು. ಶಶಿಶಿಲೆ ಯಂತೆ ಒಸರುವ ಅರ್ಪಿತದ ಕೂಡುವ ಕೂಟ. ಭ್ರಮರ ಚಂಪಕದಂತೆ ಒಡಗೂಡಿ ಲಿಂಗಕ್ಕೆ ಎಡೆತೆರಹಿಲ್ಲದೆ ಸಹಭೋಜನವ ಕೊಡುವಾತನಡಿಗೆ ಕಡೆ ನಡು ಮೊದಲಿಲ್ಲದೆ ಎರಗುವೆ. ಆತ ಸದಾಶಿವಮೂರ್ತಿ ಲಿಂಗವು ತಾನೇ.

---

## ಏಕ ಭಾಜನ.

೧. ಏಕ ಭಾಜನ, ಏಕ ಭಾಜನವೆಂದೆಂಬರು. ನಾವಿದನರಿಯೆವಯ್ಯ. ಅಂಗದ ಮೇಲೆ ಪ್ರಾಣಲಿಂಗ ಪ್ರತಿಷ್ಠೆಯಾದ ಬಳಿಕ ಲಿಂಗಕ್ಕೆಯೂ ತನಗೆಯೂ ಏಕ ಭಾಜನವಲ್ಲದೆ ಬೇರೆ ಭಿನ್ನಭಾಜನ ಉಂಟೇ? ಲಿಂಗಕ್ಕೆಯೂ ತನಗೆಯೂ ಏಕಭಾಜನವಾಗದನ್ನಕ್ಕರ ಅಂಗದ ಕಳೆಯಲ್ಲಿ ಲಿಂಗವ ಧರಿಸಿಕೊಳಬಹುದೇ? ಇದನರಿದು ಏಕ ಭಾಜನವಾಗಿರ್ದರೆ ಅಂತು ದೋಷ. ಅರಿಯದೆ ಏಕ ಭಾಜನವಾದಡೆಂತು ದೋಷ? ಈ ಕುಳಸ್ಥಳದ ಭೇದವ ಭೇದಿಸಬಲ್ಲ ಕೂಡಲಚನ್ನಸಂಗಾ ನಿಮ್ಮ ಶರಣ.

೨. ಲಿಂಗಕ್ಕೆಯೂ ತನಗೆಯೂ ಭಿನ್ನಭಾವವಿಲ್ಲೆಂಬರು. ಲಿಂಗಕ್ಕೆಯೂ ತನಗೆಯೂ ಭಾಜನವೆರಡೆಂಬರು. ಬಂದಿತ್ತು ನೋಡಾ ತೊಡಕು. ಭಾಜನವೆರಡೆಂಬ ಮಾತೆರಡು. ಮಾತೆರಡಾದವಾಗಿ ಅಂಗವೆರಡಹುದು. ಅಂಗವೆರಡಿಪ್ಪಾತಂಗೆ ಲಿಂಗವಿಲ್ಲೆಂದೆನಿಸಿತ್ತು. ಲಿಂಗವಿಲ್ಲದಾತನು ಭವಿ ಎಂದೆನಿಸುವನು. ಇದುಕಾರಣ ಲಿಂಗದಲ್ಲಿ ಅವಿರಳವಾಗಿ ಅಂಗಗುಣಭಂಗವ ಕಳೆದು, ನಿರ್ಭಿನ್ನಮತನಾಗಿ ಉರಿಲಿಂಗಪೆದ್ದಿಪ್ರಿಯ ವಿಶ್ವೇಶ್ವರನಲ್ಲಿ ಏಕಭಾಜನ ಸಮನಿಸಿತಯ್ಯ.

---

## ಪಾದೋದಕ ಪ್ರಸಾದಗಳಲ್ಲಿ ಭೇದ.

೧. ಅಯ್ಯಾ, ಪಾದೋದಕವ ಮುಗಿದು ಪ್ರಸಾದವ ಮುಗಿಯಬೇಕಲ್ಲದೆ, ಪ್ರಸಾದವ ಮುಗಿದು ಪಾದೋದಕವ ಮುಗಿಯಲಾಗದು. ಪ್ರಸಾದವ ಮುಗಿದ ಮೇಲೆ, ಪ್ರಸಾದೋದಕವಲ್ಲದೆ ಪಾದೋದಕವೆಲ್ಲುಂಟು ಹೇಳಾ? ಸಂಬಂಧಾಚರಣೆಗಳ ಮುಖದಿಂದ ಪ್ರಾಣಲಿಂಗಾರ್ಪಿತವಾದ ಮೇಲೆ ಇಷ್ಟಲಿಂಗಕ್ಕೆ ಪ್ರಸಾದವರ್ಪಿತವಯ್ಯ. ಪಾದೋದಕ ಸ್ವರೂಪವಾದ ಇಷ್ಟಲಿಂಗಕ್ಕೆ ಪಾದೋದಕವನರ್ಪಿಸಿ ಕೊಳಬೇಕಯ್ಯ ಪ್ರಸಾದ ಲಿಂಗವು. ಪ್ರಸಾದಸ್ವರೂಪವಾದ ಪ್ರಾಣಲಿಂಗಕ್ಕೆ ಪ್ರಸಾದವನರ್ಪಿಸಿಕೊಳಬೇಕಯ್ಯ ಪ್ರಸಾದಲಿಂಗವು. ಇಂತು ವಿಚಾರ ಮುಖದಿಂದ ಪಾದೋದಕ ಪ್ರಸಾದವ ದಿವಾರಾತ್ರಿಗಳೆನ್ನದೆ ಸಂತೃಪ್ತನಾದಡೆ ಪ್ರಸಾದ ಲಿಂಗಕ್ಕಂಗವಾದ ಅಚ್ಚ ಶಿವಶರಣನೆಂಬೆ ನೋಡಾ ಉರಿಲಿಂಗಪೆದ್ದಿಪ್ರಿಯ ವಿಶ್ವೇಶ್ವರಾ.

೨. ಅಯ್ಯಾ ಆಚರಣೆಯಲ್ಲಿ ಇಷ್ಟಪ್ರಾಣಭಾವಲಿಂಗಂಗಳಿಗೆ ಗುರು ಚರ ಭಕ್ತರೇ ಮೂಲ ಚೈತನ್ಯ ಮೂರ್ತಿ, ಅನಾದಿ ಚಿದ್ಘನ ಪಾದೋದಕ ಪ್ರಸಾದ ಮಂತ್ರ ಸ್ವರೂಪು ನೋಡಾ. ಅಯ್ಯಾ ಸಂಬಂಧದಲ್ಲಿ ಗುರು ಚರ ಭಕ್ತಂಗೆ ಇಷ್ಟ ಪ್ರಾಣ ಭಾವ ಲಿಂಗಂಗಳಿಗೆ ಮೂಲಚೈತನ್ಯ ಮೂರ್ತಿ ಅನಾದಿ ಚಿದ್ಘನ ಪಾದೋದಕ ಪ್ರಸಾದ ಮಂತ್ರ ಸ್ವರೂಪು ನೋಡಾ. ಈ ವಿಚಾರವ ನಿನ್ನ ನೀನರಿತಡೆ ಅನಾದಿ ಗುರು ಚರ ಭಕ್ತ ಇಷ್ಟ ಪ್ರಾಣ ಭಾವ ಪಾದೋದಕ ಪ್ರಸಾದ ಮಂತ್ರ ನಿನ್ನ ಸರ್ವಾಂಗದಲ್ಲುಂಟು ನೋಡಾ ಸಂಗನಬಸವೇಶ್ವರಾ.

---

# ಮಿಶ್ರಾರ್ಪಣದ ವಿವರಣೆಗಳು.

ಸರ್ವಾಚಾರಸಂಪನ್ನರಾದ ಪರಮ ವೀರಶೈವ ಷಟ್ ಸ್ಥಲಜ್ಞಾನ ಕೋವಿದ ಚಕ್ರವರ್ತಿಯಪ್ಪ ಚನ್ನಬಸವೇಶ್ವರ ಸ್ವಾಮಿಗಳು ಕಲ್ಯಾಣಪಟ್ಟಣದ ಅನುಭವಮಂಟಪದಲ್ಲೊಪ್ಪುವ ಸಕಲಪ್ರಮಥಗಣಂಗಳಿಗೆ ಸದ್ಬೋಧನಿಮಿತ್ತವಾಗಿ ನಿರೂಪಿಸಿದ ಮಿಶ್ರಾರ್ಪಣವು.

ಈ ಶಾಸ್ತ್ರಕ್ಕೆ ಮಿಶ್ರಾರ್ಪಣವೆಂಬಭಿಧಾನವು ಏನು ಕಾರಣ ಬಂದಿತೆಲೆ ಸ್ವಾಮಿ ಎಂದು ಬೆಸಗೊಂಡಡೆ, ಮಿಶ್ರವೆಂದೊಡೆ ಪದಾರ್ಥ, ಅರ್ಪಣವೆಂದೊಡೆ ಲಿಂಗಾರ್ಪಣವು. ಆ ಲಿಂಗಾರ್ಪಣದ ಸಕೀಲಂಗಳನ್ನು ಹೇಳುವ ಶಾಸ್ತ್ರವು ಮಿಶ್ರಾರ್ಪಣವು. ಅದು ಹೇಗೆಂದೊಡೆ ತತ್ವವಿಭಾಗವೆಂಬ ಅಭಿಧಾನವುಳ್ಳ ಸಕಲ ತತ್ವಗಳೂ ಲೋಕದಾತ್ಮರುಗಳಲ್ಲಿ ಪೂರ್ವವಾಸನೆಯೊಡಗೂಡಿ ಪ್ರಕೃತಿ ತತ್ವಂಗಳಾಗಿ ಸಕಲಜೀವರುಗಳನ್ನು ಜನ್ಮಾಂತರಗಳಲಿ ತಂದು ಸಂಹರಿಸುವದಕ್ಕೆ ಕಾರಣವಾಗಿರುತ್ತಿಹವು. ಇತ್ತ ಗುರುಕಾರುಣ್ಯವಂ ಪಡೆದು ಲಿಂಗಾಂಗಸಂಬಂಧಿಗಳಾಗಿ ಆಚರಿಸುವಂತಹ ಶಿವಶರಣರುಗಳಿಗೆ ಅವೆಲ್ಲ ನಿವೃತ್ತಿಯಾಗಿ ಹೋಗಿ ಮಂತ್ರ ತತ್ವಂಗಳಾಗಿರುತ್ತಿಹವು. ಅಂತಪ್ಪ ಮಂತ್ರ ತತ್ವಂಗಳಾದ ನಿರ್ಮಲ ಪದಾರ್ಥ ಕಾಯಾರ್ಪಣ ಕರಣಾರ್ಪಣ ಭಾವಾರ್ಪಣ ಮುಖದಿಂದ ಇಷ್ಟ ಪ್ರಾಣ ಭಾವ ಲಿಂಗಂಗಳಿಗೆ ಸಮರ್ಪಿಸಿಕೊಂಬಂಥ ಭೇದವನೇ ಹೇಳುತ್ತಿಹುದಾದ ಕಾರಣ ಈ ಶಾಸ್ತ್ರಕ್ಕೆ ಮಿಶ್ರಾರ್ಪಣವೆಂಬ ಅಭಿಧಾನವು ಪ್ರಸಿದ್ಧವಾಯಿತ್ತೆಂದರಿವುದು.

ಅದಲ್ಲದೆ ಷಟ್ ಸ್ಥಲ ಬ್ರಹ್ಮಮಂ, ಷಟ್ ಸ್ಥಲವೆಂದೊಡೆ ಷಡ್ವಿಧಾಂಗ. ಬ್ರಹ್ಮವೆಂದೊಡೆ ಷಡ್ವಿಧಲಿಂಗ. ಈ ಷಡಂಗದಲ್ಲಿ ಷಡ್ವಿಧಲಿಂಗವ ಸಂಬಂಧವ ಮಾಡಿಕೊಂಡು ಷಡ್ವಿಧಭಕ್ತಿವಿಡಿದಾಚರಿಸಿ ಆ ಷಡ್ವಿಧಲಿಂಗ ಭಕ್ತಿಗಳಿಗೆ ಮಾತೃಸ್ಥಾನವಾದ ನಿಃಕಲ ಬ್ರಹ್ಮವನ್ನೊಂದಾಗಿ ಬೆರೆದಿಹನೆಂದು ದ್ಬೋಗಿಸಿದಡೆ ಷಡ್ವಿಧಾಂಗ ಲಿಂಗ ಭಕ್ತಿಗಳು ಹೇಗೆ ಉತ್ಪತ್ತಿಯಾದವೆಲೆ ಸ್ವಾಮಿ ಎಂದು ಬೆಸಗೊಂಡೊಡೆ—

ಸರ್ವಾಚಾರ ಸಂಪತ್ತಿನಾಚರಣೆಯುದಯಾಧಾರ ವಿಶ್ರಾಂತಿಗೆ ಮೂಲಕಾರಣವಾದ ನಿಃಕಲ ಬ್ರಹ್ಮವು ತಾನೊಂದೇ ತನ್ನ ಚಿಚ್ಛಕ್ತಿಯ ನೆನಹು ಮಾತ್ರದಿಂದೆ ಅಂಗಲಿಂಗವೆಂಬುಭಯ ಸ್ವರೂಪವನು ತಳೆಯಿತು. ಆ ಅಂಗದಲ್ಲಿ ಅಖಂಡ ಭಕ್ತಿ ಎಂಬುದು ಪುಟ್ಟಿತು. ಆ ಅಂಗ ಲಿಂಗಭಕ್ತಿವಿಡಿದು

ಆಚರಿಸುತ್ತಿದ್ದಹಾಗೆ ಒಂದು ಲಿಂಗವೇ ಮುಂದಕ್ಕಾಚರಣೆಯನ್ನು ಕುರಿತು ಇಷ್ಟ ಪ್ರಾಣ ಭಾವವೆಂದು ತ್ರಿವಿಧಲಿಂಗಂಗಳಾಯಿತು. ಆ ಲಿಂಗಂಗಳ ಬಳಿವಿಡಿದು ಒಂದಂಗವೇ ತ್ಯಾಗ ಭೋಗ ಯೋಗಾಂಗವೆಂಬ ತ್ರಿವಿಧಾಂಗಂಗಳಾಯಿತು. ಆ ಅಂಗಂಗಳ ಬಳಿವಿಡಿದು ಅಖಂಡ ಭಕ್ತಿಯೆಂಬುದು ತಾನೊಂದೇ ಕ್ರಿಯಾಭಕ್ತಿ, ಜ್ಞಾನಭಕ್ತಿ, ಮಹಾಜ್ಞಾನ ಭಕ್ತಿ ಎಂದು ಮೂರು ತೆರನಾಯಿತು. ಹೀಗೆ ಒಂದಂಗ ಲಿಂಗ ಭಕ್ತಿಗಳೇ ತ್ರಿವಿಧಾಂಗ ಲಿಂಗ ಭಕ್ತಿಗಳಾದವು. ಅದು ಕಾರಣವಾಗಿ ಆ ತ್ರಿವಿಧಾಂಗದಲ್ಲಿ ತ್ರಿವಿಧ ಲಿಂಗ ಸಂಬಂಧವ ಮಾಡಿಕೊಂಡು ತ್ರಿವಿಧಭಕ್ತಿವಿಡಿದು ಆಚರಿಸುತ್ತಿರ್ದ ಹಾಗೆ ಆ ತ್ರಿವಿಧ ಲಿಂಗಾಂಗಗಳೇ ಮುಂದಕ್ಕಾಚರಣೆಯನ್ನು ಕುರಿತು ಷಡ್ವಿಧಲಿಂಗಂಗಳಾದವು. ಅದು ಹೇಗೆಂದೊಡೆ ಭಾವಲಿಂಗವೆಂಬುದು ತಾನೊಂದೇ ಮಹಾಲಿಂಗ ಪ್ರಸಾದ ಲಿಂಗವೆಂದೆರಡು ತೆರನಾಯಿತು. ಪ್ರಾಣಲಿಂಗವೆಂಬುದು ತಾನೊಂದೇ ಜಂಗಮಲಿಂಗ ಶಿವಲಿಂಗವೆಂದುಭಯ ಭೇದವಾಯಿತು. ಇಷ್ಟ ಲಿಂಗವೆಂಬುದು ತಾನೊಂದೇ ಗುರುಲಿಂಗ ಆಚಾರಲಿಂಗವೆಂದು ದ್ವಿವಿಧ ಪ್ರಕಾರವಾಯಿತು. ಆ ಲಿಂಗಗಳ ಬಳಿವಿಡಿದು ತ್ರಿವಿಧ ಅಂಗಗಳೇ ಷಡ್ವಿಧ ಅಂಗಗಳಾದವು. ಅದು ಹೇಗೆಂದೊಡೆ ಯೋಗಾಂಗವೆಂಬುದು ತಾನೊಂದೇ ಐಕ್ಯ ಶರಣನೆಂದೆರಡು ತೆರನಾಯಿತು. ಭೋಗಾಂಗವೆಂಬುದು ತಾನೊಂದೇ ಪ್ರಾಣಲಿಂಗಿ ಪ್ರಸಾದಿ ಎಂದುಭಯ ಭೇದವಾಯಿತು. ತ್ಯಾಗಾಂಗವೆಂಬುದು ತಾನೊಂದೇ ಮಹೇಶ್ವರ ಭಕ್ತನೆಂದು ದ್ವಿವಿಧ ಭೇದವಾಯಿತು. ಆ ಅಂಗಗಳ ಬಳಿವಿಡಿದು ತ್ರಿವಿಧಭಕ್ತಿಗಳೇ ಷಡ್ವಿಧ ಭಕ್ತಿಗಳಾದವು. ಅದು ಹೇಗೆಂದೊಡೆ ಮಹಾಜ್ಞಾನಭಕ್ತಿ ಎಂಬುದು ತಾನೊಂದೇ ಸಮರಸಭಕ್ತಿ ಆನಂದಭಕ್ತಿ ಎಂದೆರಡು ತೆರನಾಯಿತು. ಜ್ಞಾನಭಕ್ತಿ ಎಂಬುದು ತಾನೊಂದೇ ಅನುಭಾವ ಭಕ್ತಿ ಸಾವಧಾನ ಭಕ್ತಿ ಎಂದುಭಯ ಭೇದವಾಯಿತು. ಕ್ರಿಯಾಭಕ್ತಿ ಎಂಬುದು ತಾನೊಂದೇ ನೈಷ್ಠಿಕಾಭಕ್ತಿ ಶ್ರದ್ಧಾಭಕ್ತಿ ಎಂದು ದ್ವಿವಿಧ ಭೇದವಾಯಿತು. ಹೀಗೆ ತ್ರಿವಿಧ ಭಕ್ತಿಗಳೇ ಷಡ್ವಿಧ ಭಕ್ತಿಗಳಾದವು. ಈ ರೀತಿಯಲ್ಲಿ ಷಡ್ವಿಧಾಂಗ ಲಿಂಗ ಭಕ್ತಿಗಳುತ್ಪತ್ತಿಯಾದವು.

ಅರ್ಪಣದ ಅಂಗ ಸಂಬಂಧವಾದ ರೂಪು ಷಡ್ವಿಧ ಪದಾರ್ಥಗಳನ್ನು ಇಷ್ಟಲಿಂಗದೊಡನೆ ಕೂಡಿದ ಆಚಾರಾದಿ ಷಡ್ವಿಧ ಲಿಂಗಂಗಳಿಗೆ ಷಡ್ವಿಧ ಸಕೀಲಂಗಳಿಂದ ಸಮರ್ಪಿಸಿಕೊಂಬ ಕಾಯಾರ್ಪಣದೊಳಗರ್ಪಣದ ಮನೋಸಂಬಂಧವಾದ ಮೂವತ್ತಾರು ರುಚಿ ಪದಾರ್ಥಗಳನ್ನು .ಪ್ರಾಣಲಿಂಗದೊ

ಡನೆ ಕೂಡಿದ ಮೂವತ್ತಾರು ಲಿಂಗಂಗಳಿಗೆ ಮೂವತ್ತಾರು ತೆರದ ಭಕ್ತಿ ಸಕೀಲಂಗಳಿಂದ ಸಮರ್ಪಿಸಿಕೊಂಬ ಕರಣಾರ್ಪಣದ ಭಾವಾರ್ಪಣದ ಆತ್ಮಸಂಬಂಧವಾದ ಇನ್ನೂರು ಹದಿನಾರು ತೃಪ್ತಿ ಪದಾರ್ಥಗಳನ್ನು ಭಾವ ಲಿಂಗದೊಡನೆ ಕೂಡಿದ ಇನ್ನೂರು ಹದಿನಾರು ಲಿಂಗಂಗಳಿಗೆ ಇನ್ನೂರು ಹದಿನಾರು ತೆರದ ಭಕ್ತಿ ಸಕೀಲಂಗಳಿಂದ ಸಮರ್ಪಿಸಿಕೊಂಬ ಭಾವಾರ್ಪಣದ ಭೇದವಂ ಕಾಯಾರ್ಪಣವರ್ಪಿತವಾಗಿ ಉಳಿದುದೇ ಶುದ್ಧ ಪ್ರಸಾದ. ಕರಣಾರ್ಪಣವರ್ಪಿತವಾಗಿ ಉಳಿದುದೇ ಸಿದ್ಧ ಪ್ರಸಾದ. ಭಾವಾರ್ಪಣವರ್ಪಿತವಾಗಿ ಉಳಿದುದೇ ಪ್ರಸಿದ್ಧ ಪ್ರಸಾದವೆಂಬ ನಿಲುಕಡೆಯನರಿದು ಸೊಪ್ಪಡಗಿದ ಒಂದಾನೊಂದೆಲೆಗಳೆದ ವೃಕ್ಷದಲ್ಲಿ ಹುಳುವಿಲ್ಲ ಎಂಬ ಹಾಗೆ ಈ ತ್ರಿವಿಧ ಪ್ರಸಾದವ ಪಡೆದನುಭವಿಸಿದ ಶಿವಶರಣನ ತನುಕರಣೇಂದ್ರಿಯ ಶಬ್ದ ಜಾಲಂಗಳು ಪಟಲವಳಿದ ನಿಃಪತಿ ತನ್ನಲ್ಲಿ ತಾನೇ ಪರಮ ಕಾಂತಿಯ ನೈದಿದ ಸ್ವಕೀಯವಾದ ಮಹಾಲಿಂಗದಲ್ಲಿ ಐಕ್ಯದಿರವು, ಅವಿರಳ ಭಾವದಿಂದೊಡೆವೆರೆದ ನಿಲುಕಡೆಯು.

---

## ಕಾಯಾರ್ಪಣ.

ಲಿಂಗಾಂಗ ಸಂಬಂಧಿಯಾಗಿ ಆಚರಿಸುವಂತಹ ಶಿವಶರಣರಿಗೆ ಸಕಲ ಪದಾರ್ಥವೂ ಗಡಣಿಸಿ ಬಂದಲ್ಲಿ ಸತ್ಕ್ರಿಯಾ ಸ್ವರೂಪನಾದ ಷಡ್ವಿಧಲಿಂಗವನೊಳಗೊಂಡು ಇಷ್ಟಲಿಂಗಕ್ಕೆ ಅರ್ಪಣ ಮಾಡುವುದು. ಅದು ಹೇಗೆಂದೊಡೆಃ—

ಭೋಜ್ಯವು, ತುತ್ತುಮಾಡಿ ಸ್ವೀಕರಿಸುವುದೇ ಭೋಜ್ಯವು. ಅಂತಪ್ಪ ಭೋಜ್ಯವೆಂಬ ಪದಾರ್ಥವನ್ನು ಪಂಚಾಚಾರ ಸ್ವರೂಪವಾದ ಆಚಾರ ಲಿಂಗದೊಳಗೆಂದು ತಿಳಿದರ್ಪಿತವ ಮಾಡುವುದು. ಅದರ ಸಕೀಲವೆಂತುಂಟು ಸ್ವಾಮಿ ಎಂದು ಬೆಸಗೊಂಡೊಡೆ ಭೋಜ್ಯವೆಂಬ ರೂಪು, ಕಠಿಣವೆಂಬ ದ್ರವ್ಯ, ಗಂಧವೆಂಬ ಪದಾರ್ಥ, ಕ್ಷೀರ ಸ್ನಾನ ಈ ಚತುರ್ವಿಧವೂ ಪೃಥ್ವಿ ಸಂಬಂಧವಾದ ಪದಾರ್ಥವೆಂದರಿದು ಈ ಪದಾರ್ಥವನ್ನು ಇಷ್ಟಲಿಂಗದ ಶಕ್ತಿಪೀಠದಲ್ಲಿರುವ ಸದ್ಯೋಜಾತಮುಖ ಸ್ವರೂಪವಾದ ಆಚಾರ ಲಿಂಗಕ್ಕೆಂ

ದರಿದಾರೋಪಿಸಿ ಆ ಇಷ್ಟಲಿಂಗದ ಮುಖದಲ್ಲಿಯೇ ಓಂ ಹ್ರಾಂ ನಾಂ ನಮಶ್ಶಿವಾಯ ಎಂಬ ಮಂತ್ರ ಸ್ಮರಣೆಯಿಂದ ಸಮರ್ಪಿಸಿ ಆ ಇಷ್ಟಲಿಂಗದ ಮುಖದಿಂದುಳುಮೆಯಾಗಿ ಬಂದ ಭೋಜ್ಯ ಪ್ರಸಾದವ ಪಡೆದನುಭವಿಸಿ ಪರಿಣಾಮಿಯಾಗಿರುತ್ತಿಹನು ಶಿವಶರಣನು.

ಪಾನ್ಯವೆಂಬ ಪದಾರ್ಥ, ಎತ್ತೆತ್ತಿ ಕುಡಿಯುವ ಪದಾರ್ಥ ಪಾನ್ಯವೆನಿಸಿಕೊಂಬುದು. ಅಂತಹ ಪದಾರ್ಥವನ್ನು ಗುರುಲಿಂಗದೊಳಗೆಂದು ತಿಳಿದು ಅರ್ಪಿತವ ಮಾಡುವುದು. ಅದರ ಸಕೀಲವೆಂತುಂಟೆಲೆ ಸ್ವಾಮಿ ಎಂದು ಬೆಸಗೊಂಡೊಡೆ ಪಾನ್ಯವೆಂಬ ರೂಪು, ಮೃದುವೆಂಬ ದ್ರವ್ಯ, ರಸವೆಂಬ ಪದಾರ್ಥ, ದಧಿ ಸ್ನಾನ, ಈ ಚತುರ್ವಿಧವು ಅಪ್ಪು ತತ್ವ ಸಂಬಂಧವಾದ ಪದಾರ್ಥವೆಂದರಿದು ಆ ಪದಾರ್ಥವನ್ನು ಇಷ್ಟಲಿಂಗದ ಕಟಿಯಲ್ಲಿಯ ವಾಮದೇವಮುಖ ಸ್ವರೂಪವಾದ ಗುರುಲಿಂಗಕ್ಕೆಂದರಿದಾರೋಪಿಸಿ ಆ ಇಷ್ಟಲಿಂಗಮುಖದಲ್ಲಿಯೇ ಓಂ ಹ್ರೀಂ ಮಾಂ ನಮಶ್ಶಿವಾಯ ಎಂಬ ಮಂತ್ರ ಸ್ಮರಣೆಯಿಂದ ಸಮರ್ಪಿಸಿ ಆ ಇಷ್ಟಲಿಂಗದ ಮುಖದಿಂದುಳುಮೆಯಾಗಿ ಬಂದ ಪಾನ್ಯ ಪ್ರಸಾದವನು ಪಡೆದನುಭವಿಸಿ ಪರಿಣಾಮಿಯಾಗಿರುತ್ತಿಹನು ಶಿವಶರಣನು.

ಭಕ್ಷ್ಯ, ಜಗಿಜಗಿದು ಸ್ವೀಕರಿಸುವ ಪದಾರ್ಥವಾವುದಿದ್ದೀತು ಅವೆಲ್ಲವೂ ಭಕ್ಷ್ಯವೆನಿಸಿಕೊಂಬುವುದು. ಅಂತಪ್ಪ ಭಕ್ಷ್ಯವೆಂಬ ಪದಾರ್ಥವನ್ನು ಪರಮ ಪ್ರಕಾಶ ಸ್ವರೂಪವಾದ ಶಿವಲಿಂಗದೊಳಗೆಂದು ತಿಳಿದರ್ಪಿತವ ಮಾಡುವುದು. ಅದರ ಸಕೀಲವೆಂತುಟು ಸ್ವಾಮಿ ಎಂದು ಬೆಸಗೊಂಡೊಡೆ ಭಕ್ಷ್ಯವೆಂಬ ರೂಪು, ಉಷ್ಣವೆಂಬ ದ್ರವ್ಯ, ರೂಪೆಂಬ ಪದಾರ್ಥ, ಘೃತ ಸ್ನಾನ, ಈ ಚತುರ್ವಿಧವೂ ಅಗ್ನಿ ತತ್ವ ಸಂಬಂಧವಾದ ಪದಾರ್ಥವೆಂದರಿದು ಆ ಪದಾರ್ಥವನ್ನು ಇಷ್ಟಲಿಂಗದ ವರ್ತುಳದಲ್ಲಿಹ ಅಘೋರಮುಖ ಸ್ವರೂಪವಾದ ಶಿವಲಿಂಗಕ್ಕೆಂದಾರೋಪಿಸಿ ಆ ಇಷ್ಟಲಿಂಗದ ಮುಖದಲ್ಲಿ ಓಂ ಹ್ರೂಂ ಶೀಂ ನಮಶ್ಶಿವಾಯ ಎಂಬ ಮಂತ್ರ ಸ್ಮರಣೆಯಿಂದ ಸಮರ್ಪಿಸಿ ಆ ಇಷ್ಟಲಿಂಗ ಮುಖದಿಂದುಳುಮೆಯಾಗಿ ಬಂದ ಭಕ್ಷ್ಯ ಪದಾರ್ಥ ಪ್ರಸಾದವ ಪಡೆದನುಭವಿಸಿ ಪರಮ ಪರಿಣಾಮಿಯಾಗಿರುತ್ತಿಹನು ಶಿವಶರಣನು.

ಚೋಹ್ಯ, ಸುರಿಸುರಿದು ಸ್ವೀಕರಿಸುವಂತಹದೆಲ್ಲವೂ ಚೋಹ್ಯವೆನಿಸಿಕೊಂಬುದು. ಅಂತಪ್ಪ ಪದಾರ್ಥವನು ಯಜನ ಸ್ವರೂಪವಾದ ಚರಲಿಂಗ

ದೊಳಗೆಂದು ತಿಳಿದರ್ಪಿತವ ಮಾಡುವುದು. ಅದರ ಸಕೀಲವೆಂತುಟು ಸ್ವಾಮಿ ಎಂದು ಬೆಸಗೊಂಡೊಡೆ, ಚೋಹ್ಯವೆಂಬ ರೂಪು, ಶೈತ್ಯವೆಂಬ ದ್ರವ್ಯ, ಸ್ಪರ್ಶನವೆಂಬ ಪದಾರ್ಥ, ಇಕ್ಷು ರಸ ಸ್ಥಾನ, ಈ ಚತುರ್ವಿಧವೂ ವಾಯುತತ್ವ ಸಂಬಂಧವಾದ ಪದಾರ್ಥವೆಂದರಿದು ಅದನ್ನು ಇಷ್ಟಲಿಂಗದ ಗೋಮುಖದಲ್ಲಿಹ ತತ್ಪುರುಷಮುಖ ಸ್ವರೂಪವಾದ ಜಂಗಮಲಿಂಗಕ್ಕೆಂದಾರೋಪಿಸಿ ಆ ಇಷ್ಟಲಿಂಗದ ಮುಖದಲ್ಲಿ ಓಂ ಹ್ರೈಂ ವಾಂ ನಮಶ್ಶಿವಾಯ ಎಂಬ ಮಂತ್ರ ಸ್ಮರಣೆಯಿಂದ ಸಮರ್ಪಿಸಿ ಆ ಲಿಂಗಮುಖದಿಂದುಳುಮೆಯಾಗಿ ಬಂದ ಚೋಹ್ಯ ಪ್ರಸಾದವನ್ನು ಪಡೆದನುಭವಿಸಿ ಪರಮ ಪರಿಣಾಮಿಯಾಗಿರುತ್ತಿಹನು ಶಿವಶರಣನು.

ಲೇಹ್ಯ, ನಾಲಿಗೆಯ ಮೇಲೆ ತೊಡೆದುಕೊಂಡು ನೆಕ್ಕಿ ನೆಕ್ಕಿ ಸ್ವೀಕರಿಸುವ ಪದಾರ್ಥವು ಲೇಹ್ಯವು. ಅದನು ಈಳನ ಸ್ವರೂಪವಾದ ಪ್ರಸಾದಲಿಂಗದೊಳಗೆಂದು ತಿಳಿದರ್ಪಿತವ ಮಾಡುವುದು. ಅದರ ಸಕೀಲವೆಂತುಟಿಲೆ ಸ್ವಾಮಿ ಎಂದು ಬೆಸಗೊಂಡೊಡೆ ಲೇಹ್ಯವೆಂಬ ರೂಪು, ಮಿಶ್ರವೆಂಬ ದ್ರವ್ಯ, ಶಬ್ದವೆಂಬ ಪದಾರ್ಥ, ನಾರೀ ಕೇಳ ರಸಸ್ಥಾನ, ಈ ಚತುರ್ವಿಧವೂ ಆಕಾಶ ತತ್ವ ಸಂಬಂಧವಾದ ಪದಾರ್ಥವೆಂದರಿದು ಅದನು ಇಷ್ಟಲಿಂಗದ ನಾಳದಲ್ಲಿಹ ಈಶಾನ್ಯಮುಖ ಸ್ವರೂಪವಾದ ಪ್ರಸಾದಲಿಂಗಕ್ಕೆಂದರಿದಾರೋಪಿಸಿ ಆ ಇಷ್ಟಲಿಂಗ ಮುಖದಲ್ಲಿ ಓಂ ಹ್ರೌಂ ಯಾಂ ನಮಶ್ಶಿವಾಯ ಎಂಬ ಮಂತ್ರ ಸ್ಮರಣೆಯಿಂದ ಸಮರ್ಪಿಸಿ, ಆ ಇಷ್ಟಲಿಂಗ ಮುಖದಿಂದುಳುಮೆಯಾಗಿ ಬಂದ ಲೇಹ್ಯ ಪ್ರಸಾದವಂ ಪಡೆದನುಭವಿಸಿ ಪರಮ ಪರಿಣಾಮಿಯಾಗಿರುತ್ತಿಹನು ಶಿವಶರಣನು.

ಇವೆಲ್ಲದರಲ್ಲರಿವು ಮಹಾಲಿಂಗದಲ್ಲಿ ಹಿಂದೆ ಹೇಳಿದ, ಭೋಜ್ಯ, ಪಾನ್ಯ, ಭಕ್ಷ್ಯ, ಚೋಹ್ಯ, ಲೇಹ್ಯವೆಂಬ ಪಂಚವಿಧ ರೂಪು ಪದಾರ್ಥಂಗಳನು ಇಷ್ಟಲಿಂಗದೊಡನೆ ಕೂಡಿದ ಆಚಾರಾದಿ ಪಂಚವಿಧ ಲಿಂಗಂಗಳಿಗೆ ಪಂಚವಿಧ ಭಕ್ತಿ ಸಕೀಲಂಗಳಿಂದ ಸಮರ್ಪಿಸಿ ಆ ಪಂಚವಿಧ ಲಿಂಗ ಮುಖದಿಂದುಳುಮೆಯಾಗಿ ಬಂದ ಪಂಚವಿಧ ಪ್ರಸಾದವ ಪಡೆದನುಭವಿಸಿ ದಣ್ಣನೆ ದಣಿದು ಮನಸ್ಸೆಲ್ಲ ಹಿಂದಿರುಗಿದಂತಹದ್ದೇ ಇವೆಲ್ಲದರಲ್ಲಿಯು ಅರಿವೆಂಬ ಪದಾರ್ಥವನ್ನು ಬೋಧಾ ಸ್ವರೂಪವಾದ ಮಹಾಲಿಂಗದೊಳಗೆಂದು ತಿಳಿದರ್ಪಿತವ ಮಾಡುವುದು. ಅದರ ಸಕೀಲವೆಂತುಟಿಲೆ ಸ್ವಾಮಿ ಎಂದು

ಬೆಸಗೊಂಡೊಡೆ ಇವೆಲ್ಲದರಲ್ಲಿಯು ಅರಿವೆಂಬ ರೂಪು, ತೃಪ್ತಿ ಎಂಬ ದ್ರವ್ಯ, ಪರಿಣಾಮವೆಂಬ ಪದಾರ್ಥ, ಸ್ವಾದೋದಕ ಸ್ನಾನ, ಈ ಚತುರ್ವಿಧವೂ ಆತ್ಮತತ್ವ ಸಂಬಂಧವಾದ ಪದಾರ್ಥವೆಂದರಿದಾ ಪದಾರ್ಥವನ್ನು ಇಷ್ಟಲಿಂಗದ ಗೊಳಕದಲ್ಲಿಹ ಗೋಪ್ಯಮುಖ ಸ್ವರೂಪವಾದ ಮಹಾಲಿಂಗಕ್ಕೆಂದರಿದಾರೋಪಿಸಿ ಆ ಇಷ್ಟಲಿಂಗ ಮುಖದಲ್ಲಿಯೇ ಓಂ ಹ್ರಃ ಓಂ ನಮಶ್ಶಿವಾಯ ಎಂಬ ಮಂತ್ರಸ್ಮರಣೆಯಿಂದ ಸಮರ್ಪಿಸಿ ಆ ಇಷ್ಟಲಿಂಗದ ಮುಖದಿಂದುಳುಮೆಯಾಗಿ ಬಂದ ತೃಪ್ತಿ ಪ್ರಸಾದವುಂ ಪಡೆದನುಭವಿಸಿ ಪರಮಪರಿಣಾಮಿಯಾಗಿರುತ್ತಿಹನು ಶಿವಶರಣನು.

---

## ಕರಣಾರ್ಪಣ.

ಕರಣವೆಂದರೆ ಇಂದ್ರಿಯಂಗಳು. ಇಂದ್ರಿಯ ಸಂಬಂಧವಾದ ಪದಾರ್ಥಗಳು ಪ್ರಾಣಲಿಂಗದೊಡನೆ ಕೂಡಿದ ಆಚಾರಾದಿ ಷಡ್ವಿಧಲಿಂಗಂಗಳಿಗೆ ಸಮರ್ಪಿಸುವ ವಿಚಾರವನ್ನು ನಿರೂಪಿಸುವೆವು. ಅದೆಂತೆಂದೊಡೆ ಲಿಂಗಾಂಗ ಸಂಬಂಧಿಗಳಾಗಿ ಆಚರಿಸುವ ಶಿವಶರಣನು ಇಷ್ಟಲಿಂಗಕ್ಕೆ ಅಷ್ಟವಿಧಾರ್ಚನೆ ಷೋಡಶೋಪಚಾರಂಗಳಂ ಮಾಡಿ ಆ ಲಿಂಗವನ್ನು ಅನಿಮಿಷ ದೃಷ್ಟಿಯಿಂದ ನಿರೀಕ್ಷಿಸಲು ಆ ಇಷ್ಟಲಿಂಗದ ಚಿತ್ಕಳೆಯೇ ದೃಷ್ಟಿಗ್ರಾಹಕವಾಗಿ ನೇತ್ರವೆಂಬ ಸೂತ್ರವನೊಳಕೊಂಡು ಅದೇ ಮನಸ್ಸಂಬಂಧವಾಗಿ, ಮನವೆಂಬುದೇ ಪವನ ಸಂಬಂಧವಾಗಿ, ಪವನವೆಂಬುದೇ ಪ್ರಾಣಸಂಬಂಧವಾಗಿ, ಆ ಪ್ರಾಣದಲ್ಲಿ ಪ್ರಾಣಲಿಂಗವಾಗಿ ನೆಲೆಗೊಂಡು, ಆ ಪ್ರಾಣಲಿಂಗವೆಂಬುದು ನಾಸಿಕದಲ್ಲಿ ಚಿಲ್ಲಿಂಗಸಂಗಿಯಾದ ಶಿವಶರಣನ ಗಂಧ ವಿಷಯವನುಳ್ಳ ಘ್ರಾಣೇಂದ್ರಿಯದೊಳಗೆ ಪಂಚಾಚಾರ ಸ್ವರೂಪವಾದ ಆಚಾರ ಬ್ರಹ್ಮವಾಗಿ ನೆಲೆಗೊಂಡಿಪ್ಪುದು.

ಜಿಹ್ವೆಯಲ್ಲಿ ರಸವಿಷಯವನುಳ್ಳ ರಸನೇಂದ್ರಿಯದೊಳಗೆ ಮಂತ್ರಮೂರ್ತಿಯಾದ ಗುರುಲಿಂಗವಾಗಿ ನೆಲೆಗೊಂಡಿಪ್ಪುದು.

ನೇತ್ರದಲ್ಲಿ ರೂಪು ವಿಷಯವನುಳ್ಳ ನಯನೇಂದ್ರಿಯದೊಳಗೆ ಪರಮಪ್ರಕಾಶ ಸ್ವರೂಪವಾದ ಶಿವಲಿಂಗವಾಗಿ ನೆಲೆಗೊಂಡಿಪ್ಪುದು.

ತ್ವಕ್ಕಿನಲ್ಲಿ ಸ್ಪರ್ಶನ ವಿಷಯವನುಳ್ಳ ತ್ವಗಿಂದ್ರಿಯದಲ್ಲಿ ಯಜನಸ್ವರೂಪವಾದ ಚರಲಿಂಗವಾಗಿ ನೆಲೆಗೊಂಡಿಪ್ಪುದು.

ಶ್ರೋತ್ರದಲ್ಲಿ ಶಬ್ದ ವಿಷಯವನುಳ್ಳ ಶ್ರವಣೇಂದ್ರಿಯದೊಳಗೆ ಈಳನ ಸ್ವರೂಪವಾದ ಪ್ರಸಾದಲಿಂಗವಾಗಿ ನೆಲೆಗೊಂಡಿಪ್ಪುದು.

ಹೃದಯುದಲ್ಲಿ ತೃಪ್ತಿ ವಿಷಯುವನುಳ್ಳ ಹೃದಯೇಂದ್ರಿಯದೊಳಗೆ ಪ್ರಾಣಲಿಂಗವೆಂಬುದು ತಾನೇ ಬೋಧಾಸ್ವರೂಪವಾದ ಮಹಾಲಿಂಗವಾಗಿ ನೆಲೆಗೊಂಡಿಪ್ಪುದು.

ಈ ಪ್ರಕಾರದಿಂದ ಹೇಳಲ್ಪಟ್ಟ ಈ ಷಡ್ವಿಧಲಿಂಗ ಈ ಪ್ರಾಣಲಿಂಗ ದೊಡನೆ ಕೂಡಿದ ಆಚಾರಾದಿ ಮಹಾಲಿಂಗಾಂತ್ಯವಾದ ಆರು ಲಿಂಗಂಗ ಳಿಗೆ ಗಂಧಾದಿ ತೃಪ್ತ್ಯಂತವಾದ ಷಡ್ವಿಧ ಪದಾರ್ಥಗಳನ್ನು ಹನ್ನೊಂದು ತೆರದ ಸಕೀಲು ಅರುವತ್ತಾರು ತೆರದ ಅರ್ಪಣ ಕ್ರಮಗಳಿಂದ ಸಮರ್ಪಿತ ವಾಗುವ ವಿಚಾರವೆಂತೆಂದೊಡೆ:—

## ಆಚಾರಲಿಂಗದ ಅರ್ಪಿತವು.

ಪಂಚಾಚಾರ ಸ್ವರೂಪವಾದ ಆಚಾರ ಬ್ರಹ್ಮದ ಅರ್ಪಿತವು. ಗಂಧ ವಿಷಯ ಪದಾರ್ಥವು, ಘ್ರಾಣೇಂದ್ರಿಯದಲ್ಲಿ ನೆಲೆಗೊಂಡಿರುವ ಪಂಚಾ ಚಾರ ಸ್ವರೂಪವಾದ ಆಚಾರಲಿಂಗಕ್ಕೆ ಆ ಘ್ರಾಣೇಂದ್ರಿಯದಲ್ಲಿ ಬರುವ ಸುಗಂಧ ಪದಾರ್ಥವೇ ನೈವೇದ್ಯವಾಗಿಪ್ಪುದು. ಅದು ಹೇಗೆಂದೊಡೆ ಭಕ್ತಂಗೆ ಪೃಥ್ವಿಯೇ ಅಂಗ, ಆ ಅಂಗಕ್ಕೆ ಸುಚಿತ್ತವೇ ಹಸ್ತ, ಆ ಹಸ್ತಕ್ಕೆ ಕರ್ಮ ಸಾದಾಖ್ಯ, ಆ ಸಾದಾಖ್ಯಕ್ಕೆ ಕ್ರಿಯಾಶಕ್ತಿ, ಆ ಶಕ್ತಿಗೆ ಆಚಾರಲಿಂಗ, ಆ ಲಿಂಗಕ್ಕೆ ನಿವೃತ್ತಿಯೇ ಕಲೆ, ಆ ಕಲೆಗೆ ಘ್ರಾಣೇಂದ್ರಿಯವೇ ಮುಖ, ಆ ಮುಖಕ್ಕೆ ಬಂದು ತಟ್ಟುವಂಥಾದ್ದೇ ಸುಗಂಧಪದಾರ್ಥ, ಆ ಪದಾರ್ಥದ ರೂಪು ರುಚಿ ತೃಪ್ತಿಯನರಿದು ನಕಾರಮಂತ್ರಯುಕ್ತವಾಗಿ ಶ್ರದ್ಧಾಭಕ್ತಿಯಿಂದ ರ್ಪಿಸಿ ಆ ಲಿಂಗಮುಖದಿಂದುಳುಮೆಯಾಗಿ ಬಂದ ಸುಗಂಧ ಪ್ರಸಾದವ ಪಡೆ ದನುಭವಿಸಿ ಪರಮ ಪರಿಣಾಮಿಯಾಗಿರುತ್ತಿಹನು ಸದ್ಭಕ್ತನು.

## ಗುರುಲಿಂಗದ ಅರ್ಪಿತವು.

ಮಂತ್ರ ಮೂರ್ತಿಯಾದ ಗುರುಲಿಂಗದ ಅರ್ಪಿತವು. ರಸವಿಷಯದ ಪದಾರ್ಥವು, ಜಿಹ್ವೇಂದ್ರಿಯದಲ್ಲಿ ನೆಲೆಗೊಂಡಿರುವ ಮಂತ್ರಮೂರ್ತಿಯಾದ ಗುರುಲಿಂಗಕ್ಕೆ ಆ ಜಿಹ್ವೇಂದ್ರಿಯದಲ್ಲಿ ಬರುವ ಸುರಸಪದಾರ್ಥವೇ ನೈವೇ

ದ್ಯವಾಗಿಪ್ಪದು. ಅದು ಹೇಗೆಂದೊಡೆ, ಮಹೇಶ್ವರಂಗೆ ಅಪ್ಪುವೇ ಅಂಗ, ಆ ಅಂಗಕ್ಕೆ ಸುಬುದ್ಧಿಯೇ ಹಸ್ತ, ಆ ಹಸ್ತಕ್ಕೆ ಕರ್ತೃಸಾದಾಖ್ಯ, ಆ ಸಾದಾಖ್ಯಕ್ಕೆ ಜ್ಞಾನಶಕ್ತಿ, ಆ ಶಕ್ತಿಗೆ ಗುರುಲಿಂಗ, ಆ ಲಿಂಗಕ್ಕೆ ಪ್ರತಿಷ್ಠೆ ಕಲೆ, ಆ ಕಲೆಗೆ ಜಿಹ್ವೇಂದ್ರಿಯವೇ ಮುಖ, ಆ ಮುಖಕ್ಕೆ ಬಂದು ತಟ್ಟುವಂತ ಹದೇ ಸುರಸಪದಾರ್ಥ, ಆ ಪದಾರ್ಥದ ರೂಪು ರುಚಿ ತೃಪ್ತಿಯನರಿದು ಮಕಾರಮಂತ್ರಯುಕ್ತವಾಗಿ ನೈಷ್ಠಿಕಾ ಭಕ್ತಿಯಿಂದರ್ಪಿಸಿ, ಆ ಲಿಂಗಮುಖ ದಿಂದುಳುಮೆಯಾಗಿ ಬಂದ ಸುರಸ ಪದಾರ್ಥವ ಪಡೆದನುಭವಿಸಿ ಪರಮ ಪರಿಣಾಮಿಯಾಗಿರುತ್ತಿಹನು ವೀರಮಾಹೇಶ್ವರನು.

## ಶಿವಲಿಂಗದ ಅರ್ಪಿತವು

ಪರಮ ಪ್ರಕಾಶ ಸ್ವರೂಪವಾದ ಶಿವಲಿಂಗದ ಅರ್ಪಿತವು. ರೂಪು ವಿಷಯ ಪದಾರ್ಥವು, ನಯನೇಂದ್ರಿಯದಲ್ಲಿ ನೆಲೆಗೊಂಡಿರುವ ಪರಮ ಪ್ರಕಾಶ ಸ್ವರೂಪವಾದ ಶಿವಲಿಂಗಕ್ಕೆ ಆ ನಯನೇಂದ್ರಿಯದಲ್ಲಿ ಬರುವ ಸುರೂಪು ಪದಾರ್ಥವೇ ನೈವೇದ್ಯವಾಗಿಪ್ಪದು. ಅದು ಹೇಗೆಂದೊಡೆ, ಪ್ರಸಾದಿಗೆ ಅಗ್ನಿಯೇ ಅಂಗ, ಆ ಅಂಗಕ್ಕೆ ನಿರಹಂಕಾರವೇ ಹಸ್ತ, ಆ ಹಸ್ತಕ್ಕೆ ಮೂರ್ತಿ ಸಾದಾಖ್ಯ, ಆ ಸಾದಾಖ್ಯಕ್ಕೆ ಇಚ್ಛಾಶಕ್ತಿ, ಆ ಇಚ್ಛಾಶಕ್ತಿಗೆ ಶಿವಲಿಂಗ, ಆ ಲಿಂಗಕ್ಕೆ ವಿದ್ಯೆಯೇ ಕಲೆ, ಆ ಕಲೆಗೆ ನೇತ್ರೇಂದ್ರಿಯವೇ ಮುಖ, ಆ ಮುಖಕ್ಕೆ ಬಂದು ತಟ್ಟುವಂತಹದೇ ಸುರೂಪು ಪದಾರ್ಥ, ಆ ಪದಾರ್ಥದ ರೂಪು ರುಚಿ ತೃಪ್ತಿಯನರಿದು ಶಿಕಾರಮಂತ್ರಯುಕ್ತವಾಗಿ ಸಾವಧಾನ ಭಕ್ತಿಯಿಂದರ್ಪಿಸಿ ಆ ಲಿಂಗಮುಖ ದಿಂದುಳುಮೆಯಾಗಿ ಬಂದ ಸುರೂಪು ಪ್ರಸಾದವ ಪಡೆದನುಭವಿಸಿ ಪರಮ ಪರಿಣಾಮಿಯಾಗಿರುತ್ತಿಹನು ಶಿವಪ್ರಸಾದಿಯು.

## ಜಂಗಮಲಿಂಗದ ಅರ್ಪಿತವು

ಯಜನ ಸ್ವರೂಪವಾದ ಚರಲಿಂಗದ ಅರ್ಪಿತವು. ಸ್ಪರ್ಶನ ವಿಷಯ ವಾದ ಪದಾರ್ಥವು, ತ್ವಗಿಂದ್ರಿಯದಲ್ಲಿ ನೆಲೆಗೊಂಡಿರುವ ಯಜನ ಸ್ವರೂಪ ವಾದ ಜಂಗಮ ಲಿಂಗಕ್ಕೆ ಆ ತ್ವಗಿಂದ್ರಿಯದಲ್ಲಿ ಬರುವ ಸುಸ್ಪರ್ಶನ ಪದಾರ್ಥವೇ ನೈವೇದ್ಯವಾಗಿಪ್ಪದು. ಅದು ಹೇಗೆಂದೊಡೆ, ಪ್ರಾಣಲಿಂಗಿಗೆ ವಾಯುವೇ ಅಂಗ, ಆ ಅಂಗಕ್ಕೆ ಸುಮನವೇ ಹಸ್ತ, ಆ ಹಸ್ತಕ್ಕೆ ಮೂರ್ತಿ ಸಾದಾಖ್ಯ, ಆ ಸಾದಾಖ್ಯಕ್ಕೆ ಆದಿಶಕ್ತಿ, ಆ ಶಕ್ತಿಗೆ ಜಂಗಮ

ಲಿಂಗ, ಆ ಲಿಂಗಕ್ಕೆ ಶಾಂತಿಕಲೆ, ಆ ಕಲೆಗೆ ತ್ವಗಿಂದ್ರಿಯವೇ ಮುಖ, ಆ ಮುಖಕ್ಕೆ ಬಂದು ತಟ್ಟುವಂತಹದೇ ಸುಸ್ಪರ್ಶನ ಪದಾರ್ಥ, ಆ ಪದಾರ್ಥದ ರೂಪು ರುಚಿ ತೃಪ್ತಿಯನರಿದು ವಕಾರ ಮಂತ್ರಯುಕ್ತವಾಗಿ ಅನುಭಾವ ಭಕ್ತಿಯಿಂದರ್ಪಿಸಿ ಆ ಲಿಂಗಮುಖದಿಂದುಳುಮೆಯಾಗಿ ಬಂದ ಸುಸ್ಪರ್ಶನ ಪ್ರಸಾದವ ಪಡೆದನುಭವಿಸಿ ಪರಮ ಪರಿಣಾಮಿಯಾಗಿರುತ್ತಿಹನು ಶಿವಪ್ರಾಣಲಿಂಗಿಯು.

## ಪ್ರಸಾದ ಲಿಂಗದ ಅರ್ಪಿತವು

ಈಳನ ಸ್ವರೂಪವಾದ ಪ್ರಸಾದಲಿಂಗದ ಅರ್ಪಿತವು. ಶಬ್ದವಿಷಯ ಪದಾರ್ಥವು, ಶ್ರವಣೇಂದ್ರಿಯದಲ್ಲಿ ನೆಲೆಗೊಂಡಿರುವ ಈಳನ ಸ್ವರೂಪವಾದ ಪ್ರಸಾದಲಿಂಗಕ್ಕೆ ಆ ಶ್ರವಣೇಂದ್ರಿಯದಲ್ಲಿ ಬರುವ ಸುಶಬ್ದ ಪದಾರ್ಥವೇ ನೈವೇದ್ಯವಾಗಿರ್ಪುದು. ಅದು ಹೇಗೆಂದೊಡೆ, ಶರಣಂಗೆ ಆಕಾಶವೇ ಅಂಗ, ಆ ಅಂಗಕ್ಕೆ ಸುಜ್ಞಾನವೇ ಹಸ್ತ, ಆ ಹಸ್ತಕ್ಕೆ ಶಿವಸಾದಾಖ್ಯ, ಆ ಸಾದಾಖ್ಯಕ್ಕೆ ಪರಾಶಕ್ತಿ, ಆ ಶಕ್ತಿಗೆ ಪ್ರಸಾದ ಲಿಂಗ, ಆ ಲಿಂಗಕ್ಕೆ ಶಾಂತಾತೀತೆಯೇ ಕಲೆ, ಆ ಕಲೆಗೆ ಶ್ರವಣೇಂದ್ರಿಯವೇ ಮುಖ, ಆ ಮುಖಕ್ಕೆ ಬಂದು ತಟ್ಟುವಂತಾದ್ದೇ ಸುಶಬ್ದ ಪದಾರ್ಥ, ಆ ಪದಾರ್ಥದ ರೂಪು, ತೃಪ್ತಿಯನರಿದು ಯಕಾರ ಮಂತ್ರ ಸ್ಮರಣೆಯಿಂದ ಯಕಾರ ಮಂತ್ರ ಯುಕ್ತವಾಗಿ ಆನಂದ ಭಕ್ತಿಯಿಂದರ್ಪಿಸಿ ಆ ಲಿಂಗಮುಖದಿಂದುಳುಮೆಯಾಗಿ ಬಂದ ಸುಶಬ್ದ ಪ್ರಸಾದವ ಪಡೆದನುಭವಿಸಿ ಪರಮ ಪರಿಣಾಮಿಯಾಗಿರುತ್ತಿಹನು ಶಿವಶರಣನು.

## ಮಹಾಲಿಂಗದ ಅರ್ಪಿತವು

ಬೋಧಾಸ್ವರೂಪವಾದ ಮಹಾಲಿಂಗದ ಅರ್ಪಿತವು. ಸಕಲೇಂದ್ರಿಯವನೊಳಕೊಂಡು ತೋರುವ ಹೃದಯೇಂದ್ರಿಯಕ್ಕೆ ಬಂದು ತಟ್ಟುವ ಪರಿಣಾಮ ವಿಷಯ ಪದಾರ್ಥವು. ಈ ಹೃದಯೇಂದ್ರಿಯಕ್ಕೆ ಸರ್ವೇಂದ್ರಿಯವೆಂಬ ನಾಮವು ಏನು ಕಾರಣ ಬಂದಿತೆಲೆ ಸ್ವಾಮಿ ಎಂದು ಬೆಸಗೊಂಡೊಡೆ, ಸಕಲೇಂದ್ರಿಯದಲ್ಲಿ ಬರುವ ವಿಷಯೇಂದ್ರಿಯಂಗಳ ಪರಿಣಾಮ್ವವೆಲ್ಲವೂ ಈ ಹೃದಯೇಂದ್ರಿಯೊಂದಕ್ಕೆ ಬಂದು ತಟ್ಟುತ್ತಿಹುದಾದ ಕಾರಣ ಈ ಹೃದಯೇಂದ್ರಿಯಕ್ಕೆ ಸರ್ವೇಂದ್ರಿಯವೆಂಬ ನಾಮವು ಪ್ರಸಿದ್ಧವಾಯಿತ್ತು. ಆ ಹೃದಯೇಂದ್ರಿಯದಲ್ಲಿ ನೆಲೆಗೊಂಡಿರುವ ಬೋಧಾಸ್ವರೂಪವಾದ ಮಹಾ

ಲಿಂಗಕ್ಕೆ ನೈವೇದ್ಯವಾಗಿಪ್ಪದು. ಅದು ಹೇಗೆಂದೊಡೆ, ಐಕ್ಯಂಗೆ ಆತ್ಮವೇ ಅಂಗ, ಆ ಅಂಗಕ್ಕೆ ಚಿಚ್ಛಕ್ತಿ, ಆ ಚಿಚ್ಛಕ್ತಿಗೆ ಮಹಾಲಿಂಗ, ಆ ಲಿಂಗಕ್ಕೆ ಶಾಂತಾತೀತೋತ್ತರ ಕಲೆ, ಆ ಕಲೆಗೆ ಹೃದಯೇಂದ್ರಿಯುವೇ ಮುಖ, ಆ ಮುಖಕ್ಕೆ ಬಂದು ತಟ್ಟುವಂತಾದ್ದೇ ಸುತೃಪ್ತಿ ಪದಾರ್ಥ. ಆ ಪದಾರ್ಥದ ರೂಪು, ರುಚಿ, ತೃಪ್ತಿಯನರಿದು ಓಂಕಾರ ಮಂತ್ರಯುಕ್ತವಾಗಿ ಸಮರಸ ಭಕ್ತಿಯಿಂದರ್ಪಿಸಿ ಆ ಲಿಂಗಮುಖದಿಂದುಳುಮೆಯಾಗಿ ಬಂದ ಸುತೃಪ್ತಿ ಪದಾರ್ಥವ ಪಡೆದನುಭವಿಸಿ ಪರಮ ಪರಿಣಾಮಿಯಾಗಿರುತ್ತಿಹನು ಶಿವೈಕ್ಯನು.

---

## ಷಡ್ಲಿಂಗಗಳ ಮಿಶ್ರಾರ್ಪಣ.

ಈ ಪ್ರಕಾರದಿಂದ ಹೇಳಲ್ಪಟ್ಟ ಈ ಷಡ್ವಿಧ ಲಿಂಗಕ್ಕೆ ಪ್ರಾಣ ಲಿಂಗದೊಡನೆ ಕೂಡಿದ ಆಚಾರಾದಿ ಮಹಾಲಿಂಗಾಂತ್ಯವಾದ ಆರು ಲಿಂಗಂಗಳಿಗೆ ಅರ್ಪಣ ಕ್ರಮುಗಳಿಂದ ಸಮರ್ಪಿತವಾಗುವಂತಹ ವಿಚಾರವ ಛತ್ತೀಸ ತತ್ವದ ಭೇದವಂ ಕುರುಹಿನಲ್ಲಿ ಪೇಳ್ವೆ.

ಛತ್ತೀಸ ತತ್ವದ ಹನ್ನೊಂದು ತೆರದ ಸಕೀಲಂಗಳೊಳಗೆ ಮೂರು ಕಡಿಮೆಯಾಗಿ ಹೋಗಲು ಅಷ್ಟವಿಧ ಸಕೀಲಂಗಳೇ ಉಳಿಯುವವು. ಈ ಅಷ್ಟವಿಧ ಸಕೀಲಂಗಳು ವೈಶಾಲ್ಯತರವಪ್ಪೆದಿ, ಅಂಗವು ಮೂವತ್ತಾರು, ಲಿಂಗವು ಮೂವತ್ತಾರು, ಶಕ್ತಿಯು ಮೂವತ್ತಾರು, ಭಕ್ತಿಯು ಮೂವತ್ತಾರು, ಹಸ್ತವು ಮೂವತ್ತಾರು, ಮುಖವು ಮೂವತ್ತಾರು, ಪ್ರಸಾದವು ಮೂವತ್ತಾರು, ಪದಾರ್ಥವು ಮೂವತ್ತಾರು, ಪ್ರಾಣಲಿಂಗದೊಡನೆ ಕೂಡಿದ ಮೂವತ್ತಾರು ಲಿಂಗಂಗಳಿಗೆ ಮನೋ ಸಂಬಂಧವಾದ ಮೂವತ್ತಾರುತೆರದ ರುಚಿ ಪದಾರ್ಥಂಗಳನ್ನು ಮೂವತ್ತಾರು ತೆರದ ಭಕ್ತಿ ಸಕೀಲಂಗಳಿಂದ ಸಮರ್ಪಿತವಾಗುವ ವಿಚಾರವೆಂತೆಂದೊಡೆ:—

### ಆಚಾರಲಿಂಗ ಮಿಶ್ರ.

ಆಚಾರಲಿಂಗ ಭಕ್ತಂಗೆ ಹರಣಕಿರಣ ಚೈತನ್ಯ ಪ್ರಕಾಶವನುಳ್ಳ ಆಚಾರಲಿಂಗವು ತಾನೊಂದೇ ಮಿಶ್ರವಿಭಜಿಸಿ ಷಡ್ವಿಧಲಿಂಗ- ಆಚಾರ ಲಿಂಗದೊಳಗಣ ಆಚಾರಲಿಂಗ, ಆಚಾರಲಿಂಗದೊಳಗಣ ಗುರುಲಿಂಗ,

ಆಚಾರಲಿಂಗದೊಳಗಣ ಶಿವಲಿಂಗ, ಆಚಾರಲಿಂಗದೊಳಗಣ ಜಂಗಮ ಲಿಂಗ, ಆಚಾರಲಿಂಗದೊಳಗಣ ಪ್ರಸಾದಲಿಂಗ, ಆಚಾರಲಿಂಗದೊಳ ಗಣ ಮಹಾಲಿಂಗವೆಂದು ಆರು ಭೇದವಾಗಿಹುದು.

ಆಚಾರಲಿಂಗದೊಡನೆ ಕೂಡಿದ ಷಡ್ವಿಧಲಿಂಗಂಗಳಿಗೆ ಷಡ್ವಿಧ ಗಂಧ ಪದಾರ್ಥಂಗಳು ಷಡ್ವಿಧಭಕ್ತಿ ಸಕೀಲಂಗಳಿಂದ ಸಮರ್ಪಿತವಾಗುವ ವಿಚಾರವು ಎಂತೆಂದೊಡೆ—

ಭಕ್ತನೊಳಗಣಭಕ್ತ:— ಈ ಭೂಭಾಗದಲ್ಲಿರುವ ಪರಿಮಳ ಸಂಯು ಕ್ತವಾದ ಮೂಲಂಗಳು ಕಂದಗಳ ಸದ್ವಾಸನೆ ಎಂಬ ಪದಾರ್ಥವನ್ನು ಆಚಾರಲಿಂಗದೊಳಗಣ ಆಚಾರಲಿಂಗದಲ್ಲಿ ಎಂದು ತಿಳಿದರ್ಪಿತವ ಮಾಡು ವುದು. ಅದರ ಸಕೀಲವೆಂತುಂಟೆಲೆ ಸ್ವಾಮಿ ಎಂದು ಬೆಸಗೊಂಡೊಡೆ, ಅದು ಪೃಥ್ವೀ ತತ್ವದೊಳಗಣ ಮೂಲ ಪೃಥ್ವೀ ತತ್ವ ಸಂಬಂಧವಾದ ಪದಾರ್ಥವೆಂದರಿದು, ಆ ಪದಾರ್ಥವನ್ನು ಸುಚಿತ್ತಹಸ್ತದೊಳಗಣ ಸುಚಿತ್ತ ಹಸ್ತದಿಂ ಪಿಡಿದು, ಕ್ರಿಯಾಶಕ್ತಿಯೊಳಗಣ ಕ್ರಿಯಾಶಕ್ತಿಯುಕ್ತವಾಗಿ, ಶ್ರದ್ಧಾಭಕ್ತಿಯೊಳಗಣ ಶ್ರದ್ಧಾಭಕ್ತಿಯಿಂದೆ ಆಚಾರಲಿಂಗದೊಳಗಣ ಆಚಾ ರಲಿಂಗಕೆಂದರಿದಾರೋಪಿಸಿ ನಕಾರಮಂತ್ರದೊಳಗಣ ನಕಾರಮಂತ್ರಸ್ಮರ ಣೆಯೊಡನೆ ಕೂಡಿಕೊಂಡು ಘ್ರಾಣೇಂದ್ರಿಯದೊಳಗಣ ಘ್ರಾಣೇಂದ್ರಿಯ ಮುಖದಲ್ಲಿಯೇ ಸಮರ್ಪಿಸಿ ಆ ಲಿಂಗಮುಖದಿಂದುಳುಮೆಯಾಗಿ ಬಂದ ಪ್ರಸನ್ನೇತಿ ಪ್ರಸಾದವ ಪಡೆದನುಭವಿಸಿ ಪರಮಪರಿಣಾಮಿಯಾಗಿರುತ್ತಿ ಹನು ಭಕ್ತನೊಳಗಣ ಸದ್ಭಕ್ತನು.

ಭಕ್ತನೊಳಗಣ ಮಹೇಶ:—ದೇವದಾರು ಚಂದನತರು ಆದಿಯಾದ ಪರಿಮಳ ಸಂಯುಕ್ತವಾದ ವೃಕ್ಷಂಗಳ ತ್ವಕ್ಕು ಕುಮಂಜನ ಗುಗ್ಗುಳ ಲೋಬಾನ ಮೊದಲಾದ ಮೇಣಂಗಳ ಸದ್ವಾಸನೆ ಎಂಬ ಪದಾರ್ಥ ವನ್ನು ಗುರುಲಿಂಗದಲ್ಲಿ ಅರಿವುದು. ಆಚಾರಲಿಂಗದೊಳಗಣ ಗುರು ಲಿಂಗದೊಳಗೆಂದು ತಿಳಿದು ಅರ್ಪಿತವ ಮಾಡುವದು. ಅದರ ಸಕೀಲ ವೆಂತೆಂದೊಡೆ, ಅದು ಪೃಥ್ವೀ ತತ್ವದೊಳಗಣ ಅಪ್ಪು ತತ್ವ ಸಂಬಂಧ ವಾದ ಪದಾರ್ಥವೆಂದರಿದು, ಅದನ್ನು ಸುಚಿತ್ತ ಹಸ್ತದೊಳಗಣ ಸುಬುದ್ಧಿ ಎಂಬ ಹಸ್ತದಿಂ ಪಿಡಿದುಕೊಂಡು ಕ್ರಿಯಾಶಕ್ತಿಯೊಳಗಣ ಜ್ಞಾನಶಕ್ತಿಯು

ಕ್ತವಾಗಿ, ಶ್ರದ್ಧಾಭಕ್ತಿಯೊಳಗಣ ಗುರುಲಿಂಗಕ್ಕೆಂದು ಆರೋಪಿಸಿ, ನಕಾರ ಮಂತ್ರದೊಳಗಣ ಮಕಾರಮಂತ್ರ ಸ್ಮರಣೆಯೊಡನೆ ಕೂಡಿ, ಘ್ರಾಣೇಂದ್ರಿಯೊಳಗಣ ಜಿಹ್ವೇಂದ್ರಿಯ ಮುಖದಲ್ಲಿ ಸಮರ್ಪಿಸಿ ಆ ಲಿಂಗಮುಖದಿಂದುಳುಮೆಯಾಗಿ ಬಂದ ಪ್ರಸನ್ನೇತಿಪ್ರಸಾದವ ಪಡೆದನುಭವಿಸಿ ಪರಮ ಪರಿಣಾಮಿಯಾಗಿರುತ್ತಿಹನು ಭಕ್ತನೊಳಗಣ ಮಾಹೇಶ್ವರನು.

ಭಕ್ತನೊಳಗಣ ಪ್ರಸಾದಿಃ—ಚಿಗುರು ಅಶೋಕ, ಚೂತಕ, ಪತ್ರಿ, ಕಪಿತ್ಥ, ಬಿಲ್ವ ಮೊದಲಾದ ದಳಂಗಳ ಗಂಧಮಂ ಶಿವಲಿಂಗವಲ್ಲರಿವುದು. ಆಚಾರಲಿಂಗದೊಳಗಣ ಶಿವಲಿಂಗದಲ್ಲೆಂದು ತಿಳಿದರ್ಪಿತವ ಮಾಡುವುದು. ಅದರ ಸಕೀಲವೆಂತೆಂದೊಡೆ ಅದು ಪೃಥ್ವೀತತ್ವದೊಳಗಣ ಅಗ್ನಿತತ್ವ ಸಂಬಂಧವಾದ ಪದಾರ್ಥವೆಂದರಿದು ಅದನ್ನು ಸುಚಿತ್ತ ಹಸ್ತದೊಳಗಣ ಅಹಂಕಾರವೆಂಬ ಹಸ್ತದಿಂ ಪಿಡಿದುಕೊಂಡು, ಕ್ರಿಯಾಶಕ್ತಿಯೊಳಗಣ ಇಚ್ಛಾಶಕ್ತಿಯುಕ್ತವಾಗಿ, ಶ್ರದ್ಧಾಭಕ್ತಿಯೊಳಗಣ ಶಿವಲಿಂಗಕ್ಕೆಂದು ಆರೋಪಿಸಿ, ನಕಾರ ಮಂತ್ರದೊಳಗಣ ಶಿಕಾರ ಮಂತ್ರಸ್ಮರಣೆಯೊಡನೆ ಕೂಡಿ ಘ್ರಾಣೇಂದ್ರಿಯದೊಳಗಣ ನೇತ್ರೇಂದ್ರಿಯ ಮುಖದಲ್ಲಿ ಸಮರ್ಪಿಸಿ, ಆ ಲಿಂಗಮುಖದಿಂದುಳುಮೆಯಾಗಿ ಬಂದ ಪ್ರಸನ್ನೇತಿ ಪ್ರಸಾದವ ಪಡೆದನುಭವಿಸಿ ಪರಮಪರಿಣಾಮಿಯಾಗಿರುತ್ತಿಹನು ಭಕ್ತನೊಳಗಣ ಪ್ರಸಾದಿಯು.

ಭಕ್ತನೊಳಗಣ ಪ್ರಾಣಲಿಂಗಿಃ— ಮೊಗ್ಗೆ ಮಲ್ಲಿಗೆ, ಸೇವಂತಿಕೆ ಮುಖ್ಯವಾದ ಕುಸುಮಂಗಳ ಗಂಧಮಂ ಜಂಗಮಲಿಂಗದಲ್ಲಿ ಅರಿವುದು- ಆಚಾರಲಿಂಗದೊಳಗಣ ಜಂಗಮಲಿಂಗದೊಳಗೆಂದು ತಿಳಿದು ಅರ್ಪಿತವ ಮಾಡುವುದು (ಇದರ ಸಕೀಲದ ಕ್ರಮವನ್ನು ವಾಚಕರು ತಾವಾಗಿಯೇ ಹಿಂದಿನ ಸಕೀಲಗಳ ರೀತಿಯನ್ನನುಸರಿಸಿ ಕಂಡುಕೊಳ್ಳುವುದು.)

ಭಕ್ತನೊಳಗಣ ಶರಣಃ— ಮಾವು ಬಾಳೆ ಮೊದಲಾದ ಪಕ್ವಫಲಂಗಳು ಇವುಗಳ ಗಂಧಮಂ ಪ್ರಸಾದಲಿಂಗದಲ್ಲಿ ಅರಿವುದು. ಆಚಾರಲಿಂಗದೊಳಗೆಂದು ತಿಳಿದರ್ಪಿತವ ಮಾಡುವುದು. (ಇದರ ಸಕೀಲದ ರೀತಿಯನ್ನು ಹಿಂದಿನ ಸಕೀಲಗಳ ರೀತಿಯನ್ನನುಸರಿಸಿ ಕಂಡುಕೊಳ್ಳುವುದು.)

ಭಕ್ತನೊಳಗಣ ಐಕ್ಯಃ— ಇವೆಲ್ಲರಲ್ಲಿಯು ಗಂಧವನರಿವುದು ಮಹಾಲಿಂಗದಲ್ಲಿ. ಹಿಂದೆ ಹೇಳಿದ ಬೇರಿನ ಗಂಧ ಪುಷ್ಪದಗಂಧ, ಫಲದಗಂಧ

ಮೊದಲಾದ ಪಂಚವಿಧ ಗಂಧ ಪದಾರ್ಥಗಳನ್ನು ಆಚಾರಲಿಂಗದೊಳಗೆ ಕೂಡಿದ ಪಂಚವಿಧ ಲಿಂಗದೊಳಗೆ ಪಂಚವಿಧ ಭಕ್ತಿ ಸಕೀಲಂಗಳಿಂದ ಸಮರ್ಪಿಸಿ, ಪಂಚವಿಧಲಿಂಗ ಮುಖದಿಂದುಳುಮೆಯಾಗಿ ಬಂದ ಪಂಚ ವಿಧ ಪ್ರಸಾದವ ಪಡೆದನುಭವಿಸಿ ದಣ್ಣನೆ ದಣಿದು ಮನಸ್ಸೆಲ್ಲ ಹಿಂದಿರು ಗಿದಂತಾದ್ದೇ ಮಹಾಲಿಂಗದಲ್ಲಿ ಅರಿವುದು. ಅವು ಬೇರೆ ಬೇರೆ ತಟ್ಟೆ ದಲ್ಲಿ ಮೇಲೆ ಹೇಳಿದ ವಿಧದಂತೆ ಬೇರೆ ಬೇರೆ ಲಿಂಗಗಳಿಗೆ ಸಮ ರ್ಪಿಸುವುದು. ಒಂದೇವೇಳೆ ಕದಂಬವಾಗಿ ಬಂದು ತಟ್ಟಿದರೂ ಸರಿ. ಆಗ ಮಹಾಲಿಂಗದಲ್ಲಿ ಅರಿವುದು. ಅದರ ಸಕೀಲವೆಂತುಂಟು ಸ್ವಾಮಿ ಎಂದು ಬೆಸಗೊಂಡೊಡೆ ಪೃಥ್ವೀತತ್ವದೊಳಗಣ ಆತ್ಮತತ್ವ ಸಂಬಂಧ ವಾದ ಪದಾರ್ಥವೆಂದರಿದು ಆ ಪದಾರ್ಥವನ್ನು ಸುಚಿತ್ತಹಸ್ತವೊಳಗಣ ಸದ್ಭಾವಹಸ್ತದಿಂ ಪಿಡಿದುಕೊಂಡು ಕ್ರಿಯಾಶಕ್ತಿಯೊಳಗಣ ಚಿಚ್ಛಕ್ತಿಯುಕ್ತ ವಾಗಿ ಶ್ರದ್ಧಾಭಕ್ತಿಯೊಳಗಣ ಸಮರಸಭಕ್ತಿಯಿಂದೆ ಆಚಾರಲಿಂಗದೊ ಳಗಣ ಮಹಾಲಿಂಗಕ್ಕೆಂದರಿದಾರೋಪಿಸಿ ನಕಾರಮಂತ್ರದೊಳಗಣ ಓಂ ಕಾರ ಮಂತ್ರಸ್ಮರಣೆಯೊಡನೆ ಕೂಡಿಕೊಂಡು ಘ್ರಾಣೇಂದ್ರಿಯದೊಳಗಣ ಹೃದಯೇಂದ್ರಿಯ ಮುಖದಲ್ಲಿಯೇ ಸಮರ್ಪಿಸಿ ಆ ಲಿಂಗಮುಖದಿಂದು ಳುಮೆಯಾಗಿ ಬಂದ ಪ್ರಸನ್ನೇತಿಪ್ರಸಾದವ ಪಡೆದನುಭವಿಸಿ ಪರಮ ಪರಿಣಾಮಿಯಾಗಿರುತ್ತಿಹನು ಭಕ್ತನೊಳಗಣ ಶಿವೈಕ್ಯನು.

## ಗುರುಲಿಂಗ ಮಿಶ್ರ.

ತದನಂತರ ಗುರುಲಿಂಗ ಮಾಹೇಶ್ವರಂಗೆ ಹರಣಕಿರಣ ಪ್ರಕಾಶ ವನುಳ್ಳ ಗುರುಲಿಂಗವು ತಾನೊಂದೇ ಷಡ್ವಿಧಲಿಂಗಗಳಾದವು. ಗುರು ಲಿಂಗದೊಳಗಣ ಆಚಾರಲಿಂಗ, ಗುರುಲಿಂಗದೊಳಗಣ ಗುರುಲಿಂಗ, ಗುರುಲಿಂಗದೊಳಗಣ ಶಿವಲಿಂಗ, ಗುರುಲಿಂಗದೊಳಗಣ ಜಂಗಮಲಿಂಗ, ಗುರುಲಿಂಗದೊಳಗಣ ಪ್ರಸಾದಲಿಂಗ, ಗುರುಲಿಂಗದೊಳಗಣ ಮಹಾ ಲಿಂಗವೆಂದು ಆರು ಭೇದವಾಗಿಹುದು. ಗುರುಲಿಂಗದೊಡನೆ ಕೂಡಿದ ಷಡ್ವಿಧಲಿಂಗಾಂಗಗಳಿಗೆ ಷಡ್ವಿಧ ರುಚಿಪದಾರ್ಥಗಳು ಷಡ್ವಿಧ ಭಕ್ತಿ ಸಕೀ ಲಂಗಳಿಂದ ಸಮರ್ಪಿತವಾಗುವ ವಿಚಾರವೆಂತೆಂದೊಡೆ:—

ಮಾಹೇಶ್ವರನೊಳಗಣ ಭಕ್ತಃ— ಮಧುರವಾದ ರುಚಿ ಎಂಬ ಪದಾರ್ಥವನ್ನು ಆಚಾರಲಿಂಗದಲ್ಲರಿವುದು. ಗುರುಲಿಂಗದೊಳಗಣ ಆಚಾ

# ವಿಷಯಗಳು.




೧ ಆತ್ಮಕಲ್ಯಾಣವೂ ಲೋಕಕಲ್ಯಾಣವೂ ೩೪೫

—ವಿದ್ವಾನ್ ಕೆ. ಯಂ. ರಾಜಶೇಖರಯ್ಯ.

೨ ತೇರದಾಳದ ಪ್ರಭುದೇವರು ೩೫೫

—ಶ್ರೀ ಮಧುರಚನ್ನ ಹಲಸಂಗಿ.

೩ ಲಿಂಗಸ್ಥಲಾನುಗತ ೩೬೧

—ಶ್ರೀ. ಬ. ಚೆ. ಪಟ್ಟೇದ ಮಂಟಮುರ

೪ ವಚನ ಶಾಸ್ತ್ರಸಾರ ಭಾಗ ೩. ಉತ್ತರಾರ್ಧ ೯೩—೧೦೮

—ರಾ. ಬ. ಫ. ಗು. ಹಳಕಟ್ಟಿ.




# ಶಿವಾನುಭವ

ವರ್ಷ ೨೨ | ಸಪ್ಟಂಬರ ೧೯೪೮ | ಸಂಚಿಕೆ ೧೨


## ಆತ್ಮಕಲ್ಯಾಣವೂ ಲೋಕಕಲ್ಯಾಣವೂ


ಲೇಖಕರು:— ವಿದ್ವಾನ್ ಕೆ. ಎಂ. ರಾಜಶೇಖರಯ್ಯನವರು
ಸಂಸ್ಕೃತ ಪಂಡಿತರು ಗ॥ ಹೈ॥ ತೀರ್ಥಹಳ್ಳಿ.



(ಹಿಂದಿನ ಸಂಚಿಕೆಯಿಂದ ಮುಂದೆ ಸಾಗಿದ್ದು)


ಆತ್ಮಕಲ್ಯಾಣ ಮತ್ತು ಲೋಕಕಲ್ಯಾಣ. ಈ ಉಭಯಕಲ್ಯಾಣವನ್ನೆಸಗಿದ ಮಹಾತ್ಮ ಬಸವೇಶ್ವರನ ಕಾರ್ಯಕ್ಷೇತ್ರ ವೀರಶೈವ ಸಮಾಜದಲ್ಲೇ ಅಲ್ಲ. ಇಡೀ ಕರ್ನಾಟಕದಲ್ಲೆಲ್ಲಾ, ಅಷ್ಟೇ ಏಕೆ? ಇಡೀ ಭರತ ಖಂಡದಲ್ಲೆಲ್ಲಾ ಉಂಟೆಂದು ಮತ್ತೊಮ್ಮೆ ತಿಳಿಯೋಣ. ಆತನ ದೃಷ್ಟಿ ವೀರಶೈವ ಸಮಾಜದಲ್ಲಿದ್ದರೂ ಇಡೀ ಜನತೆಯನ್ನು ಸಹ ಉದ್ಧಾರಮಾಡಬೇಕೆಂಬುದೇ ಆತನ ದೃಢಸಂಕಲ್ಪ, ಹಾಗೆಯೇ ಸತ್‌ಸಂಕಲ್ಪ. ಈ ಅಂಶವನ್ನು ನಾವು ಆತನ ವಚನಾಮೃತದಲ್ಲಿ ಕಾಣಬಹುದು. ಕಂಡು ಈ ಲೇಖನವನ್ನು ಮುಗಿಸೋಣ. "ಕೊಂಬೆಯ ಮೇಲಣ ಮರ್ಕಟನಂತೆ ಲಂಘಿಸುವುದೆನ್ನ ಮನವು. ನಿಂದಲ್ಲಿ ನಿಲಲೀಯದು ಎನ್ನ ಮನವು. ಹೊಂದಿದಲ್ಲಿ ಹೊಂದಲೀಯದು ಎನ್ನ ಮನವು. ಕೂಡಲಸಂಗಮದೇವ ನಿಮ್ಮ ಚರಣಕಮಲದಲ್ಲಿ ಭ್ರಮರನಾಗಿರಿಸು ನಿಮ್ಮ ಧರ್ಮ.

"ಮನ ಏವ ಮನುಷ್ಯಾಣಾಂ ಕಾರಣಂ ಬಂಧ ಮೋಕ್ಷಯೋಃ" ಎಂದು ಉಂಟು. ಮನಸ್ಸಿನ ಚಾಂಚಲ್ಯವು ಎಷ್ಟರಮಟ್ಟಿಗಿದೆ? ಅದರಿಂದುಂಟಾಗುವ ದುಷ್ಪರಿಣಾಮವೇನು ? ಎಂಬ ಅಭಿಪ್ರಾಯವು ಇದರಿಂದ ಕಂಡು ಬರುತ್ತದೆ. ಮನುಷ್ಯ ಜೀವಿಯ ಬಂಧನ ಮತ್ತು ಮೋಕ್ಷಗಳಿರ

ಡಕ್ಕೂ ಕಾರಣವು. ಅದು ನೆಲೆಯಾಗಿ ಒಂದೇ ಕಡೆ ನಿಶ್ಚಂಚಲವಾಗಿದ್ದರೆ ಮೋಕ್ಷ ಜೀವಿಗೆ. ಚಂಚಲವಾಗಿದ್ದರೆ ಅಂದೇ ಭವಬಂಧನ ಜೀವಿಗೆ. ಅಂತು ಭವಬಂಧನ, ಮೋಕ್ಷ ಇವೆರಡಕ್ಕೂ ಮನಸ್ಸೇ ಕಾರಣ. ಇದು ಒಂದೇ ಕಡೆ ನೆಲೆಯಾಗಿ ನಿಲ್ಲುವುದಲ್ಲ. ಅದರ ಅಭ್ಯಾಸ ಜೀವಿಯ ಮೇಲೆ ಬಿದ್ದ ಭಾರ.

ಇಲ್ಲಿ ಮನಸ್ಸು ಒಂದು ಕಪಿಯಂತಿದೆ. ಕಪಿಯೂ ಸಹ ಒಂದೇ ಕಡೆ ಇರುವ ಪ್ರಾಣಿಯಲ್ಲ. ಇದ್ದರೂ ಅವಯವಗಳು ಸುಮ್ಮಗಿರುವುದಿಲ್ಲ. ಏನಾದರೂ ಒಂದು ಚೇಷ್ಟೆಯನ್ನು ಮಾಡಿಯೇ ಮಾಡಬೇಕು. ಮಾಡದಿದ್ದರೆ ಅದರ ಜನ್ಮ ವ್ಯರ್ಥವೆಂದೋ ಅದರ ಭಾವನೆ. ಹೇಗಾದರೂ ಇರಲಿ, ಮನಸ್ಸೂ ಕಪಿಯೂ ಒಂದೆ. ಅದಕ್ಕಾಗಿಯೇ ಹೋಲಿಕೆ ಸರಿಯಾದುದು. ಉಪಮಾನದಲ್ಲಿ ಹೀನೋಪಮಾ ಮುಂತಾದ ಸಂಸ್ಕೃತಾಲಂಕಾರಿಕ 'ಭ್ರಾಮಹ'ನು ಹೇಳಿದ ಯಾವ ದೋಷಗಳೂ ಕಂಡು ಬರುವುದಿಲ್ಲ.

ಮನಸ್ಸು ಕಪಿಯಂತೆ ಇದೆಯೆಂದ ಮೇಲೆ ಕಪಿಯು ಓಡಾಡುವಂತೆ ಮನಸ್ಸು ಎಲ್ಲಿ ಓಡಾಡುತ್ತದೆ? ಓಡಾಡಲು ಇದಕ್ಕೆ ಮರ ಯಾವುದು ? ಕೊಂಬೆಗಳಾವುವು? ಅಲ್ಲಿ ಸಿಕ್ಕುವ ಹಣ್ಣುಗಳಾವುವು? ಎಂಬ ಅಂಶಗಳನ್ನು ಸ್ವಲ್ಪ ವಿಚಾರಮಾಡೋಣ. ಈ ಮನ ಮರ್ಕಟವು ಯಾವಾಗಲೂ ಶರೀರ ವೃಕ್ಷದ ಮೇಲೆ ಓಡಾಡುತ್ತದೆ. ಇದರ ಕಾರ್ಯ ಕ್ಷೇತ್ರ ಶರೀರದಲ್ಲಿ. ಇದು ವಿಶಾಲವಾದುದು ಅದರ ಪುಣ್ಯ ವಿಶೇಷದಂತೆ. ಈ ಶರೀರ ವೃಕ್ಷದಲ್ಲಿ ಕಣ್ಣು, ನಾಲಿಗೆ, ಕಿವಿ, ಮೂಗು ಮುಂತಾದ ಇಂದ್ರಿಯಗಳೇ ಕೊಂಬೆಗಳು. ಇವು ಸಾಮಾನ್ಯವಾಗಿ ವಿಶಾಲವಾದುವೆ. ಇಂಥ ಇಂದ್ರಿಯ ಶಾಖೆಗಳ ಮೇಲೆ ಮನ ಮರ್ಕಟವು ಓಡಾಡಲು ಅಡ್ಡಿ ಆತಂಕಗಳಾವುವೂ ಇರುವುದಿಲ್ಲ. ಈ ಕೊಂಬೆಗಳ ಮೇಲೆ ಇರುವ ನವರಸಭರಿತವಾದ ಫಲಗಳೋ ? ರೂಪ, ರಸ, ಗಂಧ, ಸ್ಪರ್ಶ ಮುಂತಾದ ಫಲಗಳು. ಇವು ಸಾಮಾನ್ಯವೇ ! ಆದಕ್ಕಾಗಿಯೇ ನವರಸಭರಿತವೆಂದು ಕರೆದುದು. ಆದ್ದರಿಂದಲೇ ಈ ಫಲಗಳನ್ನು ಅನುಭವಿಸಲು ಹಾರಾಡುವುದು. ಆದರೆ? ಆದರೇನುಃ— ಕ್ಷಣಿಕವಲ್ಲವೇ ಫಲಗಳು? ಈ ಫಲವು ಅಮೃತಸಮವೇ ? ಅಲ್ಲ, ಮೃತಸಮ. ತಾತ್ಕಾಲಿಕವಾದ ಸೌಖ್ಯ ಇಂದ್ರಿಯಗಳಿಗೆ. ಈ ಸೌಖ್ಯದ ಪರಿಣಾಮದಿಂದಲೇ ಆತ್ಮನ ಅಧೋಗತಿ. ಅಷ್ಟೇ ಅಲ್ಲ ಅಂದೇ ಭವಬಂಧನ

ಸಿದ್ಧ. ಅದಕ್ಕಾಗಿಯೇ ಮಹಾತ್ಮನು "ಮನಸ್ಸು ಭ್ರಮರವಾಗಿರಲಿ, ಅದು ತಮ್ಮ ಚರಣಾರವಿಂದದ ಮಧುಪಾನ ಮಾಡುವಂತೆ ಇರಲಿ ಯಾವಾಗಲೂ" ಎಂದು ಬೇಡಿದನು.

ಮನಸ್ಸು ಕಪಿಯಂತೆ ಇದೆಯೆಂದಾಯ್ತು. ಅಲ್ಲದೆ ಪಾಲಕಿಯಲ್ಲಿಯ ನಾಯಿಯಂತಿದೆಯನ್ನುವುದೂ ಬಂದಿತು. ಅದೇ ಈ ವಚನ. "ಅಂದಣವ ನೇರಿದ ಸೊಣಗನಂತೆ ಕಂಡಡೆ ಬಿಡದು ತನ್ನ ಮುನ್ನಿನ ಸ್ವಭಾವವನು। ಸುಡು ಸುಡೀ ಮನವಿದು ವಿಷಯಕ್ಕೆ ಹರಿವುದು। ಮೃಡನ ನೆನೆಯಲೀಯದು। ಎನ್ನೊಡೆಯ ಕೂಡಲ ಸಂಗಮದೇವ ನಿಮ್ಮ ಚರಣವ ನೆನೆವಂತೆ ಕರುಣಿಸು ಸೆರಗೊಡ್ಡಿ ಬೇಡುವೆ ನಿಮ್ಮ ಧರ್ಮ ನಿಮ್ಮ ಧರ್ಮ। ಈ ವಚನದಲ್ಲಿ ಮನಸ್ಸಿಗೆ ನಾಯಿಯ ಉಪಮೆಯನ್ನು ಕಾಣಬಹುದು. ನಾಯಿಗೆ ತಾನು ಕುಳಿತಿರುವ ಸ್ಥಾನಮಾನಗಳ ಅರಿವೇ ಇಲ್ಲ. ಅದರ ಯೋಗ್ಯತೆಯಂತೂ ಅಪರಿಮಿತ, ಅವರ್ಣನೀಯ. ಆದರೂ "ತಾನು ಸುಮ್ಮನೆ ಶ್ರೀಮದ್ಗಂಭೀರವಾಗಿ ಕುಳಿತಿರಬೇಕು, ಘನತೆಯನ್ನು ಕಾದಿಡಬೇಕು, ಗಾಂಭೀರ್ಯವಳಿದರೆ ಅಯೋಗ್ಯವೆಂದು ಭಾವಿಸಿಯಾರು" ಮುಂತಾದ ದೂರಾಲೋಚನೆಗಳು ಇರುವುದಿಲ್ಲ. ಅದರ ಕೆಲಸವನ್ನು ಅದು ಮಾಡಿಯೇ ಮಾಡೀತು. ಆದ್ದರಿಂದಲೇ "ಸ್ವಭಾವೋ ದುರತಿಕ್ರಮಃ" ಎಂದರು. ಅಂತು ನಾಯಿಯು ಪಾಲಿಕೆಯಲ್ಲಿ ಕುಳಿತಿದ್ದರು ಅಕ್ಕ ಪಕ್ಕದಲ್ಲಿ ಮಾಂಸ ಮುಂತಾದ ಹೇಯ ವಸ್ತುಗಳನ್ನು ನೋಡಿದ ಕೂಡಲೇ ಪಾಲಿಕಿಯಿಂದ ಕೆಳಕ್ಕೆ ಧುಮುಕಿ ಓಡಿ ಹೋಗುತ್ತದೆ. ಅದು ಮೊದಲಿನಿಂಹಲೂ ಅದಕ್ಕೆ ಬಂದಿರುವ ಆಜನ್ಮಸಿದ್ಧವಾದ ಗುಣ. ಅಥವಾ ಹುಟ್ಟು ಗುಣ. ಅಂದಮೇಲೆ ಅದರ ಸ್ಥಾನಮಾನ ಅದಕ್ಕೆ ಹೇಗೆ ತಾನೇ ಗೊತ್ತಾದೀತು? ಅಂತೆಯೇ ಈ ಮನಸ್ಸೆಂಬ ನಾಯಿಯು ತಾನು ಮಾಡುವ ಕೆಲಸ ತಾನಿರುವ ಸ್ಥಾನ, ತನ್ನ ಸದಾಚಾರ, ಸದ್ವಿವೇಚನೆ, ಸದ್ಭಕ್ತಿ, ಸಚ್ಚೀಲಾದಿ ಸದ್ಗುಣಗಳ ಕಡೆಗೆ ಗಮನಕೊಡದೆ ವಿಷಯಗಳೆಂಬ ಮಾಂಸದ ಮುದ್ದೆಗಳನ್ನು ಸೇವಿಸುವುದರಲ್ಲಿ ಹಾತೊರೆಯುತ್ತಿರುತ್ತದೆ. ಅದರಲ್ಲಿಯೇ ಅದರ ಪರಿಣಾಮ.

ಮಾನವ ಜನ್ಮ ಅದರ ಘನತೆ. ಮಾನವತ್ತ್ವವನ್ನು ಉಳಿಸಿಕೊಳ್ಳಲು ಕೈಗೊಳ್ಳಬೇಕಾದ ಕಾರ್ಯಪರಂಪರೆ. ಸಮಾಜಕ್ಕಾಗಲೀ ಇಡೀ ಜನತೆಗಾಗಲೀ ನನ್ನಿಂದ ಏನಾಗಬೇಕು. ಯಥಾಶಕ್ತಿ ಸೇವೆ ಮಾಡಬೇಡವೆ?

ನನ್ನಂತೆಯೇ ಕಲ್ಲು ಮರಗಳೂ ? ಅವುಗಳಿಗೂ ನನಗೂ ವ್ಯತ್ಯಾಸವಿಲ್ಲವೇ? ಯೋಚಿಸಿದರೆ ಕಲ್ಲು ಮರಗಳು ಮನುಷ್ಯನ ಯಾವುದಾದರೂ ವಾಸಕ್ಕೆ ಯೋಗ್ಯವಾದ ಮನೆಗೂ ಮರಗಳು ಪಶು ಮುಂತಾದ ಪ್ರಾಣಿಗಳ ಆಹಾರಕ್ಕೂ ಕೊನೆಗೆ ವಾಸದ ಮನೆಗೋ ಉಪಕಾರಿಗಳಾಗುವುದಿಲ್ಲವೇ? ಅವುಗಳಿಗಿಂತ ಕಡೆಯೇ ನನ್ನ ಜನ್ಮ! ಮನುಷ್ಯ ಜನ್ಮವನ್ನು ಇದಕ್ಕಾಗಿಯೇ ಪಡೆದೆನೆ? ಮನುಷ್ಯ ಜನ್ಮ ಸರ್ವಸಾಮಾನ್ಯವಲ್ಲ. ಅದರ ಮಹತ್ವವನ್ನು ಭಗವಾನ್ ಶಂಕರಾಚಾರ್ಯರ ಅಮೃತವಾಣಿಯಲ್ಲಿಯೇ ಸೂಚಿಸೋಣ." ಜಂತೂನಾಂ ನರಜನ್ಮ ದುರ್ಲಭಮಿ"ತ್ಯಾದಿ. ಅಂತೂ ಮನುಷ್ಯತ್ವವನ್ನು ಪಡೆದ ಮನುಷ್ಯನು ಪರೋಪಕಾರಿಯಾಗಲೇಬೇಕು. " ನನ್ನಿಂದ ಪ್ರಪಂಚಕ್ಕೆ ಯತ್ಕಿಂಚಿತ್ಪ್ರಯೋಜನವಾಗಲೇಬೇಕು." ಎಂಬ ಮಂತ್ರಪಠನ ಪಂಡಿತನಾಗಬೇಕು. ಇದೆಲ್ಲಕ್ಕೂ ಸಂಗ ಸತ್ಸಂಗವಾಗಬೇಕು. ಜ್ಞಾನಿಗಳ ಜ್ಞಾನ ಜ್ಯೋತಿಯ ಪ್ರಭಾವಕ್ಕೆ ತುತ್ತಾಗಬೇಕು. ಅಜ್ಞಾನಾಂಧಕಾರವನ್ನು ಹೊಡೆದೋಡಿಸಲು ಸರ್ವ ಪ್ರಯತ್ನವೂ ನಡೆಯಬೇಕು. ಗ್ರಂಥಗಳ ಅಭ್ಯಾಸವೂ ಮಹಾನುಭಾವಿಗಳ, ಲೋಕಾನುಭಾವಿಗಳ, ವಚನೋಪದೇಶದ ಸಹವಾಸ ಅಭ್ಯಾಸಾದಿಗಳೂ ಆವಶ್ಯಕ. ಈ ಎಲ್ಲಾ ಸದ್ವಾತಾವರಣಗಳ ಪರಂಪರೆಯಿಂದ ಮನೋಮಂದಿರವು ನಿಷ್ಕಲ್ಮಷವಾಗಿ ಸರ್ವಾಂಗಸುಂದರವಾಗಿರಬಲ್ಲುದು. ಅಂದೆಯೇ ಆ ಮನೋಮಂದಿರವು ಅಚಲವಾದುದು. ಅಲ್ಲಿ ನಾವು ಜ್ಞಾನಾಮೃತವನ್ನು ಬಹಳ ಮಟ್ಟಿಗೆ ಶೇಖರಿಸಬಹುದು. ಅದಕ್ಕೆ ಯಾವ ಭೀತಿ ಚ್ಯುತಿಯೂ ಇರುವುದಿಲ್ಲ. ಮಹಾತ್ಮರೇ "ತನ್ನ ಮನಸ್ಸು ಕಪಿ ನಾಯಿಯಂತಿದೆ. ಅದರ ಸ್ವಭಾವ ದುಷ್ಟಭಾವ" ಎಂದು ಆದರ ಸ್ವರೂಪವನ್ನು ನಮ್ಮ ಮುಂದೆ ಇಟ್ಟಿದ್ದಾರೆಂದ ಮೇಲೆ ನಮ್ಮಂಥವರ ಗತಿ? ಅಧೋಗತಿ. ಅದಕ್ಕಾಗಿಯೇ ಆರ್ಯೋಕ್ತಿಕೂಗಿತು. " ಮಹಾ ಗಜಾಃ ಪಲಾಯಂತೆ ಮಶಕಾನಾಂ ತು ಕಾ ತಥಾ" ಇತ್ಯಾದಿ. ಆದರೂ ಪ್ರಯತ್ನದಿಂದ ಸರ್ವವೂ ಸಾಧ್ಯವಾಗುವುದು. ಪ್ರಯತ್ನಪಡಬೇಕು.

ಇದೇ ರೀತಿಯಾಗಿ ನೈತಿಕ ವಚನಗಳು ಇಡೀ ಜನತೆಗೆ ಉಪಯೋಗವಾಗಿಯೇ ಮಹಾತ್ಮರಿಂದ ಉಪದೇಶಿಸಲ್ಪಟ್ಟಿವೆ. ಮನೋಚಾಂಚಲ್ಯಕ್ಕೆ ಸಂಬಂಧಪಟ್ಟ ಇನ್ನೆರಡು ವಚನಗಳನ್ನು ಉದಾಹರಿಸಿ ಮುಂದಿನ ವಿಷಯಕ್ಕೆ ತೆರಳೋಣ.

" ತುಪ್ಪದ ಸವಿಗೆ ಅಲಗ ನಕ್ಕುವ ಸೊಣಗನಂತಾಯಿತ್ತೆನ್ನ ಬಾಳುವೆ। ಸಂಸಾರ ಬಿಡದು ನೋಡೆನ್ನ ಮನವು। ಆ ನಾಯಿತನವ ಮಾಣಿಸು ಕೂಡಲ ಸಂಗಮದೇವ ನಿಮ್ಮ ಧರ್ಮ। "

" ಒಂದು ಮೊಲಕ್ಕೆ ನಾಯನೊಂಭತ್ತು ಬಿಟ್ಟಂತೆ ಎನ್ನ ಬಿಡು ತನ್ನ ಬಿಡೆಂಬುದು ಕಾಯವಿಕಾರ। ಎನ್ನ ಬಿಡು ತನ್ನ ಬಿಡೆಂಬುದು ಮನದ ವಿಕಾರ। ಕರಣೇಂದ್ರಿಯಗಳೆಂಬ ಸೊಣಗ ಮುಟ್ಟದ ಮುನ್ನ ಮನ ನಿಮ್ಮ ನೈದುಗೆ ಕೂಡಲಸಂಗಮದೇವ'' ಇತ್ಯಾದಿ.

ನಾವು ಪ್ರಪಂಚದಲ್ಲಿ ಹುಟ್ಟಿದ ಬಳಿಕ ನಮಗೆ ಸಂಬಂಧಿಕರೂ ಹುಟ್ಟುತ್ತಾರೆ. ಆಗ ನಾವು ಅವರನ್ನು ಸಂಸಾರಿಕ ನಾಮಧೇಯಗಳಿಂದ ವ್ಯವಹರಿಸುತ್ತೇವೆ. ಉದಾಃ ಜನ್ಮದಾತೃಗಳಿಗೆ ಪೂಜ್ಯ ಮಾತಾಪಿತೃಗಳು ಸಹಜರಿಗೆ ಸೋದರ ಸೋದರಿಯರು ಅವರ ಸತಿಪತಿಗಳಿಗೆ ಅತ್ತಿಗೆ ನಾದಿನಿ ಭಾವ ಮುಂತಾಗಿ ವ್ಯವಹರಿಸುತ್ತೇವೆಯಷ್ಟೇ. ನಮ್ಮ ಪಾಣಿಗೃಹೀತೆಗಂತೂ ಧರ್ಮಪತ್ನಿ ಎಂದೇ ವ್ಯವಹಾರ. ಎಲ್ಲಾ ಈ ವ್ಯವಹಾರಗಳು ಜೀವಿಯು ಜೀವಂತನಾಗಿರುವ ವರೆಗೆ ಎಂಬದು ಸರ್ವರಿಗೂ ವೇದ್ಯವಾಗಿದೆ. ಇವರಲ್ಲಿ ಪರಸ್ಪರ ಸಹಾಯ, ಸಂಪತ್ತು ಜೀವಿಯು ಜೀವಂತನಾಗಿರುವ ವರೆಗೂ ಅದರಲ್ಲೂ ಆತನು ಐಶ್ವರ್ಯವಂತನಾಗಿದ್ದರೆ ವಿಶೇಷತಃ, ಸಕ್ಕರೆಗೆ ನೊಣ ಮುತ್ತಿದಂತೆ ಬಹಳವಾಗಿ ಜನರು ಆತನನ್ನು ಅನುಸರಿಸುತ್ತಾರೆ. ಆತನು ಮೂರ್ಖನಾಗಲೀ ಪಂಡಿತನಾಗಲೀ ಅಂಧನಾಗಲೀ ಬಧಿರನಾಗಲೀ ಮತ್ತಾವುದಾದರೂ ಅಂಗಹೀನನಾಗಲೀ ಅದರ ಗಮನವಿರುವುದಿಲ್ಲ. "ಸ ಏವ ವಕ್ತಾ, ಸಚಾದರ್ಶನೀಯಃ" ಅಲ್ಲದೆ ಶೂದ್ರಕ ಮಹಾ ಕವಿಯ ವಾಣಿಯನ್ನು ನೋಡೋಣ. ಅದು ಚಾರುದತ್ತ ಬ್ರಾಹ್ಮಣನ ಬಾಯಿಂದ "ಯದಾ ಕುಭಾಗ್ಯ ಕ್ಷಯ ಪೀಡಿತಾಂ ದಶಾಂ। ನರ: ಕೃತಾಂತೋಪಹಿತಾಂ ಪ್ರಪದ್ಯತೆ॥ ತದಾಸ್ಯ ಮಿತ್ರಾಣ್ಯ ಪಿ ಯಾಂತ್ಯಮಿತ್ರತಾಂ। ಚಿರಾನುರಕ್ತೋಪಿ ವಿರಜ್ಯತೆ ಜನಃ" ಮನುಷ್ಯನು ದೈವವಶಾತ್ ದರಿದ್ರನಾದರೆ ಮಿತ್ರರೂ ಶತ್ರುಗಳಾಗುತ್ತಾರೆ. ಪ್ರೀತಿಯುಕ್ತರೂ ಹತ್ತಿರವೇ ಸುಳಿಯುವದಿಲ್ಲ. ಬೆಂಕಿ ಕಂಡರೆ ಇರುವೆ ಮುಂತಾದ ಪ್ರಾಣಿಗಳಂತೆ ದೂರ ಸರಿಯುತ್ತಾರೆ ವಿನಾ ಆತನ ವಿಷಮ ಪರಿಸ್ಥಿತಿಯಲ್ಲಿ ಮೊದಲಿನಂತೆ ವಿಚಾರಿಸಿಕೊಳ್ಳುವುದಿಲ್ಲ. ವಿಚಾರಿಸುವ ಕಾಲ ಹೋಯಿತು. ಅಂತು ಜೀವಿಸಿರುವಾಗ ಸೂಚಿಸಿದ ಎಲ್ಲಾ

ಸಂಬಂಧವೇ ವಿನಾ ಅನಂತರ ಯಾವುದೂ ಇಲ್ಲ. ತಂದೆ ಮೃತನಾದ ಮೇಲೆ ಮಕ್ಕಳೂ ಇಲ್ಲ. ಸೊಸೆಯೂ ಇಲ್ಲ. ಮಡದಿಯೂ ಇಲ್ಲ. ಪ್ರಾಣ ಉಳಿಸಲು ಯಾರು ತಾನೇ ಸಮರ್ಥರು? ಅದೆಲ್ಲ ಭ್ರಾಂತಿಯಷ್ಟೇ ಎಲ್ಲವೂ ನನ್ನದೆಂದು ಭಾವಿಸುತ್ತಿದ್ದುದು? ಆದರೆ ? ಆದರೇನುಃ—ಸದಾ ನಮ್ಮ ತಾಯಿ ತಂಹೆ. ಬಂಧು ಬಳಗ, ಯಾರಿರಬಹುದು. ಅಥವಾ ಯಾರೂ ಇಲ್ಲವೆ? ಇದ್ದಾನೆ? ಎಲ್ಲಿದ್ದಾನೆ? ಹೇಗಿದ್ದಾನೆ? ಆತನ ಠಾವು? ಒಂದು ಕಡೆ ಎನ್ನುವಹಾಗಿಲ್ಲ. ಸರ್ವಾಂತರ್ಯಾಮಿ ಅಣು, ರೇಣು, ತೃಣಕಾಷ್ಠಾದಿಗಳಲ್ಲೂ ಇದ್ದಾನೆ. "ಅಣೋ ರಣೀಯಾನ್ಮಹ ತೋಮಹೀಯಾನ್" ಮುಂತಾಗಿ ಶ್ರುತಿಗಳು ಆತನ ನೆಲೆಯನ್ನು ಪರಿಚಯ ಮಾಡಿಕೊಡುತ್ತಾ ಬಂದಿವೆ. ಜೀವಿಗೆ ಇಹಪರಗಳೆರಡಲ್ಲಿಯೂ ಪರಮಾತ್ಮನೇ ಬಂಧು. ಪರಮಾತ್ಮನಿಗೆ ಅದರಲ್ಲೂ ಸದ್ಭಕ್ತನೆಂದರೆ ಪ್ರಾಣ. ಹೃತ್ಕಮಲವೇ ಪರಮಾತ್ಮನ ಸಾನ್ನಿಧ್ಯ. ಆತನ ನಿಲವು ಕೈಲಾಸ. ಅದು ರಜತ ಗಿರಿ. ಹಿಮಾಲಯವೂ ಮಾವ. ಮಾವನಮನೆಯೆಂದರೆ ಅಳಿಯನಿಗೆ ಸ್ವರ್ಗ. ಅಲ್ಲಿಯ ಸೌಖ್ಯವೇ ಸ್ವರ್ಗ ಸೌಖ್ಯ. "ಶ್ವಶುರಗೃಹನಿವಾಸಃ ಸ್ವರ್ಗ ತುಲ್ಯೋ ನರಾಣಾಂ " ಅಲ್ಲವೆ? ಆದರೂ ಪರಮಾತ್ಮನ ಗೀತಾ ವಾಣಿಯನ್ನು ನೋಡಬೇಕು. "ಈಶ್ವರಃ ಸರ್ವಭೂತಾನಾಂ-ಹೃದ್ದೇಶೆ ಅರ್ಜುನ ತಿಷ್ಠತಿ" ಎಂದಿದೆ. ಅಂದ ಮೇಲೆ ಭಕ್ತರ ಹೃತ್ಕಮಲವೇ ಆತನಿಗೆ ಪವಿತ್ರ ಕ್ಷೇತ್ರ. ಅಲ್ಲದೆ "ಭಕ್ತಕಾಯಸ್ತು ಮಮಕಾಯಃ" ಎಂದು ಔದಾರ್ಯದಿಂದ ಸಾರಿರುವಾಗ ಎಲ್ಲಾ ಕಡೆಯಲ್ಲೂ ಎಲ್ಲಾ ಸಮಯದಲ್ಲೂ ಭಕ್ತ ಪ್ರಾಣಿ. ಭಕ್ತನ ಜವಾಬ್ದಾರಿ ಅಷ್ಟಿಷ್ಟಲ್ಲ. ಭೂಲೋಕಕ್ಕೆ ತಪ್ಪು ಮಾಡಿದ ಶರಣರು ಕೈಲಾಸದಿಂದ ಆಗಮಿಸುವುದು ಸರಿಯಷ್ಟೆ. ಆಗ ಅವರು ಪರಮಾತ್ಮನನ್ನು "ದೇವ! ದೇವ ದೇವ !! ಮಹಾದೇವ !!! ಭೂಲೋಕವು ಪಾಪಗಳ ಕೂಪ ಸಂಸಾರದ ಸಂಕೋಲೆಗೆ ಸಿಕ್ಕಿಸುವ ಆಜ್ಞೆಯನ್ನೇಕೆ ಮಾಡಿದೆ? ಅಲ್ಲಿಯ ನಿವಾಸಿಗಳು ಸಂಸಾರ ವ್ಯಾಮೋಹಿಗಳಲ್ಲವೇ? ಇಲ್ಲಿಯ ಶರಣರ ಗೋಷ್ಠಿ, ಸಂಭಾಷಣೆ, ದರ್ಶನ, ಪ್ರಸಾದ ಮುಂತಾದುವು ಅಲ್ಲಿ ಎಲ್ಲಿಂದ ಬರಬೇಕು." ಎಂದರು. ಆಗ ಪರಮಾತ್ಮನ ಅಭಯ ದಾನದ ಸ್ವರೂಪವನ್ನು ನೋಡಿ. "ಭಕ್ತ, ಶರಣ, ಹೆದರಬೇಡ. ನಾನು ನಿನ್ನ ಬೆನ್ನಿನ ಹಿಂದೆಯೇ ಇದ್ದು ನಿನ್ನ ಕಷ್ಟ ಸುಖಗಳನ್ನು ಸದಾ ವಿಚಾರಿಸಿಕೊಳ್ಳುವೆ? ಅಭಯ ಹಸ್ತವು ನಿನ್ನ ಮಂಡೆಯ ಮೇಲಿದೆ. ನಿನ್ನಿಂದ

ಭೂಲೋಕದಲ್ಲಿ ಆವುದೋ ಸತ್ಕಾರ್ಯವಾಗಬೇಕಾಗಿದೆ. ಆದನಂತರ ಪುನ ರಾಗಮುನವುಂಟೇ? ಉಂಟು" ಎಂದು ಧೈರ್ಯಕೊಟ್ಟು ಕಳುಹಿಸುತ್ತಾನೆ. ಇಂಥ ಅನೇಕ ಉದಾಹರಣೆಗಳು ಶಿವಶರಣರ ಚರಿತ್ರೆಯಲ್ಲಿ ಕಂಡು ಬರುತ್ತವೆ. ಉದಾಹರಣೆ ಮುಖ್ಯವಾದುವು ಎರಡು. ಒಂದು "ಬಸವರಾಜ ದೇವರ ರಗಳೆ." ಮತ್ತೊಂದು "ನಂಬಿಯಣ್ಣನ ರಗಳೆ." ಹೀಗೆ "ಸದಾ ಬೆಂಬಲನಾದ ಭಕ್ತಪ್ರಾಣಿಯಾದ ಪರಮಾತ್ಮನೊಬ್ಬನೇ ನಂಟ, ಉಳಿದವರೆಲ್ಲರೂ ತಾತ್ಕಾಲಿಕವಾದ ಬಾಂಧವ್ಯವನ್ನು ಪಡೆದಿರುತ್ತಾರೆ. ಅವರನ್ನು ನಂಬಬೇಡಿ. ನಿಜವಾಗಿಯೂ ನಿಮ್ಮೆಲ್ಲರ ಕಷ್ಟ ಸುಖವನ್ನು ನೋಡುವವನೇ ಪರಮಾತ್ಮ ಎಂಬುದನ್ನು ಈ ವಚನದಲ್ಲಿ ನಾವು ಕಾಣಬಹುದು. "ಚಂದ್ರೋದಯಕ್ಕೆ ಅಂಬುಧಿ ಹೆಚ್ಚುವುದಯ್ಯ। ಚಂದ್ರ ಕುಂದೆ ಕುಂದುವುದಯ್ಯ। ಚಂದ್ರಂಗೆ ರಾಹು ಅಡ್ಡ ಬಂದಲ್ಲಿ ಅಂಬುಧಿ ಬೊಬ್ಬಿಟ್ಟಿತ್ತೆ? ಅಂಬುಧಿ ಮುನಿ ಆಪೋಷನವ ಕೊಂಬಲ್ಲಿ ಚಂದ್ರಮನೇನಡ್ಡ ಬಂದನೆ? ಆರಿಗಾರೂ ಇಲ್ಲ. ಕೆಟ್ಟವಂಗೆ ಕೆಳೆಯಿಲ್ಲ. ಜಗದ ನೆಂಟ ನೀನೇ ಅಯ್ಯ ಕೂಡಲಸಂಗಮದೇವ। ಈ ವಚನದಲ್ಲಿ ಸುಲಭವಾಗಿ "ಆರಿಗಾರೂ ಇಲ್ಲ. ಕೆಟ್ಟವಂಗೆ ಕಳೆಯಿಲ್ಲ. ಜಗದ ನೆಂಟ ನೀನೇ ಅಯ್ಯ." ಎಂದು ಹೇಳಿದ್ದಾನೆ. ಅದು ಚಂದ್ರ ಸಮುದ್ರ ಸಾದೃಶ್ಯದಿಂದ. ಚಂದ್ರ ಸಮುದ್ರರಿಗೆ ಇದರಿಂದ ಆವುದೂ ಒಂದು ವಿಧವಾದ ನಿಕಟಸಂಬಂಧವುಂಟೆಂಬುದು ಗೋಚರವಾಗುತ್ತದೆ. ಅದು ದೈಹಿಕ ಸಂಬಂಧ ಅಥವಾ ಮೈತ್ರೀ. ಸಮುದ್ರ ಮಥನ ಕಾಲದಲ್ಲಿ ಚಂದ್ರೋದಯುವಾಯಿತಷ್ಟೇ. ಆದ್ದರಿಂದ ಅವರಿಬ್ಬರೂ ತಂದೆ ಮಕ್ಕಳು, ಇದರಿಗಿಂತಲೂ ಪ್ರಪಂಚದಲ್ಲಿ ಪರಸ್ಪರ ಸಹಾಯ, ಸಂಪತ್ತು ಮತ್ತೆಲ್ಲೂ ದೊರೆಯಲಾರದು. ಇದೇ ಆದರ್ಶ ಬಾಂಧವ್ಯವೆಂದು ಹೇಳಿದರೆ ತಪ್ಪಾಗಲಾರದು. "ಆತ್ಮಾವೈ ಪುತ್ರ ನಾಮಾಸಿ ಸಜೀವಶರದಃ ಶತಂ" ಎಂಬುದಾಗಿ ಶ್ರುತಿಯು ಸಾರುತ್ತದೆ. ಆತ್ಮವೇ ಪುತ್ರ ಹೀಗಿರುವಾಗ ಪರಸ್ಪರ ಸಹಾಯಿಗಳು ಒದಗಬೇಕಲ್ಲವೆ? ಹೌದು. ಆದರೂ ದೊರೆಯುವುದಿಲ್ಲವಲ್ಲ. ಅವನ್ನೇ ಜೀವಿಗೆ ಶರಣರು ಉಪದೇಶಿಸಿ "ಪರಮಾತ್ಮನೊಬ್ಬನೇ ನಿನ್ನ ಹಿತಚಿಂತಕ" ಎಂಬುದನ್ನು ವಿವರಿಸಿದ್ದಾರೆ. ಈ ವಚನದಲ್ಲಿ, ಚಂದ್ರೋದಯ ಕಾಲದಲ್ಲಿ ಶುಕ್ಲ ಪಕ್ಷದಲ್ಲಿ ಸಮುದ್ರ ಉಕ್ಕುವದು. ಅದಕ್ಕೆ ಕಾರಣ ಪುತ್ರನ ಏಳ್ಗೆ. ಚಂದ್ರ ವೃದ್ಧಿ ಹೊಂದುವಂತೆ ಸಮುದ್ರವೂ ವೃದ್ಧಿಹೊಂದುವುದು. ಕೃಷ್ಣ ಪಕ್ಷದಲ್ಲಿ ಚಂದ್ರನು ಕುಂದು

ವಂತೆ ಸಮುದ್ರವೂ ಕುಂದುವುದು. ಇದರಿಂದ ಅವುದೂ ಸ್ನೇಹವೋ ಸಂಬಂಧವೋ ಉಂಟೆಂದು ನಾವು ಊಹಿಸಬಹುದು. ಆದರೆ ಚಂದ್ರ ಗ್ರಹಣದ ಸಮಯದಲ್ಲಿ ರಾಹುವಿಗೆ ಚಂದ್ರನು ಆಹಾರವಷ್ಟೇ. ರಾಹುವು ಚಂದ್ರನನ್ನು ಕಬಳಿಸುವಾಗ ಸಮುದ್ರನ ಸಹಾಯ ಬೇಕಷ್ಟೇ. ಕಷ್ಟ ಕಾಲದಲ್ಲಿ ತಾನೇ ಸಹಾಯ! ಸಹಾಯಕ್ಕೆ ಗೌರವ. ಭೂಷಣಾದಿಗಳು ಆಪತ್ಕಾಲದಲ್ಲಷ್ಟೆ! ಅಂತಲ್ಲದಿದ್ದರೆ ಅದೆಂತಹ ಮೈತ್ರೀ! ಬಂಧುತ್ತ್ವ!! ಹೋಗಲಿ. ಸಮುದ್ರನ ಸಹಾಯವಿಲ್ಲವೆಂದ ಮೇಲೆ ಚಂದ್ರ ಸಹಾಯ, ಏನಾಯಿತು ನೋಡೋಣ. ಸಮುದ್ರ ಸಹಾಯ ಪರೋಪಕಾರಿಯಾಗಿದ್ದರೆ ಚಂದ್ರನೂ ಆಗುತ್ತಿದ್ದ. ಪ್ರತಿಫಲಾಪೇಕ್ಷೆಯಿಲ್ಲದಿದ್ದರೂ ಹೋಗಲಿ. ಅಗಸ್ತ್ಯಮುನಿ ಸಮುದ್ರವನ್ನು ಆಪೋಶನಗೈದನೆಂದು ಸಾರುತ್ತವೆಯಷ್ಟೆ. ಆಗ ಚಂದ್ರನೇನುಮಾಡುತ್ತಿದ್ದ? ಸಹಾಯ ಮಾಡಲಿಲ್ಲವಲ್ಲ! ಶುಕ್ಲ ಕೃಷ್ಣ ಪಕ್ಷದಲ್ಲಿ ಚಂದ್ರನ ಅಭಿವೃದ್ಧಿ ಅನಾಭಿವೃದ್ಧಿಯನ್ನು ನೋಡಿ ಸಮುದ್ರನು ಹಿಗ್ಗುತಗ್ಗುತ್ತಿದ್ದುದು ಸರಿಯಷ್ಟೆ. ಅಂದ ಮೇಲೆ ಚಂದ್ರನಿಗೆ ಈಗ ಸ್ವಲ್ಪವೂ ಸಮುದ್ರನ ಮೇಲೆ ದಯಬೇಡವೇ. ಇದೆಂಥಹ ಮೈತ್ರೀ! ಬಂಧುತ್ತ್ವ!!

ಸಹಾಯ ಮಾಡಲು ಅವರಿಬ್ಬರಾರೂ? ಅವರ ಕೈಯ್ಯಲ್ಲಿ ಏನಾದೀತು. "ಉದ್ಧರೇದಾತ್ಮಾನ ಮಾತ್ಮಾನಾ|| ಕೇಳಿಲ್ಲವೆ ಗೀತಾಮೃತವನ್ನು. ತಂದೆಯು ಕಷ್ಟಕ್ಕೆ ಸಿಕ್ಕಿದಾಗ ಅಥವಾ ಮರಣಕ್ಕೀಡಾದಾಗ ಮಕ್ಕಳೂ, ಮತ್ತು ಹೆಂಡತಿಯರೂ ಏನು ಮಾಡಬಲ್ಲರು? ಎಲ್ಲ ಬಂಧುಗಳೂ ಅಷ್ಟೇ, ಎಲ್ಲರೂ ಇರುವ ವರೆಗೆ. ಹೋದ ಮೇಲೆ ಯಾರೂ ಇಲ್ಲ. ಆತನ ಜೊತೆಯಲ್ಲಿದ್ದು, ಮೃತನಾದಾಗಲೂ, ಆತನನ್ನೆ ಹಿಂಬಾಲಿಸುವುದು ಪಾರಮಾರ್ಥಿಕ ಆತನ ಪತಿದೈವ ಅದೇ ಇಷ್ಟಲಿಂಗ. ಅದೇ ಪರಬ್ರಹ್ಮನ ಪ್ರತೀಕ. ಅದರಿಂದಲೇ ಆತನ ಮುಕ್ತಿ. ಇದೆಲ್ಲವೂ ಜೀವಿಯ ಅನುಭವಕ್ಕೆ ಬಂದಿದ್ದರೂ ಸರ್ವತ್ರ ನೋಡಿದ್ದರೂ ಮನೋಗೋಚರವಾಗಲೊಲ್ಲದೇಕೆ? ಇದೇ ನಮ್ಮ ಉತ್ತರ ಅದಕ್ಕೆ. "ಪ್ರಾಪಂಚಿಕ ವಿಷಯಾಸಕ್ತತೆಯೇ ಆತನ ವ್ಯಾಮೋಹಕ್ಕೆ ಕಾರಣ" ಆದ್ದರಿಂದಲೇ ಜೀವಿಯ ಅಧಃಪತನ. ಅದಕ್ಕಾಗಿಯೇ ಮಹಾತ್ಮಲೋಕೋಪಕಾರಿ ಜೀವಿಗಳ ಕಷ್ಟ ಸುಖವನ್ನು ಅರಿತವನು ಸ್ವತಃ ಅನುಭವಿಸಿದ ಅನುಭವವೋ ಏನೋ? ನೋಡಿ ನೋಡಿ. ಕೇಳಿ ಕೇಳಿ ಬೇಸತ್ತು ಈ ಮಹಾಮಂತ್ರವನ್ನು ಉದ್ಘೋಷಿಸಿದ "ಯಾರಿಗಾರೂ ಇಲ್ಲ............ ಜಗದನೆಂಟ ನೀನೇ ಅಯ್ಯಾ" ಜನರ ಅಜ್ಞಾನಾಂಧಕಾರವನ್ನು ಈ ವಿಶ್ವ

ಧರ್ಮ ಅಥವಾ ತತ್ವವು ತೀವ್ರವಾಗಿ ಓಡಿಸಿ ಜ್ಞಾನಜ್ಯೋತಿಯ ಪ್ರಭಾಪುಂಜವನ್ನು ಚೆಲ್ಲಬಲ್ಲದು. ಯಾರಿಗಾರೂ ಇಲ್ಲ. ಇಲ್ಲವೇ ಇಲ್ಲ. ಚಂದ್ರಸಮುದ್ರರಸಾದೃಶ್ಯ ನೋಡಿಯಾಯಿತಷ್ಟೆ. ಅದಕ್ಕಿಂತ ಉತ್ಕೃಷ್ಟವಾದ ಸಾಮ್ಯ ಮತ್ತೊಂದು ಬೇಕೆ? ಕೆಟ್ಟವಂಗೆ ಕೆಳೆಯಿಲ್ಲ. ಶೂದ್ರಕ ಮಹಾಕವಿಯ ಅಮೃತವಾಣಿಯನ್ನು ನೆನೆಯೋಣ. "ಚಿರಾನುರಕ್ತೋಽಪಿ ವಿರಜ್ಯತೇ ಜನಃ" "ದುಡ್ಡಿದ್ದವನೇ ದೊಡ್ಡಪ್ಪ, ಅದಿಲ್ಲದವನೇ ದಡ್ಡಪ್ಪ" ಅದ್ದರಿಂದ "ಜಗದ ನೆಂಟ ನೀನೇ ಅಯ್ಯ. ಇದೆಂಥಹ ವಿಶಾಲ ಮನೋಭಾವ! ಒಂದು ಮನೆಗೆ, ಒಂದು ಊರಿಗೆ, ಒಂದು ಪಟ್ಟಣಕ್ಕೆ, ಒಂದು ದೇಶಕ್ಕೆ ಅಲ್ಲ. ಜಗತ್ತಿಗೆ ಅಥವಾ ಜನತೆಗೆ ಕೊಟ್ಟ ಸಂದೇಶ ಇದೇ ಅಲ್ಲವೇ? "ಸ್ವದೇಶೋ ಭುವನತ್ರಯಮ್" ಎಂಬ ವಿಶ್ವಧರ್ಮ, ವಿಶ್ವಪ್ರೇಮಮಯವಾದ ಮಹೋನ್ನತ ದಿವ್ಯ ಸಂದೇಶ.

ಇಂಥ ಅನೇಕ ನೈತಿಕ ವಚನಗಳೂ ಉಂಟು. ಅವೆಲ್ಲವನ್ನೂ ಉದಾಹರಿಸುತ್ತಾ ಹೋದರೆ ಎಲ್ಲಿಗೆ ಪಾರ? ರಾ. ಬ. ಪಿ. ಜಿ. ಹಳಕಟ್ಟಿ ಬಿ. ಎ. ಎಲ್. ಎಲ್. ಬಿ. ಅವರು ಹೊರಡಿಸಿರುವ "ನವೀನ ಪದ್ಧತಿಯ ಬಸವೇಶ್ವರನ ವಚನಗಳು" ಎಂಬ ಪುಸ್ತಕದಲ್ಲಿ ಅವರು ಶ್ರಮವಹಿಸಿ ವೀರಶೈವ ಧರ್ಮಕ್ಕೆ ಸಂಬಂಧಪಟ್ಟ ಅಷ್ಟಾವರಣ ಷಟ್ಸ್ಥಲ ಮುಂತಾದ ವಚನಗಳನ್ನು ಒಂದು ಕಡೆ, ನೈತಿಕ ವಚನಗಳನ್ನು ಮತ್ತೊಂದು ಕಡೆ, ವಿಭಾಗಿಸಿ ಜೋಡಿಸಿ ಮುದ್ರಿಸಿದ್ದಾರೆ. ವಚನಪ್ರೇಮಿಗಳು ಅದನ್ನು ಕೂಲಂಕುಷವಾಗಿ ಅಭ್ಯಾಸ ಮಾಡಿದರೆ ವೀರಶೈವ ಸಮಾಜ ಇನ್ನೂ ಬೆಳಕಿಗೆ ಬರಬಹುದೆಂದು ನಂಬುತ್ತೇನೆ.

ರಾ. ಪಿ. ಜಿ. ಹಳಕಟ್ಟಿಯವರು ಎಲ್ಲಾ ಹಿಂದಿನ ಶರಣರ ವಚನಗಳನ್ನು ಸಾಧ್ಯವಾದಷ್ಟು ಮಟ್ಟಿಗೆ ಮುದ್ರಿಸಿ ಬೆಳಕಿಗೆ ತಂದಿರುತ್ತಾರೆ. ಅಲ್ಲದ ಶಿವಶರಣರ ಚರಿತ್ರೆ ಭಾಗ ೧, ೨, ೩ ಸಹ ಪ್ರಕಟವಾಗುತ್ತಾ ಬಂದಿವೆ. ಅವರ ಈ "ವಚನ ಪಿತಾಮಹ" ಎಂಬ ಪ್ರಶಸ್ತಿ ಅಕ್ಷರಶಃ ಸಲ್ಲುತ್ತದೆ. ಇವರ ಶ್ರಮ ಸಾರ್ಥಕವಾಗಬೇಕಾದರೆ ಪ್ರತಿಯೊಬ್ಬರೂ ವಚನ ವಾಙ್ಮಯದಲ್ಲಿ ಭಕ್ತಿ ವಿಶ್ವಾಸವಿಟ್ಟು ಆಳವಾಗಿ ಕೂಲಂಕಷವಾಗಿ ಅಭ್ಯಾಸ ಮಾಡಿ ಅಲ್ಲಿ ದಿವ್ಯ ಸಂದೇಶವನ್ನು ಇಡೀ ಜನತೆಗೆ ಉಪದೇಶಿಸಿ ಜ್ಞಾನಜ್ಯೋತಿಯ ಪ್ರಭಾಪುಂಜವನ್ನು ಹರಡುತ್ತಿರಬೇಕು. ಜನ

ತೆಯೂ ಸಹ ತಮ್ಮ ಮುಂದಿನ ಸತ್ಪ್ರಜೆಯಾಗುವ ಇಂದಿನ ಪೀಳಿಗೆ
ಯನ್ನು ಈಗಿಂದಲೇ ಎಚ್ಚರಿಸುತ್ತಾ ವಚನಶಾಸ್ತ್ರದ ಕಡೆಗೆ ಅವರ ಮನ
ಸ್ಸನ್ನು ಸೆಳೆಯುತ್ತಾ ಬರಬೇಕು. ಅವೆಲ್ಲವೂ ಕನ್ನಡದಲ್ಲೇ ಇವೆಯೆಂದು
ಪದೇ ಪದೇ ಹೇಳಬೇಕಾಗಿಲ್ಲ.

ಇತ್ತ ಮಹಿಳೆಯರೂ ಸಹ ಸಮಾಜದಲ್ಲಿ ಕಾರ್ಯರಂಗಕ್ಕಿಳಿಯ
ಬೇಕು. ಅವರೂ ಸಹ ವಚನಶಾಸ್ತ್ರವನ್ನು ಅಭ್ಯಾಸ ಮಾಡಿ ಸಂಘಗಳನ್ನು
ಸ್ಥಾಪಿಸಿ ಹೆಣ್ಣು ಮಕ್ಕಳಿಗೆ ಯೋಗ್ಯ ಶಿಕ್ಷಣವನ್ನು ಕೊಡುತ್ತಾ ಬರ
ಬೇಕು. ಅವರ ಸ್ಥಾನಮಾನಗಳನ್ನು ಉತ್ಸಾಹದಿಂದ ದುಡಿದು ಪಡೆಯ
ಬೇಕು. ಅಂತೆಯೇ ಮಹನೀಯರ ಪ್ರೋತ್ಸಾಹವೂ ಅವರಿಗಾಗಿಯೇ
ಮೀಸಲಾಗಿರಬೇಕು. ಅಂದು "ಸತಿಪತಿಗಳೊಂದಾದ ಭಕ್ತಿ ಹಿತವಪ್ಪುದು
ಶಿವಂಗೆ" ಅಲ್ಲವೆ! "ಯದ್ಯದಾಚರತಿ ಶ್ರೇಷ್ಠಃ ತತ್ತದೇವೇತರೋ ಜನಾಃ।
ಸಯತ್ಪ್ರಮಾಣಂ ಕುರುತೆಲೋಕಸ್ತದನುವರ್ತತಿ" ಎಂಬಂತೆ ದೊಡ್ಡವರು
ಆಚರಿಸುವ ಸತ್ಕಾರ್ಯವನ್ನು ಕಿರಿಯವರೂ ಆಚರಿಸುತ್ತಾರಷ್ಟೆ. ಹಾಗೆಯೇ
ಇಂದಿನ ಪೀಳಿಗೆಯು ಈ ಸಹವಾಸದಿಂದ ತಾವೂ ಧಾರ್ಮಿಕರಾಗಿ
ಸತ್ಪ್ರಜೆಗಳಾಗಿ ಮುಂದಿನ ತಮ್ಮ ಪೀಳಿಗೆಯನ್ನೂ ಸಹ ಇದೇ ರೀತಿ
ಯಾಗಿ ಮಾಡುತ್ತಾ ಬಂದರೆ ವೀರಶೈವ ಸಮಾಜ ಸರ್ವತೋಮುಖ
ವಾಗಿ ಬೆಳೆಯುತ್ತಾ ಬಂದು ಈ ವಿಶ್ವಧರ್ಮ ಇಡೀ ವಿಶ್ವವನ್ನೇ ಆವ
ರಿಸಿ ಜನತೆಯನ್ನು ಆದರ್ಶಪ್ರಾಯವನ್ನಾಗಿ ಮಾಡುವುದರಲ್ಲಿ ಲೇಶ
ಮಾತ್ರವೂ ಸಂಶಯವಿಲ್ಲ.

ಕಳೆದ ೧೯೪೪ನೇ ಜುಲೈ ತಿಂಗಳ ಶಿವಾನುಭವದಲ್ಲಿ "ಅನ್ನದಾ
ನೀಶ್ವರ ವಿರಕ್ತಮಠ" ಅವರ "ಬಸವ ಸಂದೇಶವನ್ನು ಸಾರುವ ಅಯ್ಯ
ಗಳಾಗಿರಿ" ಎಂಬುವ ಲೇಖವನ್ನು ಓದಿದರೆ ಇದೆಲ್ಲವೂ ಮನಗಾಣುವುದು.
ಬಸವೇಶ್ವರ, ಆತನ ವಚನಗಳು ಜನಜೀವನದಲ್ಲಿ ಎಂಥ ಕಾರ್ಯಗ
ಳನ್ನೆಸಗಿದುವೆಂಬುದಕ್ಕೆ ಅವರ ಎರಡು ಮಾತುಗಳನ್ನು ಉಲ್ಲೇಖಿಸೋಣ.
"ಅಂತಃಕರಣ, ದಯೆ, ಸಹಾನುಭೂತಿ, ಪ್ರೇಮಗಳ ಪ್ರತಿಬಿಂಬವೇ
ಬಸವನು. ಅವನ ವಚನಗಳು,- ಅವನ ಕಾರ್ಯಗಳು ಜನಜೀವನದಲ್ಲಿ
ಎಂಥ ಕ್ರಾಂತಿಯನ್ನು ಮಾಡಿದವೆಂಬುದನ್ನು ನೆನೆಯಿರಿ ಇದು ವರೆಗೆ
ಆಗಿರುವ ತತ್ವಜ್ಞಾನಿಗಳೂ ವಿಚಾರಿಗಳೂ ಅನುಭಾವಿಗಳೂ ಬಸವನಿ

ಗಿಂತ ಹೆಚ್ಚಿನ ತತ್ತ್ವವಿಚಾರ ಅನುಭಾವಗಳನ್ನು ಜಗದ ದುಂದೆ ಇಟ್ಟಿಲ್ಲ. ಬಸವನ ಶೀಲ ಬಲಕ್ಕಿಂತ ಹೆಚ್ಚಿನ ಶೀಲವಿನ್ನೂ ಜಗದಲ್ಲಿ ತೋರಿಲ್ಲ. ಬುದ್ಧ, ಬಸವ ಈ ಎರಡು ಸಾಮಾಜಿಕ ನಭೋಮಂಡಲದಲ್ಲಿ ಜಾಜ್ವಲ್ಯಮಾನ ನಕ್ಷತ್ರಗಳು. ಅವರಿಬ್ಬರ ಹೊರತು ಸಾಮಾಜಿಕ ಕ್ರಾಂತಿಯನ್ನು ಇದುವರೆಗೆ ಯಾರೂ ಮಾಡಿಲ್ಲ.

ಅಂತು ಮಹಾತ್ಮಾ ಬಸವೇಶ್ವರನು ಉದಾತ್ತ ತತ್ತ್ವವನ್ನು ನುಡಿದು, ನುಡಿದಂತೆ ನಡೆದು ಆತ್ಮಕಲ್ಯಾಣ ಮತ್ತು ಲೋಕಕಲ್ಯಾಣವನ್ನು ಪಡೆದು ಅಂದರೆ ತಾನೂ ಉದ್ಧಾರನಾಗಿ ಜನತೆಯನ್ನೂ ಉದ್ಧಾರ ಮಾಡಿ ಅಮರನಾದ "ಜಯ ಬೋಲೋ ಆತ್ಮಕಲ್ಯಾಣ ಲೋಕಕಲ್ಯಾಣ. ಉಭಯ ಕಲ್ಯಾಣಕಾರಣ ಮಹಾತ್ಮಾ ಬಸವೇಶ್ವರ"

---

# ತೇರದಾಳದ "ಪ್ರಭುದೇವರು."

## ಮಧ್ಯಕಾಲದ ಮಹಾಪುರುಷರು.

### "ವೀರವಸಂತರಾಯನು" ಇವರ ಶಿಷ್ಯನಾಗಿರಬಹುದೇ?

(ಲೇ:— ಮಧುರಚೆನ್ನ ಹಲಸಂಗಿ.)

---

ಕೊಡೇಕಲ್ಲಿನ ಶ್ರೀ ಬಸವೇಶ್ವರರು ಹಾಗೂ ಸಾಲೋಟಗಿಯ ಶ್ರೀ ಶಿವಯೋಗೀಶ್ವರರು ಮಧ್ಯಕಾಲದ (ವಿಜಯನಗರದ ಅರಸರ ಕಾಲದ ಹಿಂದುಮುಂದಿನ) ಮಹಾಪುರುಷರೆಂದೂ, ಅವರನ್ನು ಕಲ್ಯಾಣದ ಶ್ರೀ ಬಸವೇಶ್ವರ ಹಾಗೂ ಶ್ರೀ ಚೆನ್ನಬಸವೇಶ್ವರರ ಪುನರವತಾರವೆಂದೂ ಆ ಕಾಲದ ಜನರ ಭಾವನೆಯಿದ್ದಿತೆಂಬ ವಿಷಯವನ್ನೂ ನಾನು ಇದೇ ಜುಲೈ ತಿಂಗಳ "ಶಿವಾನುಭವ" ಪತ್ರಿಕೆಯಲ್ಲಿ ಒಂದು ಲೇಖನವನ್ನು ಬರೆದಿದ್ದು, ಶ್ರೀ ಅಲ್ಲಮಪ್ರಭುದೇವರ ಪುನರವತಾರವೆಂದು ನಂಬಲಾದ ಒಬ್ಬ ಮಹಾಪುರುಷರು ಆ ಮಧ್ಯಕಾಲದಲ್ಲಿ ಕನ್ನಡ ನಾಡಿನಲ್ಲಿ ಎಲ್ಲಿಯಾದರೂ ಬಂದಿ

ರಲಾರರೇ? ಹಾಗಿದ್ದರೆ ತೇರದಾಳದ ಪ್ರಭುದೇವರು ಅವರೇ ಆಗಿರೆ ಬಹುದೇ? ಎಂಬ ಒಂದು ಊಹೆಯನ್ನು ನನ್ನ ಅದೇ ಲೇಖನದ ಕೊನೆಯಲ್ಲಿ ಉಲ್ಲೇಖಿಸಿರುವೆನು.

ಇದೀಗ ನನಗೆ ಈ ವಿಷಯದಲ್ಲಿ ಹೆಚ್ಚಿನ ಸಂಗತಿಗಳು ತಿಳಿದು ಬಂದದ್ದರಿಂದ ಆ ಬಗೆಗೆ ಒಂದೆರಡು ಮಾತುಗಳನ್ನು ಇದರಡಿಯಲ್ಲಿ ಬರೆಯುವೆನು.

ವಿರಕ್ತಮಠಗಳ ಇತಿಹಾಸ ಗ್ರಂಥವಾಗಿರುವ “ನಿರಂಜನ ವಂಶ ರತ್ನಾಕರ”ದಲ್ಲಿ ಹೀಗೆ ಹೇಳಲಾಗಿದೆಯಂತೆಃ—

“ಆದಿ ಅಲ್ಲಮಪ್ರಭುಗಳ ತರುವಾಯ ಹನ್ನೆರಡನೆಯ ಪಟ್ಟದ ಸ್ವಾಮಿಗಳು ಶ್ರೀ ಬಸವಪ್ರಭುದೇವರು. ಇವರು ಪಟ್ಟವೇರಿದ ಅನಂತರ ಕೆಳದೀ ದೇಶಕ್ಕೆ ಬಂದು ಅಲ್ಲಿ ಕೆಲಕಾಲವಿದ್ದು ಅಲ್ಲಿಯ ಜನರಿಗೆ ಜ್ಞಾನೋಪದೇಶವನ್ನು ಮಾಡುತ್ತ ಅನೇಕ ಮಹಿಮೆಗಳನ್ನು ತೋರಿಸಿದರು. ಅಲ್ಲಿಂದ ಹಿರೇಸೂರು ಕಿರೇಸೂರು (ಹುಬ್ಬಳ್ಳಿಯ ಹತ್ತಿರ) ಗ್ರಾಮಗಳಿಗೆ ಬಂದು ಅಲ್ಲಿ ತಮ್ಮ ಕುರುಹುಗಳನ್ನಿಟ್ಟು, ಹುಕ್ಕೇರಿ ಸೀಮೆಗೆ ಬಂದು ಅಲ್ಲಿ ಜೈನಮತಸ್ಥರಿಗೆ ಶಿವಮತವನ್ನು ಬೋಧಿಸಿ ತಮ್ಮ ಭಕ್ತರನ್ನು ಮಾಡಿಕೊಂಡರು. ಅಲ್ಲಿಂದ ಹನಗಂಡಿ (ತೇರದಾಳದ ಸಮೀಪ) ಎಂಬ ಗ್ರಾಮಕ್ಕೆ ಬಂದು ಅಲ್ಲಿಯೇ ನಿರ್ಬಯಲಾದರು. ಆ ಸಮಯದಲ್ಲಿ ಅಲ್ಲಿಯ ಭಕ್ತರ ಇಚ್ಛೆಯ ಮೇರೆಗೆ ತಮ್ಮ ಕಮಂಡಲುವಾದ ಮಗಿಯನ್ನೂ, ಹಾವುಗೆಯನ್ನೂ, ಬೆತ್ತವನ್ನೂ ತಮ್ಮ ಕುರುಹಾಗಿ ಇಟ್ಟರು. ಆ ಸ್ಥಳದಲ್ಲಿ ಭಕ್ತರು ಒಂದು ಮಠವನ್ನು ಕಟ್ಟಿಸಿ ಅಲ್ಲಿ ಆ ಮಗಿಯನ್ನೂ, ಬೆತ್ತ ಹಾವುಗೆಗಳನ್ನೂ ಇಟ್ಟು ಈಗಲೂ ಪೂಜಿಸುತ್ತಿರುವರು.”

ಅಲ್ಲದೆ ಈ ಸ್ವಾಮಿಗಳು ತೇರದಾಳಕ್ಕೆ ಬರುವಾಗ ಅವರ ಸಂಗಡ ಅವರ ಮುಖ್ಯ ಶಿಷ್ಯನಾದ ಆದಿಲಿಂಗೇಶ ಎಂಬವರೂ, ಕರಿಬಸವದೇಶಿಕೇಂದ್ರ ಹಾಗೂ ಚೆನ್ನಪ್ಪದೇವರೆಂಬ ಭಕ್ತರೀರ್ವರೂ ಬಂದಿದ್ದರಂತೆ.

ಬಸವಪ್ರಭುದೇವರು ತಾವು ನಿರ್ಬಯಲಾಗುವ ಸಮಯದಲ್ಲಿ ಕರಿಬಸವದೇಶಿಕೇಂದ್ರ ಹಾಗೂ ಚೆನ್ನಪ್ಪದೇವರೆಂಬ ಉಭಯಭಕ್ತರನ್ನು ತಮ್ಮ ಹತ್ತಿರ ಕರೆದು ಅವರಲ್ಲಿ ಕರಿಬಸವದೇಶಿಕೇಂದ್ರನಿಗೆ ಚೆನ್ನಪ್ಪನ ಮಗಳ ಪಾಣಿಗ್ರಹಣ ಮಾಡಿಸಿ ನೀನು ಗೃಹಸ್ಥಾಶ್ರಮಿಯಾಗಿ ಇಲ್ಲಿಯೇ

ಇರು, ಎಂದು ಬೋಧಿಸಿದರು. ಆ ಮೇಲೆ ಚೆನ್ನಪ್ಪನನ್ನು ಕರೆದು ನಿನ
ಗೇನು ಬೇಕೆಂದು ಕೇಳಲು, ಅದಕ್ಕಾತನು 'ಸ್ವಾಮಿ, ನನಗೇನೂ ಬೇಡ.
ನನಗೂ ನನ್ನ ಮುಂದಿನ ಸಂತತಿಯುವರಿಗೂ ಜನ್ಮಜನ್ಮಾಂತರದಲ್ಲಿ ನಿನ್ನ
ಪಾದಸೇವೆಯೇ ಲಭಿಸಲಿ' ಎಂದು ಪ್ರಾರ್ಥಿಸಿದನು. ಅದಕ್ಕೆ ಸ್ವಾಮಿ
ಗಳು ಚೆನ್ನಪ್ಪನ ಇಬ್ಬರು ಗಂಡು ಮಕ್ಕಳು ಹತ್ತರ ಕರೆದು ಅವರ
ಮಸ್ತಕದ ಮೇಲೆ ಹಸ್ತವನ್ನಿಟ್ಟು 'ನಿಮ್ಮ ಹಾಗೂ ನಿಮ್ಮ ಸಂತತಿಯು
ವರ ಕಡೆಯಿಂದಲೇ ಸದಾ ನನ್ನ ಪಾದಸೇವೆ ನಡೆಯಲಿ' ಎಂದು ಆಶೀ
ರ್ವದಿಸಿದರಂತೆ.

ಒಂಟಿಮುರಿಯ ದೇಸಾಯರೂ ಹನಗಂಡಿಯ ದೇಸಾಯರೂ ಈ
ದೇವಸ್ಥಾನದ ಪರಮಭಕ್ತರು. ಒಂಟಿಮುರಿ ದೇಸಾಯರ ಮೂಲಪುರುಷ
"ಬಸವಂತರಾಯ"ನು ಈ ಸ್ವಾಮಿಗಳ ಕೃಪೆಯಿಂದ ಜನ್ಮಿಸಿದವನು.
ಈತನ ಬಗೆಗೆ ಲೇಖದ ಕೊನೆಯಲ್ಲಿ ಒಂದು ಮಹತ್ವದ ವಿಚಾರವನ್ನು
ಮಂಡಿಸಲಿದ್ದೇನೆ. ಸಂಶೋಧಕರು ಅತ್ತ ಗಮನಕೊಡಬೇಕಾಗಿ ಬಿನ್ನವಿ
ಸುವೆ.

ಆದಿಅಲ್ಲಮಪ್ರಭುದೇವರಿಂದ ಹನ್ನೆರಡನೆಯ ಪಟ್ಟದವರಾದ ಮೇಲಾ
ಣಿಸಿದ ಶ್ರೀ ಬಸವಪ್ರಭುಸ್ವಾಮಿಗಳ ಮಹಿಮೆಯನ್ನು ಮಗಿಯಪ್ರಭು,
ಗುರುಬಸವ ಕವಿ, ಚೆನ್ನ ಶ್ರೀಪ್ರಭು ಎಂಬ ಮೂವರು ಕವಿಗಳು ಅನೇಕ
ಹಾಡುಗಳಿಂದ ಬಣ್ಣಿಸಿರುವರು. ಅವುಗಳಲ್ಲಿ ಶ್ರೀ ಆದಿಅಲ್ಲಮಪ್ರಭುವಿಗೂ
ಚರಿತ್ರನಾಯಕರಾದ ಶ್ರೀ ಬಸವಪ್ರಭು ಸ್ವಾಮಿಗಳಿಗೂ ಅಭೇದ ಸಂಬಂಧ
ವನ್ನು ಭಾವಿಸಿ ಸ್ತುತಿಸಲಾಗಿದೆಯಂತೆ. ಉದಾಹರಣಾರ್ಥವಾಗಿ—"ಜೋ
ಜೋ ಎನ್ನಿ ಅಸಮ ಅಲ್ಲಮಗೆ। ಜೋ ಜೋ ಎನ್ನಿ ಬಸವ ಪ್ರಭುವಿಗೆ॥"

ಇದರ ಮೇಲಿಂದ ಮೇಲ್ಕಾಣಿಸಿದ ತೇರದಾಳದ ಶ್ರೀ ಬಸವಪ್ರಭು
ದೇವ ಸ್ವಾಮಿಗಳನ್ನು ಕಲ್ಯಾಣಪುರದ ಶ್ರೀ ಆದಿಅಲ್ಲಮಪ್ರಭುದೇವರ ಪುನ
ರವತಾರವೆಂದು ಆ ಕಾಲದ ಅವರ ಭಕ್ತರು ತಿಳಿದುಕೊಂಡಿದ್ದರೆಂಬುದ
ರಲ್ಲಿ ಎಳ್ಳಷ್ಟೂ ಸಂಶಯವಿಲ್ಲ.

ಈ ಸ್ವಾಮಿವರ್ಯರು ವಿಜಯನಗರದವರ ಕಾಲದಲ್ಲಿ ಅತ್ಯಂತ
ಪ್ರಖ್ಯಾತರಾಗಿದ್ದ ಶ್ರೀ ತೋಂಟದಸಿದ್ಧಲಿಂಗಯತಿವರರ ಪೂರ್ವಪರಂಪರೆ
ಯೊಳಗಿನವರೊಬ್ಬರಂತೆ. ತೋಂಟದ ಸಿದ್ಧಲಿಂಗಯತಿವರರೆಂದರೆ ಕಲ್ಯಾ

ಣದ ಶಿವಶರಣರ ಮಹಾಸಂಭ್ರಮದ ಅನಂತರ ವಿಜಯನಗರದವರ ಕಾಲದಲ್ಲಿ ೧೦೧ ಜನ ವಿರಕ್ತರ ಮಹಾ ಆಂದೋಲನದ ಮೂಲಪುರುಷ ರಾಗಿ ಪುನಃ ಶರಣಸಾಮ್ರಾಜ್ಯವನ್ನು ನಾಡಿನಲ್ಲಿ ಮೆರೆಯಿಸಿದವರೆಂಬ ಮಾತು ಸರ್ವ ಜನರಿಗೆ ತಿಳಿದ ವಿಷಯವು. ಅವರಿಗಿಂತ ಸ್ವಲ್ಪ ಪೂರ್ವ ದಲ್ಲಿಯೇ ಆ ಕಾರ್ಯವನ್ನು ಪ್ರಸ್ತುತ ಚರಿತ್ರನಾಯಕರಾದ ಶ್ರೀ ಬಸವ ಪ್ರಭುದೇವ ಸ್ವಾಮಿಗಳು ಗದ್ದಿಗೆಗೊಳಿಸಿದರೆಂದು ಹೇಳಿದರೆ ತಪ್ಪಾಗದು. ೧೨ನೆಯ ಶತಮಾನದ ಕೊನೆಯಲ್ಲಿ ಕೆಲಕಾಲದ ಮಟ್ಟಿಗೆ ಅಡಗಿಹೋದ ಶಿವಶರಣ ಸಾಮ್ರಾಜ್ಯವು ವಿಜಯನಗರದ ಕಾಲದಲ್ಲಿ ಪುನಃ ತಲೆಯೆ ತ್ತುವ ಸುಮಾರಿಗೆ ಅನೇಕಾನೇಕ ಮಹಾಪುರುಷರು ಉದಯಿಸಿರಬೇ ಕೆಂಬುದರಲ್ಲಿ ಎಳ್ಳಷ್ಟೂ ಸಂಶಯವಿಲ್ಲ, ಪ್ರಸ್ತುತ ಚರಿತ್ರನಾಯಕರಾದ ಶ್ರೀ ಬಸವಪ್ರಭುಸ್ವಾಮಿಗಳು ಅಂಥ ಮಹಾಪುರುಷರಲ್ಲೊಬ್ಬರು.

ಕೊಡೇಕಲ್ಲು ಹಾಗೂ ಸಾಲೋಟಗಿಯ ಮಹಾಪುರುಷರು ಹಿಂದೂ ಮುಸ್ಲಿಂ ಐಕ್ಯವನ್ನು ಸಾಧಿಸಿದರೆ, ಈ ಬಸವಪ್ರಭುದೇವರು ಶಿವಮತ ವನ್ನು ಪುನರುಜ್ಜೀವಿಸಲಿಕ್ಕೆ ಪ್ರಯತ್ನಿಸಿದವರು. ಒಬ್ಬೊಬ್ಬ ಮಹಾ ಪುರುಷರ ಕಾರ್ಯ ಒಂದೊಂದು ಪ್ರಕಾರ.

ತೇರದಾಳದ ಮಹಾಪುರುಷರ ಚರಿತ್ರೆಯಲ್ಲಿಯೂ ಸಾಲೋಟಗಿಯ ಮಹಾಪುರುಷರ ಚರಿತ್ರೆಯಲ್ಲಿಯೂ ಕೆಲವು ಸಾಮ್ಯಗಳಿವೆ. ಅವು ಯಾವವೆಂದರೆಃ—

(೧) ಸಾಲೋಟಗಿಯ ಮಹಾಪುರುಷರೂ ತಾವು ನಿರ್ಬಯಲಾ ಗುವ ಸಮಯದಲ್ಲಿ ತಮ್ಮ ಶಿಷ್ಯಳೊಬ್ಬಳ ಮಕ್ಕಳಿಬ್ಬರಿಗೆ "ಹಿರಿಯಯ್ಯ" "ಚಿಕ್ಕಯ್ಯ" ಎಂಬ ಹೆಸರನ್ನಿಟ್ಟು ಅವರ ಸಂತತಿಯವರಿಂದಲೇ ಸದಾ ಕಾಲ ತಮ್ಮ ಪಾದಸೇವೆ ನಡೆಯಬೇಕೆಂದು ಆಶೀರ್ವದಿಸಿರುವರು. ಅದು ಇಂದಿಗೂ ನಡೆದುಬಂದಿದೆ.

(೨) ತೇರದಾಳದ ಮಹಾಪುರುಷರ ಮಹಿಮೆಯನ್ನು ಅವರ ಶಿಷ್ಯರಾದ ಮಗಿಯನರೇಂದ್ರಾದಿಗಳು ಹಾಡುಗಳಿಂದ ಬಣ್ಣಿಸಿರುವಂತೆ ಸಾಲೋಟಗಿಯ ಮಹಾಪುರುಷರ ಶಿಷ್ಯನಾದ ಗಂಗಾಧರ ಕವಿಯೂ

ಅನೇಕ ಹಾಡುಗಳಿಂದ ಬಣ್ಣಿಸಿದ್ದಾನೆ. ಆ ಹಾಡುಗಳಲ್ಲಿ ಆ ಮಹಾಪುರು ಷರಿಗೆ "ಚೆನ್ನಬಸವಾ, ಚೆನ್ನಬಸವಾ" ಎಂದು ಅನೇಕ ಕಡೆಗೆ ಸಂಬೋ ಧಿಸಲಾಗಿದೆ.

(೩) ತೇರದಾಳದ ಮಹಾಪುರುಷರು ತಮ್ಮ ಶಿಷ್ಯನಾದ ಕರಿ ಬಸವದೇಶಿಕೇಂದ್ರನಿಗೆ ಲಗ್ನ ಮಾಡಿ ಗೃಹಸ್ಥಾಶ್ರಮದಲ್ಲಿಟ್ಟಂತೆ ಸಾಲೊ ಟಗಿಯ ಮಹಾಪುರುಷರೂ ತಮ್ಮ ಭಕ್ತರಾದ "ಹರಿಯಯ್ಯ" "ಚಿಕ್ಕಯ್ಯ" ಎಂಬವರಿಗೆ ಗೃಹಸ್ಥಾಶ್ರಮಿಗಳಾಗಿದ್ದುಕೊಂಡು ಪಟ್ಟವನ್ನು ನಡಿಸಲು ಆಜ್ಞೆಮಾಡಿ ಈ ಬಗೆಯ ಪದ್ಧತಿಯು ಇದೇ ಮೊದಲಿನದೆಂದೂ ಇದನ್ನೇ ಶ್ರೀ ಬಸವೇಶ್ವರಾದಿ ಶಿವಶರಣರು ಆಚರಿಸಿ ತೋರಿಸಿದರೆಂದೂ ಅದ್ದ ರಿಂದಲೇ ಇದಕ್ಕೆ "ಬುಡಪಟ್ಟ" (ಆದಿಪಟ್ಟ) ವೆಂದೂ ಅವರು ಹೆಸರ ನ್ನಿಟ್ಟಿರುವರು.

ಹೀಗೆ ಎಲ್ಲ ಮಹಾಪುರುಷರೂ ಕಾಲೋಚಿತವಾಗಿ ಒಂದಿಲ್ಲೊಂದು ಹೊಸ ಪದ್ಧತಿಗಳನ್ನು ಬಳಕೆಯಲ್ಲಿ ತಂದಿರುವರು. ಹಾಗೂ ಪುರಾತನ ಪುನರುದ್ಧಾರ ಮಾಡಿರುವರೆಂಬುದಂತೂ ಸರಿಯೇ.

ಈ ರೀತಿಯಿಂದ ಕರ್ನಾಟಕ ಮಧ್ಯಕಾಲದ ಇತಿಹಾಸವು ಅತ್ಯಂತ ಮಹತ್ವದ್ದಾಗಿದೆ. ಅದು ನಿರ್ಜೀವ ಕಳೇಬರದಲ್ಲಿ ಜೀವತುಂಬಿದ ಕಾಲ. ಅಳಿದುಹೋಗಲಿದ್ದುದನ್ನು ಉಳಿಸಿಕೊಂಡ ಕಾಲ.

ಬಲ್ಲವರು ಇದಕ್ಕಿಂತ ಹೆಚ್ಚಿಗೆ ಶೋಧಮಾಡಲೆಂದು ಬಿನ್ನವಿಸಿ ಕೊಂಡು ನನ್ನೀ ಲೇಖವನ್ನು ಮುಗಿಸುವೆ.

ಆದರೆ ತೇರದಾಳ ಈ ವಿಷಯದಲ್ಲಿ ರಾ. ಬ. ಶ್ರೀಮಾನ್ ಹಳ ಕಟ್ಟಿಯವರೂ, ಶ್ರೀಮಾನ್ ಎಂ. ಆರ್. ಶ್ರೀನಿವಾಸಮೂರ್ತಿಯವರೂ ಹಿಂದೆ ಈ ಮೊದಲೇ ಅನೇಕ ಲೇಖನಗಳನ್ನು ಬರೆದು ತೇರದಾಳದ ಮಹಾಪುರುಷರು "ಮಧ್ಯಕಾಲದ ಮಹಾಪುರುಷರೇ" ಎಂಬ ಸಿದ್ಧಾಂ ತಕ್ಕೆ ಬಂದಿದ್ದಾರೆಂತೆ. ನಾನೂ ಅದನ್ನೇ ಅನುಮೋದಿಸುವೆ. ಶ್ರೀ.

ಬುದ್ದಯ್ಯಸ್ವಾಮಿ ಪುರಾಣಿಕ ಮಹಾಶಯರು "ಶ್ರೀ. ಬಸವಪ್ರಭು ಹಾಗೂ ಆದಿ ಶ್ರೀ ಅಲ್ಲಮಪ್ರಭು" ಇವರ ಅಭೇದಸಂಬಂಧದ ಭಕ್ತಿಭಾವದಲ್ಲಡಗಿರುವ ಸತ್ಯವನ್ನು ತಮ್ಮ ಭಕ್ತಿಪರವಶತೆಯ ಮೂಲಕ ತಿಳಿದುಕೊಳ್ಳಲಾರದ್ದರಿಂದ "ಇವರೇ ಆದಿ ಅಲ್ಲಮ ಪ್ರಭುಗಳು" ಎಂದು ತಮ್ಮ "ಅನಾದಿ ಅಲ್ಲಮ ಪ್ರಭು." ಎಂಬ ಗ್ರಂಥದಲ್ಲಿ ಸಿದ್ಧ ಮಾಡಲು ಪ್ರಯತ್ನಿಸಿದ್ದಾರೆ. ಆದರೆ ಇವರು "ಮಧ್ಯಕಾಲದ ಮಹಾಪುರುಷರೆಂ"ಬುದೇ ಸರಿ.

"ನಿರಂಜನ ವಂಶರತ್ನಾಕರ"ದಲ್ಲಿ ಹೇಳಲಾಗಿದೆಯೆಂದು ಶ್ರೀ ಬುದ್ಧಯ್ಯ ಪುರಾಣಿಕ ಮಹಾಶಯರು ಉಲ್ಲೇಖಿಸಿರುವ ಒಂದು ಮಹತ್ವದ ವಿಷಯವೇನೆಂದರೆ, ತೇರದಾಳದ ಸ್ವಾಮಿಗಳ ಕೃಪೆಯಿಂದ ಅವರ ಭಕ್ತ ದಂಪತಿಗಳಿಗೆ ಒಬ್ಬ ಮಹತ್ಪುತ್ರನು ಜನಿಸಿದನೆಂದೂ, ಆತನಿಗೆ ಬಸವಂತರಾಯನೆಂದೂ, ಹೆಸರಿಡಲಾಯಿತೆಂದೂ, ಆತನು ಮುಂದೆ ಘನತೆಗೇರಿ ಚಿಕ್ಕೋಡಿ ನಾಡಿಗೆ ದೊಡ್ಡ ಜಹಾಗೀರದಾರನಾದನೆಂದೂ ಆತನ ವಂಶದವರೇ ಮುಂದೆ ವಂಟಮುರಿಯನ್ನು ಕಟ್ಟಿಸಿದರೆಂದೂ ಹೇಳಲಾಗಿದೆ. "ವೀರವಸಂತ"ರಾಯನು ಕ್ರಿ. ಶ. ೧೫೮೮ರಲ್ಲಿ ಬರುವನೆಂದು ಶ್ರೀ ಚೆನ್ನಬಸವ ಪುರಾಣದಲ್ಲಿ ಹೇಳಲ್ಪಟ್ಟವನು ಈ "ಬಸವಂತರಾಯ"ನೇ ಆಗಿರಬಹುದೇ ? ಈ ವಿಷಯವನ್ನು ಶೋಧಕರು ವಿಚಾರಮಾಡಬೇಕು.

---

# ಲಿಂಗ ಸ್ಥಲಾನುಗತ

## ಗುರು ಲಿಂಗ ಜಂಗಮವೂ ಪ್ರಸಾದ ಪಾದೋದಕವೂ.

(ಲೇಖಕಃ— ಶ್ರೀಯುತ ಬಸವಪ್ಪ ಚನ್ನಪ್ಪ ಪಟ್ಟೇದ ಮು. ವಂಟಮುರಿ)

ಗುರು ಲಿಂಗ ಜಂಗಮ ಪ್ರಸಾದ ಪಾದೋದಕ ಎಂಬೀ ಶಬ್ದಗಳನ್ನು ಎಲ್ಲರೂ ಕೇಳಿರುವರು. ಆದರೂ ಇವುಗಳ ಸರಿಯಾದ ಅರ್ಥದ ಕಲ್ಪನೆಯು ಬಹು ಜನರಿಗೆ ಇರುವದಿಲ್ಲ. ಅದನ್ನು ಲಕ್ಷ್ಯಕ್ಕೆ ತಂದು ಕೊಡುವದೇ ಈ ಲೇಖದ ಉದ್ದೇಶವಾಗಿದೆ. ಇದು ನನ್ನ ಹಿಂದಣ ಒಂದು ಲೇಖದ ಪೂರಕವೇ ಹೊರತು, ಸ್ವತಂತ್ರವಾದುದಲ್ಲವೆಂದು ಸೂಚಿಸುವೆನು.

| ವಿವರಣ | ಗುರು | ಲಿಂಗ | ಜಂಗಮ |
|---|---|---|---|
| ಗುರು (ಸ್ವಾಭಾವಿಕಸ್ಥಿತಿ) | ತನು | ಮನ | ಜ್ಞಾನ |
| ಲಿಂಗ (ಸುಧಾರಣೆ) | ಅರಿವು (ಮರವಿನ ಅಳಿವು) | ಪ್ರಾಣ | ಅನುಭವ |
| ಜಂಗಮ (ಪರಿಣಾಮ) | ಆಚಾರ | ಸುಜ್ಞಾನ | ತನ್ಮಯತೆ (ಸ್ಥಲೈಕ್ಯ) |

ಇಲ್ಲಿ ಎಡಮಗ್ಗಲಿಗೆ ಗೆರೆಮನೆ ನೋಡಿರಿ. ಅದರಲ್ಲಿ ಗುರು ಲಿಂಗ ಜಂಗಮಗಳನ್ನು ಮೂರು ತೆರನಾಗಿ ಚಿತ್ರಿಸಿದೆ. ಇವೇ ಅವುಗಳ ನಿಜಸ್ವರೂಪವನ್ನು ತೋರಿಸುತ್ತವೆ.

ಇನ್ನು ವ್ಯವಹಾರದಲ್ಲಿ, ಕ್ರಿಯಾ. ರೂಪ, ಗುರು, ಲಿಂಗ, ಜಂಗಮಗಳು ಬೇರೆ ಇದ್ದಂತೆ ಸಕೃದ್ದರ್ಶನಕ್ಕೆ ತೋರುತ್ತದೆ. ಆದರೆ ಅವನ್ನು ಪರಿಶೀಲನಪೂರ್ವಕವಾಗಿ ವಿಚಾರಿಸಿದರೆ, ಕೊನೆಗೆ ಅವುಗಳ ಪರ್ಯವಸಾನವಾದರೂ ಮೇಲೆ ತೋರಿಸಿದ ತೆರದಲ್ಲಿಯೇ ಆಗಿ ಬಿಡುವದು. ಆ ಬಗ್ಗೆ ತುಸು ಹೆಚ್ಚಿಗೆ ಸ್ಪಷ್ಟೀಕರಿಸುವದು ಉಚಿತವಾಗಿದೆ. ನಮಗೆ ಪೂಜಿಸಲು ಕರದಲ್ಲಿ ಲಿಂಗ ಕೊಡುವ ಗುರುವು ನರರೂಪಿಯಾಗಿರುವನು. ಜಂಗಮರೆನಿಸುವ ವಿರಕ್ತರಾದರೂ ಮನುಷ್ಯರೇ ಇರುವರು.

ಕರಗಳ ಪಡಿಸಿದ ಲಿಂಗವಾದರೂ ಶಿಲಾರೂಪಿ ಇರುವದು. ಇವೇ ಕ್ರಿಯಾ ರೂಪ ಗುರು ಲಿಂಗ ಜಂಗಮಗಳೆನಿಸುವವು.

## ಕ್ರಿಯಾಗುರು.

ಕ್ರಿಯಾಗುರುವು ದೀಕ್ಷಾಗುರು, ಶಿಕ್ಷಾಗುರು, ಜ್ಞಾನಗುರು ಎಂದು ಮೂರು ವಿಧವಾಗಿರುವದುಂಟು. ಅವರು ಮಾಡುವ ಕಾರ್ಯಗಳ ಮೇಲಿಂದ ಈ ಮೂರೂ ಹೆಸರುಗಳು ಬಿದ್ದಿರುವವೇ ಹೊರತು, ಅವುಗಳಲ್ಲೇನೂ ವಿಶೇಷವಿಲ್ಲ. ಒಬ್ಬನೇ ಗುರುವು ಈ ಮೂರೂ ಕಾರ್ಯಗಳನ್ನು ಮಾಡಲು ಅಡ್ಡಿ ಇಲ್ಲ. ಅಷ್ಟೇ ಅಲ್ಲ, ಹಾಗಿರುವದೇ ವಾಸ್ತವವು. ಇಂತಹ ಯೋಗ್ಯತೆಯ ಮನುಷ್ಯನು ಸಾಮಾನ್ಯನಲ್ಲ. ಅವನು ಕಣ್ಣಿಗೆ ಎಲ್ಲರಂತೆ ಮನುಷ್ಯಾಕಾರನಾಗಿ ಕಂಡರೂ, ಅವನ ಆಚರಣೆಯೂ ಯೋಗ್ಯತೆಯೂ ಜ್ಞಾನ ವೈಭವವೂ ಅಪರಿಮಿತವಾಗಿರುವವು. ಷಟ್‌ಸ್ಥಲಗಳಲ್ಲಿ ಹೇಳಿದ ಶರಣನಿಗೇ ಈ ವಿಧದ ಗೌರವ ಉಂಟಾಗುವದಲ್ಲದೆ ಅಂತಿಂತಹ ನರಸಾಮಾನ್ಯರಿಗೆ ಗುರುತ್ವವು ಲಭಿಸಲಾರದು. ಸಿದ್ಧಾಂತಶಿಖಾಮಣಿ ಗ್ರಂಥದಲ್ಲಿ ಗುರುವಿನ ಯೋಗ್ಯತೆಯನ್ನು ಸರಸಾಗಿ ವರ್ಣಿಸಿದ್ದಾರೆ. ಗುರುವನ್ನು ವರ್ಣಿಸುವ ಅನೇಕ ಶ್ಲೋಕಗಳೂ ಪದ್ಯಗಳೂ ಉಂಟು. ಅವನ್ನು ನೋಡಿದರೆ ಗುರುವು ಸಾಕ್ಷಾತ್ ಶಿವನೆಂದೇ ಭಾವಿಸಲ್ಪಟ್ಟಿರುವನೆಂಬುದು ಮನವರಿಕೆಯಾಗುವದು. ಇಲ್ಲಿ ಉದಾಹರಣೆಗಾಗಿ ಒಂದೆರಡು ಶ್ಲೋಕಗಳನ್ನು ಕೊಡುವೆನು.

(೧) गुरुदेवो महादेवो । गुरुदेवः सदाशिवः ॥
गुरुदेवात् परं नास्ति । तस्मै श्री गुरवेनमः ॥

(೨) आनंदमानंद करप्रसन्नम् । ज्ञानस्वरुपम् निजबोधयुक्तम् ॥
योगींद्रमिड्यं भवरोग वैद्यम् । श्रीमद्गुरुं नित्यमहं नमामि ॥

ಹೀಗೆ ವರ್ಣಿಸಲ್ಪಡುವ ಗುರುವಾಗಲಿಕ್ಕೆ ಅಂತಿಂತಹರಿಗೆ ಬರುವುದು ಶಕ್ಯವೇ? ಈಗ ಗುರುವರ್ಗದವರೆಂದು ತಮ್ಮದೊಂದು ಜಾತಿಯನ್ನೇ ಮಾಡಿ ಇಟ್ಟುಕೊಂಡಂಥ ಅಯ್ಯಗಳ ಗುಂಪನ್ನು ಮನದಂದು ವಿಚಾರಿಸಿದರೆ, ಅವರಲ್ಲಿ ತೀರ ತುಸು ಜನರನ್ನು ಬಿಟ್ಟು ಉಳಿದವರೆಲ್ಲರೂ ಪರಿತ್ಯಕ್ತರಾಗಿರುವರೆಂಬುದು ಯಾರಿಗೆ ಕಾಣದು? ಇಂತಹ

ಗುರುಗಳು ಬರೇ ಸ್ವಾರ್ಥಿಗಳೂ ಶಿಷ್ಯ ಹೃತ್ತಾಪ ಹಾರಕರಲ್ಲಿ ವಿತ್ತಾಪಹಾರಕರೂ ಆಗಿರುವರೆಂಬುದು ಅದೇ ಗ್ರಂಥದಲ್ಲಿ ಕಂಡುಬರುವದು. ಸರ್ವಜ್ಞಮೂರ್ತಿಯು– "ಬಳ್ಳಿಗುರುಡರು ಕೂಡಿ ಹಳ್ಳವನು ಬಿದ್ದಂತೆ, ಒಳ್ಳೆಯ ಗುರುವಿನುಪದೇಶವಿಲ್ಲದಿರೆ ಎಲ್ಲಿಯದು ಮುಕ್ತಿ ಸರ್ವಜ್ಞ" ಎಂದು ಹೇಳಿರುವನು. ಆದುದರಿಂದ ಗುರುವನ್ನು ಆರಿಸುವಾಗ ಬಹು ಎಚ್ಚರಪಡಬೇಕು. ಮನೆ ಗುರುಗಳೆಂದು ಹೇಳುತ್ತ ಬರುವ ಡಂಭಾಚಾರಿಗಳಂತೂ, ಬಹು ನಿರುಪಯುಕ್ತರೂ ಪರಿತ್ಯಕ್ತರೂ ಎಂಬುದು ಎಲ್ಲರ ಅನುಭವ ಸಿದ್ಧವಾದ ಮಾತು. ಮೇಲಿನ ಗೆರೆ ಮನೆಯಲ್ಲಿ ತೋರಿಸಿದಂತೆ ಕ್ರಿಯಾ ಗುರುವು ಪರಿಶುದ್ಧ ಆಚಾರ ಉಳ್ಳವನೂ, ಸುಜ್ಞಾನಿಯೂ, ಸಾತ್ವಿಕನೂ ಆಗಿ, ಜನರಲ್ಲಿ ಪ್ರತಿಷ್ಠಾವಂತನಾಗಿರುವದು ಅವಶ್ಯ.

ಈ ವಿವರಣೆಯಿಂದ ಜಾತಿಯಿಂದೇನೂ ಗುರುತ್ವವುಂಟಾಗುವದಿಲ್ಲ. ಅದು ಆಚಾರ, ಜ್ಞಾನ, ಸದ್ಗುಣ, ಸುನೀತಿವಂತಿಕೆಗಳಿಂದ ಬರುವದೆಂಬುದು ಸ್ಪಷ್ಟವಾಗದಿರದು. ಅಂತಹ ಗುಣವು ಆವ ಲಿಂಗಧಾರಿಯಲ್ಲಿದ್ದರೂ, ಆತನ ಕಾಯಕ ಮುಂತಾದುದನ್ನೇನೂ ನೋಡದೆ, ಅವನು ಗುರುವೆಂದೇ ಭಾವಿಸಿ, ಅವನ ಪ್ರಯೋಜನವನ್ನು ಅವಶ್ಯ ಪಡೆಯಬೇಕು. ಲಿಂಗಧಾರಿಗಳಲ್ಲಿ ಜಾತಿ ಇಲ್ಲ. ಕೇವಲ ಗುಣಕ್ಕೇ ಪ್ರಾಧಾನ್ಯ ಉಂಟು. ಈಗ ಒಂದು ವಿಶಿಷ್ಟಜಾತಿಯವರೆನಿಸುವ ಅಯ್ಯಗಳೇ ಗುರುಗಳೆಂದು ಭಾವಿಸುತ್ತ ಬಂದಿರುವದು ತಪ್ಪು. ಅಯ್ಯ ಎಂಬುದು ಜಾತಿಯಲ್ಲ. ಅದು ಗುಣವಿಶಿಷ್ಟವಾದೊಂದು ಪದವಿ ಇರುವದು. ಬಸವೇಶ್ವರರು ತಮ್ಮ ವಚನದಲ್ಲಿ "......ನಿಮ್ಮ ಸಮ್ಯಕ್ಯರಾದ ಸತ್ಯ ಶರಣರಕಂಡು, ಅವರನು ಅಯ್ಯಾ ಎಂಬೆನು ಕೂಡಲಸಂಗಮದೇವಾ" ಎಂದು ಉದ್ಗಾರಿಸಿರುವರು. ಈಗಿರುವ ಸಿಂಹಾಸನ ಪತಿಗಳೂ, ಪಡದಯ್ಯಗಳೂ, ಚರಂತಿಯಪ್ಪಗಳೂ, ಬಹುಶಃ ದೋಷಾಕರರಾಗಿರುತ್ತಾರೆ. ಅವರಿಂದೇನೂ ಸಮಾಜ ಕಾರ್ಯವಾಗಲಾರದು. ಬರೇ ಸ್ವಾರ್ಥಿಗಳಾಗಿ, ಪುತ್ರವರ್ಗ ಮುಂತಾದ ನೆವ ಹೇಳುತ್ತ ಒಂದಿಲ್ಲೊಂದು ರೀತಿಯಿಂದ ತಮ್ಮ ಸ್ಥಲಗಳು ತಮ್ಮೊಳಗೇ ಉಳಿಯಬೇಕೆಂದು ಯತ್ನಿಸುತ್ತಿರುವರು.

ಗುರು ಶಬ್ದದ ನಿರುಕ್ತವು ಹೀಗಿದೆ. "गुकारं गुणातीतत् । रुपातीतं रुकारम् । गुणातीतम् रुपंच । योदद्यात् सगुरुः स्मृतः ॥" ಇದನ್ನು ನೋಡಿ

ದರೆ ಗುರುವು ಸ್ವತಃ ತಾನು ಗುಣತ್ರಯದಿಂದಲೂ ರೂಪದಿಂದಲೂ ಮುಕ್ತನಾಗಿ ಶಿಷ್ಯನಿಗೆ ಆ ಎರಡೂ ಸ್ಥಿತಿಗಳನ್ನು ಉಂಟುಮಾಡಿಕೊಡ ಬೇಕೆಂಬುದು ಸ್ಪಷ್ಟವದೆ. ಗುಣತ್ರಯವೆಂದರೆ ಸತ್ವ, ರಜಸ್, ತಮ ವೆಂಬ ಮೂರು. ಅವನ್ನೇ ನಾವು ವ್ಯವಹಾರದಲ್ಲಿ ಉತ್ತಮ (ಚಲೋದು) ಮಧ್ಯಮ (ಸಾಧಾರಣ), ಕನಿಷ್ಠ (ಕೆಟ್ಟ) ಎಂದೆನ್ನುವೆವು. ಈ ಮೂರನ್ನು ಪ್ರತಿಯೊಂದು ವಸ್ತುವಿನಲ್ಲಿಯೂ ಸಂಗತಿಯಲ್ಲಿಯೂ ಎಣಿಸುತ್ತೇವೆ. ಈ ರೀತಿಯು ತೀರ ಲಕ್ಷ್ಯಕ್ಕೂ ಬರದೆ ಮರೆತುಹೋಗಬೇಕು. ಅದ ರಂತೆ ರೂಪ ಅಂದರೆ ಆಕಾರ. ಇದು ತನಗೂ ಜಗತ್ತಿಗೂ ಅದರಲ್ಲಿ ರುವ ಎಲ್ಲ ಪದಾರ್ಥಗಳಿಗೂ ಉಂಟು. ಅದು ಕಣ್ಣಿಗೆ ಕಾಣದಂತಾಗಿ ಆ ಎಲ್ಲವನ್ನೂ ಒಂದೇ ಒಂದು ಪರವಸ್ತು (ಲಿಂಗ ಅಥವಾ ಪರಬ್ರಹ್ಮ) ಸ್ವರೂಪದಲ್ಲಿ ಕಾಣಬೇಕು. ಈ ಎರಡೂಗಳಿಂದ ಗುರುವು ಮೊದಲು ತಾನು ಮುಕ್ತನಾಗಿ ಬಳಿಕ ತನ್ನ ಶಿಷ್ಯನನ್ನು ಆ ಸ್ಥಿತಿಗೆ ಮುಟ್ಟಿಸಬೇಕು. ಇಂತಹ ಮಹಾತ್ಮ್ಯವೂ ಪ್ರಭಾವವೂ ಇದ್ದರೆ ಮಾತ್ರ ಅವನು ಗುರು ವೆಂದು ಈ ಶ್ಲೋಕವು ಹೇಳುತ್ತದೆ.

ಕ್ರಿಯಾಗುರುವು ಮನುಷ್ಯರೂಪದಲ್ಲಿರುವನು. ಸರಿ! ಆದರೆ ನಾವು ಆತನ ದೇಹ ಅದರ ವರ್ಣ ಮಾಟ ಇತ್ಯಾದಿಗಳಿಗೇನೂ ಗುರುವೆನ್ನು ವದಿಲ್ಲ. ಗುರುವೆಂದರೆ ಆತನಲ್ಲಿರುವ ಅರಿವು ಅಥವಾ ಜ್ಞಾನವು. ಆದು ದರಿಂದ ಆತನಲ್ಲಿರುವ ಜ್ಞಾನಾಚಾರಾದಿಗಳೇ ಮುಖ್ಯವಾಗಿ ಗುರುವೆನಿ ಸುವವು. ನರಗುರುವಿಗೆ ಮರಣ ವುಂಟು. ಅಷ್ಟರಿಂದ ಆತನ ಜಗದೊ ಳಗಿನ ದೃಶ್ಯ ಅಸ್ತಿತ್ವವು ನಾಶವಾಯಿತೇ ಹೊರತು, ಆತನಲ್ಲಿದ್ದ ಗುರು ವೆನಿಸಿಕೊಂಡಿದ್ದ ವಸ್ತುವಿಗೇನೂ ಭಂಗವಿಲ್ಲ. ಅದು ಅಂದೂ ಇಂದೂ ಮುಂದೂ ತ್ರಿಕಾಲಾಬಾಧಿತವಾದ ವಸ್ತುವು. ಆದಕಾರಣ ತನ್ನ ಕ್ರಿಯಾ ಗುರುವು ದೇಹಬಿಟ್ಟರೂ ಕೂಡ "ತನ್ನ ಗುರು ಸತ್ತನು" ಎಂದು ಯಾರೂ ಮಾನಿಸಕೂಡದು. ದೇಹ ಬಿಟ್ಟವರೆಲ್ಲರೂ ತಮ್ಮ ಜ್ಞಾನ ವನ್ನು ಇನ್ನೊಬ್ಬರಿಗೆ ಕಲಿಸಿಯಾಗಲೀ, ಗ್ರಂಥರೂಪದಿಂದಾಗಲೀ ಕಾಯ್ದಿಟ್ಟೇ ನಿವರ್ತಿಸಿರುವರು. ಹೀಗೆ ಹಿಂದಣವರು ಸಂಪಾದಿಸಿದ ಜ್ಞಾನವೆಲ್ಲ ನಮಗೆ ಗ್ರಂಥರೂಪದಿಂದ ಅನಾಯಾಸವಾಗಿ ದೊರೆಯುವದು. ಆ ಕಾರಣ ಪೂರ್ವಿ ಕರು ನಮಗೆ ಆ ಪುಸ್ತಕಗಳ ಮುಖಾಂತರವಾಗಿ ಗುರುಗಳಾಗುವರೆಂಬುದು

ಸ್ಪಷ್ಟವದೆ. ಜ್ಞಾನಭಾಂಡಾರವೇ ಆ ಗ್ರಂಥಗಳು. ಆದುದರಿಂದ ನಮ್ಮ ಕ್ರಿಯಾಗುರುವು ಇಲ್ಲವಾದರೂ ಈ ಗ್ರಂಥರೂಪ ಗುರುವು ಅಮರನಾಗಿ ರುತ್ತಾನೆ. ಅದರಂತೆಯೇ ಬಲ್ಲವರಾದ ಜ್ಞಾನಿಗಳು ಸಹ ಅಸಂಖ್ಯಾತರಾಗಿ ಈ ಜಗತ್ತಿನಲ್ಲಿ ಯಾವಾಗಲೂ ವಾಸಿಸುತ್ತಿರುವರು. ಅವರೂ ನಮಗೆ ಗುರು ಗಳೆಂದೇ ಭಾವಿಸಬೇಕು. ಹೀಗೆ ಗುರುವು ನಮಗೆ ಸರ್ವಕಾಲವೂ ಕೃಪೆ ಗೈಯ್ಯಲು ಸಿದ್ಧನಿರುವನೆಂದು ನಾವು ಅರಿತಿರಬೇಕು. ಅಂತೆಯೇ ಗುರು ಸ್ತೋತ್ರವನ್ನು ब्रह्मानंदं परमसुखदं केवलं ज्ञानमूर्तिम्........। ಇತ್ಯಾದಿ ಪರಿಪರಿ ಯಿಂದ ವರ್ಣಿಸಿರುವರು. ಗುರುವಿಗೆ ಎಂದೂ ಬಾಧೆ ಇಲ್ಲ. ಗುರುವಿಗೆ ಆಪ ಕುಲ ಜಾತಿ ಮುಂತಾದವುಗಳ ಸಂಬಂಧವೇನೂ ಇರುವದಿಲ್ಲ.

## ಕ್ರಿಯಾ ಲಿಂಗ.

ಲಿಂಗವೆಂದರೆ ಸುಜ್ಞಾನವೆಂದು ಮೇಲಿನ ಗೆರೆಮನೆಯಲ್ಲಿ ಹೇಳಿದೆ. प्रज्ञानं ब्रह्म ” ಎಂದು ವೇದಾಂತವೂ ಹೇಳುತ್ತದೆ. ಆ ಕಾರಣ ಸುಜ್ಞಾನ ಪ್ರಜ್ಞಾನ ಸ್ವರೂಪವು ಒಂದೇ ಇರುವದು. ಅಂತೆಯೇ ಲಿಂಗ ಹಾಗೂ ಬ್ರಹ್ಮ ಶಬ್ದಗಳೆರಡೂ ಏಕಾರ್ಥವಾಗಿರುತ್ತವೆ. ಸಮಾನವು, ಒಂದೇ ಒಂದು. “लिंग रूपं जगत् सर्वं । त्रैलोक्यं सचराचरं ॥ लिंग बाह्यात् परं नास्ति । तस्मात् लिंगं प्रपूजयेत् ॥ ಎಂದು ಆಗಮಗಳೂ ಸಾರಿವೆ. ಇಂತಹ ಲಿಂಕದ ನಿರುಕ್ತವು. ''लीयते गम्यते यत्र । जगदे तत् चराचरं ॥ तदेवं लिंगम्........॥” ಎಂದು ಉಂಟು. ಆದುದರಿಂದ ಜಗತ್ತಿನ ಉತ್ಪತ್ತಿ ಸ್ಥಿತಿ ಲಯಗಳಿಗೆ ಕಾರಣವಾದ ಅನಾದಿ ವಸ್ತುವೇ ಲಿಂಗವು. ಅದನ್ನೇ ಜನರು ದೇವರೆಂದು ಹೇಳುವರು. ಇಂತಹ ಲಿಂಗವು ಮೂರು ತೆರನಾಗಿರುವದು. ಹೊರಗೆ ದೇಹದ ಮೇಲೆ ಧರಿಸಿದುದು ಇಷ್ಟಲಿಂಗವು. ಇವನ್ನೇ ಕ್ರಿಯಾ ಲಿಂಗವೆಂತಲೂ ಕರೆಯುವರು. ದೇಹದೊಳಗೆ ಜೀವಾತ್ಮರೂಪದಿಂದ ವಾಸಿ ಸುವದೇ ಪ್ರಾಣಲಿಂಗ. ಇದನ್ನು ಮನೋಮೂಲಕವಾಗಿ ಪೂಜಿಸಬೇಕಾ ದುದರಿಂದ ಭಾವ (ಮನದ ಹಸ್ತದಲ್ಲಿರುವ) ಲಿಂಗವೆಂದೂ ಹೇಳುವರು. ಮೂರನೆಯದು ತನ್ನ ಹಾಗೂ ಇಡೀ ಜಗತ್ತಿನ ಒಳ ಹೊರಗೆಲ್ಲ ವ್ಯಾಪಿಸಿ, ಏಕಮೇವಾದ್ವಿತೀಯವಾಗಿ ನಿಂತಿರುವದು. ಇದನ್ನು ಜ್ಞಾನಲಿಂಗವೆಂದು ಹೇಳುವದುಂಟು. ಇದನ್ನು ಕೇವಲ ಸದ್ಭಾವ ಹಸ್ತದಿಂದಲೇ ಆರಾಧಿಸ ಬೇಕಾದುದರಿಂದ ಇದನ್ನು ಸಹ ಭಾವಲಿಂಗವೆಂತಲೂ ಸಂಬೋಧಿಸುವ

ದುಂಟು. ಈ ಮೂರರಲ್ಲಿ ಈಗ ಮುಖ್ಯವಾಗಿ ಕ್ರಿಯಾ ಲಿಂಗದ ವಿಷಯು
ವಾಗಿಯೇ ಬರೆಯುತಕ್ಕದದೆ.

ಈ ಕ್ರಿಯಾಲಿಂಗಕ್ಕೆ ಇಷ್ಟಲಿಂಗವೆನ್ನಲಿಕ್ಕೆ ಕಾರಣವೇನೆಂಬುವನ್ನು ಗಮ
ನಿಸತಕ್ಕುದು. ಇದನ್ನು ದೇಹದ ಕೈಗಳಿಂದ ಪೂಜಿಸುವದವೆ. ಮನುಷ್ಯನು
ಮಾಡುವ ಬಹಿರಂಗದಕ್ರಿಯೆಗಳಿಗೆಲ್ಲ ಈ ಕೈಗಳೇ ಸಾಧನಗಳು. ಈ ಕ್ರಿಯೆ
ಗಳಲ್ಲಿ ಅನಿಷ್ಟ ಕ್ರಿಯೆಗಳನ್ನೆಲ್ಲ ಬಿಟ್ಟು ಇಷ್ಟ ಕ್ರಿಯೆಗಳನ್ನೆಲ್ಲ ಮಾತ್ರ ಮಾಡ
ತಕ್ಕದ್ದಿರುವದು. ಯಾವ ಕಾರ್ಯಗಳು ತನಗೂ ಪರರಿಗೂ ಕೂಡಿಯೇ
ಈ ಲೋಕದಲ್ಲಿ ಹಿತಪ್ರದವಾಗಿದ್ದು, ಪರಲೋಕ ಸಾಧನಕ್ಕೆ ಅಂದರೆ
ದೇವರ ಕೃಪೆಗೆ ಸಹ ಪಾತ್ರವಾಗಿರುವವೋ ಅವನ್ನೇ ಮಾಡಬೇಕು.
ಪರಧನ, ಪರಸ್ತ್ರೀ, ಮೂರ್ತಿಪೂಜೆ, ಪರನಿಂದೆ, ಪರಹಿಂಸೆಗಳನ್ನೆಲ್ಲ
ಸಹಸಾ ಆಚರಿಸಕೂಡದು. ಆಗಲೇ ಅನಿಷ್ಟರ ವರ್ಜ್ಯವಾಗಿ ಇಷ್ಟಕಾರ್ಯ
ಗಳ ಪೂಜೆಯಾಗುವದು. ಮತ್ತು ಗುರುವು ಲಿಂಗವನಿತ್ತುದರ ಸಾರ್ಥ
ಕ್ಯವಾಗುವದು. ಇಲ್ಲವಾದರೆ ನಿಬಿಡವಾದ ಬಿದಿರ ಬೆಟ್ಟಕ್ಕೆ ಒಬ್ಬನು ಒಂದು
ಕಲ್ಲನ್ನೆಸೆಯಲು ಅದು ಆ ಬೆಟ್ಟದಲ್ಲಿ ಸಿಕ್ಕಿಕೊಂಡು, ಕೂತ ಪರಿಯಾಗು
ವದು. ಆ ಕಲ್ಲು ಲಿಂಗವಾಗದು. ಒಗೆದವನು ಗುರುವಾಗನು. ಬಿದಿರ
ಬೆಟ್ಟವು ಭಕ್ತನಾಗದು. ಆ ಲಿಂಗವನ್ನು ಮೇಲೆ ಹೇಳಿದಂತೆ ತನ್ನ ಜೀವ
ಮಾನದಲ್ಲೆಲ್ಲ ಇಷ್ಟ ಕ್ರಿಯೆಗಳನ್ನೆಲ್ಲ ಈಡೇರಿಸಿದರೆ ಮಾತ್ರ ಕ್ರಿಯಾ
ಲಿಂಗದ ಪೂಜೆಯಾಗುವದು. ಹೀಗೇನೂ ಮಾಡದೆ ಬರೀ ಆಡಂಬರದಿಂದ
ಪೂಜಿಸಿದರೂ ಅದೆಲ್ಲ ವ್ಯರ್ಥವಾಗುವದು. ಅಂತಹರನ್ನು ಶ್ರೀ ಪ್ರಭುದೇ
ವರು "ಅರುಹ ಪೂಜಿಸಲೆಂದು ಗುರುವು ಕರದಲ್ಲಿ ಅದರ ಕುರುಹು
ಕೊಟ್ಟರೆ ಆ ಅರುಹನೇ ಮರೆದು, ಕುರುಹನೇ ಪೂಜಿಸುವ ನರಗುರಿಗಳ
ಕಾಣಾ ಗುಹೇಶ್ವರಾ!" ಎಂದು ವಚನ ಮೂಲಕ ಎಚ್ಚರಿಸಿರುವರು.

ಈಗಿನ ಕಾಲದಲ್ಲಿ ಈ ಇಷ್ಟವೆನಿಸುವ ಕ್ರಿಯಾಲಿಂಗವನ್ನು ದೇಹದ
ಮೇಲೆ ಧರಿಸಲಿಕ್ಕೆ ಸಹ ಅನೇಕರು ಸಿದ್ಧರಿಲ್ಲ. ಅವರು ಮುಖ್ಯವಾಗಿ
ವಾದಿಸುವದೇನೆಂದರೆ,—ದೇಹದಲ್ಲಿ ಪ್ರಾಣಲಿಂಗವು ಅಥವಾ ಜ್ಞಾನಲಿಂಗವು
ಇರುತ್ತಿರಲು, ಅದನ್ನು ಬಹಿಷ್ಕರಿಸಿ ಹೊರಗೆ ಆಕಾರ ರೂಪದಿಂದ ಮತ್ತೆ
ಏಕೆ ಧರಿಸಬೇಕು? ಒಳಗಿರುವ ಜ್ಞಾನದಂತೆಯೇ ನಾವು ಹಾಗೆಯೇ
(ಲಿಂಗವು ಹೊರಗೆ ಇಲ್ಲದೆಯೇ) ಇದ್ದರೆ ಬರುವದಿಲ್ಲವೇ? ಅದು ಸಯು

ಕ್ತವಾದುದಲ್ಲವೇ ? ಎಂದು ಆಕ್ಷೇಪಿಸುವರು. ಈ ಆಕ್ಷೇಪವೇನೂ ಹೊಸ ದಲ್ಲ. ಹಿಂದೆ ಪ್ರಮಥರ ಕಾಲದಲ್ಲಿ ಕೂಡ ಸಿದ್ಧರಾಮೇಶ್ವರನು ಪ್ರಭು ದೇವರ ಮುಂದೆ ಹೀಗೆಯೇ ನುಡಿದಿದ್ದನು. ಆಗ ಪ್ರಭುಗಳು "ಒಳಗಿ ರುವ ಲಿಂಗವನ್ನೂ (ಸುಜ್ಞಾನವನ್ನು) ಹೊರದೆಗೆದು ಅದಕ್ಕೆ ಆಕಾರ ಕಲ್ಪಿಸಿ ಪ್ರತ್ಯಕ್ಷ ಎದೆಯ ಮೇಲೆ ಕಟ್ಟಿಕೊಂಡು ಮೇಲಿಮೇಲೆ ಅದರ ನಿಜಸ್ವರೂಪವನ್ನು ನೆನೆನೆನೆದು, ಆ ಪ್ರಕಾರ ನಡೆಯಲಿಕ್ಕೆ ಅದು ಮಾನ ವನಿಗೆ ಎಚ್ಚರಿಕೆಯನ್ನು ಯಾವಾಗಲೂ ಕೊಡಲಿಕ್ಕೆ ಸಾಧನವಾಗುವದು. ಅದು ಇದ್ದರೂ ಸಹ ಗಮನಿಸದೆ ಪ್ರಪಂಚದ ಮಾಯಾ ಜಾಲಕ್ಕೆ ಸಿಲುಕಿ, ಅನಿಷ್ಟ ಕಾರ್ಯಗಳನ್ನೇ ಮಾಡುವ ಒಲವನ್ನು ಮನುಜನು ಹೊಂದುತ್ತಿರುವದು ಎಲ್ಲರ ಅನುಭವದ ಸಂಗತಿಯಾಗಿದೆ. ಅದಿಲ್ಲದಿದ್ದರೆ ಮುಂದೆ ನರರ ಗತಿ ಏನಾದೀತು ? ಎಂಬುದನ್ನು ಶಾಂತಮನದಿಂದ ಊಹಿಸಬೇಕು." ಇತ್ಯಾದಿ ಬೋಧಿಸಿ ಕಲ್ಯಾಣಕ್ಕೆ ಕರೆದೊಯ್ದು ಅಲ್ಲಿ ಚನ್ನಬಸವದೇವರಿಂದ ಸಿದ್ಧರಾಮೇಶ್ವರನಿಗೆ ಲಿಂಗಧಾರಣ ಮಾಡಿಸಿದರು. ಇದೇ ಮಾತನ್ನು ಇನ್ನೊಂದು ದೃಷ್ಟಾಂತದಿಂದ ಮನಕ್ಕೆ ಮೂಡುವಂತೆ ವಿಸ್ತರಿಸಿದ್ದಾರೆ. ಅದು ಯಾವದೆಂದರೆ— ಒಂದು ಆಕಳಿಗೆ ದೇಹದಲ್ಲಿ ಹುಣ್ಣಾಗಿ ಬೆಳೆದು ಅದು ಬಲು ಕಷ್ಟ ಪಡುತ್ತಿತ್ತು. ಅದನ್ನು ಕಂಡು ಓರ್ವ ಬಲ್ಲವನು– "ಇದಕ್ಕೆ ಆಕಳ ತುಪ್ಪವನ್ನು ದಿನಾಲು ತಪ್ಪದೇ ಹಚ್ಚುತ್ತ ಹೋದರೆ, ಹುಣ್ಣು ಹೋಗಿ ಆರೋಗ್ಯವಾಗುವದು" ಎಂದು ಹೇಳಿದನು. ಅದರಂತೆ ಕೆಲದಿನ ಮಾಡಲು ಅದು ವಾಸಿಯಾಗಿ ಸುದೃಢ ವಾಯಿತು. ಈ ಬಲ್ಲ ವೈದ್ಯನ ಮಾತಿಗೆ ಒಬ್ಬ ಕುತರ್ಕಿಯು "ಆಕಳ ದೇಹದಲ್ಲಿಯೇ ತುಪ್ಪವಿರುತ್ತಿರಲು ಅದರ ಪ್ರಯೋಜನವು ಸ್ವಾಭಾವಿಕವಾ ಗಿಯೇ ಆಗುವಂತಿರುವದು. ಹೀಗಿದ್ದು ಅದನ್ನು ಮರೆತು ಹೊರಗೆ ಹಚ್ಚುತ್ತ ವ್ಯರ್ಥ ದಣಿದುಕೊಂಡರೆ ಅದೇನಾಗುವದು ? ಎಲ್ಲವೂ ಹುಚ್ಚುತನವೆ !" ಎಂದನು. ಆಗ ಆ ವೈದ್ಯನು "ಹಾಗಲ್ಲ, ಕಟ್ಟಿಗೆಯಲ್ಲಿ ಅಗ್ನಿ ಇದ್ದಾಗ್ಯೂ ಅದು ತನ್ನಿಂದ ತಾನೇ ಹೊರಗೆ ಬರಲಾರದು. ಎರಡು ಕಟ್ಟಿಗೆಗಳನ್ನು ಒಂದರ ಮೇಲೊಂದಿಟ್ಟು ಬಲವಾಗಿ ತಿಕ್ಕಿದರೆ ಮಾತ್ರ. ಮುಂದೆ ಅಲ್ಲಿ ಒಳಗಿನ ಅಗ್ನಿ ಪ್ರಜ್ವಲಿತವಾಗಿ ಆ ಕಟ್ಟಿಗೆಗಳನ್ನು ಸುಟ್ಟು ಬಿಡುವದು. ಒಳಗೆ ಅಗ್ನಿಯುಂಟು. ಅದು ತಾನೇ ಆ ಕಟ್ಟಿಗೆಗಳನ್ನು ದಹಿಸುವದು ಎಂದ್ಳು ಹಾದೀ ನೋಡುತ್ತ ಕುಳಿತರೆ ಎಂದಾದರೂ ಹಾಗೆ ಆಗುವದುಂಟೇ ?

ಎಂದೂ ಶಕ್ಯವಿಲ್ಲ." ಅದೇ ಮೇರೆಗೆ ಒಳಗಿನ ಜ್ಞಾನದಂತೆ ನಾವು ವರ್ತಿಸುವ ದರಿಂದ ನಮ್ಮ ಅನಿಷ್ಟವೆಲ್ಲ ದೂರಾಗಿ, ನಾವು ಇಷ್ಟವನ್ನು ಹೊಂದಿ, ನಮಗಾಗಿರುವ ಭವರೋಗದಿಂದ ಮುಕ್ತರಾಗುವೆವೆಂಬುದು ಎಂದಿಗೂ ಕೈಗೂಡದು. ಆ ಕಾರಣ ಹೊರಗೆ ಕ್ರಿಯಾಲಿಂಗವನ್ನು ತಪ್ಪದೇ ಧರಿಸಿ ಅವರ ಉದ್ದೇಶವನ್ನು ಸದಾ ಸ್ಮರಣೆಯಲ್ಲಿಟ್ಟುಕೊಂಡು ಆ ಪ್ರಕಾರ ನಿಗ್ರಹದಿಂದ ಇಷ್ಟ ಕಾರ್ಯಗಳನ್ನೇ ಸಾಧಿಸುತ್ತ ಹೋಗಿ ಮನುಷ್ಯನು ತನಗೆ ತಗಲಿದ ಭವರೋಗದಿಂದ ಮುಕ್ತನಾಗಬೇಕು. ಇದಕ್ಕೆ ಬೇರೆ ಮತ್ತಾವ ಸಮೀಚೀನವಾದ ಸಾಧನವು ಇಲ್ಲ. ಇದನ್ನೆಲ್ಲ ನೆನೆಸಿಯೇ ಪ್ರಮಥರು ಲಿಂಗಧಾರಣ ಸಂಸ್ಕಾರವನ್ನು ರೂಢಗೊಳಿಸಿದ್ದಾರೆ. ಅದು ಬಹು ಸಯುಕ್ತವಾದುವದೆ. ಅದನ್ನು ಅಜ್ಞಾನದಿಂದ ಯಾರೂ ಅಲ್ಲಗಳೆಯಬಾರದು. ಎಲ್ಲರೂ ಕ್ರಿಯಾಲಿಂಗವನ್ನು ಅವಶ್ಯ ಧರಿಸಿ, ಅದನ್ನು ಹೊರಗೆ ಪೂಜಿಸುತ್ತ ಅದೇ ಕಾಲಕ್ಕೆ ಇಷ್ಟಕ್ರಿಯೆಗಳನ್ನೇ ಜರಗಿಸುವ ಬಲವನ್ನು ಹೆಚ್ಚಿಸಿಕೊಳ್ಳುತ್ತ ಜೀವನಗಳೆಯುವದು ಅತ್ಯವಶ್ಯವಾಗಿದೆ.

ಭಕ್ತನನ್ನೂ ಇಡೀ ಜಗತ್ತನ್ನೂ ವ್ಯಾಪಿಸಿದ ಮಹಾಲಿಂಗವನ್ನು ಹೊರದೆಗೆದು ಅದಕ್ಕೆ ಚಿಕ್ಕ ಆಕಾರವನ್ನು ಕೊಟ್ಟು ಅದನ್ನು ಕ್ರಿಯಾಲಿಂಗವೆಂದು ಗುರುವು ಹೇಳಿದ್ದಾನಷ್ಟೇ? ಅದು ನಿಜವಾಗಿ ನಮ್ಮ ಹಸ್ತದಲ್ಲಿ ಚಿಕ್ಕದಾಗಿದ್ದರೂ ಅದರ ನಿಜಸ್ವರೂಪವು ಊಹಿಸಲಸಾಧ್ಯವಾದುದಿದೆ. ಅದನ್ನು ಶ್ರೀ ಬಸವಂಣನವರು ತಮ್ಮ ವಚನದಲ್ಲಿ "ಜಗದಗಲ, ಮುಗಿಲಗಲ, ಮಿಗೆಯಗಲ, ನಿನ್ನ ಶ್ರೀಪಾದ ಪಾತಾಳದಿಂದತ್ತತ್ತ. ನಿನ್ನ ಮಣಿ ಮುಕುಟ ಬ್ರಹ್ಮಾಂಡದಿಂದತ್ತತ್ತ. ದಶಭುಜಗಳು ದಶದಿಕ್ಕುಗಳಿಂದತ್ತತ್ತ. ಅಪ್ರಮಾಣ, ಅಗಮ್ಯ, ಅನುಪಮ, ಅಗೋಚರ ಕೂಡಲಸಂಗಮದೇವಾ, ನೀನು ಎನ್ನ ಕೈಯಲ್ಲಿ ಬಂದು ಚುಳುಕಾದೆಯಯ್ಯಾ" ಎಂದು ವರ್ಣಿಸಿದ್ದಾರೆ. ಇಡೀ ಜಗತ್ತೇ ಆ ಇಷ್ಟಲಿಂಗವು. ಇದನ್ನು ಲಕ್ಷ್ಯಕ್ಕೆ ತಂದುಕೊಂಡು ಅದನ್ನು ಪೂಜಿಸುವದೆಂದರೆ– ಇಡಿಯ ಲೋಕವನ್ನೇ ಸೇವಿಸುವದು. ಕ್ರಿಯಾರೂಪದಿಂದ ಆನಂದಪಡಿಸುವದು ಅದರ ನಿಜವಾದ ಪೂಜೆಯು. ಇದನ್ನು ಮರೆತು, ದುಃಸ್ವಾರ್ಥಕ್ಕೆ ಬಿದ್ದು ತೀರ ಅಜ್ಞಾನದಿಂದ ವರ್ತಿಸಿದರೆ ಅದೆಂತು ಇಷ್ಟಲಿಂಗದ ಪೂಜೆಯಾಗುವದು?

ಇಷ್ಟಲಿಂಗ ಧಾರಣದಿಂದ ಇನ್ನೊಂದು ಪ್ರಯೋಜನವದೆ. ಪ್ರತಿಯೊಬ್ಬ ಮನುಷ್ಯನು ತನ್ನ ಉದ್ಧಾರಕ್ಕಾಗಿ ದೇವರನ್ನು ಸರ್ವಕಾಲದಲ್ಲಲ್ಲ

ದಿದ್ದರೂ ದಿನಂಪ್ರತಿಯಾದರೂ ಪೂಜಿಸುವದು ಅವಶ್ಯವಾದುದೆಂಬುದು ಸ್ಪಷ್ಟವದೆಯಷ್ಟೆ! ಆದರೆ ಅಲಿಂಗಿಗಳಿಂದ ಆ ರೀತಿ ಆಚರಣೆಯಾಗುವದೇ? ಗುಡಿಗಳಲ್ಲಿರುವ ದೇವರ ಮೂರ್ತಿಗಳನ್ನು ಪೂಜಿಸಲಿಕ್ಕೆ ಊರವರೆಲ್ಲರೂ ಕೂಡಿ ಒಬ್ಬ ಪೂಜಾರಿಯನ್ನು ನಿಯಮಿಸುವರು. ಆದರೆ ಅವನು ಪೂಜಿಸಿದ ಫಲವು ಊರವರಿಗೆಲ್ಲರಿಗೂ ಲಭಿಸುವದೆಂತು? ಅದರಂತೆಯೇ ಮನೆಯೊಳಗೆ ಜಗುಲಿಯ ಮೇಲೆ ದೇವರ ಮೂರ್ತಿಯನ್ನಿಟ್ಟರೂ ಅದು ಸಾಧ್ಯವಾಗದು. ಆ ದೇವರನ್ನು ಮನೆಯೊಳಗಿನ ಯಾರಾದರೊಬ್ಬರು ದಿನಂಪ್ರತಿ ಒಮ್ಮೆ ಪೂಜಿಸುವರು. ಅದರ ಫಲವು ಆ ಪೂಜಕನೊಬ್ಬನಿಗೇನೇ ದೊರೆಯಬಲ್ಲುದಲ್ಲದೆ ಮನೆಯವರಿಗೆಲ್ಲ ಎಂದೂ ಸಿಗಲಾರದು. ಈ ದೋಷವನ್ನು ತಪ್ಪಿಸುವದಕ್ಕಾದರೂ ಪ್ರತಿಯೊಬ್ಬನು ತನ್ನ ಮೈಮೇಲೆ ದೇವರ ಹೆಸರಿನ ಚಿಹ್ನ (ಲಿಂಗವನ್ನು) ಧರಿಸುವದು ಅವಶ್ಯವದೆ. ಅವನು ನಿತ್ಯದಲ್ಲಿಯೂ ಅದನ್ನು ಪೂಜಿಸಲೇಬೇಕಾಗುವದು. ಇದರಿಂದ ಅವನು ದೇವರ ಮೆಚ್ಚಿಗೆಗೆ ಪಾತ್ರನಾಗುವನು. ಪ್ರತಿಯೊಬ್ಬನಿಗೆ ಊಟವು ಅವಶ್ಯವಿದ್ದಷ್ಟೇ ದೇವರ ಪೂಜೆಯಾದರೂ ಅವಶ್ಯವಾಗಿದೆ. ಲಿಂಗವು ಮೈಮೇಲೆಯೇ ಇರುವದರಿಂದ ಎಲ್ಲಿ ಹೊದಲ್ಲೆಲ್ಲ ಅದು ಸಂಗಡಲೇ ಇರುವದು. ಊರಿಗೆ ಹೋದರೂ ಸಹ ದಾರಿಯಲ್ಲಿ ಇದ್ದೇ ಇರುವದು. ಬೇಕಾದಾಗ ಪೂಜಿಸಲು ಅನುಕೂಲವಾಗುವದು.

ಇಂತಹ ಲಿಂಗವು ನೀರಿನಲ್ಲಿ ಬಿದ್ದಾಗಲೀ, ಅನ್ಯರೀತಿಯಿಂದಾಗಲೀ ಪ್ರಮಾದದಿಂದ ಕಳೆದು ಹೋಗಬಹುದು. ಆಗ ಪುನಃ ಗುರುವಿನಿಂದ ಸಂಸ್ಕಾರಪೂರ್ವಕವಾಗಿಯೇ ಆದನ್ನು ಪಡೆಯಲು ಆವ ಆತಂಕವೂ ಇಲ್ಲ. ಹಾಗೆ ಮಾಡದೆ ಪೇಟೆಯಲ್ಲಿ ಲಿಂಗಗಳು ಮಾರಲು ಸಿಗುವದೆಂದು ತಾನೇ ಅದನ್ನೆಂದೂ ಧರಿಸಕೂಡದು. ಅದು ಇಷ್ಟ ಪ್ರಾಣ ಭಾವಲಿಂಗಗಳಿಂದ ಸಮಾವಿಷ್ಟವಾಗಿರಲಾರದು. ಸಂಸ್ಕಾರದಿಂದಾಗುವ ಪರಿಣಾಮವು, ಈ ಕೊಂಡ ಲಿಂಗದಿಂದ ಎಂದೂ ಆಗದು. ಲಿಂಗವನ್ನು ಯಾವಾಗಲೂ ಗುರುದೀಕ್ಷೆಯಿಂದಲೇ ಪಡೆಯಬೇಕು. ಜನ್ಮ ಲಿಂಗವನ್ನು ಪಡೆದವರು ದೊಡ್ಡವರಾದ ಮೇಲೆ ಶಿವದೀಕ್ಷೆಯ ಮೂಲಕ ಲಿಂಗದ ನೆಲೆ ಕಲೆ ಮುಂತಾದವುಗಳನ್ನರಿಯಬೇಕು. ಈ ಶಿವದೀಕ್ಷೆಯು ಶಿಕ್ಷಾಗುರುವಿನ ಕಾರ್ಯಾರಂಭವೆಂದರಿಯಬೇಕು.

## ಕ್ರಿಯಾಜಂಗಮ.

ಕ್ರಿಯಾ ಗುರುವಿನಂತೆ ಕ್ರಿಯಾ ಜಂಗಮನಾದರೂ ಮಾನವನೇ. ಈತನು ಲಗ್ನವಾಗುವದಿಲ್ಲ. ಕೊನೆಯ ವರೆಗೆ ಬ್ರಹ್ಮಚರ್ಯವನ್ನು ಪಾಲಿಸುವನು. ಇವರ ಮಠಗಳಾದರೂ ದೇಶದಲ್ಲಿ ಎಲ್ಲ ಕಡೆಗೂ ಗುರುಮಠಗಳಂತೆ ಹಬ್ಬಿರುತ್ತವೆ. ಇವರು ಪ್ರಭುಸಾಂಪ್ರದಾಯಕರು. ವ್ಯವಹಾರದಲ್ಲಿ ಇವರಿಗೆ ವಿರಕ್ತ ಮೂರ್ತಿಗಳೆನ್ನುವರು. ಷಟ್‌ಸ್ಥಲ ಬ್ರಹ್ಮಿಗಳೆಂದೂ ಇವರಿಗೆ ಇನ್ನೊಂದು ಹೆಸರುಂಟು. ಷಟ್‌ಸ್ಥಲ ಜ್ಞಾನವನ್ನೂ ತದಂತರ್ಗತವಾದ ನೂರೊಂದು ಸ್ಥಲಗಳ ಜ್ಞಾನವನ್ನೂ ಒಳಿತಾಗಿ ಪಡೆದುಕೊಂಡು ಭಕ್ತರಿಗೆ ಆ ಜ್ಞಾನವನ್ನು ಕರುಣಿಸುತ್ತ ಇರುವದೇ ಇವರ ಮುಖ್ಯ ಕರ್ತವ್ಯವು. ಪ್ರಪಂಚದ ಯಾವ ಜೊಂಜಾಟವೂ ಇಲ್ಲದವರಾಗಿ ಒಂದೇ ಒಂದಾದ ಪವಿತ್ರಜ್ಞಾನವನ್ನು ಸಂಪಾದಿಸಿ, ಪರಮಾನಂದದಲ್ಲಿ ಕಾಲಕಳೆಯುವದೇ ಇವರ ಜೀವಿತದ ಸಾಫಲ್ಯವು. ಜೀವ ಜಗತ್ತು ಪರಮಾತ್ಮರುಗಳ ಸತ್ಯಸ್ವರೂಪವನರಿದುಕೊಂಡು, ಏಕಮೇವಾದ್ವಿತೀಯರಾಗಿ, ಪರಮಾನುಭವಿಗಳಾಗಿ ವಾಸಿಸುವದೇ ಇವರ ಮುಖ್ಯಧ್ಯೇಯವು. ಹೊನ್ನು ಹೆಣ್ಣು ಮಣ್ಣು ಮೊದಲಾದ ವಿಷಯಗಳಲ್ಲಿ ಇವರಿಗೆ ಎಳ್ಳುಕಾಳಷ್ಟು ಪ್ರೀತಿ ಇಲ್ಲದಿರುವದರಿಂದ ಇವರಿಗೆ ವಿರಕ್ತರು ಎಂಬ ಹೆಸರು ಪ್ರಾಪ್ತವಾಗಿದೆ. ಇವರ ಯೋಗಕ್ಷೇಮವೆಲ್ಲ ಭಕ್ತರನ್ನೇ ಅವಲಂಬಿಸಿರುವದು. ಎಷ್ಟೋ ಕಡೆಗೆ ಈ ಮಠಗಳಿಗೆ ಸಹ ದೊಡ್ಡ ದೊಡ್ಡ ಉತ್ಪನ್ನಗಳಿರುವವು.

ಜಂಗಮ ಶಬ್ದದ ವ್ಯಾಖ್ಯೆಯನ್ನು ಸಿದ್ಧಾಂತ ಶಿಖಾಮಣಿಯಲ್ಲಿ ''जानन्त्यति शयाद्येतु । शिवं विश्वप्रकाशकम् ॥ स्वस्वरूपतयातेतु । जंगमा इति कीर्तिताः ॥ ಎಂದು ಹೇಳಿರುವರು. ಇದರ ಅರ್ಥವು "ವಿಶ್ವರೂಪದಿಂದ ಪ್ರಕಟಿತವಾಗಿ ಬೆಳಗುತ್ತಿರುವ ಶಿವನನ್ನು ಯಾರು ತಮ್ಮ ಸ್ವಂತ ಸ್ವರೂಪದ ಮೇಲಿಂದಲೇ ಷಟ್‌ಸ್ಥಲಮೂಲಕವಾಗಿ ಅರಿಯುವರೋ ಅವರೇ ಜಂಗಮರು ಎಂದು ಉಂಟು. ಇವರಿಗೆ ಭಕ್ತರುದ್ಧಾರವೇ ಮುಖ್ಯ ಕರ್ತವ್ಯವಾಗಿದೆ. ಆದುದರಿಂದ '' सर्व लोकोपकाराय । योदेवः परमेश्वरः ।। चरत्य तिथि रूपेण । नमः तस्मै जंगमाय ॥ ಎಂತಲೂ ಇವರನ್ನು ಹೊಗಳಿದ್ದಾರೆ. ಬಸವಣ್ಣನವರೂ ತಮ್ಮ ವಚನದಲ್ಲಿ "..................... ನೀನು ಎನ್ನ ಭವವನ್ನು ನಾಶಮಾಡಲು ಜಂಗಮನಾಗಿ ಬಂದಡೆ, ನಾನು

ಭಕ್ತನೆಂಬ ವಾಹನವಾಗುವೆನು, ಕೂಡಲಸಂಗಮದೇವಾ " ಎಂದು ಹೇಳಿದ್ದಾರೆ. ಇದರಂತೆಯೇ ಮತ್ತೊಂದೆಡೆಗೆ "........ಜಂಗಮನ ಸೇವೆಯೇ ಭಕ್ತನ ಲಿಂಗಪೂಜೆ, ಭಕ್ತನ ಕಿಂಕಲವೇ ( ಉದ್ಧಾರವೇ ) ಜಂಗಮನ ಲಿಂಗಪೂಜೆ " ಎಂತಲೂ ಹೇಳಿದ್ದಾರೆ. ಇವುಗಳಿಂದ ಭಕ್ತಜಂಗಮರ ಅನ್ಯೋನ್ಯ ಸಂಬಂಧವು ಗೊತ್ತಾಗುವದು.

ಈ ಜಂಗಮರು ಸ್ವಯಜಂಗಮ, ಚರಜಂಗಮ, ಪರಜಂಗಮ ಎಂದು ಮೂರು ವಿಧವಾಗಿರುವದೆಂದು ನೂರೊಂದು ಸ್ಥಲಗಳಿಂದ ಗೊತ್ತಾಗುತ್ತದೆ. "जानन्त्यति शयावतु "। ಎಂಬ ಶ್ಲೋಕದಲ್ಲಿ ಹೇಳಿದಂತೆ ಅನುಭವಿಗಳಾಗಿ ಕೇವಲ ಪರಮಾತ್ಮತ್ವವನ್ನು ಪಡೆದು, ತಮ್ಮಿಷ್ಟಕ್ಕೆ ತಾವಿರುವರೇ ಸ್ವಯಜಂಗಮರು. ಭಕ್ತೋದ್ಧಾರಾರ್ಥ ಬೇರಾವ ಆಶೆಯೂ ಇಲ್ಲದೇ ದೇಶಸಂಚಾರ ಮಾಡುವವರೇ ಚರಜಂಗಮರು. ಜಗವೆಲ್ಲವನ್ನು ಒಂದೇ ಒಂದು ಪರಮಾತ್ಮ ಸ್ವರೂಪವಾಗಿ ಕಂಡು. ಅದರಲ್ಲಿ ತಾನು ಬೆರೆದು, ದೇಹದ ಪರವೆ ಸಹ ಇಲ್ಲದೆ ಶಿವಾನಂದ ನಿಮಗ್ನನಾಗಿ ಇರುವವನೇ ಪರಜಂಗಮನು. ಈತನೇ ಐಕ್ಯನೆನಿಸುವನು. ಭಕ್ತರನ್ನು ಬೋಧಿಸಿ ಸರ್ವಪರಿಯಿಂದಲೂ ಅವರನ್ನು ಜಂಗಮತ್ವಕ್ಕೇರಿಸುವದೇ ಜಂಗಮನ ಪವಿತ್ರಕಾರ್ಯ. ಈ ರೀತಿ ನಿಃಸ್ವಾರ್ಥ ದೃಷ್ಟಿಯಿಂದ ವರ್ತಿಸುವ ಹಲಕೆಲವು ಜಂಗಮರು ಸಮಾಜದಲ್ಲಿ ಇದ್ದಾರೆ. ಆದರೂ ಬಹುಸಂಖ್ಯಾಕರು ಮಾತ್ರ ತಮ್ಮ ಸ್ಥಾನದ ಆಶ್ರಮದ ತಿಲಮಾತ್ರವೂ ಎಚ್ಚರಿಲ್ಲದೆ ತೀರ ಪ್ರಾಪಂಚಿಕರಿಗಿಂತ ಪ್ರಾಪಂಚಿಕರಾಗಿ ಭವಿಮಾರ್ಗದಲ್ಲಿ ನಡೆಯುವವರೇ ಎಲ್ಲ ಕಡೆಯಲ್ಲಿ ಸಿಕ್ಕುವರು. ಇದು ಬಹು ಶೋಚನೀಯವಾದುದು. ಇಂತಹವರು ತಮ್ಮ ಸ್ಥಿತಿಯನ್ನು ಬೇಗ ಸುಧಾರಿಸುವರೆಂದು ಆಶಿಸುವಾ.

ಭಕ್ತೋದ್ಧಾರಕ್ಕಾಗಿಯೇ ನಡಕಟ್ಟಿಕೊಂಡು ನಿಂತವರು ಈಗ ಮುಖ್ಯವಾಗಿ ಎರಡು ಕಾರ್ಯಗಳಲ್ಲಿ ನಿರತರಾಗಿರುವರು. (೧) ಷಟ್‌ಸ್ಥಲಜ್ಞಾನ ಸಂಪನ್ನರಾಗಿ ಸದಾಚಾರ ಯುಕ್ತರಾಗಿದ್ದು ದೇಶದಲ್ಲಿ ಸಂಚರಿಸಿ ಶಿವಾನುಭವವನ್ನು ಅಲ್ಲಲ್ಲಿ ವ್ಯಾಖ್ಯಾನ ಪ್ರವಚನರೂಪದಿಂದ ಹಬ್ಬಿಸುತ್ತಿರುವರು. ಈ ಕಾಲಕ್ಕೆ ಹೀಗೆ ಮೈಮರೆತ ಜನರನ್ನು ಬಡಿದೆಬ್ಬಿಸಿ, ಅವರಿಗೆ ತಮ್ಮ ಕರ್ತವ್ಯದ ಅರಿವನ್ನು ನೀಡುವದು ಅತ್ಯಂತ ಅವಶ್ಯವಾಗಿದೆ. (೨) ಲಿಂಗವಂತರಲ್ಲಿ ವಿದ್ಯಾಪ್ರಸಾರವು ಕಡಿಮೆ. ಆದರೆ ಈಗಿನ ಕಾಲವು ವಿದ್ಯೆ ಇಲ್ಲದೆ ಬಾಳಲು ಬರುವಂತಿಲ್ಲ. ಆದುದರಿಂದ ದೊಡ್ಡ ಪಟ್ಟಣಗಳಲ್ಲಿ,

ವಿದ್ಯಾದಾನವು ಸಂಸ್ಥೆಯ ರೂಪದಿಂದ ಪ್ರಗತಿಯಲ್ಲಿ ಸಾಗುತ್ತಿರುವಲ್ಲಿ— ವಿದ್ಯಾರ್ಥಿ ವಸತಿಗೃಹಗಳನ್ನು ಸ್ಥಾಪಿಸಿ ಅಲ್ಲಿ ಅವರಿಗೆ ಪುಕ್ಕಟೆಯಾಗಿ ಅನ್ನವು ದೊರೆಯುವಂತೆ ವ್ಯವಸ್ಥೆಯನ್ನು ಮಾಡಿರುವರು. ಈ ಕಾರ್ಯಕ್ಕೆ ಬೇಕಾಗುವ ಧನಸಂಗ್ರಹವನ್ನು ಆ ಸ್ವಾಮಿಗಳು ಭಿಕ್ಷಾಟನದಿಂದ ಸಂಪಾದಿಸಿ ಬಹು ಪ್ರಯಾಸದಿಂದ ನಡೆಸುತ್ತಿರುವರು. ಈ ಬಗ್ಗೆ ಅವರನ್ನು ಎಷ್ಟು ವರ್ಣಿಸಿದರೂ ಸಾಲದು. ಬೇರೆ ಕೆಲವರು ತಮ್ಮದು ದಾಸೋಹ ಮಠವೆಂದು ಹೇಳುತ್ತ ಮಠಕ್ಕೆ ಬರುಹೋಗುವವರಿಗೆ ಅನ್ನವನ್ನೀಯುತ್ತಿರುವರು. ಈ ದಾಸೋಹ ಮಠಗಳಲ್ಲಿ ಅನೇಕಕಡೆ ಸಂಸ್ಕೃತ ಪಾಠಶಾಲೆಗಳೂ ಇರುವವು. ಇದಲ್ಲದೆ ಇವರು ಹಾಯಸ್ಕೂಲಾದಿ ಬೇರೆ ವಿದ್ಯಾಪ್ರಸಾರ ಕಾರ್ಯಕ್ಕು ನೆರವಾಗುತ್ತಿರುವರು. "ಗುರುವಿಗೆ ತನುವನ್ನೂ ಲಿಂಗಕ್ಕೆ ಮನವನ್ನೂ ಜಂಗಮಕ್ಕೆ ಧನವನ್ನೂ" ಸಲ್ಲಿಸಲು ವೀರಶೈವ ಮತದ ಆಜ್ಞೆ ಇರುವದು. ಆ ಪ್ರಕಾರ ಭಕ್ತರು ಈ ಜಂಗಮರಿಗೆ ಸಲ್ಲಿಸುವ ಲೌಕಿಕ ಧನದ ಸದುಪಯೋಗವನ್ನು ವಿದ್ಯಾರ್ಥಿ ವಸತಿಗೃಹಾದಿಗಳನ್ನು ಸ್ಥಾಪಿಸಿ ಜನತೆಯ ಪ್ರಶಂಸೆಗೆ ಪಾತ್ರರಾಗುತ್ತಿರುವರು. ಆದರೆ ಪ್ರಮಥರು ಜಂಗಮಕ್ಕೆ ಸಲ್ಲಿಸಲು ಹೇಳಿದ ಧನವು ಕೇವಲ ಜಡವಾದ ಲೌಕಿಕ ಧನವಲ್ಲ. ಸುಜ್ಞಾನೈಶ್ವರ್ಯವೆಂಬ ಪರಮಪುನೀತವಾದ ಜನ್ಮೋದ್ಧಾರಂಗೈವ ಸಮ್ಯಗ್ಜ್ಞಾನವೆಂಬ ಮಹಾಧನವು. ಭಕ್ತರು ಈ ಪರತರ ಜ್ಞಾನಧನವನ್ನು ಪಡೆದು ಅದನ್ನು ಜಂಗಮರೂಪೀ ಪರಮಗುರುವಿಗೆ ಸಲ್ಲಿಸಬೇಕೆಂದು ಹೇಳಿರುವರು. ಈ ಅಪ್ಪಣೆಯನ್ನು ಈಡೇರಿಸುವದೆಂದರೆ ಭಕ್ತರು ತಾವು ಸ್ವತಃ ಜಂಗಮತ್ವವನ್ನು ಹೊಂದಿ ಕೃತಾರ್ಥರಾಗಬೇಕೆಂಬ ಭಾವವು. ಹೀಗೆ ಹೇಳುವದರಿಂದ ಲೌಕಿಕ ಧನದಾನದ ಮಹತ್ವವೇನೂ ಕಡಿಮೆಯಾದುದೆಂದು ಯಾರೂ ಊಹಿಸಕೂಡದು. ಕನಿಷ್ಠಪಕ್ಷಕ್ಕೆ ಇದನ್ನಾದರೂ ಅನುಸರಿಸಲೇಬೇಕು. ಉಳಿದ ವಿರಕ್ತರೆಲ್ಲ ಇವರ ಅನುಕರಣಮಾಡಿ ಭಕ್ತರಲ್ಲೆಲ್ಲ ಶಿವಾನುಭವವನ್ನೂ ವಿದ್ಯಾಪ್ರಸಾರವನ್ನೂ ಒತ್ತರದಿಂದ ಮುಂದುವರಿಸಲೆಂದು ಕೋರೋಣ.

ಬರೆಯಲಿಕ್ಕೆ ಅತಿ ಖೇದವೆನಿಸುವದೇನೆಂದರೆ,— ಈ ವಿರಕ್ತಮೂರ್ತಿಗಳಲ್ಲಿ ಅನೇಕರು ತಾವು ವಿರಕ್ತರೆಂಬುದನ್ನು ಮರೆತು ತಮ್ಮ ತರುವಾಯ ಸಹ ತಮ್ಮ ಮಠವು ತಮ್ಮ ಜನ್ಮವಾದ ಮನೆತನದಲ್ಲಿಯೇ ಉಳಿಯಬೇಕೆಂದು ತಮ್ಮ ಮೊದಲಿನ ಅಣ್ಣತಮ್ಮಂದಿರ ಮಕ್ಕಳನ್ನು ತಮ್ಮ ಪಶ್ಚಾತ್

ಅಧಿಕಾರಿಗಳೆಂದು ಗೊತ್ತುಪಡಿಸುತ್ತಾರೆ. ಇದು ಗುರುವರ್ಗದವರ 'ಪುತ್ರ ವರ್ಗದ ಮಠ' ಎಂಬ ಕುಂಟು ನೆವವನ್ನೇ ಕೇವಲ ಅನುಕರಿಸಿದಂತಾ ಗಲಿಲ್ಲವೇ? ಧಿಕ್ಕಾರವಿರಲಿ. ಇಂತಹರಿಗೆ! ತಮ್ಮ ಪಶ್ಚಾತ್ ಪ್ರಭು ಸಂಪ್ರದಾಯವನ್ನು (ವೈರಾಗ್ಯವನ್ನು) ನಡೆಸಿಕೊಂಡು ಹೋಗಲು ಇಂತಹ ಹರುಕು ಮುರುಕು ಮರಿಗಳು ಯೋಗ್ಯರಾಗುವದುಂಟೇ? ತಾವು ಮೊದಲು ಮಹಾಜ್ಞಾನಿಗಳಾಗಿ ಯೋಗ್ಯ ವಟುಗಳನ್ನೇ ಮರಿಗಳೆಂದು ಆರಿಸಿಕೊಂಡು ಅವರಿಗೆ ತಕ್ಕ ಶಿಕ್ಷಣ ಕೊಟ್ಟು ನಿಜವಾದ ಜಂಗಮಪುಂಗವರಾಗುವಂತೆ ಎತ್ತುಗಡೆಮಾಡುವದು ಇವರಿಗೆ ಭೂಷಣವಲ್ಲವೇ? ತಾವು ತಮ್ಮ ಜನ್ಮ ವನ್ನು ವ್ಯರ್ಥವಾಗಿ ಕಳೆದು, ಇಂತಹ ಅರಿಯದ ಮರಿಗಳನ್ನು ಹೆಸರಿಗೆ ಮಾತ್ರ ಸ್ವಾಮಿಗಳನ್ನಾಗಿ ಮಾಡಿ ಇಡೀ ವೀರಶೈವ ಸಮಾಜವನ್ನೇ ಗಂಡಾಂ ತರವಲ್ಲಿ ನೂಕುವದು ಅದೆಷ್ಟು ಮರುಳುತನದ್ದೆಂದು ಹೇಳಬೇಕು? ಇರಲಿ.

"ಇನ್ನೊಂದು ವಿಷಯ:— ಕೆಳಗಿನ ವಚನವನ್ನು ಪರಾಮರ್ಶಿಸಿರಿ. "ಆಚಾರವಿಲ್ಲದ ಗುರು ನರ, ಆಚಾರವಿಲ್ಲದ ಲಿಂಗ ಶಿಲೆ, ಆಚಾರವಿಲ್ಲದ ಜಂಗಮ ಭೂತಪ್ರಾಣಿ. ಎಲ್ಲರಿಗೂ ಆಚಾರವೇ ಬೇಕು. ಆಚಾರವೇ ಪ್ರಾಣ, ನಿಜಗುರು ಸ್ವತಂತ್ರ ಸಿದ್ಧಲಿಂಗೇಶ್ವರಾ." ಇದರಿಂದ ಗುರುವಿರಲಿ, ಜಂಗಮ ನಿರಲಿ, ಭಕ್ತಾದಿ ಯಾರೇ ಇರಲಿ, ಎಲ್ಲರೂ ಆಚಾರವಂತರಾಗಿರುವದು ವೀರಶೈವ ಧರ್ಮದ ಮೊದಲನೆಯ ಲಕ್ಷಣವು. ಅನಾಚಾರಿಯಾಗಿ ವರ್ತಿ ಸುವದು ತೀರ ಲಜ್ಜಾಸ್ಪದವಾದ ಮಾತು. ಗುರು ಜಂಗಮರು ತಾವು ಪಕ್ಕಾ ಆಚಾರವಂತರಾಗಿ ಭಕ್ತರನ್ನು ಕಿವಿ ಹಿಡಿದು ಆಚಾರದಲ್ಲಿರಿಸಬೇಕು. ಮೊದಲು ಗುರು ಗದ್ದಿಗೆಯಲ್ಲಿರುವ ತಾವೇ ಅನಾಚಾರಿಗಳೂ ಅಜ್ಞಾನಿಗಳೂ ಆದ ಮೇಲೆ ಅನಾಥ ಭಕ್ತ ಶಿಶುಗಳ ಪಾಡೇನು? ಇತ್ತಿತ್ತಲಾಗಿ ಪಕ್ಕಾಮಡಿ ಎಂಬದೊಂದು ಡಂಭಾಚಾರವು ಬಹಳ ಬಲವಾಗಿ ಹಬ್ಬಹತ್ತಿದೆ. ಈ ಪಕ್ಕಾ ಮಡಿಯ ಬದಲು ಪಕ್ಕಾ ಆಚಾರವನ್ನು ಕಲಿಸುತ್ತ ಹೋದರೆ ಸಮಾ ಜಕ್ಕೆ ಮಹದುಪಕಾರ ಮಾಡಿದಂತಾಗುವದು.

"लिंग धारी सदा शुचिः।" ಎಂದು ಆಗಮ ವಾಕ್ಯವುಂಟು. "ಮಡಿ ತಾಂ ನಿರ್ಮಲ ಚಿತ್ತಸ್ಯೈ" ಎಂದು ಶತಕಕಾರರು ಹೇಳಿದ್ದಾರೆ ಶತಕತ್ರಯದಲ್ಲಿ ಮುಗ್ಗಿಯ ಮಾಯಿದೇವರು "ಹೊಲೆಯನು ದೇವರಿಗಿಂತಲೂ (ಲಿಂಗಕ್ಕಿಂ ತಲೂ) ಬಲಿಷ್ಠನೆಂಬಂತೆ ಈ ಅಜ್ಞರು ತಿಳಿದಿರುವರೆ"ಂದು ಹೀಯಾಳಿಸಿ ದ್ದಾರೆ. ಲಿಂಗಗಳಿಗೆ ಅದಾವ ಸೂತಕ (ಮೈಲಿಗೆ)ವೂ ಇಲ್ಲ. ಅವನು

ಯಾವಾಗಲೂ ಶುಚಿಯೇ. ಅಗ್ನಿಸ್ಪರ್ಶ ಮಾಡಿದ ವಸ್ತುಗಳೆಲ್ಲ ಅಗ್ನಿಸ್ವ ರೂಪ ಹೊಂದುವವಲ್ಲದೆ ಅಗ್ನಿ ಏನೂ ಆ ವಸ್ತು ಸ್ವರೂಪ ಹೊಂದುವ ದಿಲ್ಲ. ಅದರಂತೆಯೇ ಲಿಂಗಾಂಗಿಯ ಸ್ಪರ್ಶದಿಂದ ಆ ಅನ್ಯ ಜನರು ಹಾಗೂ ಪದಾರ್ಥಗಳು ತಾವೇ ಪವಿತ್ರವಾಗುವವಲ್ಲದೆ ಸ್ಪರ್ಶದಿಂದ ಲಿಂಗ ವಂತರು ಎಂದೂ ಅಪವಿತ್ರರಾಗುವದಿಲ್ಲ ಎಂಬುದನ್ನು ಎಲ್ಲ ಲಿಂಗಧಾರಿ ಗಳೂ ಪೂರಾ ನೆನೆಪಿಡಬೇಕು. ಈ ಗುರು ಲಿಂಗ ಜಂಗಮದ ಬಗ್ಗೆ ಇಷ್ಟೊಂದು ಜಾಗ್ರತೆ ವಹಿಸುವ ಕಾರಣವೇನೆಂದರೆ, ಅವರಿಂದಲೇ ಭಕ್ತರ ಉದ್ಧಾರ ಉಂಟು. ಅವರ ಪಾದೋದಕ ಪ್ರಸಾದಗಳೇ ಭಕ್ತವರ್ಗವನ್ನು (ಲಿಂಗ ಧಾರಿಗಳನ್ನು) ಪುನೀತರನ್ನಾಗಿ ಮಾಡಿ, ಭವರೋಗದಿಂದ ಮುಕ್ತ ರನ್ನು ಮಾಡಿ ಸದಾ ಶಿವಾನಂದದಲ್ಲಿರಿಸುವದು. ಇನ್ನು ಆ ಪಾದೋದಕ ಪ್ರಸಾದಗಳನ್ನು ನೋಡುವಾ.

## ಕ್ರಿಯಾ ಪಾದೋದಕ

ಬಹಿರಂಗದಲ್ಲಿ ಸ್ವೀಕರಿಸಲು ಬರುವಂತಹ ಪಾದೋದಕವೇ ಕ್ರಿಯಾ ಪಾದೋದಕವು. ಪಾದೋದಕ ಶಬ್ದವು ಪಾದ ಉದಕ ಇವೆರಡೂ ಕೂಡಿ ಆಗಿದೆ. ಈ ಶಬ್ದಗಳ ವಿಷಯವಾಗಿ ತುಸು ಆಲೋಚಿಸುವದು ಅವಶ್ಯವದೆ. ನಮ್ಮವರು ಪರಬ್ರಹ್ಮ ವಸ್ತುವಿಗೆ 'ಸ್ಥಲ' ಎಂದು ಹೆಸರಿಟ್ಟಿರುವರಷ್ಟೇ? ಆ ಸ್ಥಲವನ್ನೇ ಪದ ಎಂತಲೂ ಅನ್ನುವರು. ಪದ+ಅ=ಪಾದ, ಅಂದರೆ ಪದಕ್ಕೆ ಇಲ್ಲವೆ ಸ್ಥಲಕ್ಕೆ ಸಂಬಂಧಿಸಿದುದು ಎಂಬರ್ಥ. ಪಾದೋದಕ ಸ್ಥಲದಿಂದ ಸ್ರವಿಸುವ ಜಲ ಅಥವಾ ಆ ಸ್ಥಲದ ಕರುಣಜಲ, ಇಲ್ಲವೆ ಕರುಣಾಮೃತ ಎಂದು ಹೇಳುವದುಂಟು. ಆದುದರಿಂದ ಪಾದೋದಕಕೃಪೆ ಅನುಗ್ರಹ ಎಂದರಿಯಬೇಕು. ನರರೂಪ ಗುರುವಿನ ಅಡಿದಾವರೆಯಿಂದ ವಿಧಾನಪೂರ್ವಕವಾಗಿ ಸಿದ್ಧಗೊಳಿಸಿದ ಉದಕವೇ ಕ್ರಿಯಾಪಾದೋದಕ ವೆಂದು ತಿಳಿಯಬೇಕು.

ಇಂತಹ ಕ್ರಿಯಾ ಪಾದೋದಕವನ್ನು ಕರುಣಿಸಲಿಕ್ಕೆ ಅದೆಂತಹ ಗುರುವು ತಕ್ಕವನೆಂಬುದನ್ನು ಸಿದ್ಧರಾಮೇಶ್ವರದೇವರು ತಮ್ಮ ವಚನದಲ್ಲಿ ಹೀಗೆ ಹೇಳಿರುವರು.

"ಭಕ್ತಂಗೂ ಜಂಗಮಕ್ಕೂ ರೂಪದಲ್ಲಿ ಭೇದವೇ ? ಆಚಾರ ದೊಳು ಭೇದವೇ ? ಅಲ್ಲಲ್ಲ. ಭಕ್ತನಾದಡೆ ಮೂರಕ್ಕೆ ಒಳಗು. ಜಂಗ ಮನಾದಡೆ ಮೂರಕ್ಕೆ ಹೊರಗು. ಒಳಗಾದವರ ಪಾದೋದಕ ಪ್ರಸಾದ ಸಲ್ಲದು. ಕೊಟ್ಟವಂಗೆ ನರಕ ತಪ್ಪದು. ಕೊಂಡವಂಗೆ ಭವ ಹಿಂಗದು ಕಪಿಲಸಿದ್ಧಮಲ್ಲಿಕಾರ್ಜುನಾ ! "

ಇಲ್ಲಿ ಮೂರು ಎಂದರೆ ಹೊನ್ನು ಹೆಣ್ಣು ಮಣ್ಣುಗಳೇ. ಇವಕ್ಕೆ ಒಳಗಾದವರೆಂದರೆ ಪ್ರಾಪಂಚಿಕರು. ಹೊರಗಾದವರೆಂದರೆ ವಿರಕ್ತರು. ಎಂದು ಅರ್ಥ. ಆದರೆ ಇಷ್ಟರಿಂದಲೇ ಇದರ ಅರ್ಥವು ಸ್ಪಷ್ಟವಾಗದು. ಯಾಕಂದರೆ ಪ್ರಾಪಂಚಿಕರಲ್ಲಿ ಅನೇಕರು "ಬಳಿಸಿ ಬ್ರಹ್ಮಚಾರಿಯಾಗಿಯೂ ವಿರಕ್ತರಲ್ಲಿ ಹಲವರು ವಿಷಯಾಸಕ್ತರಾಗಿಯೂ" ಇದ್ದದ್ದನ್ನು ನಾವು ನೋಡುತ್ತೇವೆ. ಆದುದರಿಂದ ಪ್ರಪಂಚದಿಂದ ನಿಜವಾಗಿ ಯಾರು ಅಲಿಪ್ತರಾಗಿರುವರೋ ಅವರೇ ಈ ಪಾದೋದಕವೀಯಲಿಕ್ಕೆ ಯೋಗ್ಯರು. ಅಂತಹರು ವಿರಕ್ತ ರಲ್ಲಿ ದೊರೆದಂತೆ ಪ್ರಾಪಂಚಿಕರಲ್ಲಿ ಇರುವದುಂಟು. ಬರಿಯ ಹೊರಗಿನ ಸ್ಥಿತಿಯನ್ನಷ್ಟೇ ನೋಡಿದರೆ ಇದು ತೀರದು. ಈ ಪಾದೋದಕವು ದಶ ವಿಧವೆಂದು ವರ್ಣಿತವಾಗಿದೆ.

ನೂರೊಂದು ಸ್ಥಲಗಳಲ್ಲಿ ಪಾದೋದಕವು ಮೂರೇ ವಿಧವಾಗಿದೆ ಎಂದು ಹೇಳಲ್ಪಟ್ಟಿದೆ. ಅವು ದೀಕ್ಷಾಪಾದೋದಕ ಶಿಕ್ಷಾಪಾದೋದಕ ಜ್ಞಾನಪಾದೋದಕ. ಇವುಗಳ ವಿಷಯವಾಗಿ ಈ ಮೊದಲೇ ಬರೆದುದುಂಟು. ಮತ್ತೆ ಇಲ್ಲಿ ಬರೆಯುವದು ಅವಶ್ಯವಿಲ್ಲ. ನಿಜವಾಗಿ ಈ ಮೂರು ಪಾದೋ ದಕಗಳಿಂದಲೇ ಭಕ್ತನ ಉದ್ಧಾರವು. ಮೇಲೆ ಹೇಳಿದ ದಶವಿಧಪಾದೋ ದಕಗಳ ನಿಜ ಸ್ವರೂಪವನರಿತು ಒಳಿತಾಗಿ ಮನನಿಸಿ ಆಚರಿಸಿದರೆ ಅವು ಗಳ ಪರಿಣಾಮವು ಸಹ ಕೊನೆಗೆ ಈ ತ್ರಿವಿಧ ಪಾದೋದಕದಂತೆಯೇ ಆಗುವದು.

## ಕ್ರಿಯಾಪ್ರಸಾದ.

ಪ್ರಸಾದವು ಜೀವನೋದ್ಧಾರದ ಸಾಧನವು ಎಂದು ಸಾಧಾರಣವಾಗಿ ಅದರ ಅರ್ಥ ಮಾಡಬಹುದು. ಅದರಲ್ಲಿಯೂ ಕ್ರಿಯಾ ಪ್ರಸಾದವೆಂದರೆ ಹೊರಗೆ ತೋರುವಂತಹ ಪ್ರಸಾದವು. ಸಾಮಾನ್ಯ ಜನರು ದೇವರಮೂರ್ತಿಗೆ ಧೂಪಾರತಿ ಮಾಡಿದ್ದರ ಶೇಷ ಅಂದರೆ ಬೂದಿಯನ್ನೇ ಪ್ರಸಾದವೆಂತಲೂ

ಅಂಗಾರವೆಂತಲೂ ಹೇಳುವರು. ಇದಲ್ಲದೆ ದೇವರಿಗೆ ನೈವೇದ್ಯ ಮಾಡಿದ ಪದಾರ್ಥಗಳನ್ನು ದೇವರ ಪ್ರಸಾದವೆನ್ನುವರು. ಜಾತ್ರೆಗೆ ಹೋಗಿ ಅಲ್ಲಿಂದ ಕೊಂಡುತಂದ ಮಂಡಕ್ಕಿ, ಅರಳು, ಮೇವೇ ಮಿಠಾಯಿಗಳನ್ನು ಸಹ ದೇವರ ಪ್ರಸಾದವೆಂತಲೇ ಬೀರುವದುಂಟು. ಇವನ್ನೆಲ್ಲ ನೋಡಿದರೆ ಪ್ರಸಾದವು ಸದ್ಭಾವ ಜನ್ಯವೆಂಬುದು ಸ್ಪಷ್ಟವಾಗಿ ತೋರುತ್ತದೆ. ನಮ್ಮ ವೀರಶೈವರು ಮೂರ್ತಿಗಳನ್ನು ದೇವರೆಂದು ಭಾವಿಸುವದಿಲ್ಲ. ಗುರುಲಿಂಗಜಂಗಮರುದವಿನಾ ಇನ್ನೊಂದನ್ನು ಅವರು ಮನ್ನಿಸರು. ಇಷ್ಟಲಿಂಗವೆಂದರೆ ಅದು ಜಗದ್ವ್ಯಾಪಿ ಪರಮಾತ್ಮನ ಬಹಿಃಸ್ವರೂಪವು. ಅದು ಕೇವಲ ಸುಜ್ಞಾನದ ಕಲ್ಪಿತ ಆಕಾರವು. ಗುರುಜಂಗಮರು ನರರೂಪಿಗಳಾದರೂ ಅವರ ದೇಹವನ್ನು ಲೆಕ್ಕಿಸದೆ ಅವರಲ್ಲಿರುವ ಸುಜ್ಞಾನ, ಸದ್ಗುಣ, ಸದಾಚಾರಗಳನ್ನೇ ಮುಖ್ಯವಾಗಿ ಲಕ್ಷ್ಯಕ್ಕೆತಂದು ಅವರನ್ನು ದೇವರಂತೆ ಪೂಜ್ಯರೆಂದು ಎಣಿಸುವದುಂಟು. ಆದಕಾರಣ ಈ ಮೂರರಿಂದಲೇ ನಿಜವಾದ ಪಾದೋದಕ ಪ್ರಸಾದಗಳು ಲಭಿಸುವವೇ ವಿನಾ ಶಿಲಾಮೂರ್ತಿಯಾದ ದೇವರಿಂದೇನೂ ಅವು ದೊರೆಯುವದು ಶಕ್ಯವಿಲ್ಲೆಂದು ನಿರ್ಣಯಿಸಿರುವರು. ಮೂರ್ತಿರೂಪ ದೇವರಲ್ಲಿಟ್ಟ ಸದ್ಭಾವನೆಯನ್ನು ಭಾವಿಕತನವೆಂದು ಹೇಳುವರು. ಅದು ಗೊಡ್ಡು ಸದ್ಭಾವನೆ. ಅದು ಮಾನವನ ಜೀವನೋದ್ಧಾರಕ್ಕೆ ಅಷ್ಟೇನೂ ಪ್ರಯೋಜನಕಾರಿಯಾಗಲಾರದು. ಗುರುಲಿಂಗ ಜಂಗಮರು ಹಾಗಲ್ಲ. ಅವರು ಸದ್ಗುಣ ಸದಾಚಾರವಂತರೂ ಸುಜ್ಞಾನ ಸಜೀವ ಮೂರ್ತಿಗಳೂ ಆದುದರಿಂದ ಅವರಲ್ಲಿ ಸದ್ಭಾವನೆ ಮಾಡುವದು ಸಕಾರಣವದೆ. ಸ್ವಾಭಾವಿಕವದೆ. ಹಾಗಿರದವರು ಎಂದೂ ಆ ಪದವಿಗೆ ಅರ್ಹರಲ್ಲ. ಉದ್ಧಾರಕ ಶಕ್ತಿಯು ಸ್ವಾಭಾವಿಕವಾಗಿಯೇ ಅವರಲ್ಲಿರುವದರಿಂದ ಅವರನ್ನು ಸದ್ಭಾವನೆಯಿಂದ ಸೇವಿಸಿದರೆ ಅವರಿಂದ ದಿಟವಾದ ಪ್ರಸಾದ ಪ್ರಾಪ್ತವಾಗುವದು. ಅಂತೇ ಈಗ ಪುನಃ ಆ ಗುರುಲಿಂಗಜಂಗಮರ ವಿಷಯವಾಗಿ ಪ್ರಸ್ತಾಪಿಸುವದು ಅವಶ್ಯವೆನಿಸಿತು. ಈ ಪ್ರಸಾದವು ಏಕಾದಶ ವಿಧವಾಗಿರುವದು ಎಂದು ಬಲ್ಲವರು ಬರೆದಿರುವರು. ಅದು ಸಮಾಂತಕವಾಗಿ ಇಷ್ಟಲಿಂಗಕ್ಕೆ ಸಮರ್ಪಿಸಿದ ದ್ರವ್ಯ ಇಲ್ಲವೇ ಪದಾರ್ಥವಾಗಿರುವದು. ಈ ಪ್ರಸಾದವು ಮುಖ್ಯವಾಗಿ ಆಹಾರರೂಪದ್ದಿರುವದು. ಲಿಂಗಾರ್ಪಿತವಾದ ಮೇಲೆಯೇ ಅದು ಪ್ರಸಾದವಾಗುವದು. ಪ್ರಸಾದದಲ್ಲಿ ತಮ್ಮ ಸದ್ಭಾವನೆಯನ್ನೂ ಅರಿವನ್ನೂ ಹೆಚ್ಚು ಹೆಚ್ಚು ಬಲಪಡಿಸುತ್ತ ಹೋದಂತೆ, ಅದು ನಿಜಪ್ರಸಾ

ದಕ್ಕೆ ಸಮೀಪಿಸುತ್ತ ಕಡೆಗೆ ಆ ಪರಮಾತ್ಮ ಸ್ವರೂಪವೇ ಆಗುವದು. ಅದನ್ನು ಅವಲಂಬಿಸಿದರೆ ಆದು ಸಾರ್ಥಕವಾಗುವದು. ಈ ವಿಷಯುವನ್ನು ಬಲ್ಲವರಿಂದ ಒಳಿತಾಗಿ ಅರಿಯಬೇಕು. ಬರಿಯ ಪ್ರಸಾದ ಎಂದು ಒಣ ಸಂಸ್ಕಾರ ಹೊಂದಿದಷ್ಟಕ್ಕೆ ಫಲವಿಲ್ಲ. ಇಂತಹ ಬಲ್ಲವರಾಗಿದ್ದರೂ ಅವರೇ ಗುರುಗಳು.

ನೂರೊಂದು ಸ್ಥಳಗಳಲ್ಲಿ ಪ್ರಸಾದಿಗಳು ಮೂರು ತೆರನಾಗಿದ್ದುದು ಕಂಡುಬರುತ್ತದೆ. ಅವರು ಆದಿಪ್ರಸಾದಿ ಅಂತ್ಯಪ್ರಸಾದಿ ಸೇವ್ಯಪ್ರಸಾದಿ, ಈ ಮೂರೂ ಹೆಸರಿನಿಂದ ತೋರಿದರೂ ನಿಜವಾಗಿ ಅವೆಲ್ಲ ಒಂದೇ ಇರುವವು. ಏಕಾದಶ ಪ್ರಸಾದಗಳ ಗುಟ್ಟಾದರೂ ಇದೇ ಇರುವದು. ಗುರು, ಲಿಂಗ, ಜಂಗಮ, ಪ್ರಸಾದ, ಪಾದೋದಕ ಈ ಶಬ್ದಗಳು ನೂರೊಂದುಸ್ಥಲ ವಿವರಣೆಯಲ್ಲಿ ಬಂದಿರುವದರಿಂದ ಅವುಗಳ ಸತ್ಯಸ್ವರೂಪವು ಹೊಳೆಯುವ ಸಲುವಾಗಿ ಇದನ್ನು ಮುಂದಿಡಬೇಕಾಯಿತು.

ಕೊನೆಗೆ ಗುರು ಲಿಂಗ ಜಂಗಮಗಳ ಪಟವನ್ನು ಕೊಟ್ಟು ಈ ಲೇಖವನ್ನು ಮುಗಿಸಲಾಗಿದೆ. ಅದನ್ನು ಅವಲೋಕಿಸಲು ಗುರು ಲಿಂಗ ಜಂಗಮಗಳ ಮಹತ್ವವೂ ವ್ಯಾಪಕತೆಯೂ ದಟ್ಟಾಗಿ ಮನದಟ್ಟಾಗುವದು. ನಮ್ಮ ಪ್ರಮಥರು ಅವಕ್ಕೆ ಇಷ್ಟೊಂದು ಗೌರವವನ್ನದೇಕೆ ಕೊಟ್ಟಿರುವರೆಂಬುದರ ಕಲ್ಪನೆಯಾದರೂ ಚನ್ನಾಗಿ ಹೊಳೆಯುವದು.

---

ರಲಿಂಗದೊಳಗೆಂದು ತಿಳಿದರ್ಪಿತವ ಮಾಡುವುದು. ಅದು ಅಪ್ಪು ತತ್ವ ದೊಳಗಣ ಪೃಥ್ವೀ ತತ್ವ ಸಂಬಂಧವಾದ ಪದಾರ್ಥವೆಂದರಿದು ಆ ಪದಾ ರ್ಥವನು ಸುಬುದ್ಧಿ ಹಸ್ತದೊಳಗಣ ಸುಚಿತ್ತ ಹಸ್ತದಿಂದ ಪಿಡಿದುಕೊಂಡು, ಜ್ಞಾನಶಕ್ತಿಯೊಳಗಣ ಕ್ರಿಯಾಶಕ್ತಿಯುಕ್ತಮಾಗಿ ನೈಷ್ಠಿಕಾಭಕ್ತಿಯೊಳಗಣ ಶ್ರದ್ಧಾ ಭಕ್ತಿಯಿಂದೆ ಗುರುಲಿಂಗದೊಳಗಣ ಆಚಾರಲಿಂಗಕೆಂದು ಅರಿದಾರೋ ಪಿಸಿ, ಮಕಾರ ಮಂತ್ರದೊಳಗಣ ನಕಾರ ಮಂತ್ರ ಸ್ಮರಣೆಯೊಡಗೂಡಿ ಜಿಹ್ವೇಂದ್ರಿಯ ಮುಖದೊಳಗಣ ಘ್ರಾಣೇಂದ್ರಿಯ ಮುಖದಲ್ಲಿ ಸಮರ್ಪಿಸಿ ಆ ಲಿಂಗಮುಖದಿಂದುಳುಮೆಯಾಗಿ ಬಂದ ಪ್ರಸನ್ನೇತಿಪ್ರಸಾದವ ಪಡೆ ದನುಭವಿಸಿ ಪರಮ ಪರಿಣಾಮಿಯಾಗಿರುತ್ತಿಹನಾ ಮಾಹೇಶ್ವರದೊಳಗಣ ಸದ್ಭಕ್ತನು.

ಮಹೇಶ್ವರನೊಳಗಣ ಮಹೇಶಃ— ಬೆಳವಲ ಚೂತ ಕ್ರಮುಕಾಮಳ ಕಾದಿಗಳಲ್ಲಿ ತೋರುವ ಒಗರಾದ ರಸವೆಂಬ ಪದಾರ್ಥವನ್ನು ಗುರುಲಿಂಗ ದೊಳಗಣ ಗುರುಲಿಂಗದೊಳಗೆಂದು ತಿಳಿದರ್ಪಿತವ ಮಾಡುವುದು. (ಇದರ ಸಕೀಲದ ರೀತಿಯನ್ನು ಹಿಂದಿನ ಸಕೀಲಗಳ ರೀತಿಯನ್ನನುಸರಿಸಿ ಕಂಡು ಕೊಳ್ಳುವದು.)

ಮಹೇಶ್ವರನೊಳಗಣ ಪ್ರಸಾದಿಃ— ಲವಂಗ ಶುಂಠಿ ಮೊದಲಾದವು ಗಳಲ್ಲಿ ತೋರುವ ಕಟುವಾದ ರುಚಿ ಎಂಬ ಪದಾರ್ಥವನ್ನು ಶಿವಲಿಂಗ ದಲ್ಲಿ ಅರಿವುದು. ಗುರುಲಿಂಗದೊಳಗಣ ಶಿವಲಿಂಗದೊಳಗೆಂದು ತಿಳಿದರ್ಪಿ ತವ ಮಾಡುವುದು. (ಇದರ ಸಕೀಲದ ರೀತಿಯನ್ನು ಹಿಂದಿನ ಸಕೀಲ ಗಳ ರೀತಿಯನ್ನು ಅನುಸರಿಸಿ ಕಂಡುಕೊಳ್ಳುವದು.)

ಮಹೇಶ್ವರನೊಳಗಣ ಪ್ರಾಣಲಿಂಗಿಃ— ಚೂತ ಆಮ್ಲ ಫಲಾದಿಗ ಳಲ್ಲಿ ತೋರುವ ಹುಳಿಯಾದ ರಸವೆಂಬ ಪದಾರ್ಥವನ್ನು ಜಂಗಮಲಿಂಗ ದಲ್ಲಿ ಅರಿವುದು. ಗುರುಲಿಂಗದೊಳಗಣ ಜಂಗಮಲಿಂಗದೊಳಗೆಂದು ತಿಳಿ ದರ್ಪಿತವ ಮಾಡುವುದು. (ಇದರ ಸಕೀಲದ ರೀತಿಯನ್ನು ಹಿಂದಿನ ಸಕೀ ಲುಗಳ ರೀತಿಯನ್ನನುಸರಿಸಿ ಕಂಡುಕೊಳ್ಳುವದು.)

ಮಹೇಶ್ವರನೊಳಗಣ ಶರಣ:— ಹಾಗಲ, ಮೆಂತೆ ಸಮ್ಮಿಶ್ರಾದಿಗ ಳಲ್ಲಿ ತೋರುವ ಕಹಿಯಾದ ರಸವೆಂಬ ಪದಾರ್ಥವನ್ನು ಪ್ರಸಾದಲಿಂಗ

ದಲ್ಲಿ ಅರಿವುದು. ಗುರುಲಿಂಗದೊಳಗಣ ಪ್ರಸಾದಲಿಂಗದೊಳಗೆಂದು ತಿಳಿದ ರ್ಪಿತವ ಮಾಡುವುದು. (ಇದರ ಸಕೀಲದ ರೀತಿಯನ್ನು ಹಿಂದಿನ ಸಕೀಲಗಳ ರೀತಿಯನ್ನನುಸರಿಸಿ ಕಂಡುಕೊಳ್ಳುವದು.)

ಮಹೇಶ್ವರನೊಳಗಣ ಐಕ್ಯ:— ಇವೆಲ್ಲರಲ್ಲಿಯು ರುಚಿಯನರಿವುದು ಮಹಾಲಿಂಗವು. ಹಿಂದೆ ಹೇಳಿದ ಮಧುರವಾದ ರುಚಿ, ಒಗರಾದ ರುಚಿ, ಕಾರವಾದ ರುಚಿ, ಆಮ್ಲವಾದ ರುಚಿ, ಕಹಿಯಾದ ರುಚಿ ಈ ಪಂಚವಿಧ ರುಚಿಪದಾರ್ಥಂಗಳನ್ನು ಗುರುಲಿಂಗದೊಡನೆ ಕೂಡಿದ ಆಚಾರಾದಿ ಪಂಚವಿಧಲಿಂಗಗಳಿಗೆ ಪಂಚವಿಧ ಭಕ್ತಿ ಸಕೀಲಂಗಳಿಂದ ಸಮರ್ಪಿಸಿ ಆ ಪಂಚವಿಧ ಲಿಂಗಮುಖದಿಂದುಳುಮೆಯಾಗಿ ಬಂದ ಪಂಚವಿಧ ಪ್ರಸಾದವ ಪಡೆದನುಭವಿಸಿ ದಣ್ಣನೆ ದಣಿದು ಹಿಂತಿರುಗಿದಂತಾದ್ದೇ ಅರ್ಪಣವು. ಇವೆಲ್ಲ ರುಚಿಗಳು ಬೇರೆ ಬೇರೆಯಾಗಿ ತಟ್ಟೆದಲ್ಲಿ ಬೇರೆ ಬೇರೆ ಇಷ್ಟಲಿಂಗಾರ್ಪಿತ ಮಾಡಬಹುದು. ಇವೆಲ್ಲ ರುಚಿಗಳೊಂದೇ ವೇಳೆ ಕದಂಬವಾಗಿ ಬಂದು ತಟ್ಟೆದಲ್ಲಿ ವಿಂಗಡಿಸಿ ಲಿಂಗಾರ್ಪಿತ ಮಾಡುವುದಕ್ಕೆ ಕೂಡದು. ಅದನ್ನು ಪಂಚ ವಿಧ ಲಿಂಗವನೊಳಕೊಂಡು ತೋರುವ ಗುರುಲಿಂಗದೊಳಗೆಂದು ತಿಳಿದರ್ಪಿತವ ಮಾಡುವುದು. ಅದರ ಸಕೀಲವೆಂತುಟೆಲೆ ಸ್ವಾಮಿ ಎಂದು ಬೆಸಗೊಂಡೊಡೆ, ಅದು ಅಪ್ಪು ತತ್ವದೊಳಗಣ ಆತ್ಮ ತತ್ವ ಸಂಬಂಧವಾದ ಪದಾರ್ಥವೆಂದರಿದು ಆ ಪದಾರ್ಥವನ್ನು ಸುಬುದ್ಧಿ ಹಸ್ತದೊಳಗಣ ಸದ್ಭಾವ ಹಸ್ತದಿಂ ಪಿಡಿದುಕೊಂಡು ಜ್ಞಾನಶಕ್ತಿಯೊಳಗಣ ಚಿಚ್ಛಕ್ತಿಯುಕ್ತವಾಗಿ ನೈಷ್ಠಿಕಾಭಕ್ತಿಯೊಳಗಣ ಸಮರಸ ಭಕ್ತಿಯಿಂದ ಗುರುಲಿಂಗದೊಳಗಣ ಮಹಾಲಿಂಗಕ್ಕೆಂದರಿದು ಮಕಾರ ಮಂತ್ರದೊಳಗಣ ಓಂಕಾರ ಮಂತ್ರ ಸ್ಮರಣೆಯೊಡನೆ ಕೂಡಿಕೊಂಡು ಜಿಹ್ವೇಂದ್ರಿಯದೊಳಗಣ ಹೃದಯೇಂದ್ರಿಯ ಮುಖದಲ್ಲಿ ಸಮರ್ಪಿಸಿ ಆ ಲಿಂಗಮುಖದುಳುಮೆಯಾಗಿ ಬಂದ ಪ್ರಸನ್ನೇತಿ ಪ್ರಸಾದವ ಪಡೆದನುಭವಿಸಿ ಪರಮ ಪರಿಣಾಮಿಯಾಗಿರುತ್ತಿಹನು ಮಹೇಶ್ವರನೊಳಗಣ ಐಕ್ಯನು.

## ಲವಣ.

ಮಧುರಾದ್ಯೈದು ಪ್ರಕಾರವಾದ ರಸಂಗಳೊಳಗೆ ಲವಣವು ಕೂಡಿದಲ್ಲದೆ ರುಚಿಯಾಗದು. ಪದಾರ್ಥ ರುಚಿಕರವಾದಲ್ಲಿ ಕರಣಂಗಳು ಕೊಂಬುವವು. ಕರಣಂಗಳು ಕೊಂಡಲ್ಲಿ ಲಿಂಗಾರ್ಪಿತವಾಗುವದು. ಲಿಂಗಾರ್ಪಿತವಾ

ದಲ್ಲಿ ಪ್ರಸಾದ ಸೇವನೆಯಾಗುವದು. ಪ್ರಸಾದ ಸೇವನೆಯಿಂದ ಮುಕ್ತಿ ಯಾಗುವುದು. ಲವಣವು ಪದಾರ್ಥವಲ್ಲವೆಂದು ತಿಳಿದು ಪಂಚರಸಗಳನು ಬೇರೆ ಬೇರೆ ಒಂದೊಂದು ಕಡೆಯಲ್ಲಿ ನೀಡಿಕೊಂಡು ಲವಣವ ಬೇರೊಂದು ಕಡೆಯಲ್ಲಿ ನೀಡಿಕೊಂಡು ಬೇರೆ ಬೇರೆ ಅರ್ಪಿಸಲಾಗದು. ಹೀಗೆ ಲಿಂಗಾರ್ಪಿತವ ಮಾಡಿದರೆ ಪದಾರ್ಥ ರುಚಿಕರವಾಗದು. ಆ ಪದಾರ್ಥ ರುಚಿ ಕರವಾಗದಿದ್ದಲ್ಲಿ ಕರಣಂಗಳು ಕೊಳ್ಳದಿದ್ದಲ್ಲಿ ಲಿಂಗಾರ್ಪಿತವಿಲ್ಲ, ಪ್ರಸಾದ ಸೇವನೆ ಇಲ್ಲ.

## ಶಿವಲಿಂಗ ಮಿಶ್ರ.

ತದನಂತರದಲ್ಲಿ ಶಿವಲಿಂಗ ಪ್ರಸಾದಿಗೆ ಶಿವಲಿಂಗವು ತಾನೊಂದೇ ಷಡ್ವಿಧ ಲಿಂಗಗಳಾದವು. ಅವು ಶಿವಲಿಂಗದೊಳಗಣ ಆಚಾರಲಿಂಗ, ಶಿವಲಿಂಗದೊಳಗಣ ಗುರುಲಿಂಗ, ಮೊದಲಾದವೆನಿಸವು. ಶಿವಲಿಂಗದೊಡನೆ ಕೂಡಿದ ಷಡ್ವಿಧ ಲಿಂಗಂಗಳಿಗೆ ಷಡ್ವಿಧ ರೂಪು ಪದಾರ್ಥಂಗಳನ್ನು ಷಡ್ವಿಧ ಭಕ್ತಿ ಸಕೀಲಗಳಿಂದ ಸಮರ್ಪಿತವಾಗುವ ವಿಚಾರವು ಹೇಗಿಪ್ಪುದೆಲೆ ಸ್ವಾಮಿ ಎಂದು ಬೆಸಗೊಂಡಡೆ,

ಪ್ರಸಾದಿಯೊಳಗಣ ಭಕ್ತಃ—ಕನಕ ಚಂಪಕಗಳಲ್ಲಿ ತೋರುವ ಹಳದಿ ಬಣ್ಣದ ರೂಪೆಂಬ ಪದಾರ್ಥವನ್ನು ಶಿವಲಿಂಗದೊಳಗಣ ಆಚಾರಲಿಂಗ ದೊಳಗೆಂದು ತಿಳಿದರ್ಪಿತವ ಮಾಡುವುದು. ಅದನು ಹೇಗೆ ಸಮರ್ಪಣೆ ಮಾಡಬೇಕು, ಅದರ ಸಕೀಲವೆಂತುಟೆಲೆ ಸ್ವಾಮಿ ಎಂದು ಬೆಸಗೊಂಡೊಡೆ ಅದು ಅಗ್ನಿ ತತ್ವದೊಳಗಣ ಪೃಥ್ವೀ ತತ್ವ ಸಂಬಂಧವಾದ ಪದಾರ್ಥ ವೆಂದರಿದು ಆ ಪದಾರ್ಥವನ್ನು ನಿರಹಂಕಾರ ಹಸ್ತದೊಳಗಣ ಸುಚಿತ್ತ ಹಸ್ತ ದಿಂದ ಹಿಡಿದುಕೊಂಡು ಇಚ್ಛಾಶಕ್ತಿಯೊಳಗಣ ಕ್ರಿಯಾಶಕ್ತಿಯುಕ್ತವಾಗಿ ಸಾವಧಾನ ಭಕ್ತಿಯೊಳಗಣ ಶ್ರದ್ಧಾಭಕ್ತಿಯಿಂದ ಶಿವಲಿಂಗದೊಳಗಣ ಆಚಾರ ಲಿಂಗಕೆಂದರಿದಾರೋಪಿಸಿ ಶಿಕಾರಮಂತ್ರದೊಳಗಣ ನಕಾರಮಂತ್ರಸ್ಮ ರಣೆಯಿಂದ ನೇತ್ರೇಂದ್ರಿಯದೊಳಗಣ ಘ್ರಾಣೇಂದ್ರಿಯ ಮುಖದಲ್ಲಿ ಸಮ ರ್ಪಿಸಿ ಆ ಲಿಂಗ ಮುಖದಿಂದುಳುಮೆಯಾಗಿ ಬಂದ ಪ್ರಸನ್ನೇತಿ ಪ್ರಸಾದವ ಪಡೆದನುಭವಿಸಿ ಪರಮ ಪರಿಣಾಮಿಯಾಗಿರುತ್ತಿಹನು ಪ್ರಸಾದಿಯೊಳಗಣ ಸದ್ಭಕ್ತನು.

ಪ್ರಸಾದಿಯೊಳಗಣ ಮಹೇಶಃ— ಕ್ಷೀರ, ಶಂಖ, ಮೌಕ್ತಿಕಾದಿಗಳಲ್ಲಿ ತೋರುವ ಬಿಳುಪಿನ ಬಣ್ಣದ ರೂಪೆಂಬ ಪದಾರ್ಥವನ್ನು ಗುರುಲಿಂಗದಲ್ಲರಿವುದು, ಶಿವಲಿಂಗದೊಳಗಣ ಗುರುಲಿಂಗದೊಳಗೆಂದು ತಿಳಿದರ್ಪಿತವ ಮಾಡುವುದು. ( ಇದರ ಸಕೀಲದ ಕ್ರಮವನ್ನು ಹಿಂದಿನ ರೀತಿಯನ್ನನುಸರಿಸಿ ಕಂಡುಕೊಳ್ಳುವುದು).

ಪ್ರಸಾದಿಯೊಳಗಣ ಪ್ರಸಾದಿಃ— ಚಂದ್ರಗಾವಿ ಸಂಧ್ಯಾಮೇಘರಾಗ ಮೊದಲಾದವರಲ್ಲಿ ತೋರುವ ಕೆಂಪಿನ ಬಣ್ಣದ ರೂಪೆಂಬ ಪದಾರ್ಥವನ್ನು ಶಿವಲಿಂಗದಲ್ಲರಿವುದು. ಶಿವಲಿಂಗದೊಳಗಣ ಶಿವಲಿಂಗದಲ್ಲಿ ಎಂದು ತಿಳಿದು ಅರ್ಪಿತವ ಮಾಡುವದು (ಇದರ ಸಕೀಲವನ್ನು ಹಿಂದಿನ ರೀತಿಯನ್ನನುಸರಿಸಿ ಕಂಡುಕೊಳ್ಳುವುದು.)

ಪ್ರಸಾದಿಯೊಳಗಣ ಪ್ರಾಣಲಿಂಗಿಃ— ಪಚ್ಚೆಮಣಿ ಹಸರು ಹೊದಿಕೆ ಮೊದಲಾದುವಲ್ಲಿ ತೋರುವ ಹಸುರಾದ ಬಣ್ಣದ ರೂಪೆಂಬ ಪದಾರ್ಥವನ್ನು ಜಂಗಮಲಿಂಗದಲ್ಲಿ ಅರಿವುದು. ಶಿವಲಿಂಗದೊಳಗಣ ಜಂಗಮಲಿಂಗದೊಳಗೆ ಎಂದು ತಿಳಿದರ್ಪಿತವ ಮಾಡುವುದು. (ಇದರ ಸಕೀಲವನ್ನು ಹಿಂದಿನ ರೀತಿಯನ್ನನುಸರಿಸಿ ಕಂಡುಕೊಳ್ಳುವದು)

ಪ್ರಸಾದಿಯೊಳಗಣ ಶರಣಃ— ಕೂದಲು ಕಾಡಿಗೆ ಕಸ್ತೂರಿ ಮೊದಲಾದವುಗಳಲ್ಲಿ ತೋರುವ ಕಪ್ಪಿನ ಬಣ್ಣದ ರೂಪೆಂಬ ಪದಾರ್ಥವನ್ನು ಪ್ರಸಾದಲಿಂಗದಲ್ಲರಿವುದು. ಶಿವಲಿಂಗದೊಳಗಣ ಪ್ರಸಾದಲಿಂಗದೊಳಗೆ ಎಂದು ತಿಳಿದರ್ಪಿತವ ಮಾಡುವುದು. (ಇದರ ಸಕೀಲವನ್ನು ಹಿಂದಿನ ರೀತಿಯನ್ನನುಸರಿಸಿ ಕಂಡುಕೊಳ್ಳುವದು)

ಪ್ರಸಾದಿಯೊಳಗಣ ಐಕ್ಯಃ— ಇವೆಲ್ಲರಲ್ಲಿಯ ರೂಪನರಿವುದು ಮಹಾಲಿಂಗದಲ್ಲಿ. ಹಿಂದೆ ಹೇಳಿದ ಪೀತವರ್ಣದ ರೂಪು, ಶ್ವೇತವರ್ಣದ ರೂಪು, ಮಾಂಜಿಷ್ಟವರ್ಣದ ರೂಪು, ಹರಿತವರ್ಣದ ರೂಪು ಕೃಷ್ಣ,ವರ್ಣದರೂಪೆಂಬ ಪಂಚವಿಧರೂಪು ಪದಾರ್ಥಂಗಳನ್ನು ಶಿವಲಿಂಗದೊಡನೆ ಕೂಡಿದ ಪಂಚವಿಧಲಿಂಗಂಗಳಿಗೆ ಪಂಚವಿಧಭಕ್ತಿ ಸಕೀಲಂಗಳಿಂದ ಸಮರ್ಪಿಸಿ, ಆ ಪಂಚವಿಧಲಿಂಗದಿಂದುಳುಮೆಯಾಗಿ ಬಂದ ಪಂಚವಿಧ ಪ್ರಸಾದವ ಪಡೆದನ್ನು ಭವಿಸಿ ದಣ್ಣನೆ ದಣಿದು ಹಿಂತಿರುಗಿದಂತಾದ್ದೇ ಇವೆಲ್ಲರಲ್ಲಿಯ ರೂಪು ಬೇರೆ ಬೇರೆ ತಟ್ಟಿದರಂತೂ ಬೇರೆ ಬೇರೆ ಲಿಂಗಾರ್ಪಿತ ಮಾಡಬಹುದು.

ಒಂದು ವೇಳೆ ಕದಂಬವಾಗಿ ಬಂದು ತಟ್ಟಿದಲ್ಲಿ ವಿಂಗಡಿಸಿ ಲಿಂಗಾರ್ಪಿತ ಮಾಡುವುದಕ್ಕೆ ಕೂಡದು. ಅದನ್ನು ಮಹಾಲಿಂಗದಲ್ಲಿ ಅರಿವುದು. ಶಿವ ಲಿಂಗದೊಳಗಣ ಮಹಾಲಿಂಗದಲ್ಲಿ ಎಂದು ತಿಳಿದರ್ಪಿತವ ಮಾಡುವುದು. ಅದರ ಸಕೀಲವೆಂತುಟೆಲೆ ಸ್ವಾಮಿ ಎಂದು ಬೆಸಗೊಂಡೊಡೆ, ಅದು ಅಗ್ನಿ ತತ್ವದೊಳಗಣ ಆತ್ಮ ತತ್ವ ಸಂಬಂಧವಾದ ಪದಾರ್ಥವೆಂದರಿದು ಆ ಪದಾರ್ಥವನ್ನು ನಿರಹಂಕಾರ ಹಸ್ತದೊಳಗಣ ಸದ್ಭಾವ ಹಸ್ತದಿಂದ ಪಿಡಿದುಕೊಂಡು ಇಚ್ಛಾಶಕ್ತಿಯೊಳಗಣ ಚಿಚ್ಛಕ್ತಿಯುಕ್ತವಾಗಿ ಸಾವಧಾನ ಭಕ್ತಿಯೊಳಗಣ ಸಮರಸಭಕ್ತಿಯಿಂದ ಶಿವಲಿಂಗದೊಳಗಣ ಮಹಾಲಿಂಗಕ್ಕೆಂದು ಅರಿದಾರೋಪಿಸಿ ಶಿಕಾರಮಂತ್ರದೊಳಗಣ ಓಂಕಾರಮಂತ್ರಸ್ಮರಣೆಯೊಡನೆ ಕೂಡಿಕೊಂಡು ನೇಂತ್ರೇಂದ್ರಿಯದೊಳಗಣ ಹೃದಯೇಂದ್ರಿಯ ಮುಖದಲ್ಲಿಯೇ ಸಮರ್ಪಿಸಿ ಆ ಲಿಂಗಮುಖದಿಂದುಳುಮೆಯಾಗಿ ಬಂದ ಪ್ರಸನ್ನೇತಿ ಪ್ರಸಾದವ ಪಡೆದನುಭವಿಸಿ ಪರಮಪರಿಣಾಮಿಯಾಗಿರುತ್ತಿಹನು ಪ್ರಸಾದಿಯೊಳಗಣ ಶಿವೈಕ್ಯನು.

## ಜಂಗಮಲಿಂಗಮಿಶ್ರ.

ತದನಂತರದಲ್ಲಿ ಜಂಗಮಲಿಂಗ, ಪ್ರಾಣಲಿಂಗಿಗೆ ಚಿತ್ಪ್ರಾಣವಾದ ಜಂಗಮಲಿಂಗವು ತಾನೊಂದೇ ಷಡ್ವಿಧಲಿಂಗಗಳಾದವು. ಜಂಗಮಲಿಂಗದೊಳಗಣ ಆಚಾರಲಿಂಗ, ಜಂಗಮಲಿಂಗದೊಳಗಣ ಗುರುಲಿಂಗ ಜಂಗಮಲಿಂಗದೊಳಗಣ ಶಿವಲಿಂಗ, ಜಂಗಮಲಿಂಗದೊಳಗಣ ಪ್ರಸಾದಲಿಂಗ, ಜಂಗಮಲಿಂಗದೊಳಗಣ ಮಹಾಲಿಂಗವೆಂದು ಆರು ಭೇದವಾಗಿಹವು. ಅರ್ಪಣದ ಜಂಗಮಲಿಂಗದೊಡನೆ ಕೂಡಿದ ಷಡ್ವಿಧ ಲಿಂಗಂಗಳಿಗೆ ಷಡ್ವಿಧ ಸ್ಪರ್ಶನ ಪದಾರ್ಥಂಗಳನ್ನು ಷಡ್ವಿಧ ಭಕ್ತಿ ಸಕೀಲಂಗಳಿಂದ ಸಮರ್ಪಿತವಾಗುವ ವಿಚಾರವು ಹೋಗಿಪ್ಪುದೆಲೆ ಸ್ವಾಮಿ ಎಂದು ಬೆಸಗೊಂಡೊಡೆ, ನವಕಂಬಳಾಚ್ಛಾದನ, ಕೇವಲ ಕಠಿಣಶಯನ ತರುಭಿತ್ತಿ ಶಿಲಾದಿಗಳವಲಂಬನದಿಂದ ಅಂಗಕ್ಕೆ ಬಿರಿಸಾಗಿ ತಟ್ಟುವ ಕಠಿಣವಾದ ಸ್ಪರ್ಶನವೆಂಬ ಪದಾರ್ಥವನ್ನು ಆಚಾರಲಿಂಗದಲ್ಲರಿವುದು. ಜಂಗಮಲಿಂಗದೊಳಗಣ ಆಚಾರ ಲಿಂಗದೊಳಗೆಂದು ತಿಳಿದರ್ಪಿತವ ಮಾಡುವುದು. ಅದು ಹೇಗೆ ಸಮರ್ಪಣೆಯ ಮಾಡಬೇಕು, ಅದರ ಸಕೀಲುವೆಂತುಂಟೆಲೆ ಸ್ವಾಮಿ ಎಂದು ಬೆಸಗೊಂಡೊಡೆ—

ಪ್ರಾಣಲಿಂಗಿಯೊಳಗಣ ಭಕ್ತ:—ಅದು ವಾಯುತತ್ವದೊಳಗಣ ಪೃಥ್ವೀ ತತ್ವ ಸಂಬಂಧವಾದ ಪದಾರ್ಥವೆಂದರಿದು ಆ ಪದಾರ್ಥವನ್ನು ಸುಮನ ಹಸ್ತ ದೊಳಗಣ ಸುಚಿತ್ತ ಹಸ್ತದಿಂ ಪಿಡಿದುಕೊಂಡು ಆದಿಶಕ್ತಿಯೊಳಗಣ ಕ್ರಿಯಾ ಶಕ್ತಿಯುಕ್ತವಾಗಿ ಅನುಭಾವಭಕ್ತಿಯೊಳಗಣ ಶ್ರದ್ಧಾಭಕ್ತಿಯಿಂದೆ ಜಂಗ ಮಲಿಂಗದೊಳಗಣ ಆಚಾರಲಿಂಗಕ್ಕೆಂದರಿದಾರೋಪಿಸಿ ವಕಾರ ಮಂತ್ರದೊ ಳಗಣ ನಕಾರ ಮಂತ್ರಸ್ಮರಣೆಯೊಡನೆ ಕೂಡಿಕೊಂಡು ತ್ವಗಿಂದ್ರಿಯ ಮುಖ ದೊಳಗಣ ಘ್ರಾಣೇಂದ್ರಿಯ ಮುಖದಲ್ಲಿಯೇ ಸಮರ್ಪಿಸಿ ಆ ಲಿಂಗಮುಖ ದಿಂದುಳುಮೆಯಾಗಿ ಬಂದ ಪ್ರಸನ್ನೇತಿ ಪ್ರಸಾದವ ಪಡೆದನುಭವಿಸಿ ಪರ ಮಪರಿಣಾಮಿಯಾಗಿರುತ್ತಿಹನು ಪ್ರಾಣಲಿಂಗಿಯೊಳಗಣ ಸದ್ಭಕ್ತನು.

ಪ್ರಾಣಲಿಂಗಿಯೊಳಗಣ ಮಹೇಶ್ವರ:— ಹಂಸತೂಲತಲ್ಪ ಸುಪ್ಪತ್ತಿಕೆ ಅಂಗಕ್ಕೆ ಮೆತ್ತಗೆ ತಟ್ಟುವ ಮೃದುಸ್ಪರ್ಶನವೆಂಬ ಪದಾರ್ಥವನ್ನು, ಆ ಗುರು ಲಿಂಗದಲ್ಲಿರುವುದು, ಜಂಗಮಲಿಂಗದೊಳಗಣ ಗುರುಲಿಂಗದಲ್ಲಿ ಎಂದು ತಿಳಿ ದರ್ಪಿತವ ಮಾಡುವದು. (ಈ ಅರ್ಪಣದ ಸಕೀಲವನ್ನು ಹಿಂದೆ ಹೇಳಿದ ರೀತಿಯಂತೆಯೇ ತಿಳಿದರ್ಪಿಸುವುದು. )

ಪ್ರಾಣಲಿಂಗಿಯೊಳಗಣ ಪ್ರಸಾದಿ:— ಬೀಸಿ ನೀರು ಬೆಂಕಿಗಳಿಂದ ಅಂಗಕ್ಕೆ ಬೆಚ್ಚಗೆ ತಟ್ಟುವ ಉಷ್ಣ ಸ್ಪರ್ಶನವೆಂಬ ಪದಾರ್ಥವನ್ನು ಶಿವ ಲಿಂಗದಲ್ಲರಿವುದು. ಜಂಗಮಲಿಂಗದೊಳಗಣ ಶಿವಲಿಂಗದೊಳಗೆಂದು ತಿಳಿದ ರ್ಪಿತವ ಮಾಡುವುದು. (ಈ ಅರ್ಪಣದ ಸಕೀಲಗಳನ್ನು ಹಿಂದಿನ ರೀತಿ ಯಂತೆಯೇ ತಿಳಿದರ್ಪಿಸುವುದು.)

ಪ್ರಾಣಲಿಂಗಿಯೊಳಗಣ ಪ್ರಾಣಲಿಂಗಿ:— ಹಿಮಶಶಿ ಶರತ್ಕಾಲಗ ಳಿಂದಲೂ ಚಳಿ ಗಾಳಿ ಮಳೆಗಳಿಂದಲೂ ಲಿಂಗಕ್ಕೆ ತಣ್ಣಗೆ ತಟ್ಟುವ ತಣ್ಣನ ಸ್ಪರ್ಶನವೆಂಬ ಪದಾರ್ಥವನ್ನು ಜಂಗಮಲಿಂಗದೊಳಗಣ ಜಂಗಮ ಲಿಂಗದೊಳಗೆಂದು ತಿಳಿದರ್ಪಿತವ ಮಾಡುವುದು. (ಈ ಅರ್ಪಣದ ಸಕೀಲ ಗಳನ್ನು ಹಿಂದಿನ ರೀತಿಯಂತೆಯೇ ತಿಳಿದರ್ಪಿಸುವುದು.)

ಪ್ರಾಣಲಿಂಗಿಯೊಳಗಣ ಶರಣ:— ಗಂಜಿಬಳಪಿನ ಮಿಂಚುಗಳಿಂದಾದ ಸರಿಗಳೊಳ್ ಗಜ್ಜುಗ ಶಂಖಾದಿಗಳೊಳ್ ತೋರುವ ನುಣುಪಾದ ಸ್ಪರ್ಶ

ನವೆಂಬ ಪದಾರ್ಥವನ್ನು ಪ್ರಸಾದ ಲಿಂಗದಲ್ಲಿ ಅರಿವುದು. ಜಂಗಮಲಿಂಗ ದೊಳಗಣ ಪ್ರಸಾದಲಿಂಗದೊಳಗೆಂದು ತಿಳಿದರ್ಪಿತವ ಮಾಡುವುದು (ಈ ಅರ್ಪಣದ ಸಕೀಲಗಳನ್ನು ಹಿಂದಿನ ರೀತಿಯಂತೆಯೇ ತಿಳಿದರ್ಪಿಸುವುದು)

ಪ್ರಾಣಲಿಂಗಿಯೊಳಗಣ ಐಕ್ಯ:—ಇದೆಲ್ಲದರಲ್ಲಿಯ ಸ್ಪರ್ಶನಮಂ ಹಿಂದೆ ಹೇಳಿದ ಕಠಿಣ, ಮೃದು, ಉಷ್ಣ, ಶೈತ್ಯ, ಮಿಶ್ರ ಸ್ಪರ್ಶನವೆಂಬ ಪಂಚವಿಧ ಪದಾರ್ಥಂಗಳನ್ನು ಜಂಗಮಲಿಂಗದೊಡನೆ ಕೂಡಿದ ಆಚಾರಾದಿ ಪಂಚವಿಧ ಲಿಂಗಂಗಳಿಗೆ ಪಂಚವಿಧ ಭಕ್ತಿ ಸಕೀಲಂಗಳಿಂದ ಸಮರ್ಪಿಸಿ ಆ ಪಂಚವಿಧ ಲಿಂಗಮುಖದಿಂದುಳುಮೆಯಾಗಿ ಬಂದ ಪಂಚವಿಧ ಪ್ರಸಾದವ ಪಡೆದನುಭ ವಿಸಿ ದಣ್ಣನೆ ದಣಿದು. ಮನಸ್ಸೆಲ್ಲ ಹಿಂದಿರಿಗಿದಂತಾದ್ದೇ ಇವೆಲ್ಲರಲ್ಲಿಯ ಸ್ಪರ್ಶನ, ಇವೆಲ್ಲ ಸ್ಪರ್ಶನಂಗಳು ಬೇರೆ ಬೇರೆಯಾಗಿ ತಟ್ಟಿದರಂತು ಬೇರೆ ಬೇರೆ ಇಟ್ಟು ಲಿಂಗಾರ್ಪಿತವ ಮಾಡಬಹುದು. ಅವು ಕದಂಬವಾಗಿ ಬಂದು ತಟ್ಟಿದಲ್ಲಿ ವಿಂಗಡಿಸಿ ಲಿಂಗಾರ್ಪಿತವ ಮಾಡಕೂಡದು. ಅದನ್ನು ಮಹಾ ಲಿಂಗದಲ್ಲರಿವುದು, ಪಂಚವಿಧ ಲಿಂಗವನೊಳಗೊಂಡು ತೋರುವ ಜಂಗಮ ಲಿಂಗದೊಳಗಣ ಮಹಾಲಿಂಗದೊಳಗೆಂದು ತಿಳಿದರ್ಪಿತವ ಮಾಡುವುದು. ಅದರ ಸಕೀಲವೆಂತುಟೆಲೆ ಸ್ವಾಮಿ ಎಂದು ಬೆಸಗೊಂಡೊಡೆ, ಅದು ವಾಯು ತತ್ವದೊಳಗಣ ಆತ್ಮ ತತ್ವ ಸಂಬಂಧವಾದ ಪದಾರ್ಥವೆಂದರಿದು ಆ ಪದಾ ರ್ಥವನ್ನು ಸುಮನಹಸ್ತದೊಳಗಣ ಸದ್ಭಾವಹಸ್ತದಿಂಪಿಡಿದುಕೊಂಡು ಆದಿ ಶಕ್ತಿಯೊಳಗಣ ಚಿತ್ಶಕ್ತಿಯುಕ್ತವಾಗಿ, ಅನುಭಾವಭಕ್ತಿಯೊಳಗಣ ಸಮರಸ ಭಕ್ತಿಯಿಂದೇ ಜಂಗಮಲಿಂಗದೊಳಗಣ ಮಹಾಲಿಂಗಕ್ಕೆಂದರಿದಾರೋಪಿಸಿ, ವಕಾರ ಮಂತ್ರದೊಳಗಣ ಓಂಕಾರ ಮಂತ್ರ ಸ್ಮರಣೆಯೊಡನೆ ಕೂಡಿ ಕೊಂಡು ತ್ವಗಿಂದ್ರಿಯದೊಳಗಣ ಹೃದಯೇಂದ್ರಿಯ ಮುಖದಲ್ಲಿಯೇ ಸಮರ್ಪಿಸಿ ಆ ಲಿಂಗಮುಖದಿಂದುಳುಮೆಯಾಗಿ ಬಂದ ಪ್ರಸನ್ನೇತಿ ಪ್ರಸಾದವ ಪಡೆದನುಭವಿಸಿ ಪರಮ ಪರಿಣಾಮಿಯಾಗಿರುತ್ತಿಹನು ಪ್ರಾಣಲಿಂಗಿಯೊಳ ಗಣ ಶಿವೈಕ್ಯನು.

## ಪ್ರಸಾದಲಿಂಗಮಿಶ್ರ.

ತದನಂತರದಲ್ಲಿ ಪ್ರಸಾದಲಿಂಗಿ ಶರಣಂಗೆ ಚಿತ್‌ಪ್ರಾಣವಾದ ಪ್ರಸಾದ ಲಿಂಗವು ತಾನೊಂದೇ ಷಡ್ವಿಧಲಿಂಗಂಗಳಾದವು. ಪ್ರಸಾದಲಿಂಗದೊಳಗಣ ಆಚಾರಲಿಂಗ ಪ್ರಸಾದಲಿಂಗದೊಳಗಣ ಗುರುಲಿಂಗ ಪ್ರಸಾದಲಿಂಗದೊಳ

ಗಣ ಶಿವಲಿಂಗ, ಪ್ರಸಾದಲಿಂಗದೊಳಗಣ ಜಂಗಮಲಿಂಗ ಪ್ರಸಾದಲಿಂಗ ದೊಳಗಣ ಮಹಾಲಿಂಗವೆಂದು ಆರುಭೇದವಾದವು. ಪ್ರಸಾದಲಿಂಗದೊಡನೆ ಕೂಡಿದ್ದ ಷಡ್ವಿಧಂಗಂಗಳಿಗೆ ಷಡ್ವಿಧ ಶಬ್ದ ಪದಾರ್ಥಂಗಳನು ಷಡ್ವಿಧಭಕ್ತಿ ಸಕೀಲಗಳಿಂದ ಸಮರ್ಪಿತವಾಗುವ ವಿಚಾರವು ಹೋಗಿಪ್ಪುದೆಲೆ ಸ್ವಾಮಿ ಎಂದು ಬೆಸಗೊಂಡೊಡೆ—

ಶರಣನೊಳಗಣ ಭಕ್ತಃ— ತಾಳ ವೊಟ್ಟೆತಾಳ ವೊದಲಾದ ಸಪ್ತತಾಳಂಗಳ ಗತಿಯಿಂದ ತಾಂಡವ ಸ್ಥಾನಂಗಳಲ್ಲಿ ನುಡಿಸುವ ವಾದ್ಯವೇ ತಾಳ, ಇಂತಪ್ಪವನು ನಾದ ಘೋಷವೆಂಬ ಪದಾರ್ಥವನು ಅರಿವುದಾ ಪ್ರಸಾದ ಲಿಂಗದೊಳಣ ಆಚಾರಲಿಂಗದಲ್ಲಿ ಎಂದು ತಿಳಿದರ್ಪಿತವ ಮಾಡುವುದು. ಅದರ ಸಕೀಲವೆಂತುಟೆಲೆ ಸ್ವಾಮಿ ಎಂದು ಬೆಸಗೊಂಡೊಡೆ ಅದು ಆಕಾಶ ತತ್ವದೊಳಗಣ ಪೃಥ್ವೀ ತತ್ವ ಸಂಬಂಧವಾದ ಪದಾರ್ಥವೆಂದರಿದು ಆ ಪದಾರ್ಥವನ್ನು ಪ್ರಸಾದ ಲಿಂಗದೊಳಗಣ ಆಚಾರಲಿಂಗದಲ್ಲಿ ಎಂದು ತಿಳಿದ ರ್ಪಿತವ ಮಾಡುವುದು.

ಶರಣನೊಳಗಣ ಮಹೇಶಃ—ತಂತಿ ಪಟ್ಟುದಾರ ಪಂಚಲೋಹದ ತಂತಿಗಳಂ ಬಂಧಿಸಿ ನಖಾಗ್ರದಿಂ ಮಿಡಿದು ನುಡಿಸುವ ಕಿನ್ನರವೀಣೆ ವೊದ ಲಾದ ಇಪ್ಪತ್ತೆಂಟು ತೆರದ ವೀಣಾವಾದ್ಯಂಗಳಲ್ಲಿ ದೃಢವಿಡಿದು ಹುಟ್ಟಿದ ಶಬ್ದವಂ ನಾದ ಘೋಷವೆಂಬ ಪದಾರ್ಥವನ್ನು ಗುರುಲಿಂಗದಲ್ಲಿ ಅರಿವುದು. ಪ್ರಸಾದಲಿಂಗದೊಳಗಣ ಗುರುಲಿಂಗದೊಳಗೆಂದು ತಿಳಿದರ್ಪಿತವ ಮಾಡು ವುದು.

ಶರಣನೊಳಗಣ ಪ್ರಸಾದಿ:— ಕುಡುಹು ದಾರು ಘಟಕ್ಕೆ ಚರ್ಮ ತಂತಿಗಳಂ ಬಂಧಿಸಿ ಕಾಷ್ಠಾಂಗುಳಿಗಳಿಂ ಬಡಿದು ನುಡಿಸುವಂತೆ ಭೇರಿ, ಢಕ್ಕೆ, ಡೊಳ್ಳು, ಕರಡೆ ವೊದಲಾದುವನ್ನು ದೃಢವಿಡಿದು ಹುಟ್ಟಿದ ಶಬ್ದವಂ ನಾದದ ಘೋಷವೆಂಬ ಪದಾರ್ಥವನ್ನು ಶಿವಲಿಂಗದಲ್ಲಿ ಅರಿವುದು. ಪ್ರಸಾದ ಲಿಂಗದೊಳಗಣ ಶಿವಲಿಂಗದೊಳಗೆಂದು ತಿಳಿದರ್ಪಿತವ ಮಾಡುವುದು.

ಶರಣನೊಳಗಣ ಪ್ರಾಣಲಿಂಗಿ:— ಕೊಳಲು ಶಂಖದೊಳಗಾಗಿ ತುಟಿ ಗಳಿಂದ ಕಚ್ಚಿ ಊದಿ ನುಡಿಸುವ ವೇಣು ಕೊಂಬು ವಾದ್ಯದೊಳಗಾಗಿ

ಹುಟ್ಟಿದ ಶಬ್ದವಂ ಜಂಗಮಲಿಂಗದಲ್ಲಿ ಅರಿವುದು. ಪ್ರಸಾಲಿಂಗದೊಳಗಣ ಜಂಗಮಲಿಂಗದೊಳಗೆಂದು ತಿಳಿದರ್ಪಿತವ ಮಾಡುವುದು.

ಶರಣನೊಳಗಣ ಶರಣ:— ವಚನಗೀತಂಗಳೊಳಗಾಗಿ ತಾಲವ್ಯ ದಂತವ್ಯಗಳಿಂದ ಮೂವತ್ತೆರಡು ರಾಗ, ಅರುವತ್ತುನಾಲ್ಕು ಮಿಶ್ರಯುಕ್ತವಾಗಿ ಓದುವಂತಹ ಕುಸುಮ, ಭೋಗ, ಭಾಮಿನಿ, ಪರಿವರ್ಧಿನಿ, ವಾರ್ಧಿಕ ಉದ್ದಂಡಗಳೆಂಬ ಷಟ್‌ಪದಂಗಳು ಕಂದ ವೃತ್ತಾದಿಗಳೊಳಗಾಗಿ ಹುಟ್ಟಿದ ಶಬ್ದವಂ ನಾದಘೋಷವೆಂಬ ಪದಾರ್ಥವನ್ನು ಪ್ರಸಾದ ಲಿಂಗದಲ್ಲಿ ಅರಿವುದು. ಪ್ರಸಾದ ಲಿಂಗದೊಳಗಣ ಪ್ರಸಾದಲಿಂಗದಲ್ಲಿ ಎಂದು ತಿಳಿದರ್ಪಿತವ ಮಾಡುವುದು.

ಶರಣನೊಳಗಣ ಐಕ್ಯ:— ಇವೆಲ್ಲರಲ್ಲಿಯೂ ಹುಟ್ಟಿದ ಶಬ್ದವಂ ಹಿಂದೆ ಹೇಳಿದ ಪಂಚವಿಧ ಶಬ್ದ ಪದಾರ್ಥಂಗಳನ್ನು ಪ್ರಸಾದಲಿಂಗದೊಡನೆ ಕೂಡಿದ ಪಂಚವಿಧ ಲಿಂಗಂಗಳಿಗೆ ಪಂಚವಿಧ ಭಕ್ತಿ ಸಕೀಲಂಗಳಿಂದೆ ಸಮರ್ಪಿಸಿ ಪಂಚವಿಧ ಲಿಂಗಮುಖದಿಂದ ಉಳುಮೆಯಾಗಿ ಬಂದ ಪಂಚವಿಧ ಪ್ರಸಾದವ ಪಡೆದನುಭವಿಸಿ ದಣ್ಣನೆ ದಣಿದು ಮನಸ್ಸೆಲ್ಲ ಹಿಂದಿರುಗಿದಂತಾದ್ದೇ ಇವೆಲ್ಲರಲ್ಲಿಯ ಹುಟ್ಟಿದ ಶಬ್ದ. ಇವೆಲ್ಲವು ಬೇರೆ ಬೇರೆ ತಟ್ಟದಲ್ಲಿ ಬೇರೆ ಬೇರೆ ಲಿಂಗಾರ್ಪಿತ ಮಾಡಬಹುದು. ಇವೆಲ್ಲ ಶಬ್ದಂಗಳೊಂದೊಂದೇ ವೇಳೆ ಕದಂಬವಾಗಿ ಬಂದು ತಟ್ಟದಲ್ಲಿ ನಿಂಗಡಿಸಿ ಲಿಂಗಾರ್ಪಿತ ಮಾಡುವುದಕ್ಕೆ ಕೂಡದು. ಅವನ್ನು ಮಹಾಲಿಂಗದಲ್ಲಿ ಅರಿವುದು. ಪಂಚವಿಧ ಲಿಂಗವನೊಳಕೊಂಡು ತೋರುವ ಪ್ರಸಾದ ಲಿಂಗದೊಳಗಣ ಮಹಾಲಿಂಗದಲ್ಲಿ ಎಂದು ತಿಳಿದರ್ಪಿತವ ಮಾಡುವುದು. ಅದರ ಸಕೀಲವೆಂತುಟೆಂದಡೆ ಸ್ವಾಮಿ ಎಂದು ಬೆಸಗೊಂಡೊಡೆ ಅದು ಆಕಾಶ ತತ್ವದೊಳಗಣ ಆತ್ಮತತ್ವ ಸಂಬಂಧವಾದ ಪದಾರ್ಥವೆಂದರಿದು ಆ ಪದಾರ್ಥವನ್ನು ಸುಜ್ಞಾನ ಹಸ್ತದೊಳಗಣ ಸದ್ಭಾವ ಹಸ್ತದಿಂದ ಪಿಡಿದುಕೊಂಡು ಪರಾಶಕ್ತಿಯೊಳಗಣ ಚಿಚ್ಛಕ್ತಿಯುಕ್ತವಾಗಿ ಆನಂದ ಭಕ್ತಿಯೊಳಗಣ ಸಮರಸಭಕ್ತಿಯಿಂದೆ ಪ್ರಸಾದಲಿಂಗದೊಳಗಣ ಮಹಾಲಿಂಗಕ್ಕೆಂದರಿದಾರೋಪಿಸಿ ಯಕಾರ ಮಂತ್ರದೊಳಗಣ ಓಂಕಾರ ಮಂತ್ರ ಸ್ಮರಣೆಯೊಡನೆ ಕೂಡಿಕೊಂಡು ಶ್ರೋತ್ರೇಂದ್ರಿಯದೊಳಗಣ ಹೃದಯೇಂದ್ರಿಯ ಮುಖದಲ್ಲಿಯೇ ಸಮರ್ಪಿಸಿ ಆ ಲಿಂಗಮುಖದಿಂದುಳುಮೆಯಾಗಿ ಬಂದ ಪ್ರಸನ್ನೇತಿ ಪ್ರಸಾದವ ಪಡೆದನುಭವಿಸಿ ಪರಮ ಪರಿಣಾಮಿಯಾಗಿರುತ್ತಿಹನು ಶರಣನೊಳಗಣ ಶಿವೈಕ್ಯನು.

## ಮಹಾಲಿಂಗದ ಮಿಶ್ರ.

ತದನಂತರದಲ್ಲಿ ಮಹಾಲಿಂಗೈಕ್ಯಂಗೆ ಚಿತ್‌ಪ್ರಾಣವಾದ ಮಹಾಲಿಂಗವು ತಾನೊಂದೇ ಷಡ್ವಿಧಲಿಂಗಂಗಳಾದವು. ಮಹಾಲಿಂಗದೊಳಗಣ ಆಚಾರಲಿಂಗ, ಮಹಾಲಿಂಗದೊಳಗಣ ಗುರುಲಿಂಗ, ಮಹಾಲಿಂಗದೊಳಗಣ ಶಿವಲಿಂಗ, ಮಹಾಲಿಂಗದೊಳಗಣ ಜಂಗಮಲಿಂಗ, ಮಹಾಲಿಂಗದೊಳಗಣ ಪ್ರಸಾದಲಿಂಗ, ಮಹಾಲಿಂಗದೊಳಗಣ ಮಹಾಲಿಂಗವೆಂದು ಆರು ಭೇದವಾಗಿಹುದು. ಮಹಾಲಿಂಗದೊಡನೆ ಕೂಡಿದ ಷಡ್ವಿಧ ಲಿಂಗಂಗಳಿಗೆ ಷಡ್ವಿಧ ತೃಪ್ತಿಪದಾರ್ಥಂಗಳನ್ನು ಷಡ್ವಿಧ ಭಕ್ತಿಸಕೀಲಂಗಳಿಂದ ಸಮರ್ಪಿಸುವ ವಿಚಾರವು ಹೇಗಿಪ್ಪದೆಲೆ ಸ್ವಾಮಿ ಎಂದು ಬೆಸಗೊಂಡೊಡೆ:—

ಐಕ್ಯನೊಳಗಣ ಭಕ್ತನು:—ಬೇರು ಗೆಣಸು ಮೊದಲಾದ ಪತ್ರಿಯ ಗಂಧ, ಮೊಗ್ಗೆ ಮೊದಲಾದ ಪುಷ್ಪದ ಗಂಧ, ಕಾಯಿ ಮೊದಲಾದ ಫಲದ ಗಂಧ ಈ ಮೊದಲಾದ ಷಡ್ವಿಧ ಗಂಧ ಪದಾರ್ಥಂಗಳನ್ನು ಆಚಾರಲಿಂಗದೊಡನೆ ಕೂಡಿದ ಷಡ್ವಿಧಲಿಂಗಂಗಳಿಗೆ ಷಡ್ವಿಧ ಭಕ್ತಿ ಸಕೀಲಂಗಳಿಂದ ಸಮರ್ಪಿಸಿ ಆ ಷಡ್ವಿಧಲಿಂಗ ಮುಖದಿಂದುಳುಮೆಯಾಗಿ ಬಂದ ಷಡ್ವಿಧ ಪ್ರಸಾದವ ಪಡೆದನುಭವಿಸಿ ದಣ್ಣನೆ ದಣಿದು ಮನಸ್ಸೆಲ್ಲ ಹಿಂದಿರುಗಿದಂತಾದ್ದೇ ಗಂಧದ ತೃಪ್ತಿ. ಅಂತಪ್ಪ ಗಂಧದ ತೃಪ್ತಿ ಎಂಬ ಪದಾರ್ಥವನ್ನು ಮಹಾಲಿಂಗದೊಳಗಣ ಆಚಾರಲಿಂಗದಲ್ಲಿ ಎಂದು ತಿಳಿದರ್ಪಿತವ ಮಾಡುವುದು. ಅದನ್ನು ಹೇಗೆ ಸಮರ್ಪಣೆಯ ಮಾಡಬೇಕು, ಅದರ ಸಕೀಲವೆಂತುಂಟೆಲೆ ಸ್ವಾಮಿ ಎಂದು ಬೆಸಗೊಂಡೊಡೆ:—

ಅದು ಆತ್ಮ ತತ್ವದೊಳಗಣ ಪೃಥ್ವೀ ತತ್ವ ಸಂಬಂಧವಾದ ಪದಾರ್ಥವೆಂದರಿದು ಆ ಪದಾರ್ಥವನ್ನು ಸದ್ಭಾವ ಹಸ್ತದೊಳಗಣ ಸುಚಿತ್ತ ಹಸ್ತದಿಂ ಪಿಡಿದುಕೊಂಡು ಚಿಚ್ಛಕ್ತಿಯೊಳಗಣ ಕ್ರಿಯಾಶಕ್ತಿಯುಕ್ತವಾಗಿ ಸಮರಸ ಭಕ್ತಿಯೊಳಗಣ ಶ್ರದ್ಧಾಭಕ್ತಿಯಿಂದ ಮಹಾಲಿಂಗದೊಳಗಣ ಆಚಾರಲಿಂಗಕೆಂದಾರೋಪಿಸಿ, ಓಂಕಾರ ಮಂತ್ರದೊಳಗಣ ನಕಾರಮಂತ್ರಸ್ಮರಣೆಯೊಡನೆ ಕೂಡಿಕೊಂಡು, ಹೃದಯೇಂದ್ರಿಯದೊಳಗಣ ಘ್ರಾಣೇಂದ್ರಿಯ ಮುಖದಲ್ಲಿಯೇ ಸಮರ್ಪಿಸಿ, ಆ ಲಿಂಗಮುಖದಿಂದುಳುಮೆಯಾಗಿ

ಬಂದ ಪ್ರಸನ್ನೇತಿ ಪ್ರಸಾದವ ಪಡೆದನುಭವಿಸಿ ಪರವು ಪರಿಣಾಮಿಯಾಗಿರುತ್ತಿಹನು ಐಕ್ಯನೊಳಗಣ ಸದ್ಭಕ್ತನು.

ಐಕ್ಯನೊಳಗಣ ಮಹೇಶಃ— ಮಧುರವಾದ ರಸ, ಕಾರವಾದ ರಸ, ಆಮ್ಲವಾದ ರಸ, ಕಹಿಯಾದ ರಸ ಮೊದಲಾದ ಷಡ್ವಿಧ ಪದಾರ್ಥಂಗಳನ್ನು ಗುರುಲಿಂಗದೊಡನೆ ಕೂಡಿದ ಷಡ್ವಿಧ ಲಿಂಗಂಗಳಿಗೆ ಷಡ್ವಿಧ ಭಕ್ತಿ ಸಕೀಲಂಗಳಿಂದ ಸಮರ್ಪಿಸಿ ಆ ಷಡ್ವಿಧ ಲಿಂಗದಿಂದುಳುಮೆಯಾಗಿ ಬಂದ ಷಡ್ವಿಧ ಪ್ರಸಾದವ ಪಡೆದನುಭವಿಸಿ ದಣ್ಣನೆ ದಣಿದು ಮನಸ್ಸೆಲ್ಲ ಹಿಂದಿರುಗಿದಂತಾದ್ದೇ ರಸದ ತೃಪ್ತಿ. ಅಂತಪ್ಪ ರಸದ ತೃಪ್ತಿ ಎಂಬ ಪದಾರ್ಥವನ್ನು ಮಹಾಲಿಂಗದೊಳಗಣ ಗುರುಲಿಂಗದಲ್ಲಿ ಎಂದು ತಿಳಿದರ್ಪಿತ ಮಾಡುವದು.

ಐಕ್ಯನೊಳಗಣ ಪ್ರಸಾದಿಃ— ರೂಪಿನ ತೃಪ್ತಿಯಂ ಪೀತವರ್ಣದ ರೂಪು, ಶ್ವೇತವರ್ಣದ ರೂಪು, ಮಾಂಜಿಷ್ಟವರ್ಣದ ರೂಪು, ಹರಿತ ವರ್ಣದ ರೂಪು, ಕೃಷ್ಣವರ್ಣದ ರೂಪು, ಕಪೋತವರ್ಣದ ರೂಪು, ಮೊದಲಾದ ಷಡ್ವಿಧರೂಪು ಪದಾರ್ಥಂಗಳನ್ನು ಶಿವಲಿಂಗದೊಳಗೆ ಕೂಡಿದ ಷಡ್ವಿಧಲಿಂಗಂಗಳಿಗೆ ಷಡ್ವಿಧಭಕ್ತಿ ಸಕೀಲಂಗಳಿಂದ ಸಮರ್ಪಿಸಿ ಆ ಷಡ್ವಿಧ ಲಿಂಗಮುಖದಿಂದುಳುಮೆಯಾಗಿ ಬಂದ ಷಡ್ವಿಧ ಪ್ರಸಾದವ ಪಡೆದನುಭವಿಸಿ ದಣ್ಣನೆ ದಣಿದು ಮನಸ್ಸೆಲ್ಲ ಹಿಂದಿರಿಗಿದಂತಾದ್ದೇ ರೂಪಿನ ತೃಪ್ತಿ. ಅಂತಪ್ಪ ರೂಪಿನ ತೃಪ್ತಿಎಂಬ ಪದಾರ್ಥವನ್ನು ಮಹಾಲಿಂಗದೊಳಗಣ ಶಿವಲಿಂಗದಲ್ಲಿ ಎಂದು ತಿಳಿದರ್ಪಿತವ ಮಾಡುವುದು.

ಐಕ್ಯನೊಳಗಣ ಪ್ರಾಣಲಿಂಗಿಃ— ಕಠಿಣವಾದ ಸ್ಪರ್ಶನ, ಮೃದುವಾದ ಸ್ಪರ್ಶನ, ಉಷ್ಣವಾದ ಸ್ಪರ್ಶನ. ಶೈತ್ಯವಾದ ಸ್ಪರ್ಶನ, ಮಿಶ್ರವಾದ ಸ್ಪರ್ಶನ ಮೊದಲಾದ ಸ್ಪರ್ಶನ ಪದಾರ್ಥಂಗಳನ್ನು ಜಂಗಮಲಿಂಗದೊಡನೆ ಕೂಡಿದ ಷಡ್ವಿಧ ಲಿಂಗಂಗಳಿಗೆ ಷಡ್ವಿಧ ಭಕ್ತಿಸಕೀಲಂಗಳಿಂದ ಸಮರ್ಪಿಸಿ ಆ ಷಡ್ವಿಧ ಲಿಂಗಮುಖದಿಂದುಳುಮೆಯಾಗಿ ಬಂದ ಷಡ್ವಿಧ ಪ್ರಸಾದವ ಪಡೆದನುಭವಿಸಿ ದಣ್ಣನೆ ದಣಿದು ಮನಸ್ಸೆಲ್ಲ ಹಿಂದಿರುಗಿದಂತಾದ್ದೇ ಸ್ಪರ್ಶನದ ತೃಪ್ತಿ. ಅಂತಪ್ಪ ಸ್ಪರ್ಶನದ ತೃಪ್ತಿ ಎಂಬ ಪದಾರ್ಥವನ್ನು ಮಹಾಲಿಂಗದೊಳಗಣ ಜಂಗಮಲಿಂಗದೊಳಗೆಂದು ತಿಳಿದರ್ಪಿತವ ಮಾಡುವುದು.

ಐಕ್ಯನೊಳಗಣ ಶರಣಃ— ತಾಳ ಕಂಸಾಳವಿಡಿದು ಹುಟ್ಟಿದ ಶಬ್ದ, ತಂತಿವಿಡಿದು ಹುಟ್ಟಿದ ಶಬ್ದ, ಕುಡುಹುವಿಡಿದು ಹುಟ್ಟಿದ ಶಬ್ದ ಕೊಳಲು ಶಂಖದೊಳಗಾಗಿ ಹುಟ್ಟಿದ ಶಬ್ದ, ವಚನಗೀತಂಗಳೊಳಗಾಗಿ ಹುಟ್ಟಿದ ಶಬ್ದ, ಮೊದಲಾದ ಪದಾರ್ಥಂಗಳನ್ನು ಪ್ರಸಾದಲಿಂಗದೊಡನೆ ಕೂಡಿದ ಷಡ್ವಿಧಲಿಂಗಂಗಳಿಗೆ ಷಡ್ವಿಧ ಭಕ್ತಿ ಸಕೀಲಂಗಳಿಂದ ಸಮರ್ಪಿಸಿ ಆ ಷಡ್ವಿಧ ಲಿಂಗಮುಖದಿಂದುಳುಮೆಯಾಗಿ ಬಂದ ಷಡ್ವಿಧ ಪ್ರಸಾದವ ಪಡೆದನುಭವಿಸಿ ದಣ್ಣನೆ ದಣಿದು ಮನಸ್ಸೆಲ್ಲ ಹಿಂತಿರುಗಿದಂತಾದ್ದೇ ಶಬ್ದದ ತೃಪ್ತಿ. ಅಂತಪ್ಪ ಶಬ್ದ ತೃಪ್ತಿ ಎಂಬ ಪದಾರ್ಥವನ್ನು ಮಹಾಲಿಂಗದೊಳಗಣ ಪ್ರಸಾದಲಿಂಗದೊಳಗೆಂದು ತಿಳಿದು ಅರ್ಪಿತವ ಮಾಡುವುದು.

ಐಕ್ಯನೊಳಗಣ ಐಕ್ಯಃ—ಇವೆಲ್ಲರಲ್ಲಿಯು ತೃಪ್ತಿಯಂ ಹಿಂದೆ ಹೇಳಿದ ಗಂಧತೃಪ್ತಿ, ರಸದ ತೃಪ್ತಿ, ರೂಪಿನ ತೃಪ್ತಿ, ಸ್ಪರ್ಶನದ ತೃಪ್ತಿ, ಶಬ್ದದ ತೃಪ್ತಿ ಎಂಬ ಪಂಚವಿಧದ ತೃಪ್ತಿ ಪದಾರ್ಥಂಗಳನ್ನು ಮಹಾಲಿಂಗದೊಡನೆ ಕೂಡಿದ ಪಂಚವಿಧ ಲಿಂಗಂಗಳಿಗೆ ಪಂಚವಿಧ ಭಕ್ತಿ ಸಕೀಲಂಗಳಿಂದ ಸಮರ್ಪಿಸಿ ಅಂತಪ್ಪ ಪಂಚವಿಧಲಿಂಗ ಮುಖದಿಂದುಳುಮೆಯಾಗಿ ಬಂದ ಪಂಚವಿಧ ಪ್ರಸಾದವ ಪಡೆದನುಭವಿಸಿ ದಣ್ಣನೆ ದಣಿದು ಮನಸ್ಸೆಲ್ಲ ಹಿಂತಿರುಗಿದಂತಾದ್ದೇ ಇವೆಲ್ಲರಲ್ಲಿಯು ಅವಿರಳಭಾವದ ಅಖಂಡತೃಪ್ತಿ ಅವಿರಳ ಭಾವದ ಅಖಂಡತೃಪ್ತಿಯೆಂಬ ಪದಾರ್ಥವನ್ನು ಮಹಾಲಿಂಗದೊಳಗಣ ಮಹಾಲಿಂಗದಲ್ಲಿ ಎಂದು ತಿಳಿದರ್ಪಿತವ ಮಾಡುವುದು. ಅದು ಹೇಗೆ ಸಮರ್ಪಣೆಯ ಮಾಡಬೇಕು, ಅದರ ಸಕೀಲವೆಂತುಟೆಲೆ ಸ್ವಾಮಿ ಎಂದು ಬೆಸಗೊಂಡೊಡೆ, ಆತ್ಮತತ್ವದೊಳಗಣ ಮೂಲಾತ್ಮ ತತ್ವಸಂಬಂಧವಾದ ಪದಾರ್ಥವೆಂದರಿದು ಆ ಪದಾರ್ಥವನ್ನು ಸದ್ಭಾವ ಹಸ್ತದೊಳಗಣ ಸದ್ಭಾವ ಹಸ್ತದಿಂ ಪಿಡಿದುಕೊಂಡು ಚಿಚ್ಛಕ್ತಿಯೊಳಗಣ ಚಿಚ್ಛಕ್ತಿಯುಕ್ತವಾಗಿ ಸಮರಸಭಕ್ತಿಯೊಳಗಣ ಸಮರಸಭಕ್ತಿಯಿಂದೇ ಮಹಾಲಿಂಗದೊಳಗಣ ಮಹಾಲಿಂಗಕ್ಕೆಂದರಿದಾರೋಪಿಸಿ ಓಂಕಾರ ಮಂತ್ರದೊಳಗಣ ಓಂಕಾರ ಮಂತ್ರ ಸ್ಮರಣೆಯೊಡನೆ ಕೂಡಿ ಹೃದಯೇಂದ್ರಿಯದೊಳಗಣ ಹೃದಯೇಂದ್ರಿಯ ಮುಖದಲ್ಲಿಯೇ ಸಮರ್ಪಿಸಿ ಆ ಲಿಂಗ ಮುಖದಿಂದುಳುಮೆಯಾಗಿ ಬಂದ ಪ್ರಸನ್ನೇತಿ ಪ್ರಸಾದವ ಪಡೆದನುಭವಿಸಿ ಪರಮ ಪರಿಣಾಮಿಯಾಗಿರುತ್ತಿಹನು ಐಕ್ಯನೊಳಗಣ ಶಿವೈಕ್ಯನು.

ಈ ಭಕ್ತೀಸಕರಣ ಈ ಮನೋ ಸಂಬಂಧವಾದ ಮೂವತ್ತಾರು ರುಚಿಪದಾರ್ಥಂಗಳು ಪ್ರಾಣಲಿಂಗದೊಡನೆ ಕೂಡಿದ ಮೂವತ್ತಾರು ಲಿಂಗಂಗಳಿಗೆ ಮೂವತ್ತಾರು ತೆರದ ಭಕ್ತಿ ಸಕೀಲಂಗಳಿಂದ ಸಮರ್ಪಿತ ವಾದ ಬಳಿಕ ಈ ಕರಣಾರ್ಪಣದ ಮಧ್ಯದಲ್ಲಿ ಭಾವಾರ್ಪಣ ಉಂಟು. ಆತ್ಮ ತತ್ವ ಸಂಬಂಧವಾದ ಇನ್ನೂರು ಹದಿನಾರು ತೆರದ ತೃಪ್ತಿ ಪದಾ ರ್ಥಂಗಳನ್ನು ಭಾವಲಿಂಗದೊಡನೆ ಕೂಡಿದ ಇನ್ನೂರು ಹದಿನಾರು ಲಿಂಗಂಗಳಿಗೆ ಇನ್ನೂರು ಹದಿನಾರು ತೆರನಾದ ಭಕ್ತಿ ಸಕೀಲಂಗಳಿಂದ ಸಮರ್ಪಿತವಾಗುವ ಭಾವಾರ್ಪಣ ಮಿಶ್ರವು ಇರುವದು. ಅದು ಹೇಗಿ ಪ್ಪದು ಸ್ವಾಮಿ ಎಂದು ಬೆಸಗೊಂಡೊಡೆ, ಮಿಶ್ರದೊಳಗಣ ಮಿಶ್ರಮಂ ಕಾಯಾರ್ಪಣದೊಳಗಣ ಮಿಶ್ರವೇ ಕರಣಾರ್ಪಣ, ಕರಣಾರ್ಪಣದೊಳ ಗಣ ಮಿಶ್ರವೇ ಭಾವಾರ್ಪಣವಾದ ಕಾರಣ ಅಂತಪ್ಪ ಭಾವಾರ್ಪಣ ಸ್ವರೂಪವನ್ನು ನಿರೂಪಿಸುವೆವು.

---

## ಭಾವಾರ್ಪಣ.

ಸೋಂಕುವ ಕಾರ್ಯಃ—ಆವುದಾನೊಂದು ಪದಾರ್ಥಂಗಳೊಳಗೆ ಆವುದಾನೊಂದು ಇಂದ್ರಿಯವನ್ನು ಸೋಂಕುವ ಕಾಲ ವೇಳೆ ಕಾಲೋಚಿ ತವೆಂಬ ಪದಾರ್ಥವನ್ನು ಆಚಾರಲಿಂಗದಲ್ಲರಿವುದು, ಪಂಚಾಚಾರ ಸ್ವರೂ ಪವಾದ ಆಚಾರಲಿಂಗದೊಳಗೆಂದು ತಿಳಿದರ್ಪಿತವ ಮಾಡುವುದು.

ಸೋಂಕಿ ತಿಳಿವ ಕಾರ್ಯಃ—ತಟ್ಟಿದಂಥಾದ್ದನ್ನು ತಿಳಿವ ಕಾಲೋಚಿ ತವೆಂಬ ಪದಾರ್ಥವನ್ನು ಮಂತ್ರಮೂರ್ತಿಯಾದ ಗುರುಲಿಂಗದಲ್ಲಿ ಎಂದು ತಿಳಿದರ್ಪಿತವ ಮಾಡುವುದು.

ತಿಳಿದು ನಿಶ್ಚಯಿಸುವ ಕಾರ್ಯಃ—ತಿಳಿದು ನಿಶ್ಚಯಿಸುವ, ಈ ಪದಾರ್ಥವಹುದು ಎಂದು ದೃಢೀಕರಿಸುವ ಕಾಲೋಚಿತವೆಂಬ ಪದಾ ರ್ಥವನ್ನು ನಿರೀಕ್ಷಣ ಸ್ವರೂಪವಾದ ಶಿವಲಿಂಗದಲ್ಲಿ ಎಂದು ತಿಳಿದರ್ಪಿ ತವ ಮಾಡುವುದು.

ನಿಶ್ಚಯಿಸಿ ಅನುಭವಿಸುವ ಕಾರ್ಯಃ— ನಿಶ್ಚಯಿಸಿ ಇದು ಇಂಥ ಪದಾರ್ಥವಹುದೆಂದು ದೃಢೀಕರಿಸಿ ಅದನಂಗೀಕರಿಸಿಕೊಂಡು ಅನುಭವಿಸುವ ಕಾಲೋಚಿತವೆಂಬ ಪದಾರ್ಥವನ್ನು ಯಜನ ಸ್ವರೂಪವಾದ ಚರಲಿಂಗದಲ್ಲಿ ಎಂದು ತಿಳಿದರ್ಪಿತವ ಮಾಡುವುದು.

ಅನುಭವಿಸಿ ಆನಂದಿಸುವ ಕಾರ್ಯಃ— ಅದನಂಗೀಕರಿಸಿಕೊಂಡನುಭವಿಸಿ ಆನಂದಿಸುವ ಕಾಲವೇಳೆ ಕಾಲೋಚಿತವೆಂಬ ಪದಾರ್ಥವನ್ನು ಪ್ರಸಾದಲಿಂಗದಲ್ಲರಿವುದು. ಈಳನ ಸ್ವರೂಪವಾದ ಪ್ರಸಾದಲಿಂಗದಲ್ಲಿ ಎಂದು ತಿಳಿದರ್ಪಿತವ ಮಾಡುವುದು.

ಆನಂದಿಸಿ ತೃಪ್ತಿಯನ್ನೈದುವ ಕಾರ್ಯಃ— ಆನಂದಿಸಿ ತೃಪ್ತಿಯನ್ನೈದುವ ನಿಜಾನಂದ ಸಂತೋಷವನ್ನು ತಾಳುವ ಕಾಲೋಚಿತವೆಂಬ ಪದಾರ್ಥವನ್ನು ಮಹಾಲಿಂಗದಲ್ಲಿ ಬೋಧಾಸ್ವರೂಪವಾದ ಮಹಾಲಿಂಗದಲ್ಲಿ ಎಂದು ತಿಳಿದರ್ಪಿತವ ಮಾಡುವುದು.

ಆಚಾರಲಿಂಗದೊಳಗಣ ಆಚಾರಲಿಂಗದ ಮಿಶ್ರಃ – ಮತ್ತಂತುಮಲ್ಲದೆ ಈ ಮೂವತ್ತಾರು ತೆರದ ರುಚಿಪದಾರ್ಥಂಗಳೊಳಗೆ ಆವುದಾನೊಂದು ಬೇರು ಗೆಣಸು ಮೊದಲಾದ ಗಂಧವೆಂಬ ಪದಾರ್ಥವು ಇಂದ್ರಿಯಂಗಳ ಷಡಿಂದ್ರಿಯಂಗಳೊಳಗೆ ಆವುದಾನೊಂದು ಘ್ರಾಣೇಂದ್ರಿಯದೊಳಗಣ ಘ್ರಾಣೇಂದ್ರಿಯದಲ್ಲಿಯ ಘ್ರಾಣೇಂದ್ರಿಯವನ್ನು ಸೋಂಕುವ ಕಾಲೋಚಿತವೆಂಬ ಪದಾರ್ಥವನ್ನು ಆಚಾರಲಿಂಗದಲ್ಲಿ ಅರಿವುದು. ಆಚಾರಲಿಂಗದೊಳಗಣ ಆಚಾರಲಿಂಗದಲ್ಲಿಯ ಆಚಾರಲಿಂಗಕ್ಕೆಂದು ತಿಳಿದರ್ಪಿತವ ಮಾಡುವುದು. ಅದು ಹೇಗೆ ಸಮರ್ಪಣೆಯ ಮಾಡಬೇಕು, ಅದರ ಸಕೀಲವೆಂತುಟೆಲೆ ಸ್ವಾಮಿ ಎಂದು ಬೆಸಗೊಂಡೊಡೆ, ಅದು ಪೃಥ್ವೀತತ್ವದೊಳಗಣ ಪೃಥ್ವೀ ತತ್ವ ಸಂಬಂಧವಾದ ಪದಾರ್ಥವೆಂದರಿದು ಆ ಪದಾರ್ಥವನ್ನು ಸುಚಿತ್ತ ಹಸ್ತದೊಳಗಣ ಸುಚಿತ್ತ ಹಸ್ತದಲ್ಲಿಯ ಸುಚಿತ್ತ ಹಸ್ತದಿಂ ಪಿಡಿದುಕೊಂಡು ಕ್ರಿಯಾಶಕ್ತಿಯೊಳಗಣ ಕ್ರಿಯಾಶಕ್ತಿಯಲ್ಲಿಯ ಕ್ರಿಯಾಶಕ್ತಿಯುಕ್ತಮಾಗಿ ಶ್ರದ್ಧಾಭಕ್ತಿಯೊಳಗಣ ಶ್ರದ್ಧಾಭಕ್ತಿಯಲ್ಲಿಯ ಶ್ರದ್ಧಾಭಕ್ತಿಯಿಂದೇ ಆಚಾರಲಿಂಗದೊಳಗಣ ಆಚಾರಲಿಂಗದಲ್ಲಿಯ ಆಚಾರಲಿಂಗಕ್ಕೆಂದರಿದಾರೋಪಿಸಿ, ನಕಾರ ಮಂತ್ರದೊಳಗಣ ನಕಾರ ಮಂತ್ರದಲ್ಲಿಯ ನಕಾರ ಮಂತ್ರ ಸ್ಮರ

ಣಿಯೊಡನೆ ಕೂಡಿ, ಘ್ರಾಣೇಂದ್ರಿಯದೊಳಗಣ ಘ್ರಾಣೇಂದ್ರಿಯದಲ್ಲಿಯ ಘ್ರಾಣೇಂದ್ರಿಯ ಮುಖದಲ್ಲಿಯೇ ಸಮರ್ಪಿಸಿ, ಆ ಲಿಂಗಮುಖದಿಂದು ಳುಮೆಯಾಗಿ ಬಂದ ಪ್ರಸನ್ನೇತಿ ಪ್ರಸಾದವ ಪಡೆದನುಭವಿಸಿ ಪರಮ ಪರಿಣಾಮಿಯಾಗಿರುತ್ತಿಹನು ಭಕ್ತನೊಳಗಣ ಭಕ್ತನಲ್ಲಿಯ ಸದ್ಭಕ್ತನು.

ಆಚಾರಲಿಂಗದಲ್ಲಿಯ ಗುರುಲಿಂಗ ಮಿಶ್ರ: ತಟ್ಟಿದಂತಹದನ್ನು ತಿಳಿದ ಕಾಲೋಚಿತವೆಂಬ ಪದಾರ್ಥವನ್ನು ಗುರುಲಿಂಗದಲ್ಲಿರುವುದು. ಆಚಾರಲಿಂಗದೊಳಗಣ ಆಚಾರಲಿಂಗದಲ್ಲಿಯ ಗುರುಲಿಂಗದೊಳಗೆಂದು ತಿಳಿದು ಅರ್ಪಿತವ ಮಾಡುವುದು.

ಆಚಾರಲಿಂಗದಲ್ಲಿಯ ಶಿವಲಿಂಗ ಮಿಶ್ರ:— ಅರಿದು ನಿಶ್ಚಯಿಸುವ [illegible] ಬೇರು ಗೆಣಸು ಮೊದಲಾದ ಗಂಧವೆಂಬ ಪದಾರ್ಥವಹುದೆಂದು [illegible]ಗೀಕರಿಸುವ ಕಾಲೋಚಿತವೆಂಬ ಪದಾರ್ಥವನ್ನು ಶಿವಲಿಂಗದಲ್ಲಿರು[illegible]ದು. ಆಚಾರಲಿಂಗದೊಳಗಣ ಆಚಾರಲಿಂಗದಲ್ಲಿಯ ಶಿವಲಿಂಗದೊಳಗೆಂದು ತಿಳಿದರ್ಪಿತವ ಮಾಡುವುದು.

ಆಚಾರಲಿಂಗದಲ್ಲಿಯ ಜಂಗಮಲಿಂಗ ಮಿಶ್ರ:— ನಿಶ್ಚಯಿಸಿ ಸುಖಿಸುವ ಬೇರು ಗೆಣಸು ಮೊದಲಾದ ಗಂಧವೆಂಬ ಪದಾರ್ಥವದೆಂದು ದೃಢೀಕರಿಸಿ ಸುಖಿಸುವ ಅದನಂಗೀಕರಿಸಿಕೊಂಡನುಭವಿಸುವ ಕಾಲೋಚಿತವೆಂಬ ಪದಾರ್ಥವನ್ನು ಜಂಗಮಲಿಂಗದಲ್ಲಿರುವುದು. ಆಚಾರಲಿಂಗದೊಳಗಣ ಆಚಾರಲಿಂಗದಲ್ಲಿಯ ಜಂಗಮಲಿಂಗಕ್ಕೆಂದು ತಿಳಿದರ್ಪಿತವ ಮಾಡುವುದು.

ಆಚಾರಲಿಂಗದಲ್ಲಿಯ ಪ್ರಸಾದಲಿಂಗ ಮಿಶ್ರ:— ಸುಖಿಸಿ ಅದನಂಗೀಕರಿಸಿಕೊಂಡನುಭವಿಸಿ ಆನಂದಿಸುವ ಕಾಲೋಚಿತವೆಂಬ ಪದಾರ್ಥವನ್ನು ಪ್ರಸಾದಲಿಂಗದಲ್ಲಿರುವುದು. ಆಚಾರಲಿಂಗದೊಳಗಣ ಆಚಾರಲಿಂಗದಲ್ಲಿಯ ಪ್ರಸಾದಲಿಂಗಕ್ಕೆಂದು ತಿಳಿದರ್ಪಿತವ ಮಾಡುವುದು.

ಆಚಾರಲಿಂಗದಲ್ಲಿಯ ಮಹಾಲಿಂಗ ಮಿಶ್ರ:— ಆನಂದಿಸಿ ತೃಪ್ತಿಯನ್ನೈದುವ ನಿಜಾನಂದ ಸಂತೋಷವನ್ನು ತಾಳುವ ಕಾಲೋಚಿತವೆಂಬ ಪದಾರ್ಥವನ್ನು ಮಹಾಲಿಂಗದಲ್ಲಿ ಅರಿವುದು. ಆಚಾರಲಿಂಗದೊಳಗಣ ಆಚಾರಲಿಂಗದಲ್ಲಿಯ ಮಹಾಲಿಂಗಕ್ಕೆಂದು ತಿಳಿದರ್ಪಿತವ

# ಶಿವಾನುಭವ

ವರ್ಷ ೨೨ | ಅಕ್ಟೋಬರ ೧೯೪೭ | ಸಂಚಿಕೆ ೧

## ಇಂದಿನ ನಾವು.

(ಲೇಖಕ:— ವಿದ್ವಾನ್ ತೆ. ಎಂ. ರಾಜಶೇಖರಯ್ಯನವರು,
ಹೈಸ್ಕೂಲು ಸಂಸ್ಕೃತ ಪಂಡಿತರು, ಮು. ತೀರ್ಥಹಳ್ಳಿ- ಜಿ॥ ಶಿವಮೊಗ್ಗೆ.)

ಸೃಷ್ಟಿಯ ಆದಿಯಲ್ಲಿ ಒಂದೇ ಮತವಿದ್ದುದೂ ಉಂಟು. ಕ್ರಮೇಣ ಜನಗಳ ಸಂಸ್ಕೃತಿ ಮತ್ತು ನಾಗರೀಕತೆಗಳನ್ನು ಅನುಸರಿಸಿಯೇ ಒಳ ಭೇದಗಳು ಆವಿರ್ಭವಿಸಿದುವು. ಆಯಾಯ ಕಾಯಕಗಳನ್ನುದ್ದೇಶಿಸಿಯೇ ವಿಭಾಗಿಸಲ್ಪಟ್ಟಿವೆಯೆಂದು ಊಹಿಸಬಹುದು. ಅಭ್ಯಾಸ ಮಾಡುವರು ಬ್ರಾಹ್ಮಣರೆಂದೂ, ಯುದ್ಧ ಮತ್ತು ಕಾದಾಡುವರು ಕ್ಷತ್ರಿಯರೆಂದೂ, ವ್ಯಾಪಾರ ಮಾಡುವರು ವೈಶ್ಯರೆಂದೂ, ವ್ಯವಸಾಯ ಅಥವಾ ಸೇವೆ ಮಾಡುವವರು ಶೂದ್ರರೆಂದೂ ಪರಿಗಣಿಸಲ್ಪಟ್ಟರು.

ಇವುಗಳಗೊಂದಕ್ಕೆ ಸಿಕ್ಕದ್ದು ವೀರಶೈವ ಮತ. ಇದು ಅನಾದಿ. ವೇದಗಳಿಗಿಂತ ಪ್ರಾಚೀನ. ಬರಬರುತ್ತಾ ಇದೂ ಸಹ ಇತರ ಮತಗಳಂತೆ ಅನೇಕ ಪ್ರಭೇದಗಳಾಗಿಹೋಯಿತು. ಇದನ್ನು ನೋಡಿ ಅನೇಕ ಮಹಾಮಹಿಮರು ವಿಷಾದಪಟ್ಟರು. ಅದನ್ನು ನಾಶಮಾಡಲು ಸಮಾಜದಲ್ಲಿ ಬಹಳವಾಗಿ ಹೋರಾಡಿದರು. ಅವರಲ್ಲಿ ಅಗ್ರಗಣ್ಯ ಅಥವಾ ಮುಂದಾಳು ಬಸವೇಶ್ವರ ಮುಂತಾದ ಪ್ರಮಥರು. ಇವರೆಲ್ಲರೂ ಅವನ ಮತ್ತು ಪ್ರಮಥರ ಅಪರಾವತಾರಿಗಳು. ಇವರು ಅವತರಿಸಿ

ಮದು ಭೂಲೋಕದ ಜಾತಿಗೊಂದಲಿಗಳನ್ನು ಕಿತ್ತಿಗೆಯಲು. ಲಿಂಗ ವಂತರೆಲ್ಲರೂ ಒಂದೇ ಕುಲದವರು, ವಿಪ್ರ ಮೊದಲಾಗಿ ಅಂತ್ಯಜ ಕೊನೆಯಾಗಿ ಎಲ್ಲರೂ ಶಿವಭಕ್ತರೆಂಬುದು ಎನ್ನ ಮನ. ಅವರಲ್ಲಿ ಜಾತಿ ಭೇದಗಳಿಲ್ಲ. ಪರಸ್ಪರ ಹಾರ್ದಿಕವಾದ ವಿವಾಹಾದಿಕಾರ್ಯಗಳನ್ನು ನಡೆಸಬಹುದು. ಇವರಿಗೆ ದೇವರೊಬ್ಬನೇ. ಆತನೇ ಕೂಡಲಸಂಗಮ. ಹಲವು ದೇವರಿಲ್ಲ. ಸಮಾಜದಲ್ಲಿ ಮಹಿಳೆಯರಿಗೂ ಪುರುಷರಂತೆ ಗಣ್ಯಸ್ಥಾನವುಂಟೆಂದು ಅವರು ಬೋಧಿಸಿದರು. ಈ ಕಾಲದಲ್ಲಿ ಈ ಪರಿಣಾಮದಿಂದ ಕೆಲವು ಸೂಕ್ತ ಬದಲಾವಣೆಗಳು ನಡೆದುವು. ಇದರಿಂದ ಸಮಾಜದಲ್ಲಿ ತಕ್ಕಮಟ್ಟಿಗೆ ಜ್ಞಾನಜ್ಯೋತಿಯುದಯಿಸಿತು. ಈ ಜ್ಯೋತಿಯು ಸಾಮಾಜಿಕ ಅಜ್ಞಾನಾಂಧಕಾರವನ್ನು ಹೊಡೆದೋಡಿಸಿತು.

ಕಾಲಕ್ರಮೇಣ ಅದು ಹಾಗೆಯೇ ಸಲ್ಲಲಿಲ್ಲ. ಬರಬರುತ್ತಾ ಹಲವು ಮಂದಿ ಸ್ವಾರ್ಥಿಗಳಿಂದ, ಐಶ್ವರ್ಯವಂತರಿಂದ, ಮತದಲ್ಲಿ ನಾವೇ ಹೆಚ್ಚೆಂದು ಹೇಳಿಕೊಳ್ಳು ಕೆಲವು ಪಂಡಿತ ಮಾನಿಗಳಿಂದಲೂ ಈ ನಿಯಮವು ಸಡಿಲವಾಯಿತು. ಕೊನೆಗೆ ಛಿದ್ರಛಿದ್ರವಾಗಿಯೂ ಹೋಯಿತು. ಸಮಾಜದಲ್ಲಿ ಪುನಃ ಪುನಃ ಭೇದಭಾವನೆಯು ತಲೆದೋರಿತು. ಇದರ ತಾಳಕ್ಕೆ ಕುಣಿಯುವ ಬಹುಮಂದಿ ಸಮಾಜ ರಂಗಭೂಮಿಯ ಮೇಲೆ ಕಾಣಿಸಿಕೊಂಡರು. ಇದರಿಂದ ಒಂದು ಪಂಗಡ ಹೆಚ್ಚು ಮತ್ತೊಂದು ಕಡಿಮೆಯೆಂಬುದು ಕಂಡುಬಂದಿತು. ಸಮಾಜವು ಪರಸ್ಪರ ಎಲ್ಲರಲ್ಲೂ ಭೋಜನವಿವಾಹಾದಿಗಳನ್ನು ವ್ಯವಹರಿಸಲು ನಿರ್ಬಂಧಕ್ಕೆ ಸಿಕ್ಕಿತು.

ಬರಬರುತ್ತಾ ಕೆಲವು ಉದಾರಿಗಳು ಪರಸ್ಪರ ಭೋಜನವನ್ನು ಮಾತ್ರ ಮಾಡಬಹುದೆಂದು ನಿಯಮಿಸಿದರು. ಇದನ್ನು ಕೆಲವು ಕಡೆ ಈಗ ಕಾಣಬಹುದು. ಇದು ಕೆಲವರಿಗೆ ರುಚಿಸದು. ಭೋಜನದಲ್ಲಿ ಮಾತ್ರ ವ್ಯವಹಾರವೊಂದರಿಂದ ಪ್ರಯೋಜನವೇನೂ ಅವರಿಗೆ ಅಷ್ಟು ತೃಪ್ತಿಕರವಾಗಿಲ್ಲ. ಹಿಂದಿನ ಪ್ರಮಥರು ಸಾರಿದ ತತ್ವಕ್ಕೆ ಮನ್ನಣೆಯನ್ನು ಸ್ವಾರ್ಥಿಗಳು ಕೊಡದಿರುವುದೊ ಅವರ ಭಾವನೆ ಅಥವಾ ಅತೃಪ್ತಿಗೆ ಕಾರಣ. ಹಿಂದಿನ ಶರಣರು ಉಪದೇಶಿಸಿ, ಆಚರಿಸಿ ಹೋದ ಮಾರ್ಗಕ್ಕೂ ಇಂದಿನವರ ಮಾರ್ಗಕ್ಕೂ ಇರುವ ವ್ಯತ್ಯಾಸವನ್ನು ಸೂಚಿಸುವುದೇ ಈ ಲೇಖನದ ಉದ್ದೇಶ.

ಹಿಂದಿನವರು ಇಷ್ಟಲಿಂಗವೇ ಪರಬ್ರಹ್ಮ. ಪರಮಾತ್ಮನ ಚಿಹ್ನೆ. ಸಾಧಕನು ಒಳಗಿನ ಪ್ರಾಣಭಾವಲಿಂಗಗಳನ್ನು ಧರಿಸಲು ಶಕ್ತನಾದರು ಮೇಲೆ ಇಷ್ಟಲಿಂಗವನ್ನು ಧರಿಸಿಯೇ ಧರಿಸಬೇಕು. "ಲಿಂಗಮಧ್ಯೇ ಜಗತ್ಸರ್ವಂ" ಗುರುವಿನಿಂದ ಅರಿಯಲೇಬೇಕು. ಸದಾ ಶಿವಲಿಂಗಪೂಜಾ ರತನಾಗಬೇಕು. ಇಷ್ಟಲಿಂಗದಿಂದಲೇ ಪ್ರಾಣಭಾವಲಿಂಗಗಳ ಕುರುಹನ್ನು ಕಾಣಬೇಕು. ಇದರಿಂದ ಸಾಮರಸ್ಯ ಜೀವಾತ್ಮ ಪರಮಾತ್ಮರಿಗೆ ಒದಗುವುದು. ಇದಕ್ಕೆ ಸಾಧನವಾದುದು ಪಂಚಾಕ್ಷರೀ ಮಹಾಮಂತ್ರ. ಇದೇ ಶಿವಜೀವೈಕ್ಯವನ್ನು ಬೋಧಿಸುವುದು. ಈ ಐಕ್ಯ ಮತ್ತಾವುದರಿಂದಲೂ ಲಭಿಸದು. ಈ ತತ್ತ್ವವನ್ನು ದೀಕ್ಷಾ ವೇಳೆಯಲ್ಲಾಗಲೀ ಅಥವಾ ಸಾಧಕನ ಸಾಧನಾಮಾರ್ಗವನ್ನಾಗಲೀ ಅರಿತು ಸಾಧಕನ ಜ್ಞಾನದ ಆಳವನ್ನರಿತು ಬೋಧಕನು ಬೋಧಿಸುತ್ತಾನೆ. ಸಾಧಕನು ಪರಮಾತ್ಮನಲ್ಲಿ ಬೆರೆಯುವಾಗಲೂ ಮೃತನಾದಮೇಲೂ ಆತನೊಂದಿಗೆ ಬರುವುದು ಈ ಇಷ್ಟಲಿಂಗವೊಂದೇ! ಮತ್ತಾವ ಸಾಂಸಾರಿಕ ಭೋಗ್ಯತಮ ವಸ್ತುವೂ ಸಾಧಕನನ್ನು ಹಿಂಬಾಲಿಸಲಾರದು. ಅಂತು ಈತನ ಜೀವಮಾನದಲ್ಲಿ ಪ್ರಪಂಚದಲ್ಲಿ ಜೀವನವನ್ನು ಹಸನು ಮಾಡಿ ಮುಕ್ತಿಕಾಲದಲ್ಲೂ ಸಹಾಯ ಸಂಪತ್ತಿಯನ್ನು ನೀಡುವುದು ಇದೊಂದೆ. ಜನನ ಮರಣಗಳ ಬಾಧೆಯಿಲ್ಲ. ಪ್ರಪಂಚದಲ್ಲಿ ಸಂಸಾರ ಸ್ವಪ್ನಪ್ರಾಯ. ಆತನಿಗೆ ಶಾಶ್ವತವಾದ ಕೈವಲ್ಯಪದವಿ ಅರಿದೆ. ಇದಿಷ್ಟು ಗುರುಗಳ ಸದುಪದೇಶ ಸಾರ. ಅಂತೆಯೇ ನಡೆಯುವುದು ಭಕ್ತನ ಸಾಧನಾಮಾರ್ಗವನ್ನವಲಂಬಿಸಿದೆ. ಇತರ ಸ್ಥಾವರಲಿಂಗಪೂಜೆ ನಿಷಿದ್ಧ. ಅವು ನೀಡುವ ಫಲ ಇಹಲೋಕಕ್ಕೆ ಸಂಬಂಧಿಸಿದ್ದು. ಸಂಸಾರಿಕ ಸುಖದುಃಖಗಳನ್ನು ಉತ್ತಮಗೊಳಿಸುವುವು.

ಇಂದು ಇಂದಿನ ನಮ್ಮಲ್ಲಿ ಹಲವರು ಇದನ್ನು ಅನುಸರಿಸಲಿಲ್ಲ. ಇಷ್ಟಲಿಂಗವೆಂದರೇನೆಂದೇ ತಿಳಿದುಕೊಂಡಿಲ್ಲ. ಅದರ ತತ್ತ್ವವೇನೆಂಬುದನ್ನು ಅರಿದಿಲ್ಲ. ಸಾಧಕನ ಸಾಧನಾಮಾರ್ಗವಾವುದೊ? ಅಷ್ಟೆ. ಜೀವಾತ್ಮ ಪರಮಾತ್ಮರ ಸ್ವರೂಪವೇನು? ಅವುಗಳಿಗೇನಾದರೂ ಸಂಬಂಧವುಂಟೆ? ಪಂಚಾಕ್ಷರಿಯಾವುದು? ಅದರ ತಿರುಳೇನು? ಇದು ಅವರಿಗೆ ಅರಿಯದು. ಸಾಮಾನ್ಯರಂತೆ ಸ್ಥಾವರಲಿಂಗಗಳನ್ನು ಪೂಜಿಸುವುದು. ಅವುಗಳಿಗೆ ಮುಡಿ ಮುಂತಾದ ಅರಿಕೆ ಹೊತ್ತುಕೊಳ್ಳುವುದು.

ಅಭಿಷೇಕ ಮುಂತಾದ ಕಾರ್ಯಗಳಲ್ಲಿ ಮಗ್ನರಾಗುವುದು. ಇದು ಇವರ ನಿತ್ಯಕಾಯಕ. ಅಥವಾ ಸಂಕಟ ಬಂದಾಗ ವೆಂಕಟರಮಣ. ಇಷ್ಟಲಿಂಗ ಪೂಜೆಯಲ್ಲಿ ತಾತ್ಸಾರ, ಔದಾಸೀನ್ಯ. ಹಿಂದಿನವರು ಹಾಡಿದ "ಕಟ್ಟಿದ ಲಿಂಗವ ಬಿಟ್ಟು ಬೆಟ್ಟದ ಲಿಂಗಕ್ಕೆ ಓಡಿ ಹೋಗಿ ಹೊಟ್ಟಡಿಯಾಗಿ ಬೀಳುವ ಲೊಟ್ಟೆಮೂಳನ ಕಂಡರೆ ಎಡದ ಪಾದರಕ್ಷೆಯ ತಕ್ಕೊಂಡು ಲಟಪಟನೆ ಹೊಡೆಯೆಂದಾತ ನಮ್ಮ ಅಂಬಿಗರ ಚೌಡಯ್ಯ ನಿಜಶರಣನು." ಈ ಉಪದೇಶ ಇಂದಿನವರಿಗೆಲ್ಲಿ ರುಚಿಸುವುದು! ರುಚಿಸಿದರೂ ಆಚರಣೆ ಬೇಕಲ್ಲ!

ಸ್ಥಾವರಲಿಂಗಗಳ ಬೇಡಿಕೆ, ಸಂಸಾರ ಚಕ್ರದಲ್ಲಿ ಕಂಡು ಬರುವ ನ್ಯೂನಾತಿರೇಕಗಳ ಪರಿಹಾರ. ನಮ್ಮ ಕುಟುಂಬದಲ್ಲಿ ಆವ ಕಷ್ಟಗಳೂ ಕಾಲಿಡದಿರಲಿ. ನಮ್ಮ ಕುಟುಂಬ (ಹೆಂಡತಿ ಮಕ್ಕಳು) ಸುಖವಾಗಿರಬೇಕು. ಇದೇ ನಮಗೆ ಸ್ವರ್ಗ. ಈ ಸುಖವೇ ಸ್ವರ್ಗ ಸುಖ. ಇದರ ಮುಂದೆ ಮತ್ತೊಂದಿಲ್ಲವೆಂಬುದು ಇವರ ಭಾವನೆ. ಈತನ ಕೋರಿಕೆಯಂತೆ ಆ ದೇವರ ದಯೆಯಿಂದ (ಆತನ ನಂಬಿಕೆಯಂತೆ) ಒಳ್ಳೆಯದಾದರೆ ಆತನ ಸಂತೋಷಕ್ಕೆ ಪಾರವೇ ಇಲ್ಲ. ಅಂತು ಸಂಸಾರಕ್ಕೆ ಈತನ ಜೀವ ಮೀಸಲು. ಮಾನವನ ಗುರಿಯೇನು? ಅದಕ್ಕೆ ಮನುಷ್ಯನ ಸಾಧನೆಯೇನೆಂಬುದರಲ್ಲಿ ದೃಷ್ಟಿಯಿಲ್ಲ. ಮೃತನಾದರೆ ಕುಟುಂಬದ ಪ್ರತ್ಯುಪಕಾರವೇನು? ಇದು ಆತನಿಗೆ ಏನು ಮಾಡಬಲ್ಲದು. ತನ್ನ ಜೀವಮಾನವೆಲ್ಲ ಕುಟುಂಬಕ್ಕೆ ಶ್ರಮಿಸಿದನು. ಇಷ್ಟರಲ್ಲಿ ಕುಟುಂಬ ಪ್ರತಿಯಾಗಿ ಏನು ಮಾಡಬಲ್ಲದು. ಏನು ಮಾಡೀತು. ಮಾಡಲಾರದು. ಮಾಡಲು ಆತನೇ ಶಕ್ತನಾಗಿದ್ದ. ಅಂದು ಮಾಡಬಹುದಾಗಿತ್ತು. ಮಾಡಲಿಲ್ಲ. ಇದಕ್ಕೆ ಸಂಸಾರದ ವ್ಯಾಮೋಹ ಕಾರಣವಾಗಿತ್ತು.

ಹಿಂದಿನವರಲ್ಲಿ ಲಿಂಗವಂತರೆಲ್ಲರೂ ಒಂದೆ. ಅವರಲ್ಲಿ ಪರಸ್ಪರ ಭೇದಭಾವಗಳು ಇರಲಿಲ್ಲ. "ಲಿಂಗವಂತನೇ ಕುಲಜ" ಎಂಬುದು ಅವರ ಅನುಭವದ ಸಿದ್ಧಾಂತ. "ಇವರೆಲ್ಲರೂ ಒಂದೇ ಅಂತಸ್ತಿನವರು. ಮೇಲು ಕೀಳೆಂಬ ಭಾವನೆಗೆಡೆಯಿಲ್ಲ. ಲಿಂಗಧಾರಿಗಳಲ್ಲಿ ಪ್ರಾಚೀನತೆ ನಾವೀನ್ಯಗಳ ಪರೀಕ್ಷೆಗೆಡೆಯಿರಲಿಲ್ಲ. ಅಂತು ಇವರೇ ಲಿಂಗವಂತರು. ಶಿವಭಕ್ತರು." ಎಂಬುದು ಅವರ ನಿಷ್ಕಲಪವಾದ ಹೃದಯದಿಂದ ಹೊರಬಿದ್ದ ಅನುಭವದ ಸಾರ.

ಕುಲ, ಶೀಲ, ಜನ್ಮ ಅಥವಾ ವಯಸಿಗಲ್ಲ ಅವರ ಪ್ರಾಧಾನ್ಯ, ಗುಣಕರ್ಮಗಳಿಗೆ ಮಾತ್ರ. ನಾನು ಹಿರಿಯವನೆಂದು ತಿಳಿದವನು ಹಿರಿಯನಲ್ಲ. ಹಿರಿದು ಕಿರಿದೆಂಬ ಶಬ್ದವಡಂಗಿ ಸಮದೃಷ್ಟಿ ನೆಲೆಗೊಂಡಲ್ಲಿಯೇ ನಿಜವಾದ ಹಿರಿಯತನ ನಿಲಬಲ್ಲದು. ದೇಹ ಹೆಣ್ಣಾಗಲಿ, ಗಂಡಾಗಲಿ, ಬ್ರಾಹ್ಮಣನಾಗಲಿ ಅಥವಾ ಕೊನೆಗೆ ಅಂತ್ಯಜನೇ ಆಗಲಿ, ಅವರ ಆತ್ಮನಲ್ಲಿ ಹೆಣ್ಣು ಗಂಡು ಮುಂತಾಗಿ ಭೇದವಿರುವುದಿಲ್ಲ. ಆತ್ಮ ಎಲ್ಲಿ ಹೋದರೂ ಒಂದೆ. ಆತ್ಮಂಗೆ ಆವ ಕುಲವುಂಟು ಹೇಳಿರೋ ಎಂದು ಶರಣರು ಸಾರಿದ್ದಾರೆ.

ಲಿಂಗವಂತರೆಲ್ಲರೂ ಒಂದೆ. ಅವರಲ್ಲಿ ಭೋಜನಾದಿಗಳನ್ನು ಮಾಡಬಹುದು. ಅವರೆಲ್ಲರೂ ಶಿವದೀಕ್ಷಾ ಸಂಸ್ಕಾರಿಗಳೇ. ಶಿವದೀಕ್ಷೆಯನ್ನು ಪಡೆದು, ಲಿಂಗವನ್ನು ಧರಿಸಿದವರಲ್ಲಿ ಕುಲಜಾತಿಗಳ ಪರೀಕ್ಷೆಯಿಲ್ಲ. ಅವರೆಲ್ಲರೂ ಒಂದೇ ಮನೆಯವರೆಂದು ಸಾರಿದರು. ಅಂತೆಯೇ ಪರಸ್ಪರ ವ್ಯವಹಾರವೂ ಅವರಲ್ಲಿತ್ತು. "ಉಂಬಲ್ಲಿ ಉಡುವಲ್ಲಿ ಕ್ರಿಯೆಯಳಿಯಿತೆಂಬ ಮಾತು ಸರಿಯಲ್ಲ. ಕೊಂಬಲ್ಲಿಕೊಡುವಲ್ಲಿ ಕುಲವನ್ನರಿಸುವುದೂ ಅಷ್ಟೆ. ಹಾಗೆ ಕುಲವನ್ನರಸುವವರು ಭಕ್ತರೂ ಅಲ್ಲ, ಯುಕ್ತರು ಮೊದಲೇ ಅಲ್ಲವೆಂಬುದು ಅವರ ಹಾರ್ದಿಕ ಅನುಭವ ಅಥವಾ ಆಂತರಿಕ ವ್ಯವಹಾರದ ಕುರುಹು. ಈ ವಿಧವಾದ ವ್ಯವಹಾರದ ಹೊರತು ಪರಸ್ಪರ ಸ್ನೇಹವೂ ಹಿತಸಂಬಂಧಾದಿಗಳು ನೆಲೆಗೊಳ್ಳಲಾರವು. ಭೋಜನ ವಿವಾಹಾದಿ ವ್ಯವಹಾರಗಳಲ್ಲಿ ಕಾಯೇನ ವಾಚಾ ಕರ್ಮಣಾ ಬಾಂಧವ್ಯವೊದಗಿದಂತೆ ಮತ್ತಾವುದರಿಂದಲೂ ಲಭಿಸಲಾರದೆಂಬುದು ಅವರ ಮತ. ಮನೆಗೆ ದೂರವಾದರೆ ಮನಕ್ಕೂ ದೂರವಷ್ಟೆ. ಇಂತಿವೆಲ್ಲವನ್ನು ನೋಡಿದರೆ ಕುಲವನ್ನು ನೋಡಬಾರದು. ಆಚಾರ ಮುಖ್ಯ. ಇವೆಲ್ಲಕ್ಕೂ ಶಿವದೀಕ್ಷೆ. ಶಿವದೀಕ್ಷೆ ಕುಲಕ್ಕಲ್ಲ. ಆಚಾರಕ್ಕೆ ಶರಣುಹೋಗುವುದು ದೀಕ್ಷೆಪಡೆದು ಶಿವಾಚಾರಸಂಪನ್ನರಾದವರೆಲ್ಲರೂ ಒಂದೇ ಕುಲದವರು. ಅದೇ ಶಿವಕುಲ. ದೀಕ್ಷೆ ಪಡೆದ ಬಳಿಕ ಆವುದೇ ಜಾತಿಯವನಿರಲಿ ಆತನೇ ಸಮಾಜದಲ್ಲಿ ಮಾನ್ಯ ಅಥವಾ ಗಣ್ಯವ್ಯಕ್ತಿ. ಆ ಸಂಸ್ಕೃತ ಸಂಸ್ಕಾರರಹಿತನು ಮಾನ್ಯನೂ ಅಲ್ಲ. ಗಣ್ಯ ವ್ಯಕ್ತಿಯೂ ಅಲ್ಲ. ಹಾಗೇನಾದರೂ ಕರೆದರೆ ಪ್ರತಿಫಲಾಪೇಕ್ಷೆಯಿಂದಲೇ ಧರ್ಮಬದ್ಧವಲ್ಲವದು. ಅದನ್ನೇ ಶರಣರು "ಭವಿ" ಶಬ್ದದಿಂದ ವ್ಯವಹರಿಸುತ್ತಾರೆ.

ನಮ್ಮಲ್ಲಿ ಇಂದು ಅಲ್ಲಲ್ಲಿ ಕಾಣಬಹುದು. ಈ ಆಚರಣೆ ವಿರಳ ವೆಂದರೂ ತಪ್ಪಲ್ಲ. ಲಿಂಗವಂತರಾದರೂ ಅವರಲ್ಲಿ ಉಚ್ಚ ನೀಚ ಭಾವನೆ ಅಡಗಲಿಲ್ಲ. ತಲೆ ಎತ್ತಿ ಇದೆ. ಪರಸ್ಪರ ಭೇದಭಾವನೆ ಸಮಾಜದಲ್ಲಿ ತಾಂಡವಾಡುತ್ತಿದೆ. ಲಿಂಗವಂತನೇ ಕುಲಜ ಎಂಬ ವಾಕ್ಯವು ಅಂಧ ಕಾರದಲ್ಲಿ ಮುಳುಗಿದೆ. ಅದಕ್ಕೆ ಪ್ರಕಾಶ ಬೀಳಲು ಅವಕಾಶವೆಲ್ಲಿ ಯದು. ಈಗಿನ ಐಶ್ವರ್ಯವಂತರ ಪಂಡಿತಂಮನ್ಯರ, ಧರ್ಮಶಿರೋಮಣಿಂ ಮನ್ಯರ ಔದ್ಧತ್ಯ ಇದಕ್ಕೆ ಕಾರಣ.

ಲಿಂಗವಂತರಾದರೂ ಆವರ ಲಿಂಗವಂತಿಕೆಯಲ್ಲಿ ಕಾಲವಿಭಾಗ ಕಾಲಪರೀಕ್ಷೆ ಅಥವಾ ಪ್ರಾಚೀನತೆ ನಾವೀನ್ಯಗಳ ವಿಮರ್ಶೆ. ಆಮೇಲೆ ನಾವು ಅನಾದಿಗಳು ನಾವೇ ಉಚ್ಚ ಮನೆತನದಲ್ಲಿ ಜನಿಸಿದವರು, ನಾವೇ ಬೋಧಕರು, ನಾವೇ ಹಿರಿಯರು ನಮ್ಮದೇ ಜಗದ್ಗುರುಪೀಠ. ಉಳಿದವರು ನವೀನ ವೀರಶೈವರು, ಶಿಷ್ಯರು, ಎಲ್ಲರೂ ಕಿರಿಯರು, ಎಂಬ ಭಾವನೆ ಇಂದಿನ ಧರ್ಮಶಿರೋಮಣಿಗಳಲ್ಲಿ. ಹಿಂದಿನವರ "ಹಿರಿಯ ಕಿರಿಯ ಭಾವನೆಯಿಲ್ಲದಿದ್ದರೆ ಅದೇ ಹಿರಿಯತನವೆಂಬ ಸಾರ ಸರ್ವಸ್ವ ನಮಗೆಲ್ಲಿ ಬರಬೇಕು. ಅರಿಯಬೇಕು, ಅರಿದಾಚರಿಸಿದರೆ ಆತ್ಮೋದ್ಧಾರ ವಾಗುವುದಲ್ಲ !

ಕುಲಶೀಲ ಜನ್ಮ ಮತ್ತು ವಯಸ್ಸಿಗೆ ಇಂದು ಪ್ರಾಧಾನ್ಯ ಗುಣ ಗುಣಕರ್ಮಗಳಿಗಲ್ಲ. ಇವುಗಳಿಗೆ ಪ್ರಾಮುಖ್ಯವಿದ್ದ ಕಾಲ ಹೋಯಿತು "ಕಾಲಾಯತಸ್ಮೈ ನಮಃ" ಹೆಣ್ಣು, ಗಂಡು, ಬ್ರಾಹ್ಮಣ ಮತ್ತು ಅಂತ್ಯಜ ಈ ಭಾವನೆ ಕುಲಗಳ ಮೇಲೆ. ಗುಣಕರ್ಮಗಳ ಮೇಲಲ್ಲ. ಅವರಲ್ಲಿಯ ಆತ್ಮ ಹೆಣ್ಣಲ್ಲ. ಗಂಡೂ ಅಲ್ಲ, ಆತ್ಮಗೆ ಆವ ಕುಲವುಂಟೋ! ಎಂಬ ಹಿಂದಿನವರ ಬೋಧನೆ ಇಂದಿನವರೆತ್ತ ಬಲ್ಲರು. ಇವರ ಐಶ್ವರ್ಯಮದ ಪಂಡಿತಂ ಮನ್ಯತೆಯ ಮದ. ಭೋಗ್ಯತಮವಸ್ತುವಿನ ದುರಭಿಮಾನ ಇದಕ್ಕೆ ಕಾರಣ.

ಇಂದು ನಮ್ಮಲ್ಲಿ ಲಿಂಗವಂತರಲ್ಲಿ ಉಚ್ಚನೀಚ ಭಾವನೆ ತುಂಬಿ ತುಳುಕಾಡಹತ್ತಿವೆ. ಭೋಜನಾದಿಗಳು ಹಲಕೆಲವರಲ್ಲೆ! ಕೊಂಬುದು ಕೊಡುವುದು ಅಷ್ಟೆ. ಇದು ಸಾಮೂಹಿಕವಾಗಿ ಅಲ್ಲ. ವೈಯಕ್ತಿಕವಾ ದುದು. ಒಂದೊಂದು ತಂಡವನ್ನು ಆಕ್ರಮಿಸಿದೆ. ತಂಡತಂಡದಲ್ಲೆ ಈ

ವ್ಯವಹಾರ ಪ್ರಚಾರದಲ್ಲಿಯೆಂದರೆ ಇಡೀ ಸಮಾಜದಲ್ಲೆಲ್ಲ ಬರಬೇಕೂ ಇಲ್ಲ! ಪರಸ್ಪರ ಭೋಜನಾದಿ ವ್ಯವಹಾರಗಳಿಂದ ಹಾರ್ದಿಕ ಭಾಂಧವ್ಯ ಲಭಿಸುವುದೆಂಬ ಅಮೃತವಾಣಿ ಮೃತವಾಗಿ ಇಂದಿನವರಿಗೆ ಇಂಥ ವ್ಯವ ಹಾರದಿಂದ ಸ್ನೇಹ ಮತ್ತು ಹಿತಸಂಬಂಧಾದಿಗಳು ನೆಲೆಗೊಳ್ಳುವುವೆಂ ಬುದು ಹಿಂದಿನವರ ಅನುಭವ. ಅಂತೆಯೇ ಅವರ ಆಚರಣೆ.

ನಮಗೆ ಇಂದಿನವರಲ್ಲಿ ಪರಸ್ಪರ ವ್ಯವಹಾರ ಬೇಕಿಲ್ಲ. ಅದು ಪೃಥಕ್ಕಾಗಿಯಿರಬಹುದು. ಭೋಜನ ಮಾತ್ರ ನಡೆಯಲ್ಲಿ. ಉಳಿದ ಅಂಶ ನಮ್ಮಲ್ಲಿ ನಡೆಯುತ್ತಿರಲಿ ಎಂಬ ಇವರ ಪಕ್ಷಪಾತ. ವಿವಾಹಾದಿ ಹಾರ್ದಿಕ ವ್ಯವಹಾರ ಸಮಾಜದಲ್ಲೆಲ್ಲ ಏಕೆ ವ್ಯಾಪಕವಾಗಬಾರದು. ಒಂದೊಂದು ಪಂಗಡದಲ್ಲಿ ಏಕೆ ವ್ಯಾಪ್ಯವಾಗಿರಬೇಕು. ಎಲ್ಲವೂ ಒಂದೊಂದರಂತೆಯೇ ಅಲ್ಲವೆ! ಒಂದೊಂದೂ ಒಂದೊಂದರಂತೆಯೆ? ಸಾಮಾಜಿಕ ನಿಯಮ ಗಳು ಸಮಾಜಕ್ಕೆ ಸಂಬಂಧಪಟ್ಟಿಲ್ಲವೆ. ವ್ಯಕ್ತಿಗೆ ಸಂಬಂಧಪಟ್ಟಿದ್ದೆ. ಎಂಬ ಯುಕ್ತಾಯುಕ್ತ ವಿವೇಚನೆಯೇ ಇಂದಿನವರಿಗಿಲ್ಲ. ಅವರ ದೃಷ್ಟಿ ಮುಂದಕ್ಕೆ ಸಾಗುವುದು ಸಿಂಹಾವಲೋಕದಂತಲ್ಲ. ಇದೇ ರೀತಿ ಸಮಾ ಜವು ಮುಂದುವರೆಯುತ್ತಾ ಬಂದರೆ ಸಮಾಜವು ನಾಮಾವಶೇಷವಾ ಗುವುದರಲ್ಲಿ ಸಂಶಯವಿಲ್ಲ.

ಕೇವಲ ಭೋಜನಮಾತ್ರದಿಂದ ಯಾವ ವಿಧವಾದ ಆಂತರಿಕ ವ್ಯವಹಾರಗಳೂ ದೊರಕಲಾರವು. ಉದಾ:- ಪರಮಕಾಯರಿಗೆ ನಾವು ಭೋಜನವನ್ನು ಉಣಬಡಿಸುತ್ತೇವೆ. ಅವರು ಊಟಮಾಡಿ ಹೋಗು ತ್ತಾರೆ. ತಾವತಾ ಅಂದಿನ ದಿನದ ಜ್ಞಾಪಕಶಕ್ತಿ ಮತ್ತು ಕೃತಜ್ಞತಾ ದಿಗಳು ಮಾತ್ರ ಪ್ರಕಟವಾಗುತ್ತವೆ. ಇದರಿಂದ ಆ ಜೀವಸಂಬಂಧಾದಿ ಗಳು ಹೇಗೆ ಸಂಭವಿಸುವುವು ಸಮಾಜದಲ್ಲಿ? ನಾವೆಲ್ಲರೂ ಒಂದೇ ಮತೀಯರು ಈ ಭಾವನೆ ಕೇವಲ ಭೋಜನದಿಂದಲ್ಲ. ವಿವಾಹಾದಿ ಹಾರ್ದಿಕ ಸಂಬಂಧದಿಂದ ಉಂಟು ಎಂಬುದು ಆಧುನಿಕರಿಗೆ ಮನ ಗಾಣಬೇಕು.

ಹಿಂದೆ ತ್ರಿವಿಧಸಂಪತ್ತಿಯ ಅಂತಸ್ತು ಬಲು ದೊಡ್ಡದಾಗಿತ್ತು. ಅದರ ತತ್ತ್ವ ಅದರ ಸ್ವರೂಪ ಬಲು ಬಿಗಿಯಾದುದು. ಇದಕ್ಕೆ ಸಮಾಜದಲ್ಲಿ ಬಲು ಗೌರವ. ಅದರ ತತ್ತ್ವವನ್ನು ಸಮಾಜದಲ್ಲಿ ಸಮುಸ್ಯಾ ರೀತಿ

ಯಿಂದ ವಿವರಿಸಿದರು ಹಾಗೂ ಬೋಧಿಸಿದರು. ಅದರ ಪರಸ್ಪರ ಕರ್ತವ್ಯಗಳು, ಅದರ ವಿವೇಚನೆ ಮತ್ತು ಸ್ವರೂಪವನ್ನು ಪಂಡಿತಪಾ ಮರರಿಗೂ ಉಪದೇಶಿಸಿ ಸದ್ಗತಿಯನ್ನು ತೋರಿಸಿದ ಕೀರ್ತಿ ಹಿಂದಿನವ ರದು. ಅವರೇ ಶಿವಶರಣರು.

ತ್ರಿವಿಧಸಂಪತ್ತಿಯ ಹಿನ್ನೆಲೆಯೇ ಸಾಕ್ಷಾತ್ಪರ ಬ್ರಹ್ಮ. ಅಥವಾ ಶಿವ. ಈತನೇ ತ್ರಿವಿಧಸಂಪತ್ತಿಯಾದುದು. ಅಥವಾ ಈತನಿಂದಾದುದು ಆ ತ್ರಿವಿಧಸಂಪತ್ತಿ. ಅದೇ ಗುರು, ಲಿಂಗ, ಮತ್ತು ಜಂಗಮ. ಇವು ಮೂರು ಒಂದೇ ಅಥವಾ ಒಬ್ಬನೇ. ಆಯಾಯ ಕಾಯಕಕ್ಕಾಗಿ ಬೇರೆ ಬೇರೆ ನಾಮ, ರೂಪ, ಕ್ರಿಯೆಗಳನ್ನು ಅವಲಂಬಿಸಿತು. ದೀಕ್ಷೆ ಕೊಟ್ಟ ಗುರುವು. ಪೂಜಿಸಿಕೊಂಡ ಲಿಂಗವು. ಮತ್ತು ಬೋಧಿಸಿದ ಅಥವಾ ಉಪದೇಶಿಸಿ ಜಂಗಮನಾದುದು. ಇವೇ ನಾಮರೂಪ ಕ್ರಿಯೆಗಳು.

ಈ ತ್ರಿವಿಧಸಂಪತ್ತಿಯಲ್ಲಿ ಸಾಧಕನು ತಾರತಮ್ಯವನ್ನರಿಯಬೇಕು. ಅದರಲ್ಲಿ ಸಾಧಕನ ವರ್ತನೆ ಬೇರೆಯಾದರೆ ಸಾಧನಾಮಾರ್ಗ ಅಪಾ ಮಾರ್ಗ. ಅದೇ ಆತನನ್ನು ಅಧೋಗತಿಗೆ ತರುವುದು.

ಗುರುವು ಸಾಧಕನಿಗೆ ಆತ್ಮಜ್ಞಾನವನ್ನು ಬೋಧಿಸುವ ಆತ್ಮಜ್ಞಾನಿ. ಆತನಿಗೆ ಆತ್ಮಜ್ಞಾನದ ಸ್ವರೂಪವಿನ ಅರಿವು ಅರಿವಾಗಿರುತ್ತದೆ. ಅಂತು ಗುರುವಿನ ಕಾರುಣ್ಯ ಸಾಧಕನಿಗೆ ಬೇಕೆ ಬೇಕು. ಗುರುಕಾರುಣ್ಯದಿಂದಲ್ಲದೆ ಆತನಿಗೆ ಮುಕ್ತಿಲಭಿಸದು. ಗುರುಪಾದವ ಕಂಡಲ್ಲಿ ಅಲಭ್ಯವೂಲಭ್ಯ. "ಗುರುಕರುಣಿಸಲು ಸಂಸಾರ ವಿಷಯ ಕೆಟ್ಟಿತ್ತು. ಮಾಯಾಪ್ರಪಂಚ ಬಿಟ್ಟಿತ್ತು. ಹುಟ್ಟರಿತು ಹೋಯಿತು. ನೆಟ್ಟಗೆ ಗುರುಪಾದವ ಮುಟ್ಟಿ ಭವಗೆಟ್ಟೆನು ಕಾಣಾ ರಾಮನಾಥಾ." ದೇವರದಾಸಿಮಯ್ಯನ ವಾಣಿ ಅಮೃತವಾಣಿ. ಅದು ಗುರುಸ್ವರೂಪವನ್ನು ನಿರೂಪಿಸುತ್ತದೆ. ಅಂತು ಗುರುವು ಬೇಕೆಬೇಕೆಂದಾಯಿತು. ಗುರುವು ಸಿಗುವವರೆಗೂ ಸಾಧಕನು ತಟಸ್ಥನಾಗದೆ ಅಂತರಾತ್ಮನನನ್ನೆ ಗುರುವೆಂದು ಭಾವಿಸಿ ಮುಕ್ತಿಪಥ ದಲ್ಲಿ ಅಡಿಯಿಸಬೇಕು.

ಗುರುವಿನ ಯೋಗ್ಯತೆ ಬಲು ದೊಡ್ಡದು. ಆತನು ಶಿವನ ಅಭೇದ್ಯ ಭಕ್ತನ ಉದ್ಧಾರಕ್ಕಾಗಿ ಶಿವನು ಭೂಲೋಕದಲ್ಲಿ ಎತ್ತಿದ ಪವಿತ್ರವಾದ ಜನ್ಮ. ಶರಣರೇ ಆತನ ಯೋಗ್ಯತೆಯನ್ನು ವಿವರಿಸಿದ್ದಾರೆ. "ಅಯ್ಯಾ

ಕ್ರಿಯಾಚಾರದಲ್ಲಿ ಮೋಹವುಳ್ಳಾತನೇ ಸದ್ಗುರುವೆಂಬೆ. ಸದಾಚಾರ ಸದ್ಭಕ್ತಿಯಿಲ್ಲದೆ ಗುರುತ್ವವಿರಲಾಗದು. ತನುವಿನಾಶೆಯಳಿದಾತನ ಸಚ್ಚಿದಾನಂದ ಗುರುವೆಂಬೆ. ಸದಾಚಾರದ ಸದ್ಭಕ್ತಿವಿಡಿದು ಆಚರಿಸಿದಾತನೇ ಪರಬ್ರಹ್ಮ ಅರಿದ ಬಳಿಕ, ಗುರುವಿನ ಅಂತಸ್ತು ಆತನ ಮಟ್ಟ ಯೋಗ್ಯತೆ ಮತ್ತು ಭಕ್ತನ ಮೇಲಿನ ಜವಾಬ್ದಾರಿ ಸಾಮಾನ್ಯವಾದುದೇ? ಈತನೇ ಸಂಸಾರ ವರ್ಜಿತ ಹಾಗೂ ನಿರ್ಲಿಪ್ತ ಮತ್ತು ಸದಾಚಾರ ಸಂಪನ್ನನು. ಈತನು ಕೊಡುವ ದೀಕ್ಷೆಯೇ ಪರಮ ಪದವಿಗೆ ಸಾಧನ.

ಗುರುವಿನ ಸಾನ್ನಿಧ್ಯವಿದ್ದಾಗ ಲಿಂಗಪೂಜೆಗಿಂತಲೂ ಆತನ ಪೂಜೆಯೇ ಶ್ರೇಷ್ಠ. ಲಿಂಗದ ಮುಖವೇ ಜಂಗಮ. "ಗುರುನಿಂದೆಯ ಮಾಡಿ ಲಿಂಗಪೂಜೆ ಮಾಡುವ ಭಕ್ತನ ಅಗ್ಗವಣಿಯೆಂತೋ? ಲಿಂಗದ ಮುಖವೇ ಜಂಗಮ" ವೆಂಬುದು ಕೂಡಲಸಂಗನ ವಚನ, ಎಂಬುದು ಇದಕ್ಕೆ ಮಹದಾಧಾರ.

ಸುಲಕ್ಷಣಲಪೆತ ಗುರುವು ಶಿಷ್ಯನನ್ನು ಹುಡುಕುತ್ತಾ ಬರುವನು ಕರುವಿನೆಡೆಗೆ ಹಸು ಬಂದಂತೆ. ಆತನಿಗೆ ಸದಾಚಾರ ವ್ಯವಹಾರಾದಿಗಳನ್ನು ಬೋಧಿಸಿ ಶಿವದೀಕ್ಷೆ ಮಾಡುತ್ತಾನೆ. ಬಳಿಕ ಲಿಂಗಧಾರಣೆ. ಶಿವದೀಕ್ಷೆಯಿಲ್ಲದೆ ಲಿಂಗಧಾರಣೆ ಮಾಡಲಾಗದೆಂದು ಆಗಮಗಳು ಸಾರುತ್ತವೆ. ಮುಂದೆ ಜಂಗಮನಾಗಿ ಬೋಧಿಸುತ್ತಾನೆ. ಆತನು ಧಾರಣೆ ಮಾಡುವುದೇ ಇಷ್ಟಲಿಂಗ ಇದು ಸ್ಥೂಲಶರೀರಕ್ಕೆ ಸಂಬಂಧಿಸಿದುದು. ಮನಸ್ಸು ಮತ್ತು ಕಾರಣ ಅಥವಾ ಸೂಕ್ಷ್ಮ ಮತ್ತು ಕಾರಣ ಶರೀರಗಳಲ್ಲಿ ಪ್ರಾಣ ಮತ್ತು ಭಾವಲಿಂಗಗಳು. ಇವುಗಳ ನೆಲೆಯನ್ನು ಬೋಧಿಸುತ್ತಾನೆ ಜಂಗಮನಾಗಿ.

ದೀಕ್ಷೆಯಿಂದ ಲಿಂಗಸಂಬಂಧವೂ ಕರ್ಮನಾಶವೂ ಉಂಟಾಗುತ್ತವೆ. "ದೀಯತೆ ಲಿಂಗಸಂಬಂಧಃ ಕ್ಷೀಯತೆ ಕರ್ಮಸಂಚಯಃ" ಎಂದು ಆಗಮಗಳು ಸಾರುತ್ತವೆ. * ದೀಕ್ಷೆ ಮೂರುವಿಧ. ಕ್ರಿಯಾ ಮನು

---

* ೧ ಮಸ್ತಕದಲ್ಲಿ ಕರ್ಣಪದದಲ್ಲಿ ಕರಸ್ಥಳದಲ್ಲಿ ದೇಶಿಕಂ ।
ಹಸ್ತಸರೋಜಮಂ ಪರಮಮಂತ್ರಮಂ ಶಿವಲಿಂಗ ಮೂರ್ತಿಯಂ॥
ನ್ಯಸ್ತಮನೇಕೆ ಮಾಡಿದನಿದೇನಿದರರ್ಥ ವಿಶೇಷಮೆಂತುಟೆಂ ॥
ದಾಸ್ತಿಕ ಬುದ್ಧಿಯಿಂ ತಿಳಿದೊಡಾತನೆ ಮುಕ್ತನಲಾ ಶಿವಾಧವಾ ॥೭೫॥

ಮತ್ತು ವೇಧಾ ದೀಕ್ಷೆಯೆಂದು. ಸ್ಥೂಲ ಶರೀರಕ್ಕೆ ಕ್ರಿಯಾ ದೀಕ್ಷೆಯೂ ಸೂಕ್ಷ್ಮಶರೀರಕ್ಕೆ ಮಂತ್ರ ದೀಕ್ಷೆಯೂ ಕಾರಣ ಶರೀರಕ್ಕೆ ವೇಧಾ ದೀಕ್ಷೆಯೂ ಅಳವಡುತ್ತವೆ. ಅಥವಾ ಲಿಂಗತ್ರಯಕ್ಕಾಗಲೀ ದೀಕ್ಷಾತ್ರಯವು ಸಂಬಂಧಿಸುತ್ತದೆ.

ಸಾಧಕ ಜೀವನದಲ್ಲಿ ದೀಕ್ಷೆ ಶಿಕ್ಷೆ ಮತ್ತು ಅನುಭಾವ ಈ ಮೂರು ಮೆಟ್ಟಲುಗಳುಂಟು. ದೀಕ್ಷಾಸ್ವರೂಪವನ್ನು ವಿವರಿಸಿಯಾಯ್ತು. ಧರ್ಮ ಮತ್ತು ಶಿವಜೀವರ ತಾರತಮ್ಯವನ್ನರಿಯುವುದೇ ಶಿಕ್ಷೆ. ಸಾಧನಾಮಾರ್ಗದಲ್ಲಿ ಸಾಧಕನು ಈ ಅನುಭವವನ್ನು ಅನುಭವಿಸುವುದೇ ಅನುಭಾವ. ಈ ಎಲ್ಲ ಅನುಭವವೂ ಬೋಧಕನಾದ. ಆತನು ಇದಕ್ಕೆ ತತ್ತ್ವಜ್ಞಾನಿ ಮತ್ತು ಸರ್ವಸಂಗಪರಿತ್ಯಾಗಿ.

ಆತನ ಇಷ್ಟಾರ್ಥ ಸಾಮರಸ್ಯ. ಇದಕ್ಕೆ ಸಮರಸ ಭಕ್ತಿ ಮೂಲ. ಹಾಗೂ ಭಕ್ತನು ತನ್ನ ಇಷ್ಟ ಪ್ರಾಣ ಮತ್ತು ಭಾವಲಿಂಗದಿಂದ ಎರಡೆರಡಂತೆ ಆರು ಲಿಂಗಗಳನ್ನರಿಯಬೇಕು. ಆಚಾರಲಿಂಗ, ಗುರುಲಿಂಗ ಇಷ್ಟಲಿಂಗದಿಂದ. ಶಿವಲಿಂಗ ಜಂಗಮಲಿಂಗ ಪ್ರಾಣಲಿಂಗದಿಂದ. ಪ್ರಸಾದ ಲಿಂಗ ಮಹಾಲಿಂಗ ಭಾವಲಿಂಗದಿಂದ. ಇವೇ ಆರು ವಿಧಲಿಂಗ. ಇವುಗಳ ಅರಿವು ಜಂಗಮದಿಂದ.

ಜಂಗಮ ಸ್ವಯ ಚರ ಮತ್ತು ಪರ ಎಂದು ಮೂರು ತೆರ. ಈತನು ಹಳ್ಳಿಗೆ ಏಕರಾತ್ರಿ. ಪಟ್ಟಣಕ್ಕೆ ಪಂಚರಾತ್ರಿ. "ತರುತಲವಾಸಃ ಕರತಲಭಿಕ್ಷ"ನಾಗಿ ಸಂಚರಿಸುತ್ತಾ ಬೋಧಿಸುತ್ತಾನೆ. ಇದರಲ್ಲಿ ಪರ ಜಂಗಮ ಆತ್ಮಜ್ಞಾನಿ ಅಲ್ಲವು. ಅಂತು ಈ ತ್ರಿವಿಧ ಸಂಪತ್ತಿಯನ್ನು ಉಪಯೋಗಿಸಿಕೊಂಡು ಆದರ ಪ್ರಯೋಜನವನ್ನು ಹೊಂದಿ ಕೈವಲ್ಯವನ್ನು ಪಡೆಯುವುದು ಸಾಧಕನ ಸಾಧನೆ ಅಥವಾ ಭಾಗ್ಯ.

---

೨ ಕಾರಣದೀಕ್ಷೆ ಶಿರದೊಳ್ಕರ ಪದ್ಮವನಿಟ್ಟೊಡಾಯ್ತು ವಿ ।
ಸ್ತಾರಿತಮಾತ್ರ ಮಾಶ್ರವಣದಲ್ಲಿ ನಿರೂಪಿಸಲಾಯ್ತು ಸೂಕ್ಷ್ಮ ಶಾ ॥
ರೀರ ಪದೈಕದೀಕ್ಷೆತದುಪಾಧಿಬಹಿಸ್ತನು ದೀಕ್ಷೆ ಲಿಂಗಮಂ
ಸೇರಿಸಿಕೊಟ್ಟೊಡಾಯ್ತು ಕರದಲ್ಲಿ ಗುರುಪ್ರವರಂ ಶಿವಾಥವಾ ॥೭೭॥

**ಈ ವಿಷಯವಲ್ಲಿ ಮಗ್ಗೆಮಾಯಿದೇವ ಶತಕತ್ರಯದ ಪುಟ ೫೨–೫೬ ಪದ ೭೫–೭೭. ನೋಡಬೇಕು.**

ಈ ತತ್ತ್ವ ಕ್ರಮೇಣ ಇಂದಿನವರಲ್ಲಿ ನಶಿಸುತ್ತಾಹೋಯಿತು. ಕೊನೆಗೆ ಸ್ವಪ್ನ ಪ್ರಾಯವೇ. ನಮ್ಮಲ್ಲಿ ತ್ರಿವಿಧ ಸಂಪತ್ತಿಯು ವ್ಯವಹಾರವೇ ಶೂನ್ಯ. ಗುರುಲಿಂಗಜಂಗಮವೆಂಬುದನ್ನು ಮಾತ್ರ ಕೇಳಿದ್ದಾರೆ. ಆವರ ಪರಸ್ಪರ ಸಂಬಂಧ, ಅವರ ಪರಸ್ಪರ ಕರ್ತವ್ಯವೇನೆಂಬುದಕ್ಕೆ ಪ್ರಚಾರದಲಿಲ್ಲ. ಅವರ ತತ್ತ್ವ ಪ್ರಚಾರ ಪೂಜೆ ಮತ್ತು ಉಪದೇಶಗಳು ಯಥಾಸ್ಥಾನದಲ್ಲೇ ಮುಂಡಿಸಿದುವು. ಅವು ಇಂದಿನ ನಮಗೆ ಬೇಕಿಲ್ಲ. ಅದಕ್ಕೆ ಕಾಲವಿಲ್ಲ. ನಮ್ಮ ಕಾಲವು ಅದಕ್ಕಿಲ್ಲ. ಬಾಕಿ ವ್ಯವಹಾರಗಳಿಗೆ ಮೀಸಲು. ಆ ವ್ಯವಹಾರಗಳಿಗೆ ನಮ್ಮ ಕಾಲ ಸಾಲದು. ಮತ್ತೆಲ್ಲಿಂದ ಕಾಲವನ್ನು ಇದಕ್ಕೆ ತರಬೇಕು?

ನಮ್ಮ ತತ್ತ್ವದ ಸ್ವರೂಪವನ್ನು ತಿಳಿಸುವವರಾರು? ಲಿಂಗವನ್ನು ಕೊಟ್ಟವರಾರು? ಇದರಿಂದ ಮಾಡುವುದೇನು? ಮಾಡಿ ಪಡೆಯುವುದೇನು? ಎಂಬ ವಿವೇಚನೆ ನಮಗಿಲ್ಲ. ಇದ್ದ ಕಾಲ ಹೋಯಿತು. ಇದು ೨೦ನೇ ಶತಮಾನವಲ್ಲವೆ? ಲಿಂಗಕ್ಕೂ ಅಂಗಕ್ಕೂ ಆವ ಸಂಬಂಧ ಉಂಟೆ? ಉಂಟಾದರೆ ಅದರ ಅರಿವು ಆರಿಂದ? ಅವರ ಸ್ಥಾನಮಾನಗಳೇನು? ಅವರ ಕರ್ತವ್ಯವೇನು? ಅವರಿಗೂ ನಮಗೂ ವ್ಯತ್ಯಾಸವಿಲ್ಲವೆ? ಉಂಟೆ? ಉಂಟಾದರೆ ಆವರಿಂದ ನಾವು ಪಡೆಯಬಹುದಾದರೂ ಏನು? ಪಡೆದು ಅವರಲ್ಲಿ ನಾವು ವರ್ತಿಸುವ ವರ್ತನೆಯಾವುದು? ಯಾವ ಮಟ್ಟದ್ದು? ಇದೆಲ್ಲಕ್ಕೂ ಆತನ ಕಾರುಣ್ಯ ಮುಖ್ಯ. ಗುರು ಕಾರುಣ್ಯದಿಂದಲ್ಲವೇ ಮುಕ್ತಿ? ಇವುಗಳರಿವು ಇಂದಿನ ನಮಗಿಲ್ಲ. ಶೋಚನೀಯ.

ಗುರು ಮತ್ತು ಲಿಂಗ ಭೇದ. ಗುರುವು ಹತ್ತಿರವಿದ್ದಾಗ ಲಿಂಗದ ಆಚರಣೆ ಎಂತದು? ಗುರು ಮತ್ತು ಲಿಂಗದ ಸಂಬಂಧ. ಲಿಂಗದ ಮುಖವೇ ಜಂಗಮವೆಂಬುದು ನಮಗೆ ಮನಗಾಣಬೇಕು. ಶರಣರ ವಚನಗಳ ಕಡೆಗೆ ನಮ್ಮ ಗಮನವಿಲ್ಲ. ಅವೆಲ್ಲವು ಕನ್ನಡದಲ್ಲಿ ರಚಿತವಾಗಿವೆ. ಅದರಲ್ಲಿ ತಿಳಿಗನ್ನಡ. ಪಂಡಿತಪಾಮರರೂ ಗೋಪಾಲ ಭೂಪಾಲರೂ ಹರನರರೂ ಅರಿಯಬಹುದು. ಅರಿವುದು ಮಾತ್ರವೇ ಅಲ್ಲ, ಅರಿದಾಚರಿಸಬೇಕು. ಆಚರಿಸಿ ದೇಶವನ್ನು ಸಮಾಜವನ್ನು ಆದರ್ಶಪ್ರಾಯವನ್ನಾಗಿ ಮಾಡಬೇಕು. ವಚನಗಳಲ್ಲಿ ಎಂಥ ಅಪಾರವಾದ ಸಾರವಿದೆ! ಅತ್ತ ಗಮನ ಹೋಗಬೇಕು. ಅಂದೇ ಆತನ ಮುಕ್ತಿ.

ಮಹನೀಯರಂತೆಯೇ ಮಹಿಳೆಯರಿಗೂ ಹಿಂದೆ ಹಕ್ಕುಭಾದ್ಯತೆಗಳಿದ್ದುವು. ಸಾಮಾಜಿಕ, ನೈತಿಕ, ಧಾರ್ಮಿಕ ಮುಂತಾದವುಗಳಲ್ಲಿ ಅವರು ಪಾತ್ರವನ್ನು ವಹಿಸುತ್ತಿದ್ದರು. ಸ್ತ್ರೀಪುರುಷರು ಸಂಸಾರ ರಥದ ಎರಡು ಚಕ್ರಗಳು. ಇವುಗಳಲ್ಲಿ ಒಂದು ಹೆಚ್ಚುಕಡಿಮೆಯಾದರೂ ರಥ ಮುಂದೆ ಸಾಗಲಾರದು. ಅಂತೆಯೇ ಸಾಮಾಜಿಕ ಧಾರ್ಮಿಕ ಕ್ಷೇತ್ರಗಳಲ್ಲು ಅಷ್ಟೆ. ಅವರಿಬ್ಬರು ಸಮಾಜದಲ್ಲಿ ಸಮಾನರು. ಇಬ್ಬರ ಶರೀರಗಳು ಪಾಂಚಭೌತಾತ್ಮಕ. ಅದರಲ್ಲಿ ಕುಲಶೀಲವಯ ಲಿಂಗಗಳ ವಿಮರ್ಶೆಯಿರಲಿಲ್ಲ. "ಗುಣಾಃ ಪೂಜಾಸ್ಥಾನಂ ಗುಣಿಷು ನ ಚ ಲಿಂಗಂ ನ ಚ ವಯಃ ಭವಭೂತಿ ಮಾತು ಹೀಗಿದೆ. ಇದಕ್ಕಾಗಿಯೇ ಶರಣರು ಶ್ರಮಿಸಿದರು ಸಮಾಜದಲ್ಲಿ. ಉಚ್ಚನೀಚ ಭಾವನೆಯನ್ನು ತೊಡೆದುಹಾಕಿದರು.

ಮಹಿಳೆಯರೂ ಸಹ ಆಧ್ಯಾತ್ಮಿಕ ಜೀವನದಲ್ಲಿ ಅಡಿಯಿಟ್ಟರು. ಇದಕ್ಕೆ ಧಾರ್ಮಿಕರ ಪ್ರೋತ್ಸಾಹವೂ ದೊರೆಯಿತು. ಇವರ ಪ್ರೋತ್ಸಾಹಕ್ಕೆ ಮಹಿಳೆಯರಲ್ಲಿ ಉತ್ಸಾಹವೂ ಇತ್ತು. ಅವರಲ್ಲಿ ಪ್ರಧಾನ ಪಾತ್ರಗಳು ಅಕ್ಕಮಹಾದೇವಿ, ರೆಮ್ಮವ್ವೆ, ಮೋಳಿಗೆಮಾರಯ್ಯನ ಹೆಂಡತಿ ಮಹಾದೇವಿ ಮುಂತಾದವರು.

ಸ್ತ್ರಿಯೊ ವೈಶ್ಯಾಸ್ತಥಾ ಶೂದ್ರಾಸ್ತೇ ಪಿಯಾಂತಿಪರಮಾಂ ಗತಿಂ ಎಂಬ ಗೀತೋಕ್ತಿಯನ್ನು ಕಾರ್ಯರಂಗಕ್ಕೆ ತಂದವರು ಮಹಿಳೆಯರು. ಮಹಿಳೆಯರು ಪುರುಷರ ಸೇವೆಯಲ್ಲೇ ನಿರತರಾಗದೆ ಅಥವಾ ವಿವಾಹವಾಗಬೇಕೆಂಬ ನಿಯಮವನ್ನು ನೀಗಿ ಆಧ್ಯಾತ್ಮಿಕ ಮಟ್ಟಕ್ಕೇರಿದರು. ಅಕ್ಕಮಹಾದೇವಿ ಇದಕ್ಕೆ ದೊಡ್ಡ ಉದಾಹರಣೆ. "ಅಕ್ಕನ ನಿಲವು ಕೊಂಡಾಡಲು ತೆರಹಿಲ್ಲ ಕಾಣಾ ಗುಹೇಶ್ವರ" ಪ್ರಭುದೇವರ ನುಡಿಯೇ ಆಕೆಯ ಜ್ಞಾನಮಟ್ಟಕ್ಕೆ ಸಾಕ್ಷಿ. ಇದರಿಂದ ಆಕೆಯ ಮಟ್ಟ. ಆಕೆಯ ದೃಢವಾದ ವೈರಾಗ್ಯ. ಆಕೆಯ ಆಧ್ಯಾತ್ಮಿಕ ಜೀವನ. ಸಂಸಾರದ ಹೇಯ ಭಾವನೆ. ಸಂಸಾರದ ಅನಿತ್ಯತೆ ಹಾಗೂ ಐಹಿಕ ಲೋಕದ ಭೋಗೋಪಭೋಗದ ಅನಿತ್ಯತ್ವ ಮತ್ತು ವಿಶಾಲವಾದ ಜ್ಞಾನನಿಧಿಯೂ ಕಂಡುಬರುತ್ತವೆ.

ಸಮಾಜದಲ್ಲೂ ಸಂಘಗಳಲ್ಲೂ ಮಹಿಳೆಯರು ಭಾಗವಹಿಸುತ್ತಿದ್ದರು. ಅವರು ಆಧ್ಯಾತ್ಮಿಕ ಜೀವನದ ಬಗ್ಗೆ ಚರ್ಚಿಸುತ್ತಿದ್ದರು. ಇದಕ್ಕೆ

ಕಲ್ಯಾಣದ ಅನುಭವಮಂಟಪವೇ ನಿದರ್ಶನ. ಅದರಲ್ಲೂ ಅವರ ಅನುಭವಕ್ಕೆ ಪ್ರಭುದೇವ ಅಕ್ಕಮಹಾದೇವಿಯರ ವಾದಸರಣಿ ದೊಡ್ಡ ನಿದರ್ಶನ. ಆಧ್ಯಾತ್ಮಿಕ ಜೀವನದಲ್ಲಿ ಆಕೆಯ ಜೀವನ ಬಲು ಹಸನ. ಪ್ರಭುದೇವರು ಅದರಲ್ಲಿ ಪರೀಕ್ಷಕರು. ಸಾಮಾನ್ಯರೆ! ಆಕೆಗೆ ಅವರ ಪರೀಕ್ಷೆಯಲ್ಲಿ ಉತ್ತೀರ್ಣವಾಗುವುದು ದುಸ್ಸಾಧ್ಯ. ಅವರ ಪ್ರಶ್ನೆ ಸಾಮಾನ್ಯವಾದುದಲ್ಲ. ಎಲ್ಲರಂತದೂ ಅಲ್ಲ. ಅದು ಅದರಂತೆಯದು. ಅವಳ ಅಭ್ಯಾಸ ಗಾಢವಾದುದಲ್ಲವೆ! ಇದರಿಂದ ಮಹಿಳೆಯರ ಮಟ್ಟ ಪುರುಷರಿಗೆ ಮನಗಾಣಿತು.

ಅಂತು ಉಚ್ಚನೀಚ ಭಾವನೆ ಅಂದು ನಾಮಾವಶೇಷವಾಯಿತು. ಅಲ್ಲಿಂದ ಸಮಾಜದಲ್ಲಿ ಸ್ತ್ರೀಪುರುಷರೆಂಬ ಭೇದಭಾವನೆ ಮೃಗತೃಷ್ಣಿಕಾ ಪ್ರಾಯವಾಯಿತು.

ಇಂದು ನಮ್ಮಲ್ಲಿ ಮಹಿಳೆಯರೆಂದರೆ ಸಂಸಾರ ಸುಖಕ್ಕೆ ಮಾತ್ರ. ಭೋಗೋಪಭೋಗಗಳಿಗೆ ಮಾತ್ರ. ಅಡಿಗೆ ಮಾಡುವುದು. ಮಕ್ಕಳನ್ನು ಪಡೆಯುವುದು. ಅವುಗಳನ್ನು ಸಲಹುವುದು. ಅಂತು ಗೃಹಕೃತ್ಯಗಳಿಗಾಗಿ ಎಂಬುದು ಇಂದಿನವರ ನಂಬಿಕೆ. ಸಮಾಜದಲ್ಲಿ ಅವರಿಗೆ ಸ್ಥಾನವಿಲ್ಲ. ವಿದ್ಯಾಭ್ಯಾಸದಲ್ಲಿ ಅವರು ಹಿಂದೆ. ಅದಕ್ಕೆ ನಮ್ಮ ಪ್ರೋತ್ಸಾಹ ಕಡಿಮೆ. ಕೇವಲ ಪಾಕಶಾಸ್ತ್ರಪ್ರವೀಣೆಯೆಂದರೆ ಸಾಕು. ಅದೇ ಅವರ ವಿದ್ಯಾಭ್ಯಾಸದ ಪರಮಾವಧಿ. ಸಂಸಾರದಲ್ಲಿ ಮಹಿಳೆಯರ ಅಂತಸ್ತು ಅಷ್ಟೆ. ಸತಿಪತಿಗಳಿಬ್ಬರೂ ಸರಿಯಾಗಿ ಭಕ್ತಿಮಾಡಿದರೇನೆ ಅದು ದೇವರಿಗೆ ಹಿತ. ಅಂತಲ್ಲದೆ ಅಮೃತದೊಳಗೆ ವಿಷ ಬೆರೆದಂತೆ. ಪರಸ್ಪರ ಸಾಮ್ಯ ಸಾಮರಸ್ಯ ಹಿತವಾದರೆ ಅಂದೇ ಹಿತ ಶಿವಂಗೆ. ಒಂದಾಗದ ಭಕ್ತಿ ಅಮೃತದಲ್ಲಿ ವಿಷ ಬೆರೆದಂತೆ. ದೇವರದಾಸೀಮಯ್ಯನ ಈ ಮಾತು ಅಮೂಲ್ಯವಾದುದು. ಸಮುಸ್ಯೆಯಂತಿದೆ.

ಈ ಮಾತು ನಮ್ಮ ದೃಷ್ಟಿಯಲ್ಲಿಲ್ಲ. ಇದಿಷ್ಟಕ್ಕು ಕಾಲಗುಣ. ಕಾಲಾಯ ತಸ್ಮೈನಮಃ ಅಥವಾ ಸಮಾಜದವರ ಹೇಯವರ್ತನೆಯೋ ಅರಿಯದು. ಯಾವ ಸಾಮಾಜಿಕ ಸಂಘಗಳಲ್ಲೂ ಅವರು ಪ್ರವೇಶಿಸುವಂತಿಲ್ಲ.

ಅವರ ಜವಾಬ್ದಾರಿ ಪ್ರಪಂಚದಲ್ಲಿ ಹಾಗೂ ಸಮಾಜದಲ್ಲಿ ತುಂಬಾ. ಸಂಸಾರದಲ್ಲಿ ಗಂಡ ಐಶ್ವರ್ಯವಂತನಾದರೂ ಆತನ ವರ್ತನೆ ಸರಿ

ಯಾಗಿದ್ದರೆ ಸರಿ. ಬಡವನಾದರೆ ಪ್ರಸಾದಕ್ಕೆ ತೊಂದರೆ. ಐಶ್ವರ್ಯವಂತ ನಾದರೂ ಸಂತಾನವಾಗದಿದ್ದರೆ ತೊಂದರೆ. ಅತ್ತೆ ಮಾವಂದಿರಲ್ಲಿ ಒಡ ನಾಟ. ಮಕ್ಕಳು ಮೊಮ್ಮಕ್ಕಳಲ್ಲಿ ಸಹಕಾರ. ಇದಿಷ್ಟರ ಸಹನೆ ಅವ ರಲ್ಲಿರಬೇಕು. ಆಗ ಆಕೆ ಗೃಹಿಣೀ. ಈ ಪ್ರಶಸ್ತಿಗೆ ಯೋಗ್ಯತೆ ಎಲ್ಲರಲ್ಲೂ ಇರಲಾರದು. ಎಲ್ಲರಲ್ಲೂ ಔದಾರ್ಯ ಸಹನೆ ತಾಳ್ಮೆ ಶಾಂತಿ ಸಚ್ಛೀ ಲತೆ. ಸದ್ವರ್ತನೆ ಎಲ್ಲಿ ಬರಬೇಕು. ಆದರೂ ಅವರ ಸ್ಥಾನಮಾನ ಗಳನ್ನು ಉಳಿಸಿಕೊಳ್ಳಲು ಪ್ರಯತ್ನಪಡುತ್ತಾರೆ. ಪ್ರಯತ್ನಪಡುತ್ತಲೇ ಜೀವನ ರಥವನ್ನು ಮುಂದುಮುಂದಕ್ಕೆ ದೂಡುತ್ತಾರೆ. ಇದಿಷ್ಟು ಅವರ ಅಲ್ಪಸ್ವಲ್ಪ ವಿದ್ಯಾಭ್ಯಾಸದ ಫಲ.

ಮಹಿಳೆಯರು ವಿದ್ಯಾವಂತರಾದರೆ ಅಂದೇ ದೇಶ ಮುಂದುವರೆ ಯುತ್ತದೆ. ಅದಕ್ಕೆ ಬುನಾದಿ ಮಕ್ಕಳು ವಿದ್ಯಾವಂತರಾಗುವುದು. ಈ ಹೊರೆ ತಾಯಿಯಂದಿರ ಮೇಲೆ ಬಿದ್ದಿರುತ್ತದೆ. ಮಕ್ಕಳಿಗೆ ತಾಯಿ ಯಾದವರು ಮನೆಯಲ್ಲಿ ಶಿಕ್ಷಣಕೊಡಬೇಕು. ವೀರಾದಿವೀರರ ರಾಮಾ ಯಣ ಮಹಾಭಾರತಾದಿ ವೀರರ ಚರಿತ್ರೆಯನ್ನು ಸಾವಿತ್ರಿ, ದಮಯಂತಿ ಮತ್ತು ಅರುಂಧತಿ ಮತ್ತು ಚಂದ್ರಮತಿ ಮುಂತಾದ ಸಾಧ್ವೀಮಣಿ ಯರ ಜೀವನ ಚರಿತ್ರೆಗಳನ್ನು ಬೋಧಿಸುತ್ತಿರಬೇಕು. ಮಹಾದೇವಿ, ನೀಲಲೋಚನೆ ಮುಂತಾದ ಶಿವಶರಣೆಯರ ಆಧ್ಯಾತ್ಮಿಕ ಜೀವನವನ್ನು ಅವರಿಗೆ ತಕ್ಕಮಟ್ಟಿಗೆ ಪರಿಚಯ ಮಾಡಿಕೊಡಬೇಕು. ಅಂದು ಇಂದಿನ ಪೀಳಿಗೆ ಮುಂದಿನ ಸತ್ಪ್ರಜೆಯಾಗುವುದು. ಇಡೀ ಪ್ರಪಂಚಕ್ಕೆ ನಮ್ಮ ಭರತಖಂಡವು ಆಗ ಆದರ್ಶಪ್ರಾಯವಾಗುವುದು. ಇಷ್ಟು ಜವಾಬ್ದಾರಿ ಮಹಿಳೆಯರದು.

ಸಾಮಾಜಿಕ ವ್ಯವಹಾರಗಳಲ್ಲಿ ಅವರು ಮುಂದುವರೆಯಬೇಕು. ಮಹಿಳೆಯರು ತಮಗೆ ಆದರ್ಶ ಮಹಿಳೆಯೂ ಮಹಿಳಾ ಸಮಾಜದ ಸ್ಥಾನಮಾನಗಳನ್ನು ರಕ್ಷಿಸಿಕೊಟ್ಟ ಅಕ್ಕಮಹಾದೇವಿಯ ಜಯಂತಿಯನ್ನು ಪ್ರತಿಯೊಂದು ಕಡೆಯೂ ಪ್ರತಿವರ್ಷವೂ ನಡೆಯುತ್ತಿರಬೇಕು. ಈಗ ಅಲ್ಲಲ್ಲಿ ನಡೆಯುತ್ತಿರುವುದು ಕಂಡುಬಂದರೂ ಅದು ಸಾಲದು. ಬಹು ವಿರಳ. ಪ್ರತಿಗ್ರಾಮದಲ್ಲೂ ಪ್ರತಿ ಊರಗಳಲ್ಲೂ ಪ್ರತಿ ಪಟ್ಟಣದಲ್ಲೂ ಉದ್ದೇಶ ಪೂರ್ವಕವಾಗಿ ಆಕೆಯ ಜಯಂತಿಯ ಮಹೋತ್ಸವವನ್ನು ಬಹಳ ವೈಭವದಿಂದ ಆಚರಿಸಬೇಕು.

ಅಂತು ಮಹಿಳೆಯರ ರೀತಿ ತುಂಬಾ ಜವಾಬ್ದಾರಿಯಿದೆಯೆಂಬುದು ಮನವರಿಕೆಯಾದಂತಾಯಿತು. ಇದೆಲ್ಲವೂ ಮಹಿಳೆಯರ ಉತ್ಸಾಹವನ್ನವಲಂಬಿಸಿದೆಯೆಂಬುದನ್ನು ಮರೆಯಲಾಗದು. ಮಹಿಳೆಯರ ಉತ್ಸಾಹಕ್ಕೆ ತಕ್ಕ ಮಹನೀಯರ ಪ್ರೋತ್ಸಾಹ ದೊರೆಯುವುದರಲ್ಲಿ ಸಂದೇಹವಿಲ್ಲ.

ಇನ್ನು ಮುಂದಾದರೂ ಇಂದಿನವರು ಹಿಂದಿನವರ ಸನ್ಮಾರ್ಗಾವಲಂಬಿಗಳಾಗಿ ದೇಶದ ರೀತಿ, ಸಮಾಜದ ಕೀರ್ತಿ, ಪ್ರಮಥವರ್ಯರ ಕೀರ್ತಿಯನ್ನು ಆಚಂದ್ರಾರ್ಕವಾಗಿ ದೇದೀಪ್ಯಮಾನವಾಗುವಂತೆಸಗಲೆಂದು ಹಾರೈಸುತ್ತೇನೆ.

---

## ಸ್ವಾನುಭವದಲೆ.

(ಶ್ರೀಸದಾಶಿವ ಶಿವಾಚಾರ್ಯಸ್ವಾಮಿಗಳು–ಸಖರಾಯಪಟ್ಟಣ.)

ಉಪಾಧಿಯಿಲ್ಲದ ನಿರುಪಾಧಿ ಗಂಟೆ ಜಾಗಟೆ ಬಡಿಯುತಿದೆ। ಉಪಮೆಯಿಲ್ಲದ ಲಿಂಗಪೂಜೆಯೊಳನುದಿನ ಘನವಾಗಿ ॥ಪ॥

ಆಹತವಿಲ್ಲದನಾಹತ ನಾದವ ಕೇಳಿ ಕೇಳಿ ಕಿವಿಯು। ಆಹವುನ ವ್ಯೆಮರೆದು ನಿಂದಿಹ ಸೋಜಿಗವೇನಿಂದು ॥೧॥

ಲಿಂಗದೊಳಿಟ್ಟು ನಟ್ಟು ಚಲಿಸದಿಹ ಕಣ್ಣುಗಳೆವೆಯಾಟ। ಕಂಗೊಳಿಸುವ ಪರಿಪರಿಯ ಬಿಂದುವ ನೋಡಿ ರಮಿಸುವಾಟ ॥೨॥

ರವಿಕೋಟಿಗಳ ಬೆಳಗ ಮೀರಿಹ ಸ್ವಯಮಾತ್ಮನ ಬೆಳಗು। ತಪೆಕವಿದಿಹ ಚೋದ್ಯವ ನಾನೆಂತು ಬಣ್ಣಿಪೆನಿಳೆಯೊಳಗೆ ॥೩॥

ಲೀಲಾಜಾಲದಿ ಮನಮೊಳಗುದಿಸಿದ ವಿಷಯವನೀ ರೀತಿ। ಪೇಳಿದವನು ಸಖರಾಯಪಟ್ಟಣದ ಶ್ರೀಗುರು ಸದಾಶಿವನು ॥೪॥

## ವಚನ.

೧. ಮಾಡುವ ಭಕ್ತನ ಮಾಟ ನೀಟಾಗಿದ್ದರಾತ ಲಿಂಗದೊಲಿಮೆ ಗೊಳಗಹನು ಕಾಣಾ ಎನ್ನಾರಾಧ್ಯಚಿಲ್ಲಿಂಗ ಮೂರ್ತಿಯೆ.

ತಾತ್ಪರ್ಯ— ಭಕ್ತನು ಮಾಡುವ ವ್ಯವಹಾರೋದ್ಯಮಾದಿ ಕೆಲಸ ಬಗಸೆಗಳು ಕರ್ಮವನ್ನನುಸರಿಸದೆ ಧರ್ಮ ರೀತಿಯಲ್ಲಿ ನಡೆದರೆ ಮತ್ತು "ಕರ್ಮಣ್ಯೇವಾಧಿಕಾರಸ್ತೇ ಮಾ ಫಲೇಷು ಕದಾಚನ" ಎಂಬ ಗೀತೋಕ್ತಿಯಂತೆ ತಾನು ಮಾಡುವ ದಾನಧರ್ಮ ಪರೋಪಕಾರ ಹರ ಗುರು ಚರಪೂಜೆ ದಾಸೋಹಾದಿಗಳನ್ನಾಚರಿಸಲು ನನಗಧಿಕಾರವೇ ಹೊರ್ತು ಅದರ ಫಲ ಪದದಾಶೆಯಲ್ಲಿ ಅಧಿಕಾರವಿಲ್ಲೆಂಬಂಶವನ್ನು ಅರಿತು ಸಕಲ ಸತ್ಕರ್ಮಗಳನ್ನು ಫಲಾಭಿಸಂಧಿರಹಿತನಾಗಿ (ಫಲಾಪೇಕ್ಷೆ ಬಿಟ್ಟು) ಮಾಡುವವನಾದರೆ ಆತನಿಗೆ ಲಿಂಗಮೂರ್ತಿಯು ಕರುಣೆಯುಂಟಾಗುವುದೆಂದಭಿಪ್ರಾಯ.

೨. ತನ್ನ ತಾನರಿದಡೆ ಶಿವನಾಗಿರ್ಪ, ಮರೆದಡೆ ಭವಿಯಾಗಿರ್ಪ, ಈ ನುಡಿ ದಿಟಸಟಿಯಲ್ಲ ಕೇಳಿರಣ್ಣಾ. ಎನ್ನಾರಾಧ್ಯ ಚಿಲ್ಲಿಂಗ ಮೂರ್ತಿ ಸಾಕ್ಷಿ ನೋಡಿರಣ್ಣಾ.

೩. ತನ್ನ ತಾ ಪೂಜಿಸುವ ಪರಿ ಲೋಕಕ್ಕೆ ಪೊಸತು ಕಾಣಾ, ವೃಡಶರಣರಿಗಲ್ಲದುಳಿದ ಭವಭಾರಿಗಳಿಗೆ ಸಾಧ್ಯವೆ ಹೇಳಾ ಈ ಪರಿಯೆನ್ನಾರಾಧ್ಯ ಚಿಲ್ಲಿಂಗಮೂರ್ತಿಯೆ.

---

# ಲಿಂಗವಂತ ಸಮಾಜದ ಪುನರ್ಘಟನೆ.

(ಲೇಖಕಃ— ಶ್ರೀ ಅನ್ನದಾನೀಶ್ವರ ವಿರಕ್ತಮಠ, ಟೀಚರ-ಹೈಸ್ಕೂಲು
ರಾಣೀಬಿನ್ನೂರ.)

ಕರ್ನಾಟಕದಲ್ಲಿ ಲಿಂಗವಂತ ಸಮಾಜವು ಒಂದು ದೊಡ್ಡ ಸಮಾಜವಾಗಿದೆ. ಅದರ ಉನ್ನತಾವನತಿಗಳು ಕರ್ನಾಟಕದ ಉನ್ನತಾವನತಿಗಳಿಗೆ ಪೋಷಕವಾಗಿದೆ. ಕರ್ನಾಟಕದ ಉನ್ನತಿಯು ಪ್ರಾಮುಖ್ಯವಾಗಿ ಆ ಸಮಾಜವನ್ನೇ ಅವಲಂಬಿಸಿದೆಯೆಂದರೂ ತಪ್ಪಾಗಲಿಕ್ಕಿಲ್ಲ. ಎಂದಮೇಲೆ ಲಿಂಗವಂತ ಸಮಾಜವು ಪುನಃ ಬಸವಂಣನ ಕಾಲದಲ್ಲಿಯಂತೆ ಆದರ್ಶ ಸಮಾಜವಾಗುವದು ಕರ್ನಾಟಕದ ದೃಷ್ಟಿಯಿಂದ—ಕನ್ನಡತನದ ದೃಷ್ಟಿಯಿಂದ ಕನ್ನಡ ಸಂಸ್ಕೃತಿಯ ದೃಷ್ಟಿಯಿಂದ—ಅತ್ಯವಶ್ಯವಾದುದೂ ಮಹತ್ವವಾದುದೂ ಆಗಿಲ್ಲವೇ ?

೧೨ನೇ ಶತಮಾನದಲ್ಲಿ ಜಗದಂಣ ಬಸವಂಣನು ರಚಿಸಿದ್ದ ಆದರ್ಶ ಲಿಂಗವಂತ ಸಮಾಜದಲ್ಲಿ ಈಗ ಅನೇಕ ನಿರುಪಯೋಗಿಯಾದ ಹಳೇಗೊಡ್ಡು ಕಲ್ಪನೆ, ಭಾವಿಕತನ, ವೈಧೃತೆ, ಅಂಧಶ್ರದ್ಧೆ, ಪೊಳ್ಳು ಜಾತಿಯ ಹೀನ ಭಾವನೆಗಳು, ಅರ್ಥವಿಲ್ಲದ ವಿಧಿವಿಧಾನಗಳು, ಘಾತುಕ ವರ್ಣ ವ್ಯವಸ್ಥೆಯ ಕೀಳು ಮೇಲು ಕಲ್ಪನೆ ಇತ್ಯಾದಿಗಳು ಸೇರಿಕೊಂಡು ಒಳಗಿಂದೊಳಗೇ ಆ ಸಮಾಜ ಪುರುಷನ ಹೃದಯವನ್ನೇ ದೂಷಿತಗೊಳಿಸಿ ಬುದ್ಧಿಯನ್ನು ಮಲಿನಗೊಳಿಸಿ ಸಮಾಜ ಪುರುಷನು ಕರ್ತವ್ಯಶೂನ್ಯನಾಗುವಂತೆ ಮಾಡಿಬಿಟ್ಟಿವೆ ಈ ವಿದೇಶೀಯ ದ್ರವ್ಯಗಳನ್ನು ಹೇಗೆ ದೂರೀಕರಿಸಬೇಕೆನ್ನುವದನ್ನು ಪ್ರಕೃತದಲ್ಲಿ ವಿಚಾರಿಸುವಾ.

ಜಗದಂಣ ಬಸವಂಣನ ಜಗದೋದ್ಧಾರಕ ದಿವ್ಯ ತತ್ವಗಳ ರಹಸ್ಯಕ್ಕನುಸಾರವಾಗಿ ಲಿಂಗವಂತ ಸಮಾಜವನ್ನು ಪುನರ್ಘಟಿಸುವದೇ ಮೇಲಾದ ಉಪಾಯವೆಂಬುದರಲ್ಲಿ ಸಂದೇಹವೇ ಇಲ್ಲ. ಈ ಪುನರ್ಘಟನೆಯ ಕಾರ್ಯವು ಸುಲಭ ಸಾಧ್ಯವಾದುದೇನೂ ಅಲ್ಲ. ಆದರೂ ಆಧುನಿಕ ವಿದ್ಯಾವಿಭೂಷಿತರಾದ, ಜಾಗ್ರತರಾದ, ಸಮಾಜ ದೃಷ್ಟಿಯುಳ್ಳ, ಪ್ರಗತಿಯ ವಿಚಾರಗಳುಳ್ಳ, ತರುಣ ಬಂಧುಗಳು ಇತ್ತ ಲಕ್ಷ ಪೂರೈಸಿ ಕ್ರಾಂತಿಯ ಕಹಳೆಯನ್ನೂದಿ ಮುನ್ನುಗ್ಗಿ ಕಾರ್ಯ ಪ್ರವೃತ್ತರಾದರೆ ಈ

ಮಹಾಕಾರ್ಯವು ಬೇಗ ಸಾಧ್ಯವಾಗಬಹುದು. ಇಂದಿನ ಕಾಲದ ಪರಿಸ್ಥಿತಿಯು ಬೆಂಬಲ, ಇಂದಿನ ಮಹಾಪುರುಷರ ಹೊಸ ವಿಚಾರಗಳ ಬೆಂಬಲ, ಕನ್ನಡದಲ್ಲಿ ಶ್ರೇಷ್ಠ ಸಾಹಿತ್ಯವಾಗಿರುವ ವಚನ ಶಾಸ್ತ್ರದ ಬೆಂಬಲ, ನಮ್ಮ ಹಿಂದಿನ ಮಹಾಪುರುಷರ ಬೆಂಬಲ, ಇಂದಿನ ವಿಜ್ಞಾನದ ಬೆಂಬಲ, ಈ ಎಲ್ಲವುಗಳ ಬೆಂಬಲಗಳಿಂದ ತರುಣರು ಬೇಗ ಯಶಸ್ವಿಗಳಾಗಬಹುದು. ಆದರೆ ವಿಚಾರಬೇಕು. ಇಚ್ಛೆ ಬೇಕು. ದೃಷ್ಟಿ ಬೇಕು. ಕಾರ್ಯಕ್ರಮ ಬೇಕು. ಸಹಕಾರ ಸಂಘಟನೆಗಳು ಬೇಕು. ಇಷ್ಟೆಲ್ಲ " ಬೇಕು "ಗಳುಂಟಾಗಬೇಕಾದರೂ ಕ್ರಾಂತಿಯ ಕಾರ್ಯಕ್ರಮದ ಮೇಲೆ ಪ್ರೀತಿಯುಳ್ಳ ಮನೋವೃತ್ತಿ ಅರ್ಥಾತ್ ಇಚ್ಛೆಯೇ ಎಲ್ಲಕ್ಕೂ ಮೊದಲು ಬೇಕು.

## ಸಮಾಜ ಪುನರ್ಘಟನೆ.

(೧) ಲಿಂಗವಂತ ಸಮಾಜವು ವರ್ಣಾತೀತವಾಗಿಯೂ ಜಾತಿಭೇದಗಳಿಲ್ಲದ್ದೂ ಸಮತಾವಾದದಿಂದ ನಿರ್ಮಿತವಾದದ್ದೂ ಆಗಿದ್ದಿತು. ಆದರೆ ಈಗ ಕೆಲವು ಜನರು ಇಲ್ಲದ ವರ್ಣಗಳನ್ನು ಜಾತಿಗಳನ್ನು ಹೊಸದಾಗಿ ಸೇರಿಸಲುದ್ಯುಕ್ತರಾಗಿರುವರು. ವರ್ಣ ವ್ಯವಸ್ಥೆಯೇ ಜಾತಿಭೇದದ ಉಗಮಸ್ಥಾನವು. ಜಾತಿಭೇದ ಹೋಗದವಿನಹ ಸಮತಾವಾದದ ಹೊಸ ಸಮಾಜ ನಿರ್ಮಾಣವಾಗುವದಿಲ್ಲ. ಆದುದರಿಂದ ಮೊದಲು ತರುಣ ಬಂಧುಗಳು ಲಿಂಗವಂತ ಸಮಾಜದಲಿ ವರ್ಣಗಳಿಲ್ಲವೆಂದು ಪ್ರಕಟಪಡಿಸಬೇಕು.

(೨) ಶರಣ-ಶರಣೆಯರ ವಚನ ಶಾಸ್ತ್ರವನ್ನೇ ಆಧಾರವಾಗಿಟ್ಟುಕೊಂಡು ಕನ್ನಡದಲ್ಲಿ ಒಂದು ಧರ್ಮ ಗ್ರಂಥವನ್ನು ರಚಿಸಬೇಕು. ಸಂಸ್ಕೃತವು ಆರ್ಯ ಸಂಸ್ಕೃತಿಯ ಭಾಷೆಯಾಗಿರುವದರಿಂದ ಅದರ ಮೇಲಿನ ಮೋಹವನ್ನು ಬಿಟ್ಟುಬಿಡಬೇಕು.

(೩) ತಾಯ್ನುಡಿಯಾದ ಕನ್ನಡ ಭಾಷೆಯ ಮೇಲೆಯೇ ನಮ್ಮ ಪ್ರೇಮವಿರಬೇಕು. ಅಂದರೇನೇ ಕನ್ನಡ ಭಾಷೆಯ ಬೆಳವಣಿಗೆಯಾಗಬಲ್ಲದು.

(೪) ಕನ್ನಡ ಸಂಸ್ಕೃತಿಯು-ಕನ್ನಡತನವು-ಕನ್ನಡದ ಕನ್ನಡಿಯು ಕನ್ನಡದ ಸಾಹಿತ್ಯದಲ್ಲಿ—ವಿಶೇಷವಾಗಿ ವಚನಗಳಲ್ಲಿ---ಕಂಡುಬರುವಷ್ಟು

ಬೇರೆ ಭಾಷೆಗಳಲ್ಲಿ ಕಾಣುವದಿಲ್ಲ. ಕಾರಣ ಬೇರೆ ಭಾಷೆಗಳನ್ನು ಕನ್ನಡ
ಭಾಷೆಗೆ—ಕನ್ನಡ ಸಂಸ್ಕೃತಿಗೆ—ಪೋಷಕವಾಗುವಂತೆ ಉಪಯೋಗಿಸಿ
ಕೊಳ್ಳಬೇಕು.

(೫) ವೇದೋಪನಿಷತ್ತುಗಳನ್ನೂ ಆಗಮಗಳನ್ನೂ ನಮ್ಮ ಧರ್ಮ
ಗ್ರಂಥವಾಗಿರುವ ಶರಣರ ವಚನ ಶಾಸ್ತ್ರಕ್ಕೆ ಪೋಷಕವಾಗುವಂತೆ ಉಪ
ಯೋಗಿಸಿಕೊಳ್ಳಬಹುದೇ ವಿನಃ ಆ ವೇದಾದಿಗಳೇ ನಮ್ಮ ಧರ್ಮಗ್ರಂ
ಥಗಳೆಂದು ತಿಳಿಯಬಾರದು.

(೬) ನಮ್ಮ ಸಂಸ್ಕೃತಿಯು ದ್ರಾವಿಡ ಅಥವಾ ಕನ್ನಡ ಸಂಸ್ಕೃತಿಯೇ
ವಿನಃ ಆರ್ಯ ಸಂಸ್ಕೃತಿಯಲ್ಲ. ಆದಾಗ್ಯೂ ಆರ್ಯಸಂಸ್ಕೃತಿಯಲ್ಲಿ ಏನಾ
ದರೂ ಉತ್ತಮ ವಿಚಾರಗಳಿದ್ದರೆ ತಕ್ಕೊಳ್ಳಬಹುದು. ಆದರೆ ಆರ್ಯರ
ಸ್ವರ್ಗದ ಕಲ್ಪನೆ, ಇಂದ್ರಾದಿ ದೇವತೆಗಳ ಕಲ್ಪನೆ, ಯಜ್ಞ, ವರ್ಣಾ
ಶ್ರಮ ವ್ಯವಸ್ಥೆ, ಶ್ರಾದ್ಧ ಮೊದಲಾದ ಕರ್ಮಕಾಂಡದ ಪದ್ಧತಿ, ವಿಧವೆ
ಯರ ಗೋಳು, ಸ್ಪೃಶ್ಯಾಸ್ಪೃಶ್ಯ ಕಲ್ಪನೆ, ಇತ್ಯಾದಿ ನಿರುಪಯೋಗಿ
ಯಾದ ಹಳೇ ವಿಚಾರಗಳು ನಮಗೆ ಮಾನ್ಯವಿಲ್ಲವೆಂದೇ ಪ್ರಕಟಿಸ ಬೇಕು.

(೭) ಲಿಂಗವಂತ ಸಮಾಜದಲ್ಲಿಯ ಒಳಪಂಗಡಗಳು ಜಾತಿಗ
ಳಲ್ಲ. ಆ ಪಂಗಡಗಳಿಗೆ ಉದ್ಯೋಗಗಳ ಮೂಲಕ ಆ ಹೆಸರುಗಳು
ಬಂದಿವೆ. ಆದಕಾರಣ ಅವರೆಲ್ಲರೂ ಸಮಾನರು. ಅವರ ಹಿಂದಣ
ಕುಲಜಾತಿಗಳನ್ನು ಎಣಿಸದೆ ಅವರ ಸಂಗಡ ಸಹಭೋಜನ ಶರೀರ
ಸಂಬಂಧ ಮಾಡಲಿಕ್ಕೆ ಏನೂ ಅಭ್ಯಂತರವಿಲ್ಲ.

(೮) ಉದ್ಯೋಗಗಳಲ್ಲಿ ಮೇಲುಕೀಳುಗಳಿಲ್ಲ. ಲಿಂಗವಂತನು
ಭಂಗಿಯು, ಮೊಚ್ಚೆಹೊಲೆಯುವವನ ಉದ್ಯೋಗ ಮಾಡಿದರೂ ಅವನು
ಕಡಿಮೆಯಲ್ಲ.

(೯) ಲಿಂಗವಂತ ಸಮಾಜದಲ್ಲಿ ಅಸ್ಪೃಶ್ಯತೆಗೆ ಸ್ಥಾನವಿಲ್ಲ.
ಅಸ್ಪೃಶ್ಯನೆಂದು ಕರೆಯಲ್ಪಡುವ ವ್ಯಕ್ತಿಯು ನಮ್ಮ ಬಂಧುವು. ಅವನು
ನಮ್ಮ ಕನ್ನಡ ಸಂಸ್ಕೃತಿಗೆ ವಿರೋಧಿಯಲ್ಲ. ಅವನಿಗೆ ಸಾಂಸ್ಕೃತಿಗೆ ಶಿಕ್ಷ
ಣದ ಅನುಕೂಲತೆಗಳನ್ನು ಕಲ್ಪಿಸಿಕೊಟ್ಟು ಉತ್ತೇಜನಕೊಡಬೇಕು.
ಅವರು ಸುಸಂಸ್ಕೃತರಾಗುವಂತೆ ಯತ್ನಿಸಿ ಅವರ ಸುಸಂಸ್ಕೃತ ಕನ್ಯೆಗ
ಳೊಡನೆ ಲಗ್ನ ಮಾಡಿಕೊಂಡರೆ ಅಸ್ಪೃಶ್ಯತೆಯು ಪ್ರಶ್ನೆಯೇ ನಾಮ

ಶೇಷವಾಗುವದು. ಹರಳಯ್ಯ-ಮಧುವಯ್ಯಗಳ ಕ್ರಾಂತಿಕಾರಕ ಬೀಗ ತನವು ನಮಗೆ ಮಾದರಿಯಾಗಿದೆ. ಇಷ್ಟೇ ಏಕೆ? ಮಹಾತ್ಮಾ ಗಾಂಧಿ ಯವರಿಗೂ ಮಾದರಿಯಾಗಿದೆ!

(೧೦) ಈಗ ಬಹಿಷ್ಕಾರ ಶಸ್ತ್ರವು ನಿರುಪಯೋಗಿಯಾಗುತ್ತಿದೆ. ಒಬ್ಬ ಲಿಂಗವಂತನು ಬೇರೆಯವರ ಕೂಡ ಉಂಡರೆ ಅಥವಾ ಬೇರೆ ಯವರ ಕೂಡ ಲಗ್ನವಾದರೆ ಅವನಿಗೆ ಬಹಿಷ್ಕಾರಹಾಕಬಾರದು. ಆ ದಂಪತಿಗಳಿಗೆ ಲಿಂಗವಂತರಾಗಿಯೇ ಉಳಿಯಲಿಕ್ಕೆ ಆಸ್ಪದವಿರಬೇಕು.

(೧೧) ಪ್ರತಿಯೊಬ್ಬ ಲಿಂಗವಂತ ವಿಧುರನು ವಿಧವೆಯರನ್ನೇ ಲಗ್ನವಾಗುತ್ತೇನೆಂದು ಪಣ ತೊಡಬೇಕು. ಉಡಿಕಿಯಾದವರು ಕಡಿಮೆ ಯೆಂದು ಯಾರೂ ತಿಳಿಯಬಾರದು.

(೧೨) ಜನನ, ದೀಕ್ಷೆ, ಲಗ್ನ, ಸಮಾಧಿ, ಪ್ರಸ್ಥ ಇತ್ಯಾದಿ ಎಲ್ಲ ಕ್ರಿಯೆಗಳಲ್ಲಿ ಕನ್ನಡ ಮಂತ್ರಗಳನ್ನೇ ಅನ್ನಬೇಕು. ವರಕವಿಗಳ ಗ್ರಂಥ ಗಳಿಂದ ಆಯ್ದು ಮಂತ್ರಗಳನ್ನು ತಯಾರಿಸಬಹುದು.

(೧೩) ಲಿಂಗವಂತ ಸಮಾಜದಲ್ಲಿಯ ಪಟ್ಟದ ದೇವರು ಮತ್ತು ವಿರಕ್ತರು ಲಗ್ನ ಮಾಡಿಕೊಂಡು ತತ್ವನಿಷ್ಠರಾಗಿ ನಡೆಯಲಿಕ್ಕೆ ಬರುತ್ತದೆ. ಲಗ್ನವಾದರೆ ಅವರ ಸ್ವಾಮಿತ್ವವನ್ನು ಕಸಿದುಕೊಳ್ಳಬಾರದು. ಆದರೆ ಇನ್ನುಮುಂದೆ ಮಠಗಳಿಗೆ ಸ್ವಾಮಿಗಳಾಗತಕ್ಕವರು ಗೊತ್ತುಪಡಿಸಿದ ಪರೀಕ್ಷೆಗಳನ್ನು ಪಾಸಾಗಲಿಕ್ಕೇಬೇಕು. ಆ ಪರೀಕ್ಷೆಗಳನ್ನು ಸಮಾಜದ ಮುಂದಾಳುಗಳು ನಿಶ್ಚಿತಗೊಳಿಸಬೇಕು.

(೧೪) ವೀರಶೈವ ಮಹಾಸಭೆಯೇ ಲಿಂಗವಂತ ಸಮಾಜದ ಮುಖವು. ಮಹೇಶ್ವರರ ಸಂಘ, ಭಕ್ತರ ಸಂಘ, ಇತ್ಯಾದಿ ಪ್ರತ್ಯೇಕ ಸಂಘಗಳನ್ನು ಇನ್ನುಮೇಲೆ ಮಾಡುವದಕ್ಕಿಂತ ವೀರಶೈವ ಮಹಾಸಭೆಯ ಮೂಲಕವೇ ಕಾರ್ಯ ಸಾಗಿಸಬೇಕು. ಭಕ್ತ-ಮಹೇಶ ಎಂಬ ಜಾತಿಗಳು ಇಲ್ಲ. ಅವು ಸ್ಥಲಗಳು. ಎಲ್ಲ ಲಿಂಗವಂತರೂ ಸರಿಸಮಾನರು.

(೧೫) ಮೇಲೆ ಹೇಳಿದ ಲಿಂಗವಂತ ಸಮಾಜ ಸಂಸ್ಕೃತಿಗೆ ಅನು ಗುಣವಾದ ಕಾಯಿದೆಗಳ ಪುಸ್ತಕವನ್ನು ಮಾಡಿ ಅದರಂತೆ ಕೋರ್ಟು ಕಚೇರಿಗಳಲ್ಲಿ ನ್ಯಾಯನಿರ್ಣಯವಾಗುವಂತಾಗಬೇಕು.

---

# ನಿದ್ದೆ!

(ಲೇ:— ಕರಿಬಸವ ತನಯ.)

೧

ನಿದ್ದೆಯು ಗದ್ದಲ
ಎದ್ದು ಬಂದೀತೋ
ಎದ್ದು ಬಂದೀತು.

ಸದ್ದು ಸುಳಿಯನು ತಿಳಿದು
ಎದ್ದ ಜೀವವ ತುಳಿದು

ಬೆಳಕ ಮಿಣುಕನು ಕಳೆದು
ಸೆಳೆದ ಅರಿವನು ಅಳಿದು

ಕೊಳೆ ಕಣಿ ಅಣಿಮಾಡಿ
ಕೆಳ ಜೀವ ಹುರಿ ಮಾಡಿ

ಮುಳ್ಳು ಕಲ್ಲನು ದೂಡಿ
ಚಳ್ಳ ಹಚ್ಚುತ ಕಾಡಿ

ಕೆಂಗಿಡಿ ಪುಟುಗೊಂಡು
ಸಿಂಗನ ತಡ ಕೊಂಡು

ನಕ್ಕ ಸೊಕ್ಕಿನ ತೊರೆಯು
ಬಿಕ್ಕಿ ಬತ್ತುತ ಬರಿಯು

ಉಕ್ಕಿ ಬರುವದು ತಡೆಯೆ!
ಸಿಕ್ಕು ದೇವನ ಕಡೆಯೆ!!

೨

ಕರುಣೆ ಕಾಲಿಟ್ಟಾಗ
ಕರುಣಕರೆ ಬಿರಿದಾಗ ಕರಳಯುರಿ ಉರುಳುತಲಿ
ಅರಳುತಿಹ ಮಲ್ಲಿಗೆಯು ಎಲೆದೂಡಿ ಬಿರಿವಂತೆ

ಕಳವಳದ ಅಳಿಮನವು
ಬಾಡುತಲಿ ನಶಿಸುತಲಿ

ಮನವೊಗ್ಗಿ ಕಳಕಳಿಸಿ
ಎಳೆ ಕಂಪ ಸೂಸುತಲಿ

ತಸಿವಣ್ಣ ಸಿಹಿಯಂತೆ ಮನಮಧು ಸುರಿಯುವದು.

೩

ಬಾಳುತಲಿ ಏಳುತಲಿ ಕೀಳುಗುಣ ಈಡಾಡಿ
ಗೋಳಿನಲಿ ಬೀಳದಲೆ ನಿತ್ಯಕರೆ ಕರೆಯುತಲಿ

ದೇವಕರೆ ಮನದುಂಬಿ
ಭಾವದಲಿ ತುಂಬುತಲಿ

ಆತ್ಮದಲಿ ಬೆಳಕಿನಲಿ
ಕಾಲಿಡುತ ಮುಂದಾಗಿ

ಹರುಷ ಮಿಗೆ ಶಾಂತಿ ಬರೆ ಅಲರಮನ ತೋರುವದು.

೩

ಮನದ ಕಳೆ ಅರಳುತಲಿ ಭಾವದಲಿ ನರಳುತಲಿ
ದೇವನೆಡೆ ಬಯಸುತಲಿ ಪಾವನೆಯ ಕಾಣುತಲಿ

ದೇವ ಕಂಡಂತಾಗಿ
ಭಾವ ಬಂದಂತಾಗಿ

ಕೊಳೆಯು ಕಳೆದಂತಾಗಿ
ಬೀಳು ಅಳಿದಂತಾಗಿ

ಭಾವ ಲೋಕದ ತವಸಿ ನಾನಾಗಲಾಶಿಸಲಿ.

---

# ಲೋಕಗಳ ವಿಚಾರ.

(ಲೇಖಕಃ— ಶ್ರೀಯುತ ಸಾಸನೂರು ಮಡಿವಾಳಪ್ಪನವರು.)
[ ಹಿಂದಿನಿಂದ ಮುಂದುವರಿದು ಮುಗಿದುದು. ]

ಈ ಎಲ್ಲ ದೇವತೆಗಳು ಈಗ ಎಲ್ಲಿ ಇರುವರು? ಅಥವಾ ಎಲ್ಲಿಗೆ ಹೋದರು? ಅವರು ವಾಸಿಸಿದ ದೇಶಗಳು ಈಗ ಇರುವವೇ? ಎಂಬೀ ಪ್ರಶ್ನಗಳುದ್ಭವಿಸುವವು.

ಇದಕ್ಕೆ ಉತ್ತರವೇನಂದರೆ- ಮಹಾಭಾರತೀಯ ಕಾಲದಿಂದಲೇ ದೇವತೆಗಳು ಯುದ್ಧ ವಿದ್ಯೆಯಲ್ಲಿ ದುರ್ಲಕ್ಷವನ್ನು ಮಾಢಲು ಆರಂಭಿಸಿದರು. ಮಹಾಭಾರತ ಸಭಾಪರ್ವದಲ್ಲಿ— ಅರ್ಜುನನು ಉತ್ತರ ದಿಕ್ಕನ್ನು ಜಯಿಸಲು ಹೊರಟು ಹಿಮಾಲಯ ಪ್ರದೇಶದಲ್ಲಿ ಹಲವು ದುರ್ಧರ್ಷ ಜಾತಿಗಳೊಡನೆ ಯುದ್ಧಮಾಡಿ ದೇವಪುರಿಯನ್ನು ಜಯಿಸಲು ಹೋದನು. ಆದರೆ ಅಲ್ಲಿ ಹೋದ ಮಾತ್ರದಿಂದಲೇ ಅಲ್ಲಿಯ ಸೌಮ್ಯಮೂರ್ತಿಗಳಾದ ದೇವತೆಗಳು- ಇದೇ ದೇವಭೂಮಿ, ಯುದ್ಧ ವಿಗ್ರಹಾದಿಗಳಿಲ್ಲ. ನೀನು ಯುದ್ಧ ಮಾಡದೆಯೇ ಕಪ್ಪವನ್ನು ತೆಗೆದುಕೊಂಡು ಹೋಗು, ಎಂದು ಹೇಳಿದರು. ಇದರಿಂದ ದೇವತೆಗಳು ಯುದ್ಧ ವಿದ್ಯೆಯನ್ನು ಮರೆತು ಬಿಟ್ಟಿದ್ದರೆಂದೂ ಜ್ಞಾನ ಚರ್ಚೆಯಲ್ಲಿ ಆತ್ಮನಿಯೋಗ ಮಾಡಿದ್ದರೆಂದೂ ತಿಳಿಯುವದು. ಪಕ್ಷಾಂತರದಲ್ಲಿ ನಿರ್ಜಿತರಾದ ಅನಾರ್ಯಜಾತಿಗಳು ಈ ಸುಯೋಗದಲ್ಲಿ ಒಳ್ಳೇ ಪ್ರಬಲರಾಗಿ, ಎಲ್ಲ ದೇವರಾಜ್ಯವನ್ನು ವಶಪಡಿಸಿಕೊಂಡರು. ಈ ಯುದ್ಧದಲ್ಲಿ ಹಲವು ದೇವತೆಗಳು ಪ್ರಾಣಗಳನ್ನು ಕಳಕೊಂಡಿರುವದು ಹೆಚ್ಚು ಸಂಭವನೀಯವು. ಉಳಿದವರೆಲ್ಲರು ನಿರ್ಜೀವರಾಗಿ ಕೆಲವು ದಿವಸಗಳ ತರುವಾಯ ಅನಾರ್ಯರೊಡನೆ ಬೆರೆತು ಹೋದರು; ಮುಂದೆ ಬೇಗನೆ ಅವರ ಆಕೃತಿ ಪ್ರಕೃತಿಗಳು ಪರಿವರ್ತನವಾಗಿ ಹೋದವು. ಮಹಾಭಾರತದಲ್ಲಿ ಕಂಡುಬರುವದೇನಂದರೆ- 'ಸಿಂಧು ನದಿಯ ಪಶ್ಚಿಮ ತೀರದಲ್ಲಿ ಅನೇಕ ಶಕ ಯವನ- ಮ್ಲೇಂಚ್ಛಜಾತಿಗಳೂ ಪಶ್ಚಿಮದಲ್ಲಿ ಗಾಂಧಾರ (ಕಂದಾಹಾರ) ಕ್ಕೆ ಹೊಂದಿದ ಪ್ರದೇಶಗಳಲ್ಲಿ ಕಿರಾತ, ಪಹ್ಲವ, ಹೂಣ ಮೊದ

ಲಾದ ಜಾತಿಗಳೂ ವಾಸ ಮಾಡುತ್ತಿದ್ದವು. ಮತ್ತು ತಿಬೇತ (ಮಾಶಕ) ದೇಶದ ಪೂರ್ವಭಾಗದಲ್ಲಿ ಚೀನಾ ಜನರು ವಾಸ ಮಾಡುತ್ತಿದ್ದರು. ಈ ಚೀನಾಜನರೂ ಯುದ್ಧವಿದ್ಯೆಯಲ್ಲಿ ಒಳ್ಳೇ ಪಾರವರ್ಶಿಗಳಿದ್ದರು. ಅವರ ರಾಜ್ಯವು ಮಹಾಭಾರತೀಯ ಯುಗದಲ್ಲಿ ಆಸಾಮದಲ್ಲಿಯ ಪ್ರಾಗ್-ಜ್ಯೋತಿಷಪುರದ ವರೆಗೆ ಹಬ್ಬಿಗೊಂಡಿತ್ತು.

ಭಾರತದ ಇತಿಹಾಸದಿಂದ ಕಂಡುಬರುವದೇನಂದರೆ- ಕ್ರಿ. ಪೂ ಕೆಲವು ಶತಮಾನ (ಅರ್ಥಾತ್ ಮಹಾಭಾರತ ಯುದ್ಧದ ಕೆಲವು ಶತ ಮಾನಗಳ ನಂತರ) ಗಳಿಂವಲೇ ಶಕ, ಹೂಣ ಮೊದಲಾದ ಜಾತಿಗಳು ಒಳ್ಳೇ ಪ್ರಬಲವಾದವು. ಹಾಗು ಇಡಿಯ ಮಧ್ಯ ಏಸಿಯಾ ಪ್ರದೇಶ ವನ್ನು ಆಕ್ರಮಿಸಿದವು. ಅವು ಭಾರತ ವರ್ಷದ ಕೆಲವು ಭಾಗವನ್ನು ಸಹ ವಶಪಡಿಸಿಕೊಂಡಿದ್ದವು. ಅಪರ ಪಕ್ಷದಲ್ಲಿ ಚೀನಾಗಣವೂ ಒಳ್ಳೇ ಪ್ರಬಲವಾಯಿತು. ಈ ಎಲ್ಲ ಅಸಭ್ಯ ಜಾತಿಗಳ ಮೂಲಕವೇ ದೇವ ಭೂಮಿಯು ಕಲುಷಿತವೂ, ದೇವಸಭ್ಯತೆಯು ಧ್ವಂಸೀಕೃತವೂ ಆಯಿ ತೆಂಬುವದು ಹೆಚ್ಚು ಸಂಭವನೀಯವು. ನಿರ್ಜಿತರಾದ ಬ್ರಾಹ್ಮಣ ದೇವ ತೆಗಳು ಅನನ್ಯೋಪಾಯರಾಗಿ ಈ ಅಸಭ್ಯರೊಡನೆ ಕೂಡಿಹೋದರು. ಒಡನೆಯೇ ಮಧ್ಯಏಸಿಯಾ ಹಾಗೂ ಉತ್ತರ ಏಸಿಯಾಗಳ ಆರ್ಯ ಸುಧಾರಣೆಯು ಲೋಪವಾಗಿ ಬಿಟ್ಟಿತು. ಅಂತರ್ಜಾತಿಕ ವಿವಾಹಾದಿಗ ಳಿಂದ ದೇವತೆಗಳ ರೂಪದ ಪರಿವರ್ತನವು ಒಂದೆರಡು ತಲೆಗಳಲ್ಲಿಯೇ ಆಗಿಹೋಯಿತು. ಮತ್ತು ಮೊದಲಿನ ಸಭ್ಯತೆಯನ್ನು ಸಹ ಮರೆತು ಬಿಟ್ಟರು. ಈಗ ಮಧ್ಯ ಏಸಿಯಾ ಹಾಗು ಉತ್ತರ ಏಸಿಯಾಗಳಲ್ಲಿ ಚಪ್ಪಟೆ ಮೂಗಿನ ಹೊರತು, ಉನ್ನತ ನಾಸಿಕದವರು ಕಂಡುಬರುವದಿಲ್ಲ. ಇದೇ ದೇವತೆಗಳ ಶೇಷಪರಿಣತಿಯು. ಆ ದೇವಲೋಕವು ಈಗ ಸಹ ಇರುವದು ; ಆದರೆ ಆ ಎಲ್ಲ ಸ್ಥಾನಗಳಲ್ಲಿ ದೇವತೆಗಳು ಮಾತ್ರ ಇಲ್ಲ. ಅಂತೇ ಹಲವು ಅಜ್ಞರು— 'ಕಲಿಯುಗದಲ್ಲಿ ದೇವತೆಗಳು ಅಂತರ್ಧಾ ನವಾಗಿದ್ದಾರೆ' ಎಂದು ಹೇಳುವರು. ಇದು ಯಾವ ಬಗೆಯ ಅಂತ ರ್ಧಾನವೆಂಬದನ್ನು ಈಗ ಎಲ್ಲರೂ ತಿಳಿಯುವರು.

ಮಹಾಭಾರತೀಯ ಯುಗದ ತರುವಾಯ ಕೆಲವು ಶತಮಾನಗ ಳಲ್ಲಿಯೇ ಮಧ್ಯ ಏಸಿಯಾ ಹಾಗು ಉತ್ತರ ಏಸಿಯಾಗಳಿಂದ ದೇವ

ಸಭ್ಯತೆಯು ಲೋಪಹೊಂದಿತೆಂಬದನ್ನು ಮೊದಲೇ ಹೇಳಿದ್ದೇವೆ. ಪಾಲೀ ಭಾಷೆಯಲ್ಲಿ ಬರೆಯಲ್ಪಟ್ಟ ಗ್ರಂಥಗಳಲ್ಲಿ-ಎಲ್ಲಕ್ಕೂ ಹೆಚ್ಚು ಪುರಾತನ ವಾದವುಗಳು ಕ್ರಿ. ಪೂ. ೪ ಅಥವಾ ೩ನೆಯ ಶತಮಾನದಲ್ಲಿ ಬರೆಯಲ್ಪಟ್ಟವೆಯೆಂದು ನಿಶ್ಚಿತವಾಗಿರುತ್ತದೆ. ಆ ಎಲ್ಲ ಗ್ರಂಥಗಳಲ್ಲಿ- ಭಗವಾನ್ ಬುದ್ಧನಿಂದ ಇಂದ್ರ, ವರುಣ, ಬ್ರಹ್ಮ ಮೊದಲಾದ ದೇವತೆಗಳು ಮೋಕ್ಷ ಸಂಬಂಧದಿಂದ ಉಪದೇಶವನ್ನು ಪಡೆಯುತ್ತಿದ್ದರು ಎಂದು ಹೇಳಿದೆ. ಕ್ರಿ. ಪೂ. ೪ನೆಯ ಶತಮಾನದಲ್ಲಿ (ಕ್ರಿ. ಪೂ. ೩೨೭ ವರ್ಷದಲ್ಲಿ) ಗ್ರೀಕ ವೀರನಾದ ಅಲೇಕ್ಝಾಂಡರನು ಮಧ್ಯ-ಏಸಿಯಾವನ್ನು ಜಯಿಸಿದನು.. ಆಗಿನ ರಿಕಾರ್ಡುಗಳು ಈಗ ದೊರೆತಿವೆ. ಅವುಗಳಲ್ಲಿ ಇಂದ್ರ-ವರುಣ ಮೊದಲಾದ ದೇವತೆಗಳ ಉಲ್ಲೇಖವಿಲ್ಲ. ಒಂದು ವೇಳೆ ಅಲ್ಲಿಯು ವರೆಗೆ ದೇವತೆಗಳು ಇದ್ದುದಾದರೆ ನಿಶ್ಚಯವಾಗಿಯೇ ಕೇತುಮಾಲ ವರ್ಷದ ರಾಜನಾದ ವರುಣನೊಡನೆ ಅಲೇಕ್ಝಾಂಡರನ ಯುದ್ಧವಾಗುತ್ತಿತ್ತು. ಪಾಲೀಭಾಷೆಯಲ್ಲಿ ಬರೆದ ಗ್ರಂಥಗಳ ಸಂಗತಿಯನ್ನು ನಂಬುವದಾದರೆ ದೇವತೆಗಳ ಅವನತಿ ಅಥವಾ ಕ್ಷಮತೆಯ ಏಕಕಾಲೀನ ಹ್ರಾಸವು ೫ನೆಯ ಶತಮಾನದಲ್ಲಿಯೇ ಸಂಘಟಿತವಾಗಿತ್ತು ಎಂಬುವದೇ ಹೆಚ್ಚು ಸಂಭವನೀಯವು. ಈ ಆರ್ಯದೇವತೆಗಳು ಯುದ್ಧದ ಉಪದೇಶದಿಂದ ಅನುಪ್ರಾಣಿತರಾಗಿ ವೈದಿಕ ಯಾಗಯಜ್ಞಾದಿಗಳನ್ನು ಬಿಟ್ಟುಗೊಟ್ಟು ಬೌದ್ಧ ಧರ್ಮಾವಲಂಬಿಗಳಾಗಿದ್ದರು. ಭಾರತ ವರ್ಷದಿಂದ ಬೌದ್ಧ ಶ್ರಮಣರನ್ನು ಕರೆದುಕೊಂಡು ಹೋಗುವದಕ್ಕೋಸುಗ ಕ್ರಿ. ಪೂ. ಕೆಲವು ಶತಮಾನಗಳಿಂದಲೇ ಟಿಬೇಟ ಹಾಗು ಚೀನ ದೇಶೀಯ ರಾಜರು ಭಾರತಕ್ಕೆ ತದ್ದೇಶೀಯ ಪುರೋಹಿತರನ್ನು ಕಳಿಸುತ್ತಿದ್ದರು. ಇದರ ಪ್ರಮಾಣಗಳು ಇತಿಹಾಸದಲ್ಲಿ ಯಥೇಷ್ಟವಾಗಿ ದೊರೆಯುವವು. ಯುದ್ಧದ ಆವಿರ್ಭಾವದ ಅಥವಾ ತಿರೋಧಾನದ ಕೆಲವು ಶತಮಾನಗಳಲ್ಲಿಯೇ ಸಂಭವತಃ ದೇವಭೂಮಿಯಲ್ಲಿ ಬೌದ್ಧ ಧರ್ಮವು ಸಾರ್ವಜನೀನ ಧರ್ಮವೆಂದು ಗೃಹೀತವಾಯಿತು. ಆದರೆ ಪರವರ್ತೀಕಾಲದ ಅಸಭ್ಯಜಾತಿಯ ಕಬಲದಿಂದ ಅಲ್ಲಿಯ ವೇದ-ಉಪನಿಷದಾದಿಗಳು ರಕ್ಷಣೆಯನ್ನು ಹೊಂದಲಿಲ್ಲ. ಅಸಭ್ಯ ಜಾತಿಗಳ ಇಂತಹ ಆಚರಣೆಯು ಇತಿಹಾಸದಲ್ಲಿ ಯಥೇಷ್ಟವಾಗಿ ಕಂಡುಬರುತ್ತವೆ. ಅಲೇಕ್ ಜಾಂಡ್ರಿಯಾದ ವಿಖ್ಯಾತ ಲಾಯಬ್ರರಿಯೂ, ತಕ್ಷಶಿಲಾ-ನಾಲಂದಾಗಳ ವಿಶ್ವವಿಖ್ಯಾತ ವಿಶ್ವವಿದ್ಯಾಲಯ

ಗಳೂ, ಪುಸ್ತಕಾಲಯುಗಳೂ ಅಸಭ್ಯಜಾತಿಗಳಿಂದ ನಾಶವಾಡಲ್ಪಟ್ಟವು. ಈ ಕಾರಣದಿಂದಲೇ ಮಧ್ಯ ಏಸಿಯಾವಲಿ ಹಾಗು ಉತ್ತರ ಏಸಿಯಾದಲ್ಲಿ (ಮೇರು ದೇಶಗಳಲ್ಲಿ) ಪ್ರಾಚೀನ ಸಂಸ್ಕೃತ ಸಾಹಿತ್ಯದ ಯಾವದೂ ನಿದರ್ಶನವು ದೊರೆಯುವದಿಲ್ಲ. ಸಾಮವೇದದ ಸೂತ್ರಕಾರನಾದ ಮಾಶಕಾಚಾರ್ಯನು ಮಾಶಕ ಅಥವಾ ತಿಬೇತ ದೇಶೀಯನು. ಲಾಟ್ಯಾಯನ ದ್ರಾಹ್ಯಾಯಣ ಮೊದಲಾದವರು ಉತ್ತರ ದೇಶೀಯು ಅರ್ಥಾತ್ ಹಿಮಾಲಯದ ಉತ್ತರದ ಜನರು. ಇಂದ್ರ, ವರುಣ, ಸೂರ್ಯ, ಯಮ ಮೊದಲಾದ ದೇವತೆಗಳು ಮಂತ್ರದ್ರಷ್ಟೃಗಳೆಂದು ಋಗ್ವೇದದ ಹಲವು ಸ್ಥಳಗಳಲ್ಲಿ ಕಂಡುಬರುವದು ಇವರೂ ಋಗ್ವೇದದ ಪ್ರಣಯನ ಕಾರ್ಯದಲ್ಲಿ ಸಹಾಯ ಮಾಡಿದ್ದರೆಂಬದನ್ನು ಹೇಳುವದೇ ಬೇಡ. "ಸೂರ್ಯಾತ್ ಸಾಮವೇದಃ" ಸೂರ್ಯದೇವನು ಸಾಮವೇದವನ್ನು ಪ್ರಣಯನ ಮಾಡಿದನ ಆದರೆ ಋಗ್ವೇದದಂತೆ ಸಾಮವೇದದಲ್ಲಿಯೂ ಹಲವು ಋಷಿಗಳ ಹೆಸರುಗಳು ಕಂಡುಬರುತ್ತವೆ. ಸುತರಾಂ ಪೂರ್ವೋಕ್ತ ವಚನಗಳಿಂದ ಕಂಡುಬರುವದೇನಂದರೆ-- ಸೂರ್ಯದೇವನು ಸಾಮವೇದದ ಪ್ರಣಯನ ಆರಂಭಮಾಡಿದನು. ಮತ್ತು ಚಂದ್ರದೇವನು "ಚಾಂದ್ರ-ವ್ಯಾಕರಣ" ಎಂಬ ಹೆಸರಿನ ಒಂದು ವ್ಯಾಕರಣವನ್ನು ಪ್ರಣಯನ ಮಾಡಿದನು. ಅತಏವ ಕಂಡುಬರುವದೇನಂದರೆ--ನಿಶ್ಚಯವಾಗಿಯೇ ದೀರ್ಘಕಾಲದ ಅತ್ಯಾಚಾರದ ಫಲದಿಂದ ಮಧ್ಯ ಏಸಿಯಾ ಹಾಗು ಉತ್ತರ ಏಸಿಯಾಗಳಿಂದ ಆರ್ಯಸಭ್ಯತೆಯ ನಿದರ್ಶನಗಳು ಲೋಪಹೊಂದಿರುತ್ತವೆ (ಭವಿಷ್ಯತ್ತಿನಲ್ಲಿ ಪ್ರತ್ನತತ್ತ್ವವಿದರ ಸಂಶೋಧನೆಯಿಂದ ಈ ವಿಷಯವಾಗಿ ಹಲವು ತಥ್ಯಗಳು ಹೊರಬೀಳಲು ಶಕ್ಯವಿರುವದು. ಈಗ ಮಧ್ಯ ಏಸಿಯಾದಲ್ಲಿ ಪ್ರತ್ನ ತಾತ್ವಿಕರು ಸಂಸ್ಕೃತ ಸಾಹಿತ್ಯದ ಹಲವು ನಮೂನೆಗಳನ್ನು ಆವಿಷ್ಕಾರ ಮಾಡಿದ್ದಾರೆ) ಭಾರತೀಯ ಹಿಂದುಗಳಲ್ಲಿ ಶಿವಪೂಜೆಯ ಪದ್ಧತಿಯು ಹಲವು ದಿನಗಳಿಂದ ಪ್ರಚಲಿತವಿದ್ದು, ಶಿವನ ಅರಮನೆಯು ಎಲ್ಲಿ ಇತ್ತು ಎಂಬದನ್ನು ಹಲವರು ಬಲ್ಲರು. ತಿಬೇಟಿಯರು ಶಿವನ ಹಾಗು ಕುಬೇರನ ಅರಮನೆಗಳ ಸಂಗತಿಯನ್ನು ಈಗ ಸಹ ಹೇಳುತ್ತಾರೆ. ಅವರು ಕೈಲಾಸ ಪರ್ವತದ ಉತ್ತರಾಂಶ ಹಾಗು ಮಾನಸ ಸರೋವರದ ದಕ್ಷಿಣಾಂಶಕ್ಕೆ "ಗ್ಯಾಲಪೋ ನರಜಿಂಗಿ ಪೋವ್‌ರಾಂ" ಅಥವಾ ಕುಬೇರನ ಆವಾಸ ಭೂಮಿಯೆಂದು

ಕರೆಯುತ್ತಾರೆ. ಆದರೆ ಚೀನಿಗಳು ಹೀಗೆ ಹೇಳುವದಿಲ್ಲ. ಯಾಕಂದರೆ ತಿಬೇತಿಯರೂ, ಚೀನೀಯರೂ ಏಕವಂಶೀಯರಲ್ಲ. ಚೀನಿಗಳು ಮಂಗೋಲಿಯ ಅಥವಾ ಇಂಡೋ-ಏರಿಯಾನ್ ಅಥವಾ ಆರ್ಯಜಾತಿಯ ಅಂತರ್ಭುಕ್ತರಲ್ಲ. ಪಕ್ಷಾಂತರದಲ್ಲಿ ತಿಬೇತಿಯರು ಮಂಗೋಲಿಯ ಅಥವಾ ಇಂಡೋ-ಏರಿಯಾನ್ ಅಥವಾ ಆರ್ಯಜಾತಿಯ ವಂಶಧರರು. ಅವರು ಭಿನ್ನ ಧರ್ಮಾವಲಂಬಿಗಳಾಗಿದ್ದರು ಸಹ ಪಿತೃಪುರುಷರ ವಿಶ್ವಾಸ ಹಾಗು ಆಚಾರ ಮರೆಯಲಿಕ್ಕೆ ಸಮರ್ಥರಾಗಲಿಲ್ಲ. ದೇಹದ ಪರಿಮಾಪು ಹಾಗು ಮುಖದ ಲಕ್ಷಣ ಮೊದಲಾದವುಗಳನ್ನು ನೋಡಲು ಕಂಡುಬರುವದು— ತಿಬೇತಿಯರಲ್ಲಿ ಹಾಗು ತಾಕ್‌ಲಾಮಾಗಾನ್ ವಾಸಿಗಳಾದ ತುರ್ಕೀಗಳಲ್ಲಿ ಬಹಳ ಮಟ್ಟಿಗೆ ಆರ್ಯಭಾವವು ಇರುತ್ತದೆ. ಪಕ್ಷಾಂತರದಲ್ಲಿ ಪೂರ್ವದಿಕ್ಕಿನಲ್ಲಿಯ ನಿವಾಸಿಗಳಾದ ಚೀನಿಗಳೊಡನೆ ಇವರ ಪ್ರಭೇದವು ವಿಪುಲವಾಗಿರುವದು. ಒಂದು ವೇಳೆ ಈ ಎರಡು ಜಾತಿಗಳಿಗೂ ಸಾಮಾನ್ಯವಾಗಿ 'ಮಂಗೋಲಿಯಾ' ಎಂದು ಹೇಳಿದರೆ ದೇಹದ ಹಾಗು ಮುಂಡದ ಆಕೃತಿ-ಪ್ರಕೃತಿಗಳನ್ನು ನೋಡಿ ಚೀನಿಗಳಿಗೆ ಮಂಗೋಲಿಯ ಅನ್ನುವದು ಎಷ್ಟು ಎಂಬ ವಿಷಯದಲ್ಲಿ ಹೆಚ್ಚು ಸಂದೇಹವಿರುತ್ತದೆ. (See Journal ofthe Royal Anthropological Institute 1912 p. p. 467—468)

ಸುತರಾಂ ಮಹಾಭಾರತದಲ್ಲಿ ಇರುವ "ಮಂಗಾಃ ಬ್ರಾಹ್ಮಣಭೂಯಿಷ್ಠಾಃ ಸ್ವಕರ್ಮನಿರತಾ ನೃಪ" ಎಂಬ ಸಂಗತಿಯನ್ನು ಹಾರಿಸಿಬಿಟ್ಟರೆ ನಡೆಯುವದಿಲ್ಲ. ಮಹಾಭಾರತಕ್ಕೆ ಹಾಗು ವೇದ-ಉಪನಿಷತ್ತುಪುರಾಣಾದಿಗಳ ಪ್ರಮಾಣಗಳಿಗೆ ಹಲವರು ಪುಸ್ತಕದ ಪ್ರಮಾಣಗಳೆಂದು ಹಾಸ್ಯಮಾಡಿ ಒಗೆದು ಬಿಟ್ಟರೂ ಬಿಡಬಹುದು. ಇಂಥವರಿಗೆ ದುಃಖದ ಸಂಗತಿಯೆಂದರೆ— ಪ್ರಸಿದ್ಧ ನೃತತ್ತ್ವವಿದರಾದ Joyee ಸಾಹೇಬರು Royal Anthropological Institute ದ Journal ದಲ್ಲಿ ಈ ಮಾತನ್ನು ಸ್ಪಷ್ಟವಾಗಿ ಬರೆದು ಪ್ರಕಾರಾಂತರದಲ್ಲಿ ಶಾಸ್ತ್ರಾದಿಗಳ ಪ್ರಮಾಣಗಳನ್ನೇ ಸಮರ್ಥನೆ ಮಾಡಿದ್ದಾರೆ. ಶೂನ್ಯವನ್ನು ಲಕ್ಷಿಸಿ ಈ ಶಾಸ್ತ್ರದಿನಗಳಲ್ಲಿ ಭುವನವಿನ್ಯಾಸ ಅಧ್ಯಾಯ ಬರೆಯಲ್ಪಟ್ಟಿಲ್ಲ ಎಂಬದನ್ನು ಹೇಳುವದೇ ಬೇಡ. ಶಾಸ್ತ್ರಾದಿಗಳನ್ನು ಓದಲು ಸ್ಪಷ್ಟವಾಗಿ ಕಂಡುಬರುವದೇನಂದರೆ— ಲೇಖಕರು ನಿಜವಾಗಿಯೇ ಪೃಥ್ವಿಯನ್ನು ಸಂಚರಿಸಿ

ದ್ದರು, ಅಥವಾ ಭೂಗೋಲ-ಇತಿಹಾಸಗಳಲ್ಲಿ ಬಹಳವಾಗಿ ಶೋಧಿಸಿದ್ದರು. ಮತ್ತೊಂದು ಮಾತು, ಚೀನ ದೇಶೀಯರು ಮಂಗೋಲಿಯ ಅಥವಾ ಆರ್ಯದೇವತೆಗಳ ವಂಶೀಯರಲ್ಲವೆಂಬ ಮಾತು ಮಹಾಭಾರತದಲ್ಲಿ ಸ್ಪಷ್ಟವಾಗಿಯೇ ಬರೆಯಲ್ಪಟ್ಟಿದೆ. ಈಗ ಚೀನೀಯರು ಎಲ್ಲ ಚೀನದೇಶ, ಮಂಗೋಲಿಯ ಹಾಗು ತುರ್ಕಸ್ತಾನ ಮೊದಲಾದವುಗಳಲ್ಲಿ ಹಬ್ಬಿದ್ದಾರೆ. ಮಹಾಭಾರತೀಯ ಯುಗದಲ್ಲಿ ಮಾತ್ರ ಅವರು ಹೀಗೆ ಹಬ್ಬಿಗೊಂಡಿದ್ದಿಲ್ಲ. ಆ ಕಾಲದಲ್ಲಿ ಅವರು ಪೂರ್ವ ಚೀನದಲ್ಲಿಯೇ ಸೀಮಾಬದ್ಧರಾಗಿದ್ದರು. ಅವರ ವಾಸಸ್ಥಾನವು ಸಾಂಟಾಂ, ಸಾರಿಹಾಣ, ಇಂಡೋಚೀನ, ಹಾಗು ಆಸಾಮದ ಕೆಲಭಾಗದ ವರೆಗೆ ಇತ್ತು. ಆ ಕಾಲದಲ್ಲಿ ಪ್ರಾಗ್ ಜ್ಯೋತಿಷಪುರ (ಈಗಿನ ಕಾಮರೂಪ) ಚೀನಾ, ಹಾಗು ಕಿರಾತರ ರಾಜ್ಯಗಳಿಂದ ಪರಿವೇಷ್ಟಿತವಿತ್ತು. "ಸ ಕಿರಾತೈಶ್ಚ ಚೀನೈಶ್ಚ ವೃತಃ ಪ್ರಾಗ್‌ಜ್ಯೋತಿಷೋಽಭವತ್ । ಅನ್ಯೈಶ್ಚ ಬಹುಭಿರ್ಯೋಧೈಃ ಸಾಗರಾ ನೃಪವಾಸಿಭಿಃ ॥

—ಸಭಾಪರ್ವ-೨೬ನೆಯ ಅಧ್ಯಾಯ.

Chinese chronicle ಅರ್ಥಾತ್ ಚೀನ ದೇಶೀಯ ರಾಜಮಾಲಾ ನೋಡಿದರೂ, ಚೀನಿಗಳ ರಾಜ್ಯವು 'ಸಾಂಟಾಂ' ಹಾಗು ಅದರ ಹತ್ತರದಲ್ಲಿ ಇದ್ದ ಕೆಲವು ಸ್ಥಾನಗಳ ವರೆಗೆ ಸೀಮಾಬದ್ಧವಾಗಿತ್ತೆಂಬುದು ಸ್ಪಷ್ಟವಾಗಿಯೇ ಪ್ರತೀಯಮಾನವಾಗುವದು.

ಚೀನೀಯರಿಗೆ ಮಂಗೋಲಿಯ ಜಾತಿ ಅನ್ನುವದು ಶುದ್ಧವಾದ ತಪ್ಪು. ಈಗ ನಾವು ಮಂಗೋಲಿಯ ಸಭ್ಯತೆಯೆಂದು ಯಾವದನ್ನು ತಿಳಿಯುವೆವೋ ಅದು ಚೈನಿಕ-ಸಭ್ಯತೆಯು ಸ್ವಲ್ಪಾದರೂ ಅಲ್ಲ. ನಿಜವಾದ ಮಂಗೋಲಿಯ ಸಭ್ಯತೆ ಮತ್ತು ಆರ್ಯಸಭ್ಯತೆ ಒಂದೇ. ಚೈನಿಕ ಸಭ್ಯತೆಯೊಡನೆ ಅಥವಾ ಅಸುರಿಕ (ವೈದಿಕ ಭಾಷೆಯಲ್ಲಿ) ಸಭ್ಯತೆಯೊಡನೆ ಮಂಗೋಲಿಯ ಅಥವಾ ಆರ್ಯಸಭ್ಯತೆಯ ಯಾವದೂ ಸಂಪರ್ಕವಿಲ್ಲ. ಈ ಸಂಬಂಧದಿಂದ ಋಗ್ವೇದವು ಹೇಳುತ್ತದೆ—ಭೀಮದ ನಾಮಕ ಒಬ್ಬ ಋಷಿಯು ಇಂದ್ರನ ಸ್ತವ ಮಾಡುವ ಸಮಯದಲ್ಲಿ ಹೇಳುತ್ತಾನೆ. "ಹೇ ಇಂದ್ರ ಅಸುರರು ನಮಗೆ ಚನ್ನಾಗಿ ತಿಳಿದಿಲ್ಲ. ಅವರು

ವೇದವಿಹಿತ ಕರ್ಮಪದ್ಧತಿ ಒಪ್ಪುವದಿಲ್ಲ. ಹಾಗು ಮಾನವ ಜಾತಿಯು ಧರ್ಮವನ್ನೂ ಪಾಲನೆ ಮಾಡುವದಿಲ್ಲ. ನೀನು ಅವರನ್ನು ವಧಿಸು."

ಋಗ್ವೇದ-೧೦ನೆಯ ಮಂಡಲ ೨ನೇ ಅನುವಾಕ ೬ನೇ ಸೂತ್ರ.

ಮಧ್ಯ ಏಸಿಯಾದಿಂದ ಕಾಲಕ್ರಮದಲ್ಲಿ (ವೈದಿಕ ಯುಗದಲ್ಲಿಯೇ) ಆರ್ಯರು ನಾಲ್ಕೂಕಡೆಗೆ ಹಬ್ಬಲಿಕ್ಕೆ ಪ್ರಾರಂಭಮಾಡಿದರು. ಒಂದು ಗುಂಪು ಪಶ್ಚಿಮಕ್ಕೆ ಅರ್ಥಾತ್ ಏಸಿಯಾ ಮಾಯುನರ, ಆರ್ಮೇನಿಯಾ (ಆರ್ಮಾನಿದೇಶ), ಬೆಬಿಲೋನಿಯಾ ಮೊದಲಾದ ಸ್ಥಾನಗಳಲ್ಲಿ ಹೋದರು. ಹಾಗು ಮತ್ತೊಂದು ಗುಂಪು ಗ್ರೀಸ, ಇತಾಲಿ ಮೊದಲಾದ ದೇಶಗಳಿಗೆ ಹೋಗಿ ಆಶ್ರಯ ಮಾಡಿದರು. ಪ್ರತ್ನತಾತ್ವಿಕರು ಹಾಗು ನೃತತ್ವವಿದರು ಏತದ್ದೇಶಗಳ ಜನರ ಆಕೃತಿ ಪ್ರಕೃತಿಗಳಲ್ಲಿ ಬಹುಮಟ್ಟಿಗೆ ಆರ್ಯಭಾವದ ಪ್ರಮಾಣವನ್ನು ಹೊಂದಿದ್ದಾರೆ. ಇಷ್ಟೇಅಲ್ಲ, ಅವರ ಆಚಾರ, ವ್ಯವಹಾರ ಹಾಗು ಶಿಕ್ಷಣ ಸಭ್ಯತೆಗಳಲ್ಲಿಯೂ ಆರ್ಯಭಾವದ ಎಷ್ಟೋ ಸಾದೃಶ್ಯವು ಕಂಡುಬರುತ್ತದೆ. ಜೆರೂಸಲೇಮ, ಪಾಲಿಸ್ತಾಯಿನ ಮೊದಲಾದ ಸ್ಥಾನಗಳ ಅಧಿವಾಸಿಗಳಾದ ಯುಹೂದಿಗಳು ಪೂರ್ವದಿಕ್ಕಿನಿಂದ ಹೋಗಿದ್ದರು ಎಂಬ ಪ್ರಮಾಣವು ಬಾಯಿಬಲಿನಲ್ಲಿ ಕಂಡು ಬರುತ್ತದೆ.

And the whole earth was of one language, and of one speech, and it came to pass, as they journeyed from the east, they found a plain in the land of Shinnar, and they dwelt there."

— Gyenesis chap XI

ಬಾಯಿಬಲ್ಲದ ಮಾತನ್ನು ಒಪ್ಪಿದರೆ, ಎಲ್ಲ ಪೃಥ್ವಿಯ ಒಂದು ಭಾಷೆಗೆ ಸಂಸ್ಕೃತ ಭಾಷೆಯೆಂದೂ, ಪೃಥ್ವಿಗೆ ಇಲಾವೃತ ವರ್ಷ (ಸೃಷ್ಟಿಯ ಪ್ರಥಮಾವಸ್ಥೆಯಲ್ಲಿ) ವೆಂದೂ ಗೊತ್ತಾಗುವದು. ಪೃಥ್ವಿಯಲ್ಲಿಯ ಎಲ್ಲ ಜೀವಿಗಳ ಉತ್ಪತ್ತಿ ಸ್ಥಾನವು ಇಲಾವೃತ ವರ್ಷ ಅಥವಾ ಇಲಃ(— "ಭುವನೈರ್ಭರ್ತ ಭಾವನಾಃ'') ಎಂದು ಪುರಾಣಾದಿಗಳಲ್ಲಿ ಹೇಳಿದೆ. ಮತ್ತು ಬಾಯಿಬಲದಲ್ಲಿ Paradise ಅಥವಾ ಸ್ವರ್ಗದ ಯಾವ ವರ್ಣನೆಯು ಇರುವದೋ, ಅದರೊಡನೆ ಇಲಾವೃತ ವರ್ಷದಲ್ಲಿಯ ನಾಲ್ಕು ನದಿ

ಗಳಿಂದ ಕೂಡಿದ ಹಾಗು ಪರ್ವತದ ಮೇಲೆ ಸಮಭೂಮಿಯಲ್ಲಿ ಇದ್ದ ತ್ರಿದಶಾಲಯ ಅಥವಾ ದೇವನಗರದ ಒಳ್ಳೇ ಹೊಂದಿಕೆಯಾಗುತ್ತದೆ. ಈ ನಾಲ್ಕು ನದಿಗಳು ಸ್ವರ್ಣದೀ ಗಂಗೆಯ ನಾಲ್ಕು ಪ್ರವಾಹಗಳೆಂದು ಮೊದಲೇ ವಿಶದಭಾವದಿಂದ ವರ್ಣಿತವಾಗಿರುತ್ತದೆ. ಬಾಯಬಲದ ಸಭ್ಯತೆ ಅಥವಾ ಯಹುದಿಗಳ ಸಭ್ಯತೆಯು, ಋಗ್ವೇದದ ಸಭ್ಯತೆಯ ತರುವಾಯದಲ್ಲಿಯದೆಂದು ಅನೇಕ ಪ್ರಮಾಣಗಳಿರುತ್ತವೆ. ( See. Historical quarterly 1929-30. Age of Rig Veda) ಮತ್ತು ಯಹುದಿಗಳು ಮಂಗೋಲಿಯಾದಿಂದಲೇ ಏಸಿಯಾ ಮಾಯಿನರಕ್ಕೆ ಹೋಗಿದ್ದರು, ಎಂಬುವದೂ ಬಾಯಬಲದ ಕಥೆಗಳಲ್ಲಿಯೇ ಕಂಡು ಬರುತ್ತದೆ. ಯಹುದಿಗಳಿಗೆ ಆರಬರು ಹಿಬ್ರು (Hebrew) ಅನ್ನುತ್ತಿದ್ದರು. ಈ Hebrew ಶಬ್ದವು ಆರಬೀಧಾತು Eber (ಏಬಾರ) ದಿಂದ ಬಂದಿರುತ್ತದೆ. Eber ಅಥವಾ ಏಬಾರ ಅರ್ಥಕ್ಕೆ ನದೀ ದಾಟುವದು (to cross, or to be across a river) ಎಂದು ತಿಳಿಸುತ್ತದೆ.

ಸಿರಿಯಾ ಹಾಗು ಮೆಸೊಪಟೇಮಿಯಾದಲ್ಲಿ ಕ್ರಿ. ಪೂ. ೧೫ನೆಯ ಹಾಗು ೧೬ ನೆಯ ಶತಮಾನದಲ್ಲಿ ಕೆಲವು ಉಪನಿವೇಶಗಳಿದ್ದವು. ಅಲ್ಲಿಯ ಜನರು ಆರ್ಯಭಾಷೆಯಲ್ಲಿ ಅರ್ಥಾತ್ ಸಂಸ್ಕೃತ ಭಾಷೆಯಲ್ಲಿ ಮಾತುಕತೆಗಳನ್ನು ಆಡುತ್ತಿದ್ದರು, ಹಾಗು ಆರ್ಯಪೂಜಿತ ದೇವತೆಗಳನ್ನು ಪೂಜಿಸುತ್ತಿದ್ದರು. ಮಿಶರದೇಶದ 'ಟಿಲ್ ಏಲ್ ಅಮರ್‌ನಾ' ಎಂಬ ಸ್ಥಾನದಲ್ಲಿ ಕೆಲವು "ಕಿಉನಿ ಫಾರ್ಮ ಟೇಬಲೇಟ" ದೊರೆತಿರುತ್ತವೆ. ಇವುಗಳಲ್ಲಿ ಕೆಲವು ವೈದಿಕ ಹೆಸರು ದೊರೆಯುವವು.

"There are strong evidences to show that in the 15th & the 16th centuries B. C. in Syria & upper Mesopotamia there were several colonies of men of Aryan speech, some of whom worshipped Vedic Gods.

In the Cuneiform tablets discovered at Tell-el Amarna in Upper Egypt containing letters from the tributary kings of western Asia to Egyption Pharaohs, we find such Aryan names of chieftains, Antamanya, Bawarzana Or perhaps Mayarzaus."

(See p p 29-30 Indo-Aryan Races & The Journal of Royal Asiatic Society 1911-944, )

ಬಾಬಿಲೋನಿಯದ ಸಮೀಪದ "ಮಿತಾನಿ" ರಾಜರ ಧರ್ಮವು ಯಾವದು ಎಂಬುವದು ಗೊತ್ತಾಗಿದೆ. ಒಂದು "ಕಿವುನಿಫರ್ಮ" ಲೇಖದ ನಮೂನೆಯು ಆವಿಷ್ಕಾರವು ಆಗಿದೆ. ಇದರಲ್ಲಿ ಒಂದು ಸಂಧಿಯ ವಿಷಯವು ಇರುವದು. ಮಿತಾನಿ ರಾಜರ ಸಂಧಿ ಪತ್ರದಲ್ಲಿ ಹಲವು ವೈದಿಕ ದೇವತೆಗಳ ಹೆಸರು (ಮಿತ್ರ, ವರುಣ, ಇಂದ್ರ ಪ್ರಭೃತಿ)ಗಳು ದೊರೆಯುತ್ತವೆ.

" Another great discovery, Cuneiform writing from Baghazkuci, has revealed the religion of the kings of Mitanni. one of these writings embody a treaty between the Mitanni king Mattinaza & the Hittite king Subbi luliuma wherein the deities of the two countries are invoked as protectors of the treaty. Among the Gods invoked by the Mitanni king occur the well-known Vedic names Mitra, Varuna, Indra & others.

Indo-Aryan Races P. 31

ಅತ ಏವ- ಈ ಎಲ್ಲ ದೇಶಗಳಲ್ಲಿ ಆರ್ಯಸಭ್ಯತೆಯು ಪ್ರಕಾಶಿತ ವಾಗಿತ್ತು. ಹಾಗು ಆರ್ಯರ ಉಪನಿವೇಶವೂ ಇತ್ತು. ಈ ಎಲ್ಲ ದೇಶ ಗಳು ವರುಣನ ರಾಜ್ಯವಾದ ಕೇತು-ಮಾಲವರ್ಷದ ಅಂತರ್ಗತವಾಗಿದ್ದ ವೆಂಬದನ್ನು ಹೇಳುವದೇ ಬೇಡ.

ಆರ್ಯರ ಮತ್ತೊಂದು ಶಾಖೆಯು ಗ್ರೀಸ ದೇಶದಲ್ಲಿಯೂ ಹೋಗಿತ್ತು. ಗ್ರೀಕರ ಹಾಗು ಆರ್ಯರ ಆಕೃತಿ-ಪ್ರಕೃತಿ, ಆಚಾರ-ವ್ಯವಹಾರ, ಭಾಷೆ ಇತ್ಯಾದಿಗಳಲ್ಲಿ ವಿಶೇಷವಾದ ಸಾದೃಶ್ಯವಿರುತ್ತದೆ. ಆರ್ಯರಂತೆ ಗ್ರೀಕರೂ ಅನೇಕ ದೇವ-ದೇವಿಗಳಲ್ಲಿ ನಂಬಿಗೆಯನ್ನಿಟ್ಟಿದ್ದರು. ಗ್ರೀಕರ ಸ್ವರ್ಗದ ಹೆಸರು 'Elysium.' ಇದೇ "ಇಲಿಸಿಯಾಮ" ವೈದಿಕ "ಇಲಾ" ಅಥವಾ "ಇಲಾಸ್ಥಾಯಿಾ"ಯಿಂದಲೇ ರೂಪಾಂತರವಾಗಿರುವದೆಂಬಲ್ಲಿ ಸಂದೇಹ ವಿಲ್ಲ. ಗ್ರೀಕರ ಮತದಲ್ಲಿ ಅವರ ದೇವತೆಗಳು ಆಲಿಂಪಿಯಾ ಎಂಬ

ಪರ್ವತದಲ್ಲಿ ವಾಸಮಾಡುತ್ತಾರೆ. ಮತ್ತು ಮಧ್ಯ ಏಸಿಯಾದಲ್ಲಿಯ ಆರ್ಯ ದೇವತೆಗಳು (ಬ್ರಹ್ಮ. ವಿಷ್ಣು, ಇಂದ್ರ ಪ್ರಭೃತಿ) ಇಲಾಸ್ಥಾಯಿೂ ಅಥವಾ ಆಲ್ತಾಯಿ ಎಂಬ ಪರ್ವತದ ಚೀನದೇಶಿಯ ಹೆಸರು "ಉಲಿಯಾ ಸುತಾಇ" ಎಂದು ಇರುವದು. ಗ್ರೀಕರು ಯುದ್ಧದ ಪೂರ್ವಕ್ಷಣದಲ್ಲಿ ಹಾಗು ಯಾತ್ರೆಯ ಪೂರ್ವಕ್ಷಣದಲ್ಲಿ ದೇವತೆಗಳಿಗೆ ಹಲವು ಬಗೆಯ ಪದಾರ್ಥಗಳನ್ನು ಅರ್ಪಣಮಾಡುತ್ತಿದ್ದರು. ವೈದಿಕ ಯುಗದಲ್ಲಿ ಆರ್ಯರು ಸಹ ಹೀಗೆಯೇ ಮಾಡುತ್ತಿದ್ದರು. ಈ ವಿಷಯದಲ್ಲಿ ಬಹಳೇ ಬಹಳ ಪ್ರಮಾಣಗಳು ಶಾಸ್ತ್ರ, ಪುರಾಣಾದಿಗಳಲ್ಲಿ ಇರುತ್ತವೆ. ಕಾಲ ಕ್ರಮದಿಂದ ಗ್ರೀಕರು ಶುದ್ಧ ಆರ್ಯ-ಸಭ್ಯತೆ ಹಾಗು ಆಚಾರ-ವ್ಯವ ಹಾರಗಳನ್ನು ಮರೆತರು ಸಹ ಅವರ ಪಿತೃಭೂಮಿಯ ನಾಮಕರಣ ದೊಡನೆ ಆರ್ಯರ ಪಿತೃಭೂಮಿಯ ನಾಮಕರಣವು ಕೂಡಿಕೊಂಡೇ ಇರುವದು.

ಭಾರತೀಯ ಆರ್ಯರ ಹಾಗು ಮಧ್ಯ ಏಸಿಯಾದಲ್ಲಿಯ ಬೇರೆ ಬೇರೆ ಆರ್ಯರ ಪಿತೃಭೂಮಿಯು "ದ್ಯೌಃ ಪಿತಾ" ಅಂದರೆ ಸ್ವರ್ಗಲೋಕ—ಇಲಾವೃತವರ್ಷ—ಮಂಗೋಲಿಯ. ಗ್ರೀಕರು "Zeus Pater" ಜಿಉಸ್ ಪಾಟೆರ ಅನ್ನುತ್ತಿದ್ದರು. ಆದರೆ ಭಾರತೀಯ ಆರ್ಯರು ಕಾಲಕ್ರಮ ದಿಂದ 'ದ್ಯೌಃ ಪಿತಾ' ಇದರ ನಿಜವಾದ ಅರ್ಥವನ್ನು ಮರೆತು ಸ್ವರ್ಗಕ್ಕೇ ಪಿತಾ ಅರ್ಥಾತ್ ಜನ್ಮದಾತಾ, (—ಪಿತೃಭೂಮಿ ಎಂದು ಪಿತಾ ಅಲ್ಲ) ಅನ್ನಲಿಕ್ಕೆ ಆರಂಭ ಮಾಡಿದರು. ಅದರಂತೆಯೇ 'Zeus Pater' ಇದರ ನಿಜವಾದ ಅರ್ಥವನ್ನು ಮರೆತು Zeus ಎಂಬ ದೇವತೆಗೇ ಜನ್ಮದಾತಾ ಪಿತಾ-ಎಂದು ತಿಳಿಯಲು ಆರಂಭ ಮಾಡಿದರು. ವಿಚಾರ ಮಾಡಿದರೆ ಗ್ರೀಕ ಭಾಷೆಯೂ ಸಂಸ್ಕೃತ ಭಾಷೆಯೂ ವಿಶೇಷವಾಗಿ ಸಾಮ್ಯವುಳ್ಳವುಗಳಾಗಿರುವವು. ಮೇಲೆ ಹೇಳಿದ ಪಿತೃಭೂಮಿಯ ನಾಮ ಕರಣದಿಂದ ಗ್ರೀಕರು ಮಂಗೋಲಿಯಾದಿಂದಲೇ ಹೋಗಿದ್ದರೆಂದು ಸ್ಪಷ್ಟ ವಾಗಿಯೇ ಕಂಡುಬರುವದು.

ಉಪಸಂಹಾರದಲ್ಲಿ ಆವಶ್ಯಕವಾಗಿ ಹೇಳುವದೇನಂದರೆ ಈಗಿನ ಹಲವು ಪಂಡಿತರು ಭೂತತ್ತ್ವವಿದರ ಉದಾಹರಣ ಬಿಟ್ಟು ಬೇರೆ ವಿಶ್ವಾ ಸವಿಡಲು ಇಚ್ಛಿಸುವದಿಲ್ಲ. ಅವರಿಗೆ ಪ್ರತ್ಯಕ್ಷ ಪ್ರಮಾಣದೊರೆಯದಿದ್ದರೆ ಕೇವಲ ಪುಸ್ತಕ ಪ್ರಮಾಣವನ್ನು ನಂಬಲು ಒಪ್ಪುವದಿಲ್ಲ. ಹೊತ್ತಿಗೆ

ಯಲ್ಲಿ ಹಾಗು ಪುರಾಣಾದಿಗಳಲ್ಲಿ ಯಾವ ಸ್ಥಾನದಲ್ಲಿ ಯಾವ ಜಾತಿಯು ವಾಸಸ್ಥಾನದ ಸಂಗತಿಯು ಬರೆದಿರುತ್ತದೆಯೋ ಇದರ ಹೊರಗಡೆ ಪ್ರತ್ನತಾತ್ವಿಕರು ಅಥವಾ ನೃತತ್ವವಿದರು ಹೋಗಲು ಅಥವಾ ಹೊತ್ತಿಗೆಯು ಸಂಗತಿಗೆ ಮಿಥ್ಯಾಪ್ರಮಾಣ ಮಾಡಲು ಶಕ್ತರಲ್ಲವೆಂಬುವದು ಆಶ್ಚರ್ಯಕರವು. ಈ ಸಂಬಂಧವಾಗಿ ಸಾಕಷ್ಟು ಉದಾಹರಣೆಗಳನ್ನು ಮೊದಲೇ ಕೊಟ್ಟಿದ್ದೇವೆ. ಪಾತಾಲ ಅಥವಾ ಅಮೇರಿಕೆಯು ಮಾತನ್ನು ಹೇಳಲು ನಮ್ಮ ದೇಶದ ಹಲವು ಪಂಡಿತರೂ ಮೂಗು ಮುರಿಯುತ್ತಾರೆ. ನಮ್ಮ ಶಾಸ್ತ್ರಗಳಲ್ಲಿ ಬರೆಯಲ್ಪಟ್ಟ ಅಮೇರಿಕೆ ಅಥವಾ ಪಾತಾಲ ಭೂಮಿಯಲ್ಲಿ ಏಸಿಯಾದ ಸಭ್ಯತೆಯು ಮಾದರಿಗಳು ದೊರೆಯುತ್ತವೆ. ಮೆಕ್ಸಿಕೋ ನಗರದ, ೧೭ ಮೈಲು ಉತ್ತರದಲ್ಲಿ ಸನ್ ಜುಯಾನ್-ಟಿಉಟಿ ಹಾಯರ್‌ಕಾನ್, ಎಂಬ ಸ್ಥಳದಲ್ಲಿ ನೆಲದೊಳಗೆ ಒಂದು 'ಆಜಟೆಕ್' ಪಿರಾಮಿಡ ದೊರಿತಿರುತ್ತದೆ. ಅದು ಬಹು ಮನೋಹರವಾಗಿರುತ್ತದೆ ಒಳಗೆ ಕಲ್ಲಿನಲ್ಲಿ ಅಕ್ಷರಗಳು ಕೆತ್ತಲ್ಪಟ್ಟಿವೆ. ಚೀನದ ಸರಕಾರೀ ಅಧಿಕಾರಿಯಾದ 'ಕಂಸಿಯಾ ಕುಯಾಂ' ಎಂಬವರು ಈ ಲಿಪಿಯ ಪಾಠೋದ್ಧಾರ ಮಾಡಿದ್ದಾರೆ. ಕಲ್ಲನ್ನು ಕೆತ್ತಿ ಶಿಲ್ಪಿಯು ಸೂರ್ಯ, ಚಂದ್ರ, ನಗರ ಈ ಮೂರು ಮಾತುಗಳನ್ನು ಪರಿಷ್ಕಾರವಾಗಿ ಚೀನೀ ಅಕ್ಷರಗಳಲ್ಲಿ ಸ್ಪಷ್ಟಮಾಡಿ ಬರೆದಿದ್ದಾನೆ. ಕ್ಯಾಲಿಫೋರ್ನಿಯಾದ ಪ್ರೊಫೆಸರ ಜಾನ್ ಫ್ರಾಯರರು—ಕ್ರಿ. ಪೂ. ೫ನೆಯ ಶತಮಾನದಲ್ಲಿ ಚೀನ ದೇಶದ ಬೌದ್ಧ ಶ್ರಮಣರು ನಿರ್ವಾಣ ಮುಕ್ತಿಯ ಧರ್ಮಪ್ರಚಾರ ಮಾಡುವದಕ್ಕೋಸುಗ ಅಮೇರಿಕೆಗೆ ಹೋಗಿದ್ದರು ಎಂದು ಹೇಳುವರು. ಮೇಲೆ ಹೇಳಿದ ಮೂರು ಶಬ್ದಗಳು ಸಂಸ್ಕೃತ ಭಾಷೆಯವು. ಮಧ್ಯ ಏಸಿಯಾದಲ್ಲಿಯ ಆರ್ಯರ ಸಂಧಾರಣೆಯ ಛಾಪು ಚೀನಿಗಳ ಮನಸಿನೊಳಗಿಂದ ಅಲ್ಲಿಯ ವರೆಗೆ ಹೋಗಿದ್ದಿಲ್ಲವೆಂದು ತಿಳಿಯುತ್ತದೆ (ನಾರಾಯಣ ಪತ್ರಿಕಾ—೧೩೨೭ ಸಾಲಿನ ಶ್ರಾವಣ ಸಂಖ್ಯೆ ನೋಡಿರಿ ಹಾಗು ಅದೇ ವರ್ಷದ (Illustrated London News) ಮತ್ತು ಈ ಆವಿಷ್ಕಾರದಿಂದ ನಮ್ಮ ಪೌರಾಣಿಕ ಯುಗದಲ್ಲಿ ಅಮೇರಿಕಾ ಯಾತಾಯಾತದ ಸಂಗತಿಯೂ ಚನ್ನಾಗಿ ಪ್ರಮಾಣಿತವಾಗುತ್ತದೆ. ವೇದ, ಪುರಾಣ, ಉಪನಿಷದಾದಿಗಳಲ್ಲಿ ಬರೆಯಲ್ಪಟ್ಟ ಬೇರೆ ಬೇರೆ ಸ್ಥಾನಗಳ ವಿಷಯವು ಆಧುನಿಕ ಆವಿಷ್ಕಾರದೊಡನೆ ಕೂಡುವದೆಂದ ಮೇಲೆ ಮಧ್ಯ

ಏಸಿಯಾದ ಸಂಬಂಧದ ಎಲ್ಲ ಸಂಗತಿಗಳೂ ಸತ್ಯವಾಗಿರುವದು ಹೆಚ್ಚು ಸಂಭವನೀಯವು. ಯಾಕಂದರೆ ಸಂಸ್ಕೃತ ಭಾಷೆಯಲ್ಲಿ ಬರೆದ ಗ್ರಂಥಾದಿಗಳಿಂದ ಆರಂಭ ಮಾಡಿ ಪಾಲಿ ತಿಬೇತಿ ಮೊದಲಾದ ಭಾಷೆಗಳಲ್ಲಿ ಒಂದೇ ಮಾತಿನ ಸಮರ್ಥನೆ ಮಾಡಲ್ಪಟ್ಟಿರುವದು ಕಂಡುಬರುತ್ತದೆ. ಭವಿಷ್ಯತ್ ಕಾಲದಲ್ಲಿ ಈ ವಿಷಯವಾಗಿ ವಿಶೇಷವಾದ ಆವಿಷ್ಕಾರವಾಗಲು ಶಕ್ಯವಿರುವದು.

ಈ ಪ್ರಬಂಧವಲ್ಲಿ ಎಲ್ಲ ದೇವತೆಗಳ ವಿಷಯವು ಬರೆಯಲ್ಪಟ್ಟಿದೆ. ಜನರ ಮನಸಿನಲ್ಲಿ ಅವರ ಆಯುಷ್ಕಾಲದ ಸಂಬಂಧದಿಂದ ಸಮಸ್ಯೆಯು ಉಂಟಾಗಲು ಶಕ್ಯವಿರುವದು. ದೇವತೆಗಳು ನಮ್ಮ ಪೂರ್ವಪುರುಷರು ಸುತರಾಂ ಮಾನವರು ಇದ್ದರು. ಅವರೂ ನಮ್ಮಂತೆಯೇ ಸಾಯುತ್ತಿದ್ದರು, ಎಂಬಲ್ಲಿ ಆಶ್ಚರ್ಯವೇನು? ಆದರೆ ಅವರು ಶೀತಪ್ರಧಾನ ದೇಶದ ಜನರು, ಮತ್ತು ಬ್ರಹ್ಮಚರ್ಯಾದಿ ಹಲವು ಬಗೆಯ ನಿಯಮಗಳನ್ನು ಪಾಲಿಸುತ್ತಿದ್ದರು ಅಂತೇ ನಮಗಿಂತ ಸ್ವಲ್ಪ ಹೆಚ್ಚುಕಾಲ ಬದುಕುತ್ತಿದ್ದರು. ಅವರೆಲ್ಲರೂ ಬ್ರಹ್ಮವಿದರು. ಜೀವನ-ಮೃತ್ಯುಗಳ ರಹಸ್ಯವನ್ನು ಚನ್ನಾಗಿ ಅರಿತಿದ್ದರು. ಮೃತ್ಯುವು ಕೇವಲ ಪರಿವರ್ತನವೆಂದೂ, ಈ ಸಂಸಾರವೂ ಜೀವಿತವೂ ಮಿಥ್ಯೆಯೆಂದೂ, ಕೇವಲ ಬ್ರಹ್ಮವು ಒಂದೇ ಸತ್ಯವು ಎಂಬುದನ್ನು ಅವರು ತಿಳಿದಿದ್ದರು. ಅಂತೇ ಅವರು ಬ್ರಹ್ಮನಾಮರೂಪ ಅಮೃತಪಾನ ಮಾಡಿ 'ಅಮರ' ಎಂಬ ಹೆಸರನ್ನು ಪಡೆದಿದ್ದರು. ಅವರ ಶರೀರವು ಎಂದೂ ಮೃತಿಯನ್ನು ಹೊಂದಿತ್ತಿದ್ದಿಲ್ಲ. ಆದ್ದರಿಂದ 'ಅಮರ' ಎಂಬ ಹೆಸರನ್ನು ಪಡೆದಿದ್ದರೆಂಬುವದು ಸುಳ್ಳು ಯಾಕಂದರೆ ಯೋಗೋಪನಿಷತ್ತಿನಲ್ಲಿ—ಸಾಯಲಾರದವರು ಹಿಂದೆ ಇದ್ದಿಲ್ಲ, ಮುಂದೆಯೂ ಉಂಟಾಗುವದಿಲ್ಲ. ಈ ಇಂದ್ರ. ಬ್ರಹ್ಮ, ವರುಣ, ಕುಬೇರ ಮೊದಲಾದವರು ಯಥಾ ಕಾಲದಲ್ಲಿ ದೇಹತ್ಯಾಗ ಮಾಡಿದರು.

"ಅಮ್ಲಜೋ ಮಹಿಷಶ್ಚೈವ ಕಂಸೋ ಬಾಣಾಸುರಸ್ತಥಾ ।
ಇಂದ್ರಶ್ಚ ವರುಣಶ್ಚೈವ ಕುಬೇರಶ್ಚ ತಥೈವಚ ॥
ಯಕ್ಷಾಶ್ಚೈವಾಥ ಗಂಧರ್ವಾಃ ಸರ್ವೇಚ ಯಮಕಿಂಕರಾಃ ।
ದೈತ್ಯಾಶ್ಚ ದಾನವಾಶ್ಚೈವ ಸರ್ವೇ ಮೃತ್ಯುಂ ಪಥಂ ಗತಾಃ ॥

ಸುಗ್ರೀವಶ್ಚ ಮಹಾತೇಜಾಸ್ತಥಾ ವಾಲಿರ್ಮಹಾ ಬಲಃ ।
ಮಹಾಬಲೋ ಮಹಾತೇಜಾ ಹನುಮಾಂಶ್ಚ ತಥೈವಚ ॥

× × × ×

ಬ್ರಹ್ಮಾದಿಸ್ತಂಭ ಪರ್ಯನ್ತಾಃ ಸರ್ವೇಲೋಕಾಶ್ಚರಾಚರಾಃ ।
ತ್ರೈಲೋಕ್ಯೇ ತಂ ನ ಪಶ್ಯಾಮಿ ಯೋ ಭವೇದಜರಾಮರಃ ॥ "

—ಯೋಗೋಪನಿಷತ್.

ಇಂದ್ರ, ವರುಣ, ಕುಬೇರ, ದೈತ್ಯ, ದಾನವಯಕ್ಷಕಿಂಕರಗಣ, ಹನುಮಾನ್ (ಇವನಿಗೆ ನಾವು ಅಮರನೆನ್ನುತ್ತೇವೆ) ಇಷ್ಟೇ ಅಲ್ಲ ಬ್ರಹ್ಮಾದಿ ದೇವತೆಗಳು ಸಹ ಮೃತ್ಯುಪಥದ ಪಥಿಕರಾಗಿದ್ದಾರೆ ಈ ಪೃಥ್ವಿಯಲ್ಲಿ ಅಜರ ಹಾಗು ಅಮರರು ಯಾರೂ ಇಲ್ಲ.

ರಾಮಾಯಣದಲ್ಲಿಃ—ಸುಗ್ರೀವನು ರಾಮಚಂದ್ರನ ಬಾಣ ಬಿಡುವ ಅದ್ಭುತ ಶಕ್ತಿಯನ್ನು ನೋಡಿ—" ತಾವು ಸಮರದಲ್ಲಿ ಇಂದ್ರ ಮೊದಲಾದ ಎಲ್ಲ ದೇವತೆಗಳನ್ನು ವಧಿಸಲು ಸಮರ್ಥರು ಎಂದ ಮೇಲೆ ವಾಯು ಯಾವದರ ಧೂಳು" ಎಂದು ಅಂದಿರುವನು.

"ಸೇಂದ್ರಾನಪಿ ಸುರಾನ್ ಸರ್ವಾಂಸ್ತ್ವಂ ಬಾಣೈಃ ಪುರುಷರ್ಷಭ।
ಸಮರ್ಥಃ ಸಮರೇ ಹನ್ತುಂ ಕಿಂ ಪುನರ್ವಾಲಿನಂ ಪ್ರಭೋ ॥"

—ಕಿಷ್ಕಿಂಧಾಕಾಂಡ - ೧೨ನೆಯ ಸರ್ಗ.

ಇದರಿಂದ ದೇವತೆಗಳೂ ಸಾಯುತ್ತಿದ್ದರೆಂದು ಕಂಡುಬರುವದಿಲ್ಲವೋ? ಋಗ್ವೇದದಲ್ಲಿ ಅಥವಾ ಅನಂತರದ ರಾಮಾಯಣ ಮಹಾಭಾರತಾದಿ ಗ್ರಂಥಗಳಲ್ಲಿ ಬ್ರಹ್ಮ, ವಿಷ್ಣು, ಶಿವ, ಇಂದ್ರ, ವರುಣ ಮೊದಲಾದವರ ಕಥೆಯ ಉಲ್ಲೇಖವು ಇರುತ್ತದೆ. ಅವರು ಒಬ್ಬರೇ ಪುರುಷರಲ್ಲ ಎಂಬದನ್ನು ಹೇಳುವದೇ ಬೇಡ. ಮೊದಲು ಬ್ರಹ್ಮಾದಿ ದೇವತೆಗಳ ತರುವಾಯದಿಂದಲೇ ಈ ಬ್ರಹ್ಮ, ವಿಷ್ಣು, ಶಿವ ಪ್ರಭೃತಿ ಉಪಾಧಿ ವಿಶೇಷವಾಗಿ ಬಿಟ್ಟವು. ಹೀಗಾಗಲು ಯಥೇಷ್ಟ ಕಾರಣವಿದೆ. ಮೊದಲು ಪ್ರಥಮ ಬ್ರಹ್ಮಾದಿ ದೇವತೆಗಳು ಇಲಾವೃತ ವರ್ಷದಲ್ಲಿ ಇರುವಾಗ ಅಲ್ಲಿ ಆಗುವ ಯಜ್ಞಗಳಲ್ಲಿ ಬ್ರಹ್ಮ, ವಿಷ್ಣು, ಶಿವ, ಇಂದ್ರ ಪ್ರಭೃತಿಗಳು

ಹೋತೃಗಳಾಗಿ ಕಾರ್ಯವಮಾಡುತ್ತಿದ್ದರು. ತಮ್ಮ ತಮ್ಮ ಯೋಗ್ಯತೆ ಮತ್ತು ಉಪಯುಕ್ತತೆಗೆ ಅನುಸಾರವಾಗಿಯೇ ಹೋತೃಗಳು ಕಾರ್ಯದ ಭಾರವನ್ನು ವಹಿಸುತ್ತಿದ್ದರು. ಮೊದಲನೆಯ ಬ್ರಹ್ಮನು (ಇವನು ಕಶ್ಯಪ ಋಷಿಯ ಮಗ) ಚತುರ್ವೇದವಿದನಿದ್ದನು; ಅದಕ್ಕೋಸುಗ ಅವನ ಹೆಸರು ಚತುರ್ಮುಖ ಅಥವಾ ಚತುರಾನನ ಎಂದು ಇತ್ತು. ನಾಲ್ಕು ಕಡೆಗೆ ನಾಲ್ಕು ಮುಖಗಳಿದ್ದನೆಂದಲ್ಲ. ವೇದವೆಂದರೆ ಜ್ಞಾನ. ಬ್ರಹ್ಮನು ಒಳ್ಳೇ ಜ್ಞಾನಿಯಾಗಿದ್ದನು. ನಾಲ್ಕೂ ಕಡೆಗೆ ಒಳ್ಳೇ ಬುದ್ಧಿಯು ಆಡು ತ್ತಿತ್ತು. ಅಂತೇ ಅವನು ಚತುರಾನನ ಅಥವಾ ಚತುರ್ಮುಖನೆಂದು ಹೇಳಲ್ಪಡುತ್ತಿದ್ದನು. ಈ ಪ್ರಥಮ ಬ್ರಹ್ಮನ ಮರಣದ ತರುವಾಯ, ಯಾವನು ಎಲ್ಲಕ್ಕೂ ಹೆಚ್ಚು ಜ್ಞಾನಿಯೆಂದು ವಿವೇಚಿತನಾಗುತ್ತಿದ್ದನೋ ಅವನಿಗೇ ಈ 'ಚತುರ್ಮುಖ' ಎಂಬ ಹೆಸರು ಕೊಡಲ್ಪಡುತ್ತಿತ್ತು. ಹಾಗು ಅವನೇ ಯಜ್ಞದಲ್ಲಿ ಬ್ರಹ್ಮ-ಹೋತೃವಿನ ಕಾರ್ಯವನ್ನು ಮಾಡು ತ್ತಿದ್ದನು. ವಿಷ್ಣುವು ತಪೋಲೋಕದ ರಾಜನು; ಅವನೇ ಹೋತೃವಿನ ಕಾರ್ಯವನ್ನು ಮಾಡುತ್ತಿದ್ದನು. ಹೀಗೆ ಯೋಗ್ಯತೆಗನುಸಾರವಾಗಿ ಇಂದ್ರ ವರುಣ, ಶಿವ, ಸೂರ್ಯ, ಚಂದ್ರ ಮೊದಲಾದ ಹೆಸರುಗಳು ಪುರುಷಪರಂಪರೆಯಲ್ಲಿ ನಡೆದು ಬಂದವು. ಈ ಯುಕ್ತಿಯ ಸತ್ಯತೆ ಗೋಸುಗ ನಾವು ಭಾರತವರ್ಷೀಯ ಯಜ್ಞದ ಪದ್ಧತಿಯನ್ನು ಹೇಳು ತ್ತೇವೆ.

ಈಗ ಸಹ ನಮ್ಮ ದೇಶದಲ್ಲಿ ಯಾವದೊಂದು ಯಜ್ಞವನ್ನು ಮಾಡಬೇಕಾದರೆ, ಅದರಲ್ಲಿ ಬ್ರಹ್ಮ, ವಿಷ್ಣು, ಇಂದ್ರ, ವರುಣ ಮೊದ ಲಾದ ಹೋತಾರರ ಆವಶ್ಯಕತೆ ಇರುವದು. ಈ ಬ್ರಹ್ಮ, ವಿಷ್ಣು, ಇಂದ್ರ ಪ್ರಭೃತಿ ಹೋತಾರರ ಕಾರ್ಯವನ್ನು ನಾವು ಸ್ವತಃ ಮಾಡುತ್ತೇವೆಂದು ಹೇಳುವದೇ ಬೇಡ. ಇದರಿಂದ ಪೂರ್ವದಲ್ಲಿ ಸ್ವರ್ಗದೊಳಗೆ ಯಜ್ಞ ಮಾಡುವ ಎಂತಹ ಪದ್ಧತಿ ಇತ್ತು ಎಂಬುವದು ಗೊತ್ತಾಗುತ್ತದೆ.

# ಶ್ವಪಚಯ್ಯ-ಸಾಮವೇದಿಗಳು.

ಶ್ವಪಚಯ್ಯನೆಂಬ ಅಸ್ಪೃಶ್ಯನೂ, ಸಾಮವೇದಿಯೆಂಬ ವಿದ್ವಾಂಸನಾದ 'ಬ್ರಾಹ್ಮಣನೂ'. ಛತ್ತೀಸಪುರವೆಂಬ ಗ್ರಾಮದಲ್ಲಿ ಇರುತ್ತಿದ್ದರು. ಇವರಲ್ಲಿ ಸಾಮವೇದಿಯು ಯೋಗಾಭ್ಯಾಸನಿರತನಾಗಿ ಸಿದ್ಧಿಯನ್ನು ಸಂಪಾದಿಸಿ ಗಗನ ಮಾರ್ಗವಾಗಿ ಸಂಚಾರ ಮಾಡಲು ಸಾಮರ್ಥ್ಯವನ್ನು ಹೊಂದಿದವನಾಗಿದ್ದನು. ಈ ಉಭಯತರು ಶಿವಶರಣರಲ್ಲಿ ಗಣಿಸಲ್ಪಟ್ಟು ಪ್ರಸಿದ್ಧರಾಗಿದ್ದಾರೆ. ಬಸವೇಶ್ವರನೂ ಕೂಡ ಇವರ ಯೋಗ್ಯತೆಯನ್ನು ತನ್ನ ವಚನಗಳಲ್ಲಿ ಬಹಳ ಹೊಗಳಿದ್ದಾನೆ. ಅದು ಹೇಗೆಂದರೆ—

(೧) ನೆರೆನಂಬೋ ನೆರೆನಂಬೋ ದರದುರವಿಲ್ಲದೆ ಸಾಮವೇದಿಗಳಂತೆ. ನೆರೆನಂಬೋ ನೆರೆನಂಬೋ ದಾಸಮುಗ್ಗಳೆಯಂತೆ. ನೆರೆನಂಬೋ ನೆರೆನಂಬೋ ಸಿರಿಯಾಳ ಚಂಗಳೆಯಂತೆ. ನೆರೆನಂಬೋ ನೆರೆನಂಬೋ ಸಿಂಧುಬಲ್ಲಾಳನಂತೆ. ನಂಬಿದೆಯಾದರೆ ತನ್ನನೀವ ಕೂಡಲಸಂಗಮದೇವ.

ಇದರಲ್ಲಿ ಬಸವೇಶ್ವರನು ಸಾಮವೇದಿಯನ್ನು ಉಚ್ಚ ಸ್ಥಾನವನ್ನು ಹೊಂದಿದ ಶಿವಶರಣರ ಪಂಙ್ತಿಯಲ್ಲಿ ಇರಿಸಿದ್ದಾನೆ.

(೨) ಅಪ್ಪನು ಡೋಹರಕಕ್ಕನಾಗಿ, ಮುತ್ತೈಯ್ಯ ಚನ್ನಯ್ಯನಾದರೆ ಆನು ಬದುಕಿದೆನು. ಮತ್ತಾ ಶ್ವಪಚಯ್ಯನ ಸನ್ನಿಧಿಯಿಂದ ಭಕ್ತಿಯ ಸದ್ಗುಣವ ನಾನರಿವೆನಯ್ಯ. ಕಷ್ಟಜಾತಿ ಜನ್ಮದಲ್ಲಿ ಜನಿಸಿದೆ. ಎನಗಿದು ವಿಧಿಯೇ ಕೂಡಲಸಂಗಮದೇವಾ?

ಇದರಲ್ಲಿ ಬಸವೇಶ್ವರನು ಕೆಲವು ಅಸ್ಪೃಶ್ಯರನ್ನು ನೆನೆಯುತ್ತ ಅವರೇ ಶ್ರೇಷ್ಠ ಜಾತಿಯುವರು. ನಾನು ಬ್ರಾಹ್ಮಣನಾದರೂ ಅವರಿಗಿಂತಲೂ ಕನಿಷ್ಟ ಜಾತಿಯುವನು, ಎಂದು ಹೇಳಿಕೊಳ್ಳುತ್ತ ಇವರಲ್ಲಿ ಶ್ವಪಚಯ್ಯನಿಂದ ಭಕ್ತಿಯು ಸದ್ಗುಣವನ್ನು ಅರಿತೆನೆಂದು ಹೇಳುತ್ತಾನೆ.

(೩) ಎಮ್ಮವರಧಿಕರು ಎಲ್ಲರಿಂದಲು ಅಧಿಕರು. ಪಾಕವ ಮಾಡುವ ಭಾಂಡ ಸೊಣಗನ ಡೋವಿಗೆಯಯ್ಯ. ಕೆರಹಿನಲ್ಲಿ ಮುಚ್ಚುವದು ಆವಾಗಮವಯ್ಯ? ಕೂಡಲಸಂಗಮದೇವ ನಿಮ್ಮ ವಚನವಿಂತೆಂದುದು. ಭವಿ ನೋಡಿದ ಓಗರ ಲಿಂಗಾರ್ಪಿತವಾಗದೆಂದು.

ಬಸವೇಶ್ವರನು ಇದರಲ್ಲಿ ಚನ್ನಯ್ಯನ ಪೊಣಾಡವನ್ನು ವಿವರಿಸುತ್ತ ಬ್ರಾಹ್ಮಣನು ಎಷ್ಟು ಹೆಚ್ಚಿನ ಯೋಗಸಾಮರ್ಥ್ಯವನ್ನು ಹೊಂದಿದವನಾದರೂ ಕೂಡ ಅವನ ಕ್ರಿಯೆಗಳು ಲಿಂಗಾರ್ಪಿತವಾಗಲಾರವೆಂದು ಹೇಳುತ್ತಾನೆ.

(೪) ಶ್ವಪಚನಾದರೇನು? ಲಿಂಗಭಕ್ತನೇ ಕುಲಜನು. ನಂಬಿ ನಂಬದಿದ್ದರೆ ಸಂದೇಹಿ ನೋಡಾ. ಕಟ್ಟಿದರೇನು, ಮುಟ್ಟಿದರೇನು, ಹೂಸಿದರೇನು ಮನಮುಟ್ಟದನ್ನಕ್ಕ? ಭಾವ ಶುದ್ಧವಿಲ್ಲದವಂಗೆ ಭಕ್ತಿ ನೆಲೆಗೊಳ್ಳದು ಕೂಡಲಸಂಗಮದೇವನೊಲಿದವಂಗಲ್ಲದೆ.

ಇದರಲ್ಲಿ ಶ್ವಪಚನು ಭಾವಶುದ್ಧನಾದುದರಿಂದ ಅವನೇ ಶ್ರೇಷ್ಠ ಕುಲದವನೆಂದು ಅವನನ್ನು ಹೊಗಳುತ್ತಾನೆ.

ಬಸವೇಶ್ವರನ ಈ ವಚನಗಳಿಂದ ಶ್ವಪಚಯ್ಯ ಸಾಮವೇದಿಗಳು ಪುರಾತನ ಕಾಲದಿಂದಲೂ ಶ್ರೇಷ್ಠ ಶರಣರೆಂದು ತಿಳಿಯಲ್ಪಟ್ಟಿದ್ದು ಕಂಡು ಬರುತ್ತದೆ.

ಉತ್ತರ ದೇಶದಲ್ಲಿ ಛತ್ತೀಸಪುರವೆಂಬ ಗ್ರಾಮವಿರುತ್ತದೆ. ಅದು ಒಂದು ಅಗ್ರಹಾರವು. ಅಂದರೆ ವಿದ್ವಾಂಸರಾದ ಬ್ರಾಹ್ಮಣರು ವಾಸಿಸುವ ಸ್ಥಳವು. ಅಲ್ಲಿ ಸಾಮವೇದಿ ಎಂಬ ಹೆಸರಿನ ಒಬ್ಬ ಬ್ರಾಹ್ಮಣನು ವಾಸ ಮಾಡುತ್ತಿದ್ದನು. ಅವನು ಪಾಪರಹಿತನು, ಅತ್ಯಂತ ವಿದ್ವಾಂಸನು, ತರ್ಕ ತಂತ್ರ ವ್ಯಾಕರಣಗಳಲ್ಲಿ ಬಲ್ಲಿದನು ಮತ್ತು ವಾಗ್ಮಿಯು ಆಗಿದ್ದನು. ಅವನಿಗೆ ೩೫೦೦ ಜನ ಶಿಷ್ಯರು ಇದ್ದು ಅವರೂ ಈ ಗ್ರಾಮದಲ್ಲಿದ್ದರು. ಈ ಪಟ್ಟಣದ ಕೆಳಗೆ ೩೬ ಗ್ರಾಮಗಳು ಇದ್ದು, ಈ ಗ್ರಾಮಗಳನ್ನು ಅರಸನು ಸಾಮವೇದಿಗೆ ಅಗ್ರಹಾರವಾಗಿ ದಾನ ಕೊಟ್ಟಿದ್ದನು. ಅಲ್ಲಿ ಅವನು ಸರ್ವಜನರಿಂದ ವಂದ್ಯನಾಗಿ ಸುಖದಿಂದ ವಾಸ ಮಾಡುತ್ತಿದ್ದನು ಹೀಗಿರಲು ಅವನ ಆಚರಣೆಯಿಂದ ಅವನಲ್ಲಿ ಒಂದು ಅದ್ಭುತವಾದ ಶಕ್ತಿಯು ಉಂಟಾಗಿತ್ತು. ಅದರ ಮೂಲಕ ಅವನು ಆಕಾಶದಲ್ಲಿ ಸಂಚಾರ ಮಾಡುವ ಸಾಮರ್ಥ್ಯವನ್ನು ಹೊಂದಿದವನಾಗಿದ್ದನು.

ಹೀಗಿರುವಲ್ಲಿ ಒಂದು ದಿವಸ ಸಾಮವೇದಿಯು ಆರಣವನ್ನು ಓದಬೇಕೆಂದು ಬಯಸಿ ತನ್ನ ಶಿಷ್ಯರನ್ನೊಡಗೂಡಿ ಒಂದು ಅರಣ್ಯ ಪ್ರದೇ

ಶಕ್ಕೆ ಹೋಗಿ ಅಲ್ಲಿ ಏಕಾಂತ ಸ್ಥಳವನ್ನು ಆಯ್ದು ಅಲ್ಲಿ ಒಂದು ಅಶ್ವತ್ಥ ವೃಕ್ಷದ ಕೆಳಗೆ ಕುಳಿತುಕೊಂಡು ವೇದಾಧ್ಯಯನ ಮಾಡುವ ರೀತಿಯನ್ನು ಅವರಿಗೆ ಹೇಳಲಾರಂಭಿಸಿದನು. ಅವನು ಇದು ಋಚವು, ಇದು ಅರ್ಧ ಋಚವು, ಇದು ಅರೆಪಾದವು, ಇದು ಪೂರ್ಣಪಾದವು ಇದು ಉದಾತ್ತಾನುದಾತ್ತ ಸ್ವರವು, ಇದು ಋಕ್ಕುಗಳ ಛಂದಸ್ಸು, ಇವರು ಅವುಗಳಿಗೆ ಋಷಿಗಳು ಮತ್ತು ದೇವತೆಗಳು, ಈ ಮೊದಲಾದ ವಿಷಯಗಳನ್ನು ತನ್ನ ಶಿಷ್ಯರಿಗೆ ಅರುಹುತ್ತ ಮಧ್ಯಾಹ್ನದ ವರೆಗೂ ಅಲ್ಲಿ ಕಾಲಕಳೆದನು. ಆಮೇಲೆ ಅವನು ತನ್ನ ಗ್ರಾಮಕ್ಕೆ ಬರಲು ಸಿದ್ಧನಾಗಿ, ತಾನು ಆಕಾಶ ಮಾರ್ಗದಿಂದ ಹೊರಟನು ಮತ್ತು ಅವನ ಶಿಷ್ಯರು ಪಾದಚಾರಿಗಳಾಗಿ ಪಟ್ಟಣಕ್ಕೆ ಹೊರಟರು.

ಹೀಗಿರಲು ಅವನ ಗ್ರಾಮದಲ್ಲಿ ಶ್ವಪಚನೆಂಬ ಹೆಸರಿನ ಒಬ್ಬ ಅಸ್ಪೃಶ್ಯನಿರುತ್ತಿದ್ದನು. ಅವನು ಕೇವಲ ಶಿವಭಕ್ತಿಯುಳ್ಳವನು, ಲಿಂಗಾರ್ಚಕನು. ಅವನು ಅದೇ ದಿವಸ ತಾನು ಲಿಂಗಾರ್ಚನೆ ಮಾಡಬೇಕೆಂದು ಬಯಸಿ ಸಾಮವೇದಿಯು ಹೋಗಿದ್ದ ಅರಣ್ಯವನ್ನು ಪ್ರವೇಶಿಸಿ, ಅಲ್ಲಿ ಹೂ ಪತ್ರೆ, ಪುಷ್ಪಗಳು ತುಂಬಿಕೊಂಡಂಥ ಒಂದು ಏಕಾಂತ ಸ್ಥಳವನ್ನು ಆಯ್ದು, ಸುತ್ತಲೂ ಇದ್ದ ಅಶೋಕೆ ಮಾವುಗಳ ತಳಿರುಗಳ ಹಾಸಿಕೆಯನ್ನು ಹಾಸಿ, ತನ್ನ ಮನಸ್ಸಿನಲ್ಲಿ ಭಕ್ತಿಯು ತುಂಬಿರಲು, ನದಿಯಿಂದ ಅಗ್ಘವಣಿಯನ್ನು ತಂದು, ಹೂವುಗಳನ್ನು ಆರಿಸಿಕೊಂಡು ಬಂದು, ತನ್ನ ಸೆಜ್ಜೆಯಿಂದ ಲಿಂಗವನ್ನು ಹೊರಗೆ ತೆಗೆದು, ಲಿಂಗಾರ್ಚನೆಯನ್ನು ಮಾಡುತ್ತ, ಲಿಂಗಧ್ಯಾನದಲ್ಲಿ ಮಗ್ನನಾಗಿ ಕುಳಿತನು.

ಲಿಂಗ ಪೂಜೆಯು ಮುಗಿದ ಬಳಿಕ ಅವನು ತನ್ನ ಜಾತಿಗನು ಗುಣವಾದ ಆಹಾರ ಪದಾರ್ಥಗಳನ್ನು ಸಜ್ಜುಗೊಳಿಸಿ ತನ್ನ ಹತ್ತಿರ ಪಾತ್ರೆಗಳಿಲ್ಲದಿರಲು ಒಂದು ನಾಯಿಯ ತಲೆಬುರುಡೆಯಲ್ಲಿ ಅವುಗಳ ಪಾಕವನ್ನು ಮಾಡತೊಡಗಿದನು! ಆಗ ಮಧ್ಯಾಹ್ನವಾಯಿತು.

ಅಷ್ಟರಲ್ಲಿ ಸಾಮವೇದಿಯು ಆಕಾಶ ಮಾರ್ಗದಿಂದ ಗಮನ ಮಾಡುತ್ತ ಶ್ವಪಚನಿದ್ದ ಸ್ಥಳದ ಮೇಲಿಂದಲೇ ಹಾಯ್ದುಹೋಗುತ್ತಿದ್ದನು. ಶ್ವಪಚನು ಅವನನ್ನು ಕಂಡು:—ಈತನು ಭವಿಯು, ಲಿಂಗ

ವಿಲ್ಲದವನು. ಆತನ ನೆಳಲು ನನ್ನ ಆಹಾರ ಪದಾರ್ಥಗಳ ಮೇಲೆ ಬೀಳಬಾರದೆಂದು ಅಲ್ಲಿಯೇ ಇದ್ದ ಒಂದು ಕೆರಹಿನಿಂದ ಆ ಡೋವಿಗೆಯನ್ನು ಮುಚ್ಚಿದನು. ಅದನ್ನು ಸಾಮವೇದಿಯು ಕಂಡು ಈ ಶ್ವಪಚನು ಕುದಿಸುತ್ತಿರುವದು ಕಿಸುಕುಳ ಪದಾರ್ಥವು. ಅದನ್ನು ಅವನು ಡೋವಿಗೆ ಮುಚ್ಚಿಟ್ಟಿದ್ದಾನೆ. ಆದರೆ ನಾನು ಅದನ್ನು ನೋಡಬಾರದೆಂದು ಕೆರಹಿನಿಂದ ಮುಚ್ಚಿದನು. ಇದು ಯಾವ ಶಾಸ್ತ್ರವು! ಇವನೆಂಥ ಭಕ್ತನು!! ಈತನು ನನ್ನ ಅವಹೇಲನೆ ಮಾಡುತ್ತಾನೆ ಇವನನ್ನು ನೋಡಬೇಕು ಎಂದು ಗರ್ವದಿಂದ ಮತ್ತು ಕ್ರೋಧಾವೇಶದಿಂದ ನುಡಿಯಲು ಆ ಕ್ಷಣವೇ ಅವನ ಯೋಗಶಕ್ತಿಯು ಬಯಲಾಗಿ ಹೋಯಿತು. ಮತ್ತು ಅಂತರಿಕ್ಷದಲ್ಲಿ ಬರುತ್ತಿದ್ದವನು ಥಟ್ಟನೆ ನೆಲಕ್ಕಿಳಿದು ಪಾದಚಾರಿಯಾದನು.

ಹೀಗಾಗಲು ಏನು ಕಾರಣವೆಂದು ಅವನು ಭಯಭೀತನಾದನು. ಇದು ಶ್ವಪಚಯ್ಯನ ಮೂಲಕವೇ ಆಗಿರಬಹುದೆಂದು ಎಣಿಸಿ ಅವನಿದೆಡೆಗೆ ಬಂದು ಅವನನ್ನು ನುಡಿಸತೊಡಗಿದನು. ಆದರೆ ಶ್ವಪಚಯ್ಯನು ಒಂದು ನುಡಿಯನ್ನಾದರೂ ನುಡಿಯಲಿಲ್ಲ. ಏನು ಮಾತಾಡಿಸಿದರೂ ಅವನು ಮಾತಾಡಲಿಲ್ಲ. ಆಗ ಸಾಮವೇದಿಯು ಇವನು ಬಲು ಸೊಕ್ಕಿನವನೆಂದು ಸಿಟ್ಟಾಗಿ ತನ್ನ ಗೃಹಕ್ಕೆ ತೆರಳಿದನು.

ಆದರೆ ಮನೆಗೆ ಬಂದ ಬಳಿಕ ಆ ತನ್ನ ಮೊದಲಿನ ಸತ್ವವು ಹೊರಟು ಹೋದುದನ್ನು ತಿಳಿದು ಹಂಬಲಿಸಹತ್ತಿದನು. ಇದು ಶ್ವಪಚನ ಕೃತಕವಿರಬಹುದೆಂದು ಮರುದಿವಸ ಅವನನ್ನು ಕಾಣಲು ಹೋದನು. ಆದರೆ ಆ ದಿವಸವೂ ಕೂಡ ಅವನು ಅವನೊಡನೆ ಮಾತಾಡಲಿಲ್ಲ. ಆಗ ಅವನು ಮನನೊಂದು ಹಿಂದಿರುಗಿ ಬಂದು ಮನೆಯಲ್ಲಿ ಖಮ್ಮಳಿಸುತ್ತ ಕುಳಿತನು.

ಆಗ ಪರಮಾತ್ಮನು ಸಾಮವೇದಿಯ ಮನಸ್ಸು ಕೆಲವಂಶದಿಂದ ಬದಲಾದುದನ್ನು ತಿಳಿದವನಾಗಿ ಆ ದಿವಸ ರಾತ್ರಿ ಅವನ ಕನಸಿನಲ್ಲಿ ಬಂದು—ಸಾಮವೇದಿಯೇ, ನೀನು ಹೀಗೆ ಶ್ವಪಚಯ್ಯನನ್ನು ಕಾಣಲಿಕ್ಕೆ ಹೋಗಬೇಡ. ಅವನು ಪರಮ ಶಿವಭಕ್ತನು. ಆದುದರಿಂದ ನೀನು ಶಿವಲಾಂಛನ ಧಾರಿಯಾಗಿ ಅವನನ್ನು ಕಾಣು ಎಂದು ಹೇಳಲು ಸಾಮವೇದಿಯು ಬೆಳಿಗ್ಗೆ ವಿಭೂತಿ ರುದ್ರಾಕ್ಷ ಧಾರಣವನ್ನು ಮಾಡಿಕೊಂಡು

ಶಿವಮಂತ್ರವನ್ನು ಉಚ್ಚರಿಸುತ್ತ ಶ್ವಪಚಯ್ಯನು ಯಾವ ಅರಣ್ಯ ಭಾಗ ದಲ್ಲಿದ್ದನೋ ಅಲ್ಲಿಗೆ ಬಂದು ಅವನನ್ನು ಮಾತಾಡಿಸಹತ್ತಿದನು. ಶ್ವಪಚ ಯ್ಯನು ಅವನು ಧರಿಸಿದ ಶಿವಲಾಂಛನಗಳನ್ನು ನೋಡಿ ಸಮಾಧಾನ ಹೊಂದಿ ಅವನೊಂದಿಗೆ ಮಾತಾಡಲನುವಾದನು.

ಆಗ ಸಾಮವೇದಿಯು ಅವನಿಗೆ—ನಾನು ಬರುವಾಗ ಕೆರಹಿನಿಂದ ನೀವು ಕುದಿಸುವ ಪಾತ್ರೆಯನ್ನು ಏಕೆ ಮುಚ್ಚಿದಿರಿ, ಎಂದು ಕೇಳಲು ಅವನು—ಎಲೆ ವಿಪ್ರ, ಲಿಂಗಾರ್ಚನೆಯ ಕಾಲದಲ್ಲಿ ಭವಿಗಳೊಡತಣ, ಭವಿಗಳ ಸೋಂಕು, ಇರಕೂಡದೆಂದು ಹೇಳಿದನು.

ಅದಕ್ಕೆ ಸಾಮವೇದಿಯು ಸಮ್ಮತಿಸದೆ—ಇಗೋ ನೋಡು, ನೀನು ಕುದಿಸುವ ಅನ್ನದ ಸುತ್ತಲೂ ಗಿಡುಮರಗಳಿವೆ. ಅವು ಭಕ್ತರೇ ? ಇಲ್ಲಿ ಮೃಗ ಪಕ್ಷಿಗಳು ಸಂದಣಿಸುತ್ತ ಹಾರಾಡುತ್ತಲಿವೆ- ಅವು ಭಕ್ತರೇ ? ಅವುಗಳು ನಿನ್ನ ಓಗರವನ್ನು ನೋಡುವದಿಲ್ಲವೇ ? ಎಂದು ಕೇಳಿದನು.

ಅದಕ್ಕೆ ಶ್ವಪಚನು—ಈ ಗಿಡುಮರದ ಹೂ ಪತ್ರೆಗಳು ಶಂಭುವಿಗೆ ಸಲ್ಲುತ್ತವೆ. ಈ ಮರಕ್ಕೆ ಕಾಮ ಉಂಟೇ ? ಈ ಲತೆಗೆ ಕ್ರೋಧ ಉಂಟೇ? ಆದರೆ ನಿನ್ನಲ್ಲಿ ಕ್ರೋಧ, ಅಭಿಮಾನಗಳು ತುಂಬಿವೆ. ಆದುದರಿಂದ ನಿನ್ನ ಸೋಂಕು ಎಷ್ಟು ಮಾತ್ರವೂ ನನ್ನ ಓಗರಕ್ಕೆ ತಗಲಬಾರದು. ಇಲ್ಲಿ ಮೃಗಗಳಿರುವದು ನಿಜವು. ಆದರೆ ಅವು ಹುಲ್ಲನ್ನು ತಿಂದು ತಿಳಿನೀರನ್ನು ಕುಡಿಯುತ್ತಿವೆ. ಅವು ಆರಿಗೂ ಬಾಧೆ ಮಾಡುವದಿಲ್ಲ. ಆದರೆ ನಿನ್ನದು ಕುಭೋಜನವು. ನೀನು ಅಹಂಕಾರಿಯು. ಮಾಯಾಮೋಹದಲ್ಲಿ ಸಿಲುಕಿ ದವನು. ನಾನು ಗಗನದಲ್ಲಿ ಬರುತ್ತೇನೆಂಬ ಅಹಂಕಾರ ನಿನ್ನಲ್ಲಿದೆ. ಆದರೆ ಗಗನದಲ್ಲಿ ಹಕ್ಕಿ ಪಣ್ಣಲೆಗಳು ಹಾರುವದಿಲ್ಲವೇ ? ನೀನು ಪಂಚಮುಖನನ್ನು ಪೂಜಿಸದ ಪಾಪಿಯು. ಆದುದರಿಂದ ನೀನು ಗಿಡ ಗಳು, ಮರಗಳು, ಮೃಗಗಳು, ಇವುಗಳಿಗಿಂತಲೂ ಕನಿಷ್ಟನು. ನಿನ್ನಂ ಥವನನ್ನು ಭಕ್ತರು ಈಕ್ಷಿಸಲಾರರು, ಎಂದು ಶ್ವಪಚನು ಅವನನ್ನು ಜರಿದು ನುಡಿದನು.

ಆ ಮೇಲೆ ಶ್ವಪಚನು ಸಾಮವೇದಿಯು ನೆಳಲು ಬಿದ್ದ ತನ್ನ ಆಹಾ ರದ ಭಾಗವು ಕೊಳೆತು ದುರ್ಗಂಧವಾದುದನ್ನೂ ತನ್ನ ಕೆರಹ ಮುಚ್ಚಿದ ಭಾಗವು ಪುಷ್ಪರೂಪವಾಗಿ ಸುಗಂಧವನ್ನು ಬೀರುತ್ತಿದ್ದುದನ್ನೂ ಅವನಿಗೆ ತೋರಿಸಿದನು.

ಹೀಗಾದುದನ್ನು ಸಾಮವೇದಿಯು ಕಂಡು ಬೆರಗಾದನು. ಆಗ ಅವನು ತನ್ನ ಮರಹನ್ನು ತಿಳಿಯಲು ಅವನ ಮನಸ್ಸಿನಲ್ಲಿ ಭಕ್ತಿಯು ಹೊರ ಹೊಮ್ಮಿತು ಅವನು ಶ್ವಪಚನಿಗೆ ನಮಸ್ಕಾರ ಮಾಡಿ— ನಾನು ಸರ್ವಾಪರಾಧಿಯು, ನನ್ನನ್ನು ಕ್ಷಮಿಸು, ನನಗೆ ಲಿಂಗೋಪದೇಶವನ್ನು ಮಾಡು, ಎಂದು ಬಿನ್ನವಿಸಿಕೊಂಡನು.

ಆಗ ಶ್ವಪಚನು ಅವನನ್ನು ಸನಿಯದಲ್ಲಿ ಕುಳ್ಳಿರಿಸಿಕೊಂಡು, ಪದ್ಮಾಸನದಲ್ಲಿರಿಸಿ, ಹರನ ರೂಪನ್ನು ಅವನ ಚಿತ್ತದೊಳಗಿರಿಸಿ, ತನ್ನ ಹಸ್ತವನ್ನು ಅವನ ಮಸ್ತಕದಲ್ಲಿ ಇಟ್ಟು, ಕರ್ಣದಲ್ಲಿ ಪಂಚಾಕ್ಷರಿಯನರುಪಿ, ಶಿವಲಿಂಗ ನಿಜಮೂರ್ತಿಯ ರೀತಿಯನ್ನು ಅವನಿಗೆ ತಿಳಿಸಿ ಲಿಂಗೋಪದೇಶವನ್ನು ಮಾಡಿದನು. ಆಗ ಅವನ ಕುಲಛಲಮುದವಳಿಯಿತು. ಶಿವಭಕ್ತಿ ನೆಲಿಸಿತು. ಭವಿತನವು ಹೋಯಿತು. ಜ್ಯೋತಿಯಿಂದ ಜ್ಯೋತಿಯನ್ನು ಹೊತ್ತಿಸಿದ ತೆರನಾಯಿತು. ಅವರಿಬ್ಬರೂ ಗುರುಶಿಷ್ಯರಾಗಿ ಒಬ್ಬರೊಳಗೊಬ್ಬರಾದರು. ಹೀಗೆ ಶ್ವಪಚಯ್ಯನಿಂದ ಸಾಮವೇದಿಯು ಶಿವತತ್ವವನ್ನು ಹೊಂದಿ ತನ್ನ ಪುರಕ್ಕೆ ಆಗಮಿಸಿದನು.

ಅವನು ಅಲ್ಲಿಗೆ ಬಂದ ಬಳಿಕ ಅವನ ಶಿಷ್ಯರು ಅವನನ್ನು ಕಂಡು— ನಿಮಗೆ ಇದೇನಾಯಿತು, ಹೀಗೇಕಾದಿರಿ? ಎಂದು ಆಶ್ಚರ್ಯಬಟ್ಟು ಕೇಳಲು ಅವನು ತನಗೆ ದೊರಕಿದ ಶಿವಜ್ಞಾನವನ್ನು ಎಲ್ಲರಿಗೂ ಶಿವಾಗಮೋಕ್ತಿಯಿಂದ ಅರುಹಿದನು. ಆಗ ಅವರೂ ಕೂಡ ಅವನಿಂದ ಲಿಂಗದೀಕ್ಷೆಯನ್ನು ಹೊಂದುವವರಾದರು. ಹೀಗಾದ ಬಳಿಕ ಛತ್ರೀಸಪುರವು ಎಲ್ಲಿ ನೋಡಿದಲ್ಲಿ ಶಿವಮಯವಾಯಿತು. ಮನೆ ಮನೆಗಳಲ್ಲಿ ಲಿಂಗಾರ್ಚನೆಯು ತೊಳಗಹತ್ತಿತು. ಹೀಗೆ ಆ ಪುರದಲ್ಲಿ ಶಿವಭಕ್ತಿ ಸಂಭ್ರಮವು ಮಹತ್ತರವಾಗಿ ಬೆಳೆಯಿತು.

ಹೀಗೆ ಕೆಲವು ಮಾಸಗಳು ಸಂದಿ ಹೋದವು. ಮುಂದೆ ಒಂದಾನೊಂದು ದಿನ ಸಾಮವೇದಿಯ ತಂದೆಯ ದಿನವು ಬರಲು ಅದನ್ನು ಮಾಡಲು ಪಟ್ಟಣದಲ್ಲಿ ಒಬ್ಬರಾದರೂ ವಿಶ್ವೇದೇವರು ಅವನಿಗೆ ದೊರೆಯಲಿಲ್ಲ. ಆಗ ಅವನು ಚಿಂತಿಸುತ್ತ ಅರಣ್ಯದಲ್ಲಿದ್ದ ತನ್ನ ಗುರುವಾದ ಶ್ವಪಚನಲ್ಲಿಗೆ ಬಂದು ಅವನಿಗೆ—ನಾಳೆ ನನ್ನ ತಂದೆಯ ದಿನವವೆ. ತಾವು ಆಗ ವಿಶ್ವೇದೇವರಾಗಿ ಬಂದು ಕರುಣಿಸಬೇಕು, ಎಂದು ಹೇಳಿಕೊಳ್ಳಲು, ಶ್ವಪಚನು— ಮರುಳೇ ಪಿತೃದಿನ ಮಾಡುವದು ನಮಗೆ

ಸಲ್ಲದು. ಅದು ಶರಣರ ಮಾರ್ಗವಲ್ಲ. ಆದರೆ ಒಂದು ವೇಳೆ ನಿನಗೆ ವಿಶ್ವೇದೇವರು ಬೇಕಾದಲ್ಲಿ ನಾಳೆ ಶಿವನು ಸ್ವತಃ ನಿನ್ನಲ್ಲಿಗೆ ಬರುವನು, ಎಂದು ನುಡಿಯಲು ಅವನು ಬಂದಿದ್ದಾನೆಂಬುದಕ್ಕೆ ಕುರುಹು ಆವುದು ಎಂದು ಕೇಳಲು, ಅವನು ಶ್ವಪಚನ ವೇಷದಿಂದಲೇ ನಿನ್ನಲ್ಲಿಗೆ ಬರುವನು ಎಂದು ಹೇಳಿ ಅವನನ್ನು ಮನೆಗೆ ಕಳುಹಿದನು.

ಮರುದಿನ ಸಾಮವೇದಿಯು ಶಾಕಪಾಕಾದಿಗಳನ್ನು ಸಿದ್ಧಪಡಿಸಿ ಮನೆಗೆ ಗುಡಿ ತೋರಣಗಳನ್ನು ಕಟ್ಟಿ ಸಿದ್ಧನಾಗಿ ಪರಮಾತ್ಮನ ಬರವನ್ನು ಈಕ್ಷಿಸುತ್ತ ಕುಳಿತನು. ಅಷ್ಟರಲ್ಲಿ ಈಶ್ವರನು ಒಬ್ಬ ಶ್ವಪಚನ ವೇಷವನ್ನು ಧಾರಣ ಮಾಡಿ ಒಂದು ಸತ್ತ ಕರುವನ್ನು ಹೊತ್ತುಕೊಂಡು ಕಯ್ಯಲ್ಲಿ ಸಂಬಳಿಗೋಲು ಹಿಡಿದುಕೊಂಡು ಸಾಮವೇದಿಗಳ ಪಿತೃಕುಲ ಸಹಿತವಾಗಿ ಅವನ ಮನೆಗೆ ಬಂದನು. ಸಾಮವೇದಿಯು ಅವನ ಕೊರಳಲ್ಲಿ ಲಿಂಗವಿರುವದನ್ನು ಕಂಡು ಇವನೇ ಪರಮಾತ್ಮನೆಂದು ತಿಳಿದು ಹರುಷಿತನಾಗಿ ಭಕ್ತಿಯಿಂದ ಅವನ ಪಾದಪೂಜೆಯನ್ನು ಮಾಡಿದನು.

ಆಗ ಶಿವನು ಶ್ವಪಚಯ್ಯನ ಮೂಲಕ ಸಾಮವೇದಿಯಲ್ಲಿ ಉಂಟಾದ ಗುರುಭಕ್ತಿ ಶಿವಭಕ್ತಿ ಇವುಗಳನ್ನು ನೋಡಿ ಪ್ರೀತನಾಗಿ ಅವನಿಗೆ ತನ್ನ ನಿಜರೂಪು ತೋರಿದನು. ಅವನು ಹೊತ್ತ ಕರುವು ವಿಷ್ವಕ್ಸೇನತನುವಾಯಿತು. ಅವನಿಗಿದ್ದ ಒಂದು ಮುಖವು ಹೋಗಿ ಐದು ಮುಖಗಳಾದವು. ಹೊದೆದ ಬಟ್ಟೆಯು ಪುಲಿದೊವಲು ಗಜಚರ್ಮವಾಯಿತು. ಕಟ್ಟಿದ್ದ ಕಿವಿ ಗುಂಜಿ ನಾಗಕುಂಡಲವಾಯಿತು. ಅವನ ಶರೀರದ ಕಪ್ಪು ಬಣ್ಣವು ಹೋಗಿ ಕೊರಲಲ್ಲಿದ್ದ ಕಪ್ಪಾಯಿತು. ಕೆಯ್ಯಲ್ಲಿದ್ದ ಸಂಬಳಿಗೋಲು ಖಟ್ವಾಂಗವಾಯಿತು. ಎರಡು ಕಣ್ಣುಗಳ ಬದಲು ಮೂರು ಕಣ್ಣುಗಳಾಗಿ ಥಳಥಳಿಸಿ ಬೆಳಗಹತ್ತಿದವು. ಆಗ ಪೂಮಳೆಗರೆದವು, ದುಂದುಭಿ ನಾದವು ಹೊರಹೊಮ್ಮಿತು.

ಆಗ ಪರಮಾತ್ಮನು ಸಾಮವೇದಿಗೆ—ನಿನ್ನ ಭಕ್ತಿಗೆ ನಾನು ಮೆಚ್ಚಿದೆನು. ನನ್ನ ಕೂಡ ನಡೆ ಎನಲು, ಅದಕ್ಕೆ ಸಾಮವೇದಿಯು ನನ್ನ ಗುರುವಿನೊಡನಲ್ಲದೆ ಬಾರೆನೆನಲು ಶ್ವಪಚನನ್ನು ಅಲ್ಲಿಗೆ ಬರಮಾಡಿಕೊಂಡು ಅವನನ್ನೂ ಛತ್ತೀಸಪುರವನ್ನೂ ಕೈಲಾಸಕ್ಕೆ ಕರೆದೊಯ್ದು ಶ್ವಪಚ ಮತ್ತು ಸಾಮವೇದಿಗಳಿಗೆ ಗಣಪದವಿಯನ್ನು ಕೊಟ್ಟನು ಮತ್ತು ಛತ್ತೀಸಪುರವನ್ನು ರುದ್ರಲೋಕದೊಳಗಿರಿಸಿದನು.

ಶ್ವಪಚಯ್ಯ ಸಾಮವೇದಿಗಳಿದ್ದ ನಿಶ್ಚಿತ ಕಾಲವು ಗೊತ್ತಾಗುವ ದಿಲ್ಲ. ಆದರೆ ಅವರನ್ನು ಬಸವೇಶ್ವರನು ತನ್ನ ವಚನಗಳಲ್ಲಿ ಉಲ್ಲೇಖಿ ಸಿರುವದರಿಂದ ಅವರು ಅವನಕಿಂತಲೂ ಮೊದಲಿನವರೆಂಬುದು ಸ್ಪಷ್ಟ ವದೆ. ಇವರಿಬ್ಬರನ್ನು ವೀರಶೈವ ಗ್ರಂಥಕಾರರು ತಮ್ಮ ಗ್ರಂಥಗಳಲ್ಲಿ ಬಹಳ ಹೊಗಳುತ್ತಾರೆ. ಗಣಸಹಸ್ರದಲ್ಲಿಯೂ ಅವರ ಹೆಸರುಗಳು ಬಂದಿವೆ.

ಈ ಉಭಯತರಿದ್ದ ಗ್ರಾಮವಾವುದೆಂಬುದು ನಮಗೆ ಗೊತ್ತಾಗು ವದಿಲ್ಲ. ಛತ್ತೀಸಪುರವೆಂಬ ಗ್ರಾಮವು ಕರ್ನಾಟಕದಲ್ಲಾಗಲಿ ಇಲ್ಲವೆ ಅದಕ್ಕೆ ಸಮೀಪದಲ್ಲಿರುವ ಯಾವ ಭಾಗಗಳಲ್ಲಾಗಲಿ ನಮಗೆ ದೊರೆತಿಲ್ಲ. ಆದರೆ ಛತ್ತೀಸಗಡವೆಂಬ ಪ್ರಾಂತವಿಭಾಗವು ಮಧ್ಯ ಹಿಂದುಸ್ತಾನದಲ್ಲಿದೆ. ಆದರೆ ಅದು ಈ ಉಭಯ ಶಿವಶರಣರಿದ್ದ ಸ್ಥಳವೆಂದು ತೋರುವದಿಲ್ಲ.

ಶ್ವಪಚಯ್ಯನ ಕಥೆಯಲ್ಲಿ ಶಿವಶರಣರ ಅಹಿಂಸಾ ಮಾರ್ಗಕ್ಕೆ ಹೊರತಾದ ಕೆಲವು ಸಂಗತಿಗಳು ಬಂದಿರುತ್ತವೆ. ಹೀಗೆಯೇ ಶಿರಿಯಾಳ, ಚಂಗಳೆ, ಬೇಡರ ಕನ್ನಪ್ಪ, ಇವರ ಕಥೆಗಳಲ್ಲಿಯೂ ಬಂದಿವೆ. ಆದರೆ ಇವರೆಲ್ಲರನ್ನು ವೀರಶೈವ ಗ್ರಂಥಕಾರರು ಹೊಗಳುತ್ತ ಬಂದಿದ್ದಾರೆ. ಶ್ವಪಚಯ್ಯನ ಕಥೆಯಂತೆಯೇ ಇನ್ನೂ ಕೆಲವು ಕಥೆಗಳಿದ್ದು ಅವುಗ ಳನ್ನು ನಾವು ಮುಂದೆ ಇದೇ ಗ್ರಂಥದಲ್ಲಿ ಉಲ್ಲೇಖಿಸುವೆವು. ಇಂಥ ಕಥೆಗಳು ಬಸವೇಶ್ವರನಕಿಂತಲೂ ಮೊದಲಿಗಿದ್ದ ಧಾರ್ಮಿಕ ಸ್ಥಿತಿಯನ್ನು ತೋರಿಸುತ್ತವೆಂದು ನಮಗೆ ತೋರುತ್ತದೆ. ಆದರೆ ಈಗಿನ ಕಥೆಯಲ್ಲಿ ಕೆಲವು ವೀರಶೈವರ ಮಹತ್ವದ ತತ್ವಗಳು ಅಡಕವಾಗಿವೆ. ಕೇವಲ ಕರ್ಮಠ ಮಾರ್ಗಕ್ಕಿಂತ ಷಟ್‌ಸ್ಥಲ ಮಾರ್ಗವು ಹೆಚ್ಚಿನದೆಂತಲೂ ಲಿಂಗಧಾರಣದಿಂದ ಜಾತಿ ಭೇದವು ಅಳಿದು ಹೋಗುತ್ತದೆಂತಲೂ ಭಕ್ತರು ಚಾಂಡಾಲರಿರಲಿ ಇಲ್ಲವೆ ಬ್ರಾಹ್ಮಣರಿರಲಿ ಯಾರಿದ್ದರೂ ಅವ ರಿಗೆ ಗುರೂಪದೇಶವಾದ ಬಳಿಕ ಅವರಲ್ಲಿ ಭೇದಭಾವವನ್ನು ಎಣಿಸ ಕೂಡದೆಂತಲೂ ಶಿವಶರಣರ ಯಾವ ತತ್ವಗಳು ಇರುತ್ತವೆಯೋ ಅವು ಗಳು ಈ ಈರ್ವರ ಚರಿತ್ರೆಗಳಲ್ಲಿ ಕಂಡುಬರುತ್ತವೆ. ಆದುದರಿಂದ ಇವರಿಬ್ಬರಿಗೆ ಶಿವಶರಣರಲ್ಲಿ ಶ್ರೇಷ್ಠ ಸ್ಥಾನವು ಉಂಟಾಗಿರುತ್ತದೆ.

---

From,
Shivanubhava
Office
Bijapur.

BOOK-POST.

ಶ್ರೀ. ರಾ|| ರಾ||

R. N B. 2554

---

ಈ ಪತ್ರಿಕೆಯನ್ನು ಇದರ ಸಂಪಾದಕರಾದ, ರಾ|| ರಾ|| ಪಿ. ಜಿ. ಹಳಕಟ್ಟಿ ಬಿ. ಎ. ಎಲ್. ಎಲ್. ಬಿ. ಇವರು ವಿಜಾಪುರ ವಾರ್ಡ ೨, ಮನೆ ನಂ. ೧೩೬೮ ರಲ್ಲಿರುವ ತಮ್ಮ ಹಿತಚಿಂತಕ ಪ್ರಿಂ. ಪ್ರೆಸ್ಸಿನಲ್ಲಿ ಮುದ್ರಿಸಿ ಅಲ್ಲಿಯೇ ಪ್ರಸಿದ್ಧಿಸಿದರು.

# ಶಿವಾನುಭವ

| ವರ್ಷ ೨೨ | ಫೇಬ್ರವರಿ ೧೯೪೮ | ಸಂಚಿಕೆ ೫ |
| --- | --- | --- |

## ಸಮಾಜ ಸೇವೆಯೇ ಪರಮ ಯೋಗ!

ಬರೆದವರು:— ಶ್ರೀ. ಅನ್ನದಾನೀಶ್ವರ ವಿರಕ್ತಮಠ.

( ಮು. ರಾಣೇಬೆನ್ನೂರ )

೧

ವೇದಕಾಲದ ಋಷಿ-ಮುನಿಗಳು ಜನ-ಸಮಾಜವನ್ನು ಬಿಟ್ಟು ಅಡವಿಗಳಲ್ಲಿ ಇರುತ್ತಿದ್ದರು. ಸಮಾಜ ಸೇವೆಯ ಮೂಲಕ ಸಮಾಜವನ್ನು ಕಟ್ಟುವ ವಿಚಾರ ಅವರಿಗೆ ಬರಲಿಲ್ಲ. ಪೂರ್ಣ ಸಮಾಜವನ್ನು ಕಟ್ಟುವದು ಪರಮಯೋಗವೆಂಬುದು ಅವರಿಗೆ ತಿಳಿದಿರಲಿಲ್ಲ. ಆತ್ಮವನ್ನು ನಿರ್ಬಂಧಗಳಿಂದಲೂ, ವಿಧಿ-ನಿಷೇಧಗಳಿಂದಲೂ ಕಟ್ಟಿ, ಅಡವಿಗಳಲ್ಲಿ ತಪಸ್ಸು ಮಾಡುವದೇ ಪರಮಯೋಗವೆಂದು ಅವರು ನಂಬಿದ್ದರು. ಆದಕಾರಣ ಸಮಾಜ ಸೇವೆ ಸ್ವಾಸ್ಥ್ಯಗಳ ಬಗ್ಗೆ ವೇದದ ಋಷಿಗಳಿಂದ ಮಾನವ ಜನಾಂಗಕ್ಕೆ ಬೇಕಾದ ಬೆಳಕು ದೊರೆಯಲಿಲ್ಲ. ಸಮಾಜ ಕಲ್ಯಾಣದ ಬಗ್ಗೆ ಅಲ್ಲಿಷ್ಟು ಇಲ್ಲಿಷ್ಟು ಮಂತ್ರಗಳನ್ನಾಗಲೀ ಶ್ಲೋಕಗಳನ್ನಾಗಲೀ ಹೇಳಿದ ಮಾತ್ರಕ್ಕೆ ಪೂರ್ಣ ಸಮಾಜದ ಸರ್ವಾಂಗ ಸುಂದರ ಚಿತ್ರವು ನಮ್ಮೆದುರು ಬಂದು ನಿಲ್ಲುವದಿಲ್ಲ. ಸಾಮೂಹಿಕ ಕಲ್ಯಾಣದ ಬಗ್ಗೆ ಯತ್ನಿಸುತ್ತಾ ಅದೇ ಕಾಲಕ್ಕೆ ಆತ್ಮದ ವಿಕಾಸವನ್ನು ಮಾಡಿಕೊಳ್ಳುತ್ತ, ವ್ಯಕ್ತಿ ಮತ್ತು ಸಮಾಜಗಳ ಅಭ್ಯುದಯ ನಿಃಶ್ರೇಯಸ್ಸುಗಳನ್ನು ಸಾಧಿಸುತ್ತ ಪೂರ್ಣ ಸಮಾಜವನ್ನು ಕಟ್ಟುವದೇ